# ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ನಿಬಂಧ

ಸಂಶೋಧಕರು

ಸಣ್ಣಪಾಪಯ್ಯ

ಮಾರ್ಗದರ್ಶಕರು

ಡಾ. ಡಿ. ಪಾಂಡುರಂಗಬಾಬು

ಪ್ರವಾಚಕರು, ಕನ್ನಡ ಭಾಷಾಭಿವೃದ್ಧಿ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬



ಭಾಷಾ ನಿಕಾಯ

ಕನ್ನಡ ಭಾಷಾಭಿವೃದ್ಧಿ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೩



# ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು

ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ನಿಬಂಧ



ಸಂಶೋಧಕರು

ಸಣ್ಣಪಾಪಯ್ಯ

ಮಾರ್ಗದರ್ಶಕರು

**ಡಾ. ಡಿ.ಪಾಂಡುರಂಗಬಾಬು**

ಪ್ರವಾಚಕರು, ಕನ್ನಡ ಭಾಷಾಭಿವೃದ್ಧಿ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬




ಭಾಷಾ ನಿಕಾಯ

**ಕನ್ನಡ ಭಾಷಾಭಿವೃದ್ಧಿ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**೨೦೦೩**

54A




ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಡಾ. ಡಿ.ಪಾಂಡುರಂಗಬಾಬು

ಪ್ರವಾಚಕರು, ಕನ್ನಡ ಭಾಷಾಭಿವೃದ್ಧಿ ವಿಭಾಗ


## ದೃಢೀಕರಣ ಪತ್ರ

ಸಣ್ಣಪಾಪಯ್ಯ ಇವರು ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು ಎಂಬ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿ, ಕನ್ನಡ ವಿಶ್ವವಿದ್ಯಾಲಯದ ಕನ್ನಡ ಭಾಷಾಭಿವೃದ್ಧಿ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೦೮ ಜುಲೈ ೨೦೦೩
ಸ್ಥಳ : ವಿದ್ಯಾರಣ್ಯ

(ಡಾ. ಡಿ.ಪಾಂಡುರಂಗಬಾಬು)
ಮಾರ್ಗದರ್ಶಕರು

# ಪ್ರಮಾಣ ಪತ್ರ

ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು ಎಂಬ ನಿಬಂಧವನ್ನು ಡಾ. ಡಿ.ಪಾಂಡುರಂಗಬಾಬು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿ, ಕನ್ನಡ ವಿಶ್ವವಿದ್ಯಾಲಯದ ಕನ್ನಡ ಭಾಷಾಭಿವೃದ್ಧಿ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೦೮ ಜುಲೈ ೨೦೦೩

ಸ್ಥಳ : ವಿದ್ಯಾರಣ್ಯ

(ಸಣ್ಣಪಾಪಯ್ಯ)

ಸಂಶೋಧಕರು

# ಕೃತಜ್ಞತೆಗಳು

ಒಂದು ಸಣ್ಣ ಕುಗ್ರಾಮದ ಅತ್ಯಂತ ಬಡಕುಟುಂಬದಲ್ಲಿ ಹುಟ್ಟಿಬೆಳೆದ ನಾನು, ಸಂಶೋಧನೆ ಮಾಡಬೇಕೆಂದು ಕಂಡ ಕನಸ್ಸೇ ವಿಸ್ಮಯವಾದುದು. ಆ ಕನಸ್ಸಿನ ಮೊಗ್ಗು ಎಲ್ಲಿ ಕಮರಿ ಕರಕಲಾಗಿ ಹೋಗುತ್ತದೆಯೋ ಎಂಬ ಆತಂಕ ಒಳಗೆ. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿದ್ದ ನನಗೆ, ಕಂಡ ಕನಸ್ಸಿಗೆ ನೀರೆರೆದು ಹೂವಾಗಿಸಿದ ಕೈಗಳು ಹಲವಾರು. ಈ ಎಲ್ಲಾ ಧೀನ ಬಂಧುಗಳಿಗೆ ಈ ಸಂದರ್ಭದಲ್ಲಿ ಕೃತಜ್ಞತೆ ಸಲ್ಲಿಸುವುದು ನನ್ನ ಆದ್ಯ ಕರ್ತವ್ಯ ಎಂದು ಭಾವಿಸುತ್ತೇನೆ.

ನಾನು ಆಸಕ್ತಿಯಿಂದ ಪಿಎಚ್.ಡಿ. ಅಧ್ಯಯನಕ್ಕೆ ಬಂದಾಗ ನನ್ನನ್ನು ಆಂತರಿಕ ವಿದ್ಯಾರ್ಥಿಯನ್ನಾಗಿ ಆಯ್ಕೆ ಮಾಡಿ, ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಅಂದಿನ ಕುಲಪತಿಗಳಾದ ಡಾ. ಎಂ.ಎಂ.ಕಲಬುರ್ಗಿ ಹಾಗು ಕುಲಸಚಿವರಾದ ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್ ಅವರಿಗೆ, ಹಾಗೂ ಇಂದಿನ ಕುಲಪತಿಗಳಾದ ಡಾ. ಹೆಚ್.ಜೆ.ಲಕ್ಕಪ್ಪಗೌಡ ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳು.

ಅಧ್ಯಯನಾಂಗದ ನಿರ್ದೇಶಕರಾಗಿದ್ದ ಶ್ರೀ ಬಾಲಸುಬ್ರಹ್ಮಣ್ಯ, ಡಾ. ಹಿ.ಚಿ.ಬೋರಲಿಂಗಯ್ಯ ಈಗಿನ ನಿರ್ದೇಶಕರಾದ ಡಾ. ಕರೀಗೌಡ ಬೀಚನಹಳ್ಳಿ ಅವರಿಗೆ ನನ್ನ ಕೃತಜ್ಞತೆಗಳು.

ಅಡಿಗಡಿಗೆ ಅಧ್ಯಯನದ ಬಗ್ಗೆ ವಿಚಾರಿಸಿ, ಆಸಕ್ತಿ ಮೂಡಿಸಿ, ನನ್ನ ಹಲವಾರು ಪ್ರಶ್ನೆಗಳಿಗೆ ಚರ್ಚೆಯ ಮೂಲಕ ಸೂಕ್ತ ಸಲಹೆಗಳನ್ನು ನೀಡಿ, ಓದಲು ಪ್ರೇರೇಪಿಸಿದ ಕುಲಸಚಿವರಾದ ಡಾ. ಕೆ.ವಿ.ನಾರಾಯಣ ಅವರಿಗೆ ಚಿರಋಣಿಯಾಗಿದ್ದೇನೆ.

ಅಧ್ಯಯನದ ಉದ್ದಕ್ಕೂ, ಮೂರು ವರ್ಷಗಳ ಕಾಲ ನನ್ನ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚಿಸಿ, ಅಧ್ಯಯನದ ರೂಪುರೇಷೆ ಬಗೆಗೆ ಸೂಕ್ತ ಸಲಹೆ ನೀಡಿ, ಬರೆದುಕೊಟ್ಟ ಅಧ್ಯಾಯಗಳನ್ನು ಆಸ್ಥೆಯಿಂದ ಗಮನಿಸಿ, ಉಪಯುಕ್ತ ಮಾರ್ಗದರ್ಶನ ಮಾಡಿದ್ದಲ್ಲದೆ, ವೈಯಕ್ತಿಕ ಬದುಕಿನ ಬಗೆಗೆ ಕಾಳಜಿ ವಹಿಸಿದ ಗುರುಗಳಾದ ಡಾ. ಡಿ.ಪಾಂಡುರಂಗಬಾಬು ಅವರಿಗೆ ತುಂಬು ಹೃದಯದ ಕೃತಜ್ಞತೆಗಳು.

ಅಧ್ಯಯನಕ್ಕೆ ನೆರವು ನೀಡಿ ಸಹಕರಿಸಿದ ಕನ್ನಡ ಭಾಷಾಭಿವೃದ್ಧಿ ವಿಭಾಗದ ಡಾ. ಅಶೋಕಕುಮಾರ ರಂಜೇರೆ, ಡಾ. ಸಾಂಬಮೂರ್ತಿ, ಡಾ. ಪಿ.ಮಹಾದೇವಯ್ಯ ಅವರಿಗೆ, ಮತ್ತು ನನ್ನನ್ನು ಅತ್ಯಂತ ಪ್ರೀತಿಯಿಂದ ಕಾಣುವ ಕೃಪಾಶಂಕರ, ಬಿ.ವೆಂಕಟೇಶ್ ಹಾಗೂ ಜಿ.ನಾಗರಾಜ್ ಅವರಿಗೆ ಕೃತಜ್ಞನಾಗಿದ್ದೇನೆ.

ನನ್ನ ವಿಷಯಕ್ಕೆ ಸಂಬಂಧಿಸಿದಂತೆ ಕೇಳಿದ ಪ್ರಶ್ನೆಗಳಿಗೆ ಸೂಕ್ತ ಮಾಹಿತಿ ನೀಡಿ ಸಹಕರಿಸಿದ ಚಿತ್ರದುರ್ಗ ಪರಿಸರದ ಸಮಸ್ತ ವಕ್ತೃಗಳಿಗೆ ಆಭಾರಿಯಾಗಿದ್ದೇನೆ.

ಅಧ್ಯಯನ ಬಗೆಗೆ ಸದಾ ವಿಚಾರಿಸುತ್ತ ಪ್ರೋತ್ಸಾಹವನ್ನು ನೀಡುವ ಗುರುಗಳಾದ ಕರಿಯಪ್ಪ, ಮಾನಕರಿ ಶ್ರೀನಿವಾಸ ಆಚಾರ್ಯ, ಡಾ. ಮಲ್ಲಿಕಾ ಘಂಟಿ, ಡಾ. ಶಾಂತಿನಾಥ ದಿಬ್ಬದ, ಡಾ. ಮೃತ್ಯುಂಜಯ ಹೊರಕೇರಿ, ಡಾ. ಸಿ.ನಾಗಭೂಷಣ, ಕೆ.ಶಾರದ ಅವರನ್ನು ಪ್ರೀತಿಯಿಂದ ಸ್ಮರಿಸುವೆ.

ನನ್ನ ವೈಯಕ್ತಿಕ ಮತ್ತು ಶೈಕ್ಷಣಿಕ ಬದುಕಿನ ಬಗೆಗೆ ಅತ್ಯಂತ ಕಾಳಜಿ ವಹಿಸಿದ ಡಾ. ಭಾಗ್ಯಲಕ್ಷ್ಮಿ ಅಶೋಕ್, ಡಾ. ವಿರೂಪಾಕ್ಷಿ ಪೂಜಾರಹಳ್ಳಿ, ಡಾ. ಬಿ.ಎಂ.ಪುಟ್ಟಯ್ಯ, ಡಾ. ಕೆ.ರವೀಂದ್ರನಾಥ, ಸಿದ್ಧಗಂಗಮ್ಮ, ಡಾ. ಎಫ್.ಟಿ.ಹಳ್ಳಿಕೇರಿ, ಎ.ಎಸ್.ಪ್ರಭಾಕರ, ಡಾ. ಸುಚೇತ ನವರತ್ನ, ಪ್ರೊ. ಹನುಮಣ್ಣನಾಯಕ ದೊರೆ ಅವರನ್ನ ನೆನೆಯದೆ ಇರಲಾರೆ.

ಅಧ್ಯಯನದ ಹೊಸ ರೀತಿಯ ಆಲೋಚನಾ ವಿಧಾನಗಳನ್ನು ಪರಿಚಯಿಸಿ, ಆ ಬಗ್ಗೆ ಚರ್ಚೆ ಮಾಡಿ, ಸಲಹೆ ನೀಡಿದ ವಿ.ಬಿ. ತಾರಕೇಶ್ವರ, ಡಾ. ಸುಬ್ಬಣ್ಣ ರೈ, ಡಾ. ರಹಮತ್ ತರೀಕೆರೆ, ಡಾ. ಎಸ್.ಎಸ್.ಅಂಗಡಿ, ಡಾ. ಮೊಗಳ್ಳಿ ಗಣೇಶ್, ಪ್ರೊ. ಲಕ್ಷ್ಮಣ್ ತೆಲಗಾವಿ, ಡಾ. ವಿಠ್ಠಲರಾವ್ ಗಾಯಕ್ವಾಡ್, ಡಾ. ಕೆ. ಕೇಶವನ್ ಪ್ರಸಾದ್, ಡಾ. ಎಸ್.ವೈ. ಸೋಮಶೇಖರ್, ಡಾ. ಅಮರೇಶ ನುಗಡೋಣಿ, ಡಾ. ಶಿವಾನಂದ ವಿರಕ್ತಮಠ, ಡಾ. ವೀರೇಶ್ ಬಡಿಗೇರ, ಡಾ. ಹನುಮಂತಪ್ಪ ತಾರಿಹಳ್ಳಿ, ಡಾ. ಮಂಜುನಾಥ ಬೇವಿನಕಟ್ಟಿ, ಡಾ. ಎಚ್.ಕೆ. ನಾಗೇಶ್, ಶ್ರೀ ಚೆಲುವರಾಜ್, ಡಾ. ಸಿ.ಟಿ.ಗುರುಪ್ರಸಾದ್, ಡಾ. ಮಾಧವ ಪೆರಾಜೆ, ಡಾ. ಮಲ್ಲಿಕಾರ್ಜುನ, ಡಾ. ಹೆಚ್.ಎಸ್.ಶ್ರೀಮತಿ, ಡಾ. ಎಂ. ಉಷಾ, ಡಾ. ಶೈಲಜಾ ಇಂ. ಹಿರೇಮಠ ಅವರಿಗೆ, ಹಾಗೂ ವಿಶ್ವವಿದ್ಯಾಲಯದ ಎಲ್ಲ ವಿದ್ವಾಂಸರಿಗೆ, ಗ್ರಂಥಾಲಯದಲ್ಲಿ ಬೇಕಾದ ಪುಸ್ತಕಗಳನ್ನು ಸಕಾಲದಲ್ಲಿ ಒದಗಿಸುವಲ್ಲಿ ಸಹಕರಿಸಿದ ಜೆ.ಆರ್. ರಾಮಮೂರ್ತಿ, ಶ್ರೀ ಸ್ಯಾಸ್ಮೈ ಮದನ್ ಕುಮಾರ್, ಡಾ. ಎಚ್. ನಾಗವೇಣಿ, ಶ್ರೀ ಮಲ್ಲಿಕಾರ್ಜುನ, ಶ್ರೀ ಸುಹಾಸ, ಶ್ರೀ ಗುಡಿಮನಿ, ಶ್ರೀ ನರೇಗಲ್ಲಪ್ಪ, ಶ್ರೀ ಖಾದರ್ ಭಾಷಾ ಅವರಿಗೆ ಹಾಗೂ ಪ್ರಸಾರಾಂಗದ ಗುರುಬಸಪ್ಪ ಮತ್ತು ಬಿ. ಈರಪ್ಪ ಅವರನ್ನು ನೆನೆಯುತ್ತೇನೆ.

ನನ್ನ ಶ್ರೇಯಸ್ಸನ್ನು ಬಯಸಿ, ಆರ್ಥಿಕ ನೆರವು ನೀಡಿ ಸಹಕರಿಸಿದ ಮಾಜಿ ಶಾಸಕರಾದ ಶ್ರೀ ಎನ್.ಟಿ.ಬೊಮ್ಮಣ್ಣ, ಶ್ರೀಮತಿ ಶಶಿಕಲಾ, ಶ್ರೀ ಅರುಣ್ ಕುಮಾರ್ ಮೇಘಣ್ಣವರ್, ಶ್ರೀ ಟಿ.ವೈ.ಮಲ್ಲಯ್ಯ, ಶ್ರೀ ಬಿ. ನಾಗರಾಜ, ಶ್ರೀ ಬಿ.ಗಂಗಾಧರ ಇವರ ಸಹಾಯವನ್ನು ಪ್ರೀತಿಯಿಂದ ಸ್ಮರಿಸುತ್ತೇನೆ.

ನನ್ನ ಶೈಕ್ಷಣಿಕ ಅಭಿವೃದ್ಧಿಯನ್ನು ಬಯಸಿ ಸದಾ ಪ್ರೋತ್ಸಾಯಿಸುವ ಡಾ. ಗೋಪಾಲ, ಶ್ರೀ ಕೆ. ಅರ್ಚಕ, ಶ್ರೀ ಕೆ.ರಾಘವೇಂದ್ರರಾವ್, ಶ್ರೀ ಡಿ.ಪಿ.ದೇವರಾಜ್, ಶ್ರೀ ಎನ್.ಗಂಗಪ್ಪ, ಶ್ರೀ ಮಾರಪ್ಪ, ಶ್ರೀ ಪರಶುರಾಮಪ್ಪ, ಶ್ರೀ ಯೋಗೀಶ್ವರ, ಶ್ರೀ ಮಲ್ಲಿಕಾರ್ಜುನಯ್ಯ ಅವರಿಗೆ ಆಭಾರಿಯಾಗಿದ್ದೇನೆ.

ನನ್ನ ಶೈಕ್ಷಣಿಕ ಪ್ರಗತಿ ಮತ್ತು ಬದುಕಿನ ಏಳಿಗೆಯನ್ನು ಬಯಸುವ ಡಿ.ಬೋರಯ್ಯ, ಕೆ.ರಾಜಶೇಖರಪ್ಪ, ಕೆ.ರುದ್ರಪ್ಪ, ಕೋನಸಾಗರ ಮಲ್ಲಯ್ಯ, ಸಣ್ಣೊಬಯ್ಯ, ಓಬಯ್ಯ, ಗುಂಡಬೋರಯ್ಯ, ಮಂಜುನಾಥ, ತಿಪ್ಪೇಸ್ವಾಮಿ, ಬಿ.ಮಲ್ಲಿಕಾರ್ಜುನ, ಗೊಡ್ಡಯ್ಯ, ಬೋರಕ್ಕ ಇವರನ್ನು ಈ ಸಂದರ್ಭದಲ್ಲಿ ನೆನೆಯುವುದು ನನ್ನ ಕರ್ತವ್ಯ.

ಅಧ್ಯಯನದ ಬಗೆಗೆ ಸದಾ ವಿಚಾರಿಸುತ್ತಾ ಪ್ರೋತ್ಸಾಹವನ್ನು ನೀಡಿದ ಶ್ರೀ ದೊಡ್ಡಮಲ್ಲಯ್ಯ, ಶ್ರೀಮತಿ ಪದ್ಮಕ್ಕ, ಶ್ರೀ ಗೂರ್ಯಾನಾಯ್ಕ, ಶ್ರೀಮತಿ ಸರಸ್ವತಿ ಅವರಿಗೆ ಕೃತಜ್ಞನಾಗಿದ್ದೇನೆ.

ನನ್ನ ಹಿರಿಯ ಸಂಶೋಧನ ಮಿತ್ರರಾದ, ಡಾ. ನಿಂಗಪ್ಪ ಮುದೇನೂರು, ಡಾ. ವೆಂಕಟಗಿರಿ ದಳವಾಯಿ, ಡಾ. ಎಂ.ಚನ್ನಪ್ಪ, ಡಾ. ಎಂ.ನಾಗರಾಜ, ಡಾ. ನಾಗಭೂಷಣ ಪಾಟೀಲ, ಡಾ. ಜಿ.ಉಮೇಶ್, ಡಾ. ವಿ.ಸಿ.ಮಾರುತಿ, ಡಾ. ಕೆ.ಆರ್.ಜಿ.ರಾಜ್‌ಕುಮಾರ, ಡಾ. ಗೋವಿಂದ, ಶ್ರೀ. ಎರ್ರಿಸ್ವಾಮಿ, ಅಕ್ಕಿ ಸುಜಾತ ಅವರನ್ನು ಸ್ಮರಿಸುವೆ.

ನನ್ನ ಅಧ್ಯಯನಕ್ಕೆ ಪೂರಕವಾಗಿ ಸಹಕಾರ ನೀಡಿದ ಸಂಶೋಧನ ಗೆಳೆಯರಾದ ಜಾಜಿ ದೇವೇಂದ್ರಪ್ಪ, ಕೋಳಿ ಮಹೇಶ್, ಕೆ.ಆರ್.ಕೇಶವಮೂರ್ತಿ, ಪ್ರೇಮಾನಂದ, ಸತೀಶ್ ಪಾಟೀಲ, ಬಿ.ಕುಮಾರಸ್ವಾಮಿ, ಭಾರತಿ, ಅನಸೂಯ ಕದಂ, ಪಾರ್ವತಿ ಹಿರೇಮಠ, ಕವಿತಾ, ಚಂದ್ರಶೇಖರ ಸಂ.ಬ. ಜಂಬಯ್ಯಸ್ವಾಮಿ, ಲಕ್ಷ್ಮಪ್ಪ, ಜಯಣ್ಣ, ಕವಿತಾರಾಣಿ, ಓಂಪ್ರಕಾಶ್ ನಾಯಕ, ಆಂಜನೇಯ, ಆಂಜಿನಪ್ಪ, ತಿಪ್ಪೇಸ್ವಾಮಿ, ವೆಂಕಟರಾಮ, ಚಂದ್ರಪ್ಪ, ದೇವರಾಜ್, ಜಿ.ಕೆ.ವೀರಮ್ಮ, ರಮೇಶ್, ಕುಮಾರಸ್ವಾಮಿ, ಶಿವರಾಮ, ವೆಂಕಟೇಶ, ಸೋಮೇಶ್ ಉಪ್ಪಾರ, ಹನುಮಂತಪ್ಪ, ರೇಣುಕ, ಗಂಗಮ್ಮ ಕುರುಗೋಡು ಇವರೆಲ್ಲರ ಸಹಾಯವನ್ನು ಮರೆಯಲಾರೆ.

ನನ್ನನ್ನು ಅತ್ಯಂತ ಪ್ರೀತಿಯಿಂದ ಕಂಡು, ಸದಾ ನನ್ನ ಏಳಿಗೆ ಬಯಸುವ ಆತ್ಮೀಯ ಗೆಳತಿ ಪೊಲೀಸ್ ನಾಗರತ್ನ ಅವರಿಗೆ ನನ್ನ ಕೃತಜ್ಞತೆಗಳು.

ಅಧ್ಯಯನದ ಸಮಯದಲ್ಲಿ ಅನಾರೋಗ್ಯಕ್ಕೆ ಒಳಗಾದಾಗ ನನ್ನ ಬಗ್ಗೆ ಅತ್ಯಂತ ಕಾಳಜಿ ವಹಿಸಿದ ಅಕ್ಕನವರಾದ ಅನ್ನಪೂರ್ಣಮ್ಮ ಮತ್ತು ಅವರ ಮಗಳು ರಾಧಾಕುಮಾರಿಯವರನ್ನು ಹೃತ್ಪೂರ್ವಕವಾಗಿ ಸ್ಮರಿಸುವೆ.

ಕ್ಷೇತ್ರಕಾರ್ಯದ ಮಾಹಿತಿಯನ್ನು ಜೋಡಿಸುವಲ್ಲಿ ಸಹಾಯ ಮಾಡಿದ ಗೆಳತಿಯರಾದ ರೇಖಾ, ಮಂಜುಳ, ಬೀಬೀಜಾನ್ ಅವರ ಪ್ರೀತಿ, ಸಹಕಾರಗಳಿಗೆ ನಾನು ಋಣಿ.

ದೂರದಿಂದಲೇ ಆಶೀರ್ವದಿಸಿ, ನನ್ನ ಶ್ರೇಯಸ್ಸನ್ನು ಬಯಸುವ ವಿದ್ಯಾಗುರುಗಳಾದ ಜೆ. ಹನುಮಂತಪ್ಪ ಅವರಿಗೆ ಕೃತಜ್ಞತೆಗಳು.

ಅಧ್ಯಯನದ ಬಗೆಗೆ ಸದಾ ವಿಚಾರಿಸುತ್ತ ಪ್ರೋತ್ಸಾಹವನ್ನು ಕೊಟ್ಟ ಮನೆಯ ಮಾಲೀಕರಾದ ಗಂಗಾಧರಪ್ಪ, ರಾಮಣ್ಣ, ಪ್ರಬಣ್ಣ ಮತ್ತು ಅಜ್ಜಿ ಅವರನ್ನು ಮರೆಯಲಾರೆ.

ಸದಾ ನನ್ನ ಓದು, ಬದುಕಿನ ಬಗೆಗೆ ಅತ್ಯಂತ ಕಾಳಜಿವಹಿಸಿ ಪ್ರೋತ್ಸಾಹಿಸಿದ ಗೆಳತಿ ಮೀನಾಳ ಪ್ರೀತಿ ನಾನು ಮರೆಯುವಂತಿಲ್ಲ.

ನನ್ನ ಓದಿಗೆ ಬೆನ್ನೆಲುಬಾಗಿ ನಿಂತ ತಂದೆ ಸಣ್ಣಪಾಪಯ್ಯ, ತಾಯಿ ಪಾಲಮ್ಮ, ಅಕ್ಕನವರಾದ ಪಾಪಮ್ಮ, ಮಲ್ಲಮ್ಮ, ಮಾವನವರಾದ ಓಬಯ್ಯ, ಅಳಿಯ ನಾಗೇಂದ್ರಪ್ಪ, ಪುಟಾಣಿಗಳಾದ ದಾಕ್ಷಾಯಿಣಿ, ಲಲಿತ, ಶಿವಪ್ರಕಾಶ್, ಲೋಕೇಶ್, ಜಯಣ್ಣ, ಅಣ್ಣನವರಾದ ಯು.ಪಾಪಣ್ಣ, ಅತ್ತಿಗೆ ಪಾಲಮ್ಮ, ಅನುಷಾ, ತಾರಾ, ಹುಲಿರಾಜ ಅವರಿಗೆ ನಾನು ನಮ್ರನಾಗಿದ್ದೇನೆ.

ಅಂದವಾಗಿ ಅಕ್ಷರ ಜೋಡಿಸಿ, ಪ್ರೀತಿಯಿಂದ ಕಂಡ ಸೋಮನಾಥ, ರಚನಾ ಗ್ರಾಫಿಕ್ಸ್‌ನ ರೂಪ ಕುಡುತಿನಿ ಅವರಿಗೆ ಕೃತಜ್ಞತೆಗಳು.

ನನ್ನನ್ನು ಸದಾ ಅಭಿಮಾನದಿಂದ ಕಾಣುವ ನಮ್ಮೂರಿನ ಸಮಸ್ತ ಬಾಂಧವರಿಗೆ,

ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಅಧ್ಯಯನಕ್ಕೆ ನೆರವಾದ ಎಲ್ಲಾ ವಿದ್ವಾಂಸರು, ಮಿತ್ರರು ಇವರೆಲ್ಲರಿಗೂ

ನಾನು ಋಣಿಯಾಗಿದ್ದೇನೆ.

ಸಣ್ಣಪಾಪಯ್ಯ

## ಕ್ಷೇತ್ರಕಾರ್ಯಕ್ಕೆ ಆಯ್ದುಕೊಂಡ ಪ್ರದೇಶಗಳ ನಕ್ಷೆ




## ಚಿತ್ರದುರ್ಗ ಜಿಲ್ಲೆ






ಅಧ್ಯಾಯ - ೧

# ಅಧ್ಯಯನದ ಉದ್ದೇಶ - ವ್ಯಾಪ್ತಿ - ವಿಧಾನ

## ಪ್ರವೇಶ

ಮಾನವನ ಸೃಷ್ಟಿ ಮತ್ತು ಜೀವನ ವಿಕಾಸಕ್ರಮ ಈಗಲೂ ಸೋಜಿಗವನ್ನುಂಟುಮಾಡುತ್ತದೆ. ಸೃಷ್ಟಿಯ ಮೊದಲ ಅವಧಿಯಲ್ಲಿ ಗೆಡ್ಡೆ, ಗೆಣಸು, ಹಣ್ಣು, ಹಂಪಲು, ಮಾಂಸ ಇವೇ ಮೊದಲಾದವು ಆದಿಮಾನವನ ಮುಖ್ಯ ಆಹಾರವಾಗಿದ್ದವು. ಮರದ ಪೊಟರೆ, ಗುಹೆ, ತಪ್ಪಲುಪ್ರದೇಶ ಒಟ್ಟಾರೆ ಸಾಟು ಇದ್ದ ಕಡೆಗಳಲ್ಲಿ ತಂಗುತ್ತಿದ್ದರು. ಆಹಾರ ಸಂಗ್ರಹಕ್ಕಾಗಿ ಒಂದು ಪ್ರದೇಶದಿಂದ, ಇನ್ನೊಂದು ಪ್ರದೇಶಕ್ಕೆ ಸಂಚರಿಸುತ್ತಿದ್ದುದರಿಂದ ಸ್ಥಿರವಾದ ನೆಲೆಗಳು ಇರಲಿಲ್ಲ. ಪ್ರಾಯಶಃ ಈ ಅವಧಿಯಲ್ಲಿ ಒಬ್ಬರು ಇಲ್ಲವೆ ಕೆಲವೇ ಜನರು ಚಿಕ್ಕ ಚಿಕ್ಕ ಗುಂಪುಗಳಾಗಿ ಒಟ್ಟೊಟ್ಟಿಗೆ ಜೀವಿಸುತ್ತಿದ್ದರು. ಕೆಲವೇ ಜನರಿರುವ ಕುಟುಂಬಗಳು ಒಂದೊಂದು ಪ್ರದೇಶದಲ್ಲಿ ಪ್ರತ್ಯೇಕವಾಗಿ ವಾಸಿಸುತ್ತಿದ್ದರಿಂದ ಆಯಾ ಕುಟುಂಬದ ಸದಸ್ಯರನ್ನು ಗುರುತಿಸುವುದು ಅವರಿಗೆ ತೊಂದರೆಯಾಗಿರಲಿಕ್ಕಿಲ್ಲ. ಇದು ಮಾನವ ಭಾಷೆಯನ್ನು ತಿಳಿಯದ ಪೂರ್ವದ ಸ್ಥಿತಿ. ಹಾಗಾಗಿ ಬೇಟೆ ಸಂಸ್ಕೃತಿಯ ಕಾಲಾವಧಿಯಲ್ಲಿ ಪ್ರಾಯಶಃ ವ್ಯಕ್ತಿಗೆ ಹೆಸರಿಡುವ ಸಂಪ್ರದಾಯ ರೂಢಿಯಲ್ಲಿ ಇದ್ದಿರಲಾರದು.

ನಂತರದ ಕಾಲಾವಧಿಯಲ್ಲಿ ಮಾನವ ಆಹಾರಕ್ಕಾಗಿ ಸಂಚರಿಸುತ್ತಿದ್ದ ಅಲೆಮಾರಿತನವನ್ನು ಬಿಟ್ಟು, ಆಹಾರ ಉತ್ಪಾದನೆ ಅಥವಾ ಕೃಷಿಯನ್ನು ಕಂಡುಕೊಂಡರು. ಇದು ಜನರ ಸ್ಥಿರನೆಲೆಗಳಿಗೆ ಕಾರಣವಾಯಿತು. ಈ ನೆಲಸುವಿಕೆ ಮೊದಮೊದಲು ಕುಟುಂಬದ ಮಾದರಿಯಲ್ಲಿದ್ದು, ಕ್ರಮೇಣ ಹಲವು ಕುಟುಂಬಗಳು ಒಂದು ಪ್ರದೇಶದಲ್ಲಿ ಒಟ್ಟಿಗೆ ಸೇರತೊಡಗಿದವು. ಇದು ಗ್ರಾಮಗಳ ಉದಯಕ್ಕೆ ಕಾರಣವಾಯಿತು. ಹಲವು ಕುಟುಂಬಗಳು ಒಂದು ಪ್ರದೇಶದಲ್ಲಿ ಸಾಂಘಿಕ ಬದುಕನ್ನು ಆರಂಭಿಸಿದ್ದರ ಪರಿಣಾಮವಾಗಿ, ಹೆಚ್ಚು ಜನರು ಒಂದು ಪರಿಸರದಲ್ಲಿ

ನೆಲೆನಿಲ್ಲುವಂತಾಯಿತು. ಜನರ ನೆಲೆಸುವಿಕೆಯ ಪ್ರಮಾಣ ಅಧಿಕಾವಾಗಿದ್ದರಿಂದ, ಕೌಟುಂಬಿಕ ಪರಿಸರದಲ್ಲಿ ವ್ಯಕ್ತಿಯ ಗುರುತಿಸುವಿಕೆಗೆ ಇದ್ದ ಸೌಲಭ್ಯಗಳು ಸಾಲದಾಗಿರಬೇಕು. ಆಗ ವ್ಯಕ್ತಿಯನ್ನು ಗುರುತಿಸುವುದಕ್ಕೆ ತೊಂದರೆಯಾಗಿರಬೇಕು. ಈ ಗೊಂದಲವನ್ನು ಪರಿಹರಿಸಿಕೊಳ್ಳುವುದಕ್ಕಾಗಿ, ಹೆಸರಿನ ಅಗತ್ಯ ಕಂಡುಬಂದಿರಬೇಕು. ಮಾನವನ ಬೆಳವಣಿಗೆಯ ಹಂತಗಳು, ಮಾನವನನ್ನು ಸಾಮಾಜಿಕವಾಗಿ, ಸಂಘಜೀವಿಯಾಗಿ ಬದುಕುವಂತೆ ಮಾಡಿವೆ. ಹೀಗಾಗಿ ಸಮಾಜದಲ್ಲಿ ಬದುಕುವ ಮನುಷ್ಯನಿಗೆ ಹೆಸರು ಅತ್ಯಗತ್ಯವಾಯಿತು. ಒಂಟಿ ಜೀವನವನ್ನು ತೊರೆದು, ಸಹಜೀವನವನ್ನು ಆರಂಭಿಸಿರುವುದರ ಪರಿಣಾಮವಾಗಿ ಅಥವಾ ಕೃಷಿಸಂಸ್ಕೃತಿ ಅಸ್ತಿತ್ವಕ್ಕೆ ಬಂದುದರ ಫಲವಾಗಿ, ವ್ಯಕ್ತಿಗೆ ಹೆಸರಿಡುವ ಪದ್ಧತಿ ರೂಢಿಗೆ ಬಂದಿತು ಎಂದೆನ್ನಬಹುದು.

ನಾಮ ನಿರ್ದೇಶನ ಪದ್ಧತಿ ಅಸ್ತಿತ್ವಕ್ಕೆ ಬಂದ ಮೊದಲಲ್ಲಿ ಏಕಕಾಲಕ್ಕೆ ಎಲ್ಲಾ ವ್ಯಕ್ತಿಗಳಿಗೂ ಹೆಸರಿಡುವ ಸಂಪ್ರದಾಯ ರೂಢಿಗೆ ಬಂದಿರಲಾರದು. ಬಹುಶಃ ದೈನಂದಿನ ವ್ಯವಹಾರಕ್ಕೆ ಅಗತ್ಯ ಬೀಳುವ ವ್ಯಕ್ತಿಗಳಿಗೆ ಮಾತ್ರ ಮೊದಲು ಹೆಸರಿಟ್ಟು ಕರೆಯಲು ಪ್ರಾರಂಭಿಸಿದ್ದಿರಬೇಕು. ಉಪಯೋಗಕ್ಕೆ ಬಾರದ ಕುಂಟ, ಕುರುಡ ಮತ್ತು ಮಕ್ಕಳಿಗೆ ಹೆಸರಿಡುವ ಪದ್ಧತಿ ಇದ್ದಿರಲಿಕ್ಕಿಲ್ಲ. ಹಂತ ಹಂತವಾಗಿ ಮಾನವ ಸಮಾಜ ಸಂಕೀರ್ಣಗೊಂಡಂತೆಲ್ಲ, ಎಲ್ಲಾ ವ್ಯಕ್ತಿಗಳೂ ಒಂದಲ್ಲ ಒಂದು ಕಾರಣಕ್ಕೆ, ಒಬ್ಬರಿಗಲ್ಲದೆ ಇನ್ನೊಬ್ಬರಿಗೆ ಅಗತ್ಯ ಎನಿಸುವುದರಿಂದ ಎಲ್ಲಾ ವ್ಯಕ್ತಿಗಳಿಗೂ ಹೆಸರಿಡುವ ಪದ್ಧತಿ ಬಳಕೆಗೆ ಬಂದಿರಬೇಕು. ಅಲ್ಲದೆ ವ್ಯಕ್ತಿ ಸಣ್ಣವನಿರುವಾಗಲೇ ದೈನಂದಿನ ವ್ಯವಹಾರಗಳಿಗೆ ಬೇಕಾಗುವುದರಿಂದ ಅಥವಾ ಗುರುತಿಸಬೇಕಾಗಿ ಬರುವುದರಿಂದ, ವ್ಯಕ್ತಿಗೆ ಬಾಲ್ಯದಲ್ಲಿಯೇ ನಾಮಕರಣ ಮಾಡುವ ಪದ್ಧತಿ ಅಸ್ತಿತ್ವಕ್ಕೆ ಬಂದಿದೆ.

ನಾಮ ನಿರ್ದೇಶನದ ಪ್ರಥಮಾವಸ್ಥೆಯಲ್ಲಿ ಎಂಥ ಹೆಸರುಗಳನ್ನು ಇಡುತ್ತಿದ್ದರು ಎಂಬುದು ಕುತೂಹಲದ ಸಂಗತಿಯಾದರೂ, ಖಚಿತವಾಗಿ ಹೇಳುವುದು ಕಷ್ಟ. ಆ ಕುರಿತಂತೆ ಎಲ್ಲಿಯೂ ಮಾಹಿತಿ ಇಲ್ಲ. ಹಿಂದಿನ ಕೆಲವು ಜನ ನಾಮಾಧ್ಯಯನಕಾರರು, ವಿದ್ವಾಂಸರು ಪ್ರಾರಂಭದಲ್ಲಿ ವ್ಯಕ್ತಿಗೆ ಅನ್ವರ್ಥಕ ನಾಮಗಳನ್ನು ಇಡುತ್ತಿದ್ದರಬಹುದೆಂದು ಅಭಿಪ್ರಾಯಪಡುತ್ತಾರೆ. ಅಂದರೆ ವ್ಯಕ್ತಿಯ ಶಾರೀರಕ ಲಕ್ಷಣ ಮತ್ತು ಗುಣ ಲಕ್ಷಣಗಳಿಗೆ ಅನುಗುಣವಾಗಿ ಹೆಸರಿಡುತ್ತಿದ್ದರು. ಉದಾಹರಣೆಗೆ, ಕೆಂಪಗೆ ಇದ್ದರೆ ಕೆಂಚ, ಕೆಂಪಿ, ಕಪ್ಪಗಿದ್ದರೆ ಕರಿಯ, ಕರಿಯಪ್ಪ, ಕರಿಯಮ್ಮ, ಕುಳ್ಳಗೆ ಇದ್ದರೆ ಗಿಡ್ಡಪ್ಪ, ಗಿಡ್ಡಮ್ಮ, ಎತ್ತರ (ಉದ್ದ)ಕ್ಕೆ ಇದ್ದರೆ ಉದ್ದಾನಪ್ಪ, ಉದ್ದಾನಮ್ಮ, ಹಿರಿಯರಾಗಿದ್ದರೆ/ದಪ್ಪಗೆ ಇದ್ದರೆ, ದೊಡ್ಡಣ್ಣ, ದೊಡ್ಡಮ್ಮ, ಕಿರಿಯವರಾಗಿದ್ದರೆ/ಸಣ್ಣಗೆ ಇದ್ದರೆ ಸಣ್ಣಪ್ಪ, ಸಣ್ಣಯ್ಯ, ಸಣ್ಣಮ್ಮ ಎಂದು ಹೆಸರಿಡಲಾಗುತ್ತಿತ್ತು. ಅನ್ವರ್ಥಕ ನಾಮಗಳಲ್ಲಿಯೂ ಮೊದಲು ರೂಪವಾಚಿ ನಾಮಗಳಿದ್ದು, ನಂತರದಲ್ಲಿ ಗುಣವಾಚಿನಾಮಗಳು ಬಳಕೆಗೆ ಬಂದಿರಬಹುದು.

ಕುಟುಂಬಗಳು ಬೆಳೆದು ಗ್ರಾಮಗಳಾದಂತೆಲ್ಲಾ ಆದಿಮಾನವರು ನಾಗರೀಕರಾಗತೊಡಗಿದರು. ವೈವಿಧ್ಯಮಯ ಜೀವನ ಸಂಸ್ಕೃತಿಯನ್ನು, ಆರಾಧನಾ ಪದ್ಧತಿಗಳನ್ನು ರೂಢಿಸಿಕೊಂಡರು. ಪರಿಣಾಮವಾಗಿ ಅನ್ವರ್ಥಕನಾಮಗಳಿಗೆ ಬದಲಾಗಿ ದೈವ, ಸಾಂಸ್ಕೃತಿಕ ನಾಯಕರ ಹೆಸರು ಮತ್ತು ಪ್ರಕೃತಿನಿಷ್ಠ ವ್ಯಕ್ತಿ ನಾಮಗಳನ್ನು ನಿರ್ದೇಶನ ಮಾಡುವುದು ರೂಢಿಗೆ ಬಂದಿತು. ಹೆಸರು ಸಾಂಸ್ಕೃತಿಕ ಆಯಾಮವನ್ನು ಪಡೆದುಕೊಂಡದ್ದು, ಪ್ರಾಯಶಃ ಇದೇ ಸಂದರ್ಭದಲ್ಲಿ. ಈ ಎಲ್ಲಾ ಸ್ಥಿತ್ಯಂತರಗಳು ಯಾವುದೇ ಒಂದು ಕಾಲಘಟ್ಟದಲ್ಲಿ ಆಗಿರುವ ಬದಲಾವಣೆಗಳಲ್ಲ. ಹಂತ ಹಂತವಾಗಿ ಬಳಕೆಗೆ ಬಂದಿದ್ದು, ಒಂದೊಂದು ಕಾಲಘಟ್ಟದ ಪ್ರತೀಕವಾಗಿವೆ.

ವ್ಯಕ್ತಿನಾಮಗಳು ಕೇವಲ ಅಂಕಿತನಾಮಗಳಾಗಿ ಮಾತ್ರ ಉಳಿದಿಲ್ಲ. ಅವು ತನ್ನೊಳಗೆ ಸಮುದಾಯಗಳ ಆಚಾರ-ವಿಚಾರ, ರೂಢಿ, ಸಂಪ್ರದಾಯ, ಜೀವನ ಪದ್ಧತಿಯನ್ನು ಒಳಗೊಂಡಿರುತ್ತವೆ. ಅದೇ ರೀತಿಯಾಗಿ ಹೆಸರುಗಳು ಸಮುದಾಯಗಳು ಜೀವಿಸುವ ಸಂಸ್ಕೃತಿಯ ವಾಸ್ತವ ಅಭಿವ್ಯಕ್ತಿಗಳೂ ಸಂಸ್ಕೃತಿಯ ಪ್ರತಿಬಿಂಬಗಳೂ ಆಗಿರುತ್ತವೆ. ಆ ಹಿನ್ನಲೆಯಲ್ಲಿ ವ್ಯಕ್ತಿನಾಮ ಅಧ್ಯಯನವೆಂದರೆ, ಒಂದು ಕಾಲದ ಸಮುದಾಯಗಳ ಅಧ್ಯಯನವೇ ಆಗುತ್ತದೆ. ಸಮುದಾಯಗಳ ಅಧ್ಯಯನವೆಂದರೆ, ಅದು ಸಂಸ್ಕೃತಿಯ ಅಧ್ಯಯನವೇ ಆಗಿರುತ್ತದೆ. ಆ ಕಾರಣದಿಂದ ವ್ಯಕ್ತಿನಾಮಗಳು ಸಂಸ್ಕೃತಿ ಅಧ್ಯಯನದಲ್ಲಿ ತುಂಬಾ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತವೆ.

ಸಂಸ್ಕೃತಿ ಅಧ್ಯಯನದ ಸಂದರ್ಭದಲ್ಲಿ ಅಧ್ಯಯನಕಾರರು ವ್ಯಕ್ತಿನಾಮಗಳನ್ನು ಅಲಕ್ಷಿಸಿರುವುದು ಕಾಣಬರುತ್ತದೆ. ವಿಶೇಷವಾಗಿ ಸಂಸ್ಕೃತಿಯನ್ನು ಪ್ರಾದೇಶಿಕ, ಜನಾಂಗಿಕ ನೆಲೆಯಲ್ಲಿ ಅಧ್ಯಯನ ಮಾಡುವ ಸಂದರ್ಭದಲ್ಲಿ ವ್ಯಕ್ತಿನಾಮಗಳು ಹಲವಾರು ಉಪಯುಕ್ತ ಮಾಹಿತಿಗಳನ್ನು ಒದಗಿಸುವಲ್ಲಿ ಮಹತ್ವವನ್ನು ಪಡೆದುಕೊಳ್ಳುತ್ತವೆ. ಈ ಹಿನ್ನಲೆಯಲ್ಲಿ ವ್ಯಕ್ತಿನಾಮಗಳನ್ನು ಸಂಸ್ಕೃತಿ ಅಧ್ಯಯನದ ಮುಖ್ಯ ಆಕರಗಳೆಂದು ಪರಿಗಣಿಸಿ ನಿರ್ಲಕ್ಷಿಸಲ್ಪಟ್ಟ ಇಂಥ ಹಲವು ಆಕರಗಳನ್ನು, ಪ್ರಮುಖ ಆಕರ ಸಾಮಗ್ರಿಗಳೆಂದು ಪರಿಗಣಿಸಿಕೊಂಡು, ಆ ಮೂಲಕ ಸಂಸ್ಕೃತಿಯನ್ನು ಪುನರ್ ರಚಿಸುವ ಅಗತ್ಯ ಮತ್ತು ಅನಿವಾರ್ಯತೆ ಇದೆ. ಇದರಿಂದ ಸಂಸ್ಕೃತಿಯನ್ನು ಮತ್ತಷ್ಟು ಗಟ್ಟಿಗೊಳಿಸಿದಂತಾಗುತ್ತದೆ. ಅಲ್ಲದೆ ಆ ಮೂಲಕ ಸಂಸ್ಕೃತಿಯ ಹೊಸ ಸಾಧ್ಯತೆಗಳನ್ನು ಗುರುತಿಸಬಹುದು.

ಪಶ್ಚಿಮದ ರಾಷ್ಟ್ರಗಳಲ್ಲಿ ಶತಮಾನಗಳ ಹಿಂದಿನಿಂದಲೂ ವ್ಯಕ್ತಿನಾಮ, ಸ್ಥಳನಾಮ ಅಧ್ಯಯನಗಳು ನಡೆದಿರುವುದು ತಿಳಿದುಬರುತ್ತದೆ. ಭಾರತೀಯ ಭಾಷೆಗಳಲ್ಲಿ ವ್ಯಕ್ತಿನಾಮದ ಬಗೆಗೆ ಅಧ್ಯಯನಗಳು ನಡದಿರಬಹುದಾದರೂ ಆ ಕುರಿತಂತೆ ಮಾಹಿತಿ ಇಲ್ಲ. ಕನ್ನಡದಲ್ಲಿ ನಾಮಾಧ್ಯಯನಕಾರರು, ಬಹುತೇಕ ಸಂದರ್ಭಗಳಲ್ಲಿ ಸ್ಥಳನಾಮಗಳ ಕುರಿತು ಅಧ್ಯಯನ ಮಾಡುವ ಸಮಯದಲ್ಲಿ ಪ್ರಾಸಂಗಿಕವಾಗಿ ಕೆಲವು ಕಡೆ ವ್ಯಕ್ತಿನಾಮಗಳ ಬಗೆಗೆ ಪ್ರಸ್ತಾಪಿಸಿದ್ದಾರೆ. ವ್ಯಕ್ತಿನಾಮಗಳ ಕುರಿತಂತೆ ಸಂಶೋಧನ ಅಧ್ಯಯನಗಳು ನಡೆದಿರುವುದರ ಬಗೆಗೆ ಪ್ರಸ್ತುತ ನಿಬಂಧದ ಗಮನಕ್ಕೆ ಬಂದಿರುವುದಿಲ್ಲ. ಹಂಪಿ, ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ ಡಾ. ಕೆ.ವಿ.ನಾರಾಯಣ ಸಂಪಾದಿತ "ವ್ಯಕ್ತಿನಾಮಗಳು 'ಸ್ವರೂಪ ಮತ್ತು ವಿಶ್ಲೇಷಣೆ' ಎಂಬುದು ಮೊದಲ ಬಾರಿಗೆ, ಇಡಿಯಾಗಿ ವ್ಯಕ್ತಿನಾಮಗಳ ಬಗೆಗೆ, ಸಂಶೋಧಾನಾತ್ಮಕ ಅಧ್ಯಯನ ಮಾದರಿಯಲ್ಲಿ ಮೂಡಿಬಂದಿರುವ ಮೊದಲ ಕೃತಿಯಾಗಿದೆ. ಆ ಪೂರ್ವದಲ್ಲಿ ಬಂದಿರುವ ಡಾ. ಎಂ.ಚಿದಾನಂದಮೂರ್ತಿಯವರ 'ಕರ್ನಾಟಕದ ವ್ಯಕ್ತಿನಾಮಗಳು' (ಲೇಖನ, ವಾಗರ್ಥ), ಡಾ. ಎಂ.ಎಂ.ಕಲಬುರ್ಗಿಯವರ ಕನ್ನಡ ನಾಮವಿಜ್ಞಾನ - ಕೃತಿಗಳಲ್ಲಿರುವ ಚಿಂತನೆಗಳು ಆ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುವವರಿಗೆ ಪ್ರೇರಣೆಯನ್ನೂ, ಅಧ್ಯಯನದ ಮಾದರಿಯನ್ನು ಒದಗಿಸಿಕೊಡುತ್ತವೆ. ಮತ್ತು ವ್ಯಕ್ತಿನಾಮಾಧ್ಯಯನದ ಭಿನ್ನ ಆಯಾಮಗಳ ಬಗೆಗೆ ವಿವರಿಸುತ್ತ, ವ್ಯಕ್ತಿನಾಮ ಸಂಶೋಧನೆಗೆ ಸಂಬಂಧಿಸಿದ ಹಲವು ವಿಷಯಗಳನ್ನು ತಿಳಿಸಿದ್ದಾರೆ. ಅಲ್ಲದೆ ಕನ್ನಡದ ಮಟ್ಟಿಗೆ ಹೊಸ ರೀತಿಯ ಅಧ್ಯಯನದ ವಿಧಿ-ವಿಧಾನಗಳನ್ನು ರೂಪಿಸುವ ಅಗತ್ಯವನ್ನು ಸೂಚಿಸಿದ್ದಾರೆ. ಇವುಗಳಲ್ಲದೆ, ವ್ಯಕ್ತಿನಾಮಗಳ ಬಗೆಗೆ ಲೇಖನ ಮಾದರಿಯ ಬಿಡಿ ಬಿಡಿ ಅಧ್ಯಯನಗಳು ನಡೆದಿವೆ. ಕನ್ನಡದಲ್ಲಿ ನಡೆದಿರುವ ಕೆಲವೇ ಅಧ್ಯಯನಗಳು ಕೂಡ ಶಾಸ್ತ್ರೀಯವಾಗಿ, ವ್ಯಕ್ತಿನಾಮಗಳನ್ನು ಭಾಷಿಕ, ಸಾಮಾಜಿಕ, ಸಾಂಸ್ಕೃತಿಕ,

ಭೌಗೋಳಿಕ ವ್ಯಾಪ್ತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು, ಹೆಸರಿನ ವಿವಿಧ ಮಜಲುಗಳ ಬಗೆಗೆ ನೋಡಬಯಸಿರುವ ಅಧ್ಯಯನಗಳಾಗಿರದೆ, ಸಮೀಕ್ಷೆ ಮಾದರಿಯ ಅಧ್ಯಯನಗಳಾಗಿವೆ. ಈ ಎಲ್ಲಾ ಸಂಗತಿಗಳು ವ್ಯಕ್ತಿನಾಮಾಧ್ಯಯನಕ್ಕೆ ಪ್ರೇರಣೆಯಾಗಿವೆ.

## ಉದ್ದೇಶ

ದ್ರಾವಿಡ ಭಾಷೆಗಳ ಹೆಸರುಗಳು ಕುತೂಹಲಕಾರಿಯಾಗಿವೆ ಎಂದು ಹೇಳಿದ ಪಾಶ್ಚಾತ್ಯ ವಿದ್ವಾಂಸ 'ವಿಲಿಯಂ ಬಾರ್ನೆಟ್'ರವರ ಮಾತನ್ನು ಕನ್ನಡ ವಿದ್ವಾಂಸರು ಪ್ರಯೋಗ ಮಾಡಿದಂತೆ ಕಾಣುವುದಿಲ್ಲ. ಕನ್ನಡ ವ್ಯಕ್ತಿನಾಮಗಳ ಸ್ವರೂಪ, ಸಂಬೋಧನ ವಿಧಾನ ತುಂಬಾ ಕುತೂಹಲಕಾರಿಯಾದ ಸಂಗತಿಗಳಾಗಿವೆ. ಕುಲನಾಮ, ಅಡ್ಡಹೆಸರು, ಮುದ್ದುಹೆಸರು, ಕಾವ್ಯನಾಮ ಈ ಮೊದಲಾದವುಗಳು ಮತ್ತಷ್ಟು ಸ್ವಾರಸ್ಯದಾಯಕವಾಗಿವೆ. ವ್ಯಕ್ತಿನಾಮ ನಿರ್ದೇಶನದ ಬಗೆ, ದಿನಮಾನಗಳಲ್ಲಿ ಅವುಗಳ ಬಳಕೆಯಲ್ಲಿ ಉಂಟಾಗಿರುವ ಬದಲಾವಣೆ, ವ್ಯಕ್ತಿನಾಮ ಸಂಬೋಧನೆಯ ವಿವಿಧ ನೆಲೆಗಳ ಕುರಿತು ಅಧ್ಯಯನ ಮಾಡುವುದು ಆಸಕ್ತಿಯ ವಿಷಯವಾಗಿದೆ. ಆ ಕುರಿತಂತೆ ನಡೆಯುವ ಅಧ್ಯಯನಗಳು ಸಮುದಾಯಗಳ ಪ್ರಾಚೀನ ಚರಿತ್ರೆಯನ್ನು ಪ್ರಾದೇಶಿಕ ನೆಲೆಯಲ್ಲಿ ಮರುಕಟ್ಟುವಲ್ಲಿ ಪ್ರಯೋಜನವಾಗುತ್ತವೆ. ಈ ದಿಸೆಯಲ್ಲಿ ವ್ಯಕ್ತಿನಾಮಗಳ ಬಗೆಗೆ ಅಧ್ಯಯನ ಮಾಡುವ ಉದ್ದೇಶವನ್ನು ಸ್ಪಷ್ಟಪಡಿಸಿಕೊಳ್ಳಲಾಗಿದೆ.

ಒಂದು ಭೌಗೋಳಿಕ ಪರಿಸರದಲ್ಲಿ ವಾಸಿಸುವ ಬೇರೆ ಬೇರೆ ಸಮುದಾಯಗಳು, ತಮ್ಮ ಸಾಂಸ್ಕೃತಿಕ ಹಿನ್ನೆಲೆಗೆ ಅನುಗುಣವಾಗಿ ಹೆಸರು ನಿರ್ದೇಶನ ಮಾಡುವುದು ಸಾಮಾನ್ಯ. ಈ ನಡುವೆಯೂ ಒಂದು ಜಾತಿ, ಧರ್ಮದವರು, ಇನ್ನೊಂದು ಜಾತಿ, ಧರ್ಮದವರು ಅನುಸರಿಸುವ ಹೆಸರುಗಳನ್ನೂ, ಒಂದು ಭಾಷಾಸಮುದಾಯದವರು, ಮತ್ತೊಂದು ಭಾಷಾಸಮುದಾಯದವರ ಹೆಸರುಗಳನ್ನೂ ಸ್ವೀಕರಣೆ ಮಾಡುತ್ತಾರೆ. ಈ ಸ್ವೀಕರಣೆ ಅಥವಾ ಅನುಕರಣ ಪದ್ಧತಿ ಕೆಲವು ಸಂದರ್ಭಗಳಲ್ಲಿ ಪರಸ್ಪರವಾಗಿದ್ದರೆ, ಇನ್ನೂ ಕೆಲವು ಸಂದರ್ಭಗಳಲ್ಲಿ ಏಕಮುಖವಾಗಿರುತ್ತದೆ. ಇಂಥ ದ್ವಿಮುಖ ಚಲನೆಗಳಿಗೆ ಆಯಾ ಸಮುದಾಯಗಳ ಸಾಮಾಜಿಕ, ಧಾರ್ಮಿಕ ಅಂಶಗಳು ಮುಖ್ಯ ಕಾರಣಗಳಾಗಿರುತ್ತವೆ. ವ್ಯಕ್ತಿನಾಮಗಳ ಇಂಥ ಬೆಳವಣಿಗೆಗಳು ಆಸಕ್ತಿಯನ್ನು ಮೂಡಿಸುತ್ತವೆ.

ಚಿತ್ರದುರ್ಗ ಜಿಲ್ಲೆಗೆ ಪ್ರಾಚೀನ ಕಾಲದ ಐತಿಹಾಸಿಕ ಮಹತ್ವವಿದೆ. ಹಲವು ಜಾತಿ, ವರ್ಗ, ಧರ್ಮ ಭಾಷೆಗೆ ಸೇರಿರುವ ಜನರು ನೆಲೆಸಿದ್ದಾರೆ. ಇಲ್ಲಿನ ಭೌಗೋಳಿಕ, ಧಾರ್ಮಿಕ, ಸಾಂಸ್ಕೃತಿಕ, ಚಾರಿತ್ರಿಕ ಪರಿಸರಗಳು ವ್ಯಕ್ತಿನಾಮಗಳ ಮೇಲೆ ಗಾಢವಾದ ಪ್ರಭಾವವನ್ನು ಬೀರಿವೆ. ಅಲ್ಲದೆ ಇಲ್ಲಿನ ಪ್ರಭಾವ ಪ್ರೇರಣೆಗಳು ರಾಜಕೀಯ ಗಡಿಗಳನ್ನು ದಾಟಿ ಸಾಂಸ್ಕೃತಿಕವಾಗಿ ಇತರ ಪರಿಸರಗಳಿಗೂ ಹರಡಿಕೊಂಡಿವೆ. ಇದಲ್ಲದೆ ಪಕ್ಕದ ಆಂಧ್ರಪ್ರದೇಶದೊಂದಿಗಿನ ವ್ಯಾಪಾರ, ವಾಣಿಜ್ಯ, ರಾಜಕೀಯ, ವೈವಾಹಿಕ ಸಂಬಂಧಗಳು ನಿರಂತರವಾಗಿ ನಡೆದಿರುವುದರಿಂದ ದ್ವಿಭಾಷಿಕ ವಾತಾವರಣ ನಿರ್ಮಾಣವಾಗುತ್ತಿರುವುದಲ್ಲದೆ, ಆಂಧ್ರದ ಕೆಲವು ಸಮುದಾಯಗಳು ಇಲ್ಲಿನ ವ್ಯಕ್ತಿನಾಮಗಳ ಮೇಲೆ ಪ್ರಭಾವ ಬೀರಿವೆ. ಈ ಬಗೆಯ ಪ್ರೇರಣೆ-ಪ್ರಭಾವಗಳು ಭಾಷಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಮಹತ್ವವನ್ನು ಪಡೆದುಕೊಳ್ಳುತ್ತವೆ. ಮೇಲ್ ಸಮುದಾಯದವರ

ಹೆಸರುಗಳು ಒಂದು ಬಗೆಯದಾಗಿದ್ದರೆ, ತಳಸಮುದಾಯದವರ ಹೆಸರುಗಳು ಇನ್ನೊಂದು ಬಗೆಯದಾಗಿರುತ್ತವೆ. ಸೂಕ್ಷ್ಮವಾಗಿ ಗಮನಿಸಿದರೆ, ಒಂದು ಸಮುದಾಯದ ಒಳಗಡೆಯೇ ವೈವಿಧ್ಯತೆಗಳು ಇರುತ್ತವೆ. ಮೇಲ್ ಸಮುದಾಯಗಳು ನಿರ್ದೇಶಿಸಿಕೊಳ್ಳುವ ಹೆಸರುಗಳನ್ನು ತಳಸಮುದಾಯಗಳು ಅನುಕರಣೆ ಮಾಡುವುದರ ಮೂಲಕ ಸಂಸ್ಕೃತಾನುಕರಣಕ್ಕೆ ಒಳಗಾಗುತ್ತಿರುತ್ತಾರೆ. ಸಮುದಾಯಗಳ ಮಧ್ಯೆ ಸಂಭವಿಸುವ ಇಂಥ ಸ್ಥಿತ್ಯಂತರ ಪ್ರಕ್ರಿಯೆಗೆ ಕಾರಣಗಳನ್ನು ಹುಡುಕುವುದು ಒಂದು ಗುರಿಯಾಗಿದೆ. ಈ ಮೇಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು, ಒಂದು ಭೌಗೋಳಿಕ ವ್ಯಾಪ್ತಿಯನ್ನು ನಿಗದಿಪಡಿಸಿಕೊಂಡು, ಆ ಮೂಲಕ ಅಲ್ಲಿನ ವಿವಿಧ ಸಮುದಾಯಗಳ ವ್ಯಕ್ತಿನಾಮಗಳ ಕೆಲವು ಮುಖ್ಯ ಸಂಗತಿಗಳನ್ನು ಚರ್ಚಿಸುವುದು ಈ ಅಧ್ಯಯನದ ಮುಖ್ಯ ಆಶಯವಾಗಿದೆ.

ವ್ಯಕ್ತಿನಾಮಾಧ್ಯಯನ ಸಂಕೀರ್ಣವೂ, ಜಟಿಲವೂ ಆದುದೆಂಬುದು ಹಿಂದಿನ ಕೆಲವು ವಿದ್ವಾಂಸರ ಅಭಿಪ್ರಾಯ. ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳ ಕುರಿತು ಅಧ್ಯಯನಕ್ಕೆ ತೊಡಗಿದಾಗ, ವ್ಯಕ್ತಿನಾಮಾಧ್ಯಯನಕ್ಕೆ ಸಂಬಂಧಿಸಿದ ಯಾವೊಂದು ಸಿದ್ಧ ಮಾದರಿಗಳು ಎದುರಿಗೆ ಇರಲಿಲ್ಲ. ಅಧ್ಯಯನವನ್ನು ಸಂಶೋಧನ ಶಿಸ್ತಿಗೆ ಅಳವಡಿಸುಲ್ಲಿ ಕೆಲವು ವಿದ್ವಾಂಸರ ಸಲಹೆ ಹಾಗೂ ಕೆಲವು ಗ್ರಂಥಗಳ ನೆರವು ಪಡೆಯಲಾಗಿದೆ. ಮುಖ್ಯವಾಗಿ ಈವರೆಗೆ ಕನ್ನಡದಲ್ಲಿ ವ್ಯಕ್ತಿನಾಮ ಅಧ್ಯಯನಕಾರರ ಬರೆಹಗಳನ್ನು ಪರಿಶೀಲಿಸಿ, ಅಲ್ಲಿ ರೂಪಿಸಿರುವ ಮಾದರಿಗಳನ್ನು ಗಮನಿಸಲಾಗಿದೆ. ಬಹುತೇಕ ಅಧ್ಯಯನಗಳು ಭಾಷಿಕ ನೆಲೆಯಲ್ಲಿ ಮೂಡಿಬಂದಿರುವ ವರ್ಣನಾತ್ಮಕ ಮಾದರಿಯ ಅಧ್ಯಯನಗಳಾಗಿವೆ. ಮಿಕ್ಕಂತೆ ಸಂದರ್ಭಾನುಸಾರ ಸಾಮಾಜಿಕ, ಸಾಂಸ್ಕೃತಿಕ ಸಂಗತಿಗಳನ್ನು ಪ್ರಸ್ತಾಪಿಸಲಾಗಿದೆ. ಈ ಎಲ್ಲಾ ಗ್ರಹಿಕೆಗಳೊಂದಿಗೆ ಸಮಾಜೋಭಾಷಿಕ ಹಿನ್ನಲೆಯಲ್ಲಿ ಅಧ್ಯಯನ ಮಾಡುವ ಅವಶ್ಯಕತೆ ತೋರಿಬಂದಿತು. ಆ ಕಾರಣಕ್ಕಾಗಿ ಈ ಅಧ್ಯಯನದಲ್ಲಿ ವ್ಯಕ್ತಿನಾಮಗಳನ್ನು ಸಾಮಾಜಿಕ, ಸಾಂಸ್ಕೃತಿಕ ವಿಶ್ಲೇಷಣೆಗೆ ಒಳಗು ಮಾಡಲಾಗಿದೆ. ಪ್ರಸ್ತುತ ನಿಬಂಧ ಎತ್ತಿಕೊಂಡು ಸವಾಲುಗಳು ಈ ರೀತಿ ಇವೆ.

೧. ವ್ಯಕ್ತಿನಾಮಗಳು ಮೂಲತಃ ಭಾಷಿಕ ರಚನೆಗಳು. ಮುಖ್ಯವಾಗಿ 'ವ್ಯಕ್ತಿನಾಮ'ವನ್ನು ಭಾಷಾಶಾಸ್ತ್ರದ ಪರಿಭಾಷೆಯಲ್ಲಿ 'ನಿರ್ದಿಷ್ಟ' ಮತ್ತು 'ವಾರ್ಗಿಕ' ಎಂದು ಎರಡು ಪ್ರಕಾರಗಳಲ್ಲಿ ವರ್ಗೀಕರಿಸಿಕೊಳ್ಳಲಾಗಿದೆ. ಕ್ಷೇತ್ರಕಾರ್ಯದ ದತ್ತ ಮಾಹಿತಿಯನ್ನು ಆಧರಿಸಿ, ವ್ಯಕ್ತಿನಾಮಗಳ ರಾಚನಿಕ ಸ್ವರೂಪವನ್ನು ಭಾಷಿಕ ನೆಲೆಯಲ್ಲಿ ವಿಶ್ಲೇಷಿಸುವುದು ಮತ್ತು ಅಗತ್ಯ ಎಂದು ಕಂಡುಬಂದಲ್ಲಿ ಸಾಮಾಜಿಕ ಆಯಾಮಗಳ ಮುಖೇನ ಚರ್ಚಿಸುವುದು.

೨. ವ್ಯಕ್ತಿನಾಮಗಳ ಮುಖೇನ ಸಮುದಾಯಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಯಾಮಗಳನ್ನು ಅಧ್ಯಯನ ಮಾಡುವುದು. ಅಲ್ಲದೆ, ಕಾಲಾಂತರದಲ್ಲಿ ವ್ಯಕ್ತಿನಾಮ ನಿರ್ದೇಶನದಲ್ಲಿ ಆಗುತ್ತಿರುವ ಬದಲಾವಣೆ, ವ್ಯತ್ಯಾಸಗಳನ್ನು ಗುರುತಿಸುವುದು. ಈ ಬದಲಾವಣೆಯ ಆಯಾಮುಗಳನ್ನು ತಲೆಮಾರುಗಳ ಅಂತರಗಳಲ್ಲಿ ಗುರುತಿಸಿಕೊಂಡು ವಿಶ್ಲೇಷಿಸಲಾಗಿದೆ. ದೈವ, ಧರ್ಮ, ಪುರಾಣ, ಚರಿತ್ರೆ, ಜನಪ್ರಿಯ

ವ್ಯಕ್ತಿಗಳು, ಆಧುನೀಕರಣ ಇತ್ಯಾದಿ ಅಂಶಗಳು ಜನರ ಹೆಸರುಗಳಿಗೆ ಪ್ರೇರಣೆಯಾಗುತ್ತವೆ. ಈ ಪ್ರೇರಣೆ-ಪ್ರಭಾವಗಳು ಕಾಲದಿಂದ-ಕಾಲಕ್ಕೆ ಯಾವ ನಿಟ್ಟಿನಲ್ಲಿ ಸಾಗುತ್ತವೆ ಎಂಬುದನ್ನು ಜಾತಿ, ವಯಸ್ಸು, ಲಿಂಗ ಈ ಮೂರು ನೆಲೆಯಲ್ಲಿ ಗುರುತಿಸಿಕೊಳ್ಳುವ ಪ್ರಯತ್ನ ಮಾಡಲಾಗಿದ್ದು, ಈ ಪ್ರಕ್ರಿಯೆ ಚಲನೆಯನ್ನು ಶೇಕಡವಾರು ಅಂಕಿ-ಸಂಖ್ಯೆಗಳಿಂದ ತಿಳಿಯುವ ಪ್ರಯತ್ನ ಮಾಡಲಾಗಿದೆ. ಚಿತ್ರದುರ್ಗ ಪರಿಸರದ ಮುಸ್ಲಿಂ ಸಮುದಾಯದ ವ್ಯಕ್ತಿನಾಮಗಳ ಕೆಲವು ಆಯಾಮಗಳನ್ನು ಕುರಿತು ಚರ್ಚಿಸುವುದು, ಮತಾಂತರದಿಂದ ವ್ಯಕ್ತಿನಾಮ ಸ್ವರೂಪದಲ್ಲಾಗುವ ಸಂಗತಿಗಳನ್ನು ಗುರುತಿಸುವುದು, ಧಾರ್ಮಿಕ ಕೇಂದ್ರಗಳು ಸುತ್ತಲಿನ ಸಮುದಾಯಗಳ ಹೆಸರುಗಳ ಮೇಲೆ ಉಂಟುಮಾಡಿರುವ ಪ್ರಭಾವವನ್ನು ಗುರುತಿಸಿಕೊಂಡು ವಿಶ್ಲೇಷಿಸುವುದು.

೩. ವ್ಯಕ್ತಿನಾಮ ಸಂಬೋಧನ ಸ್ವರೂಪ, ಬಳಕೆಯ ಆಯಾಮಗಳನ್ನು ಭಾಷಿಕ ಮತ್ತು ಸಾಮಾಜಿಕ ನೆಲೆಯಲ್ಲಿ ಚರ್ಚಿಸುವುದು. ಬರೆಹ-ಮೌಖಿಕ, ಕುಟುಂಬ-ಕುಟುಂಬೇತರ, ಔಪಚಾರಿಕ-ಅನೌಪಚಾರಿಕ, ಹಾಜರಿ-ಗೈರುಹಾಜರಿ, ಉಲ್ಲೇಖಿ-ಉಲ್ಲೇಖ ಈ ಮೊದಲಾದ ಆವರಣಗಳಲ್ಲಿ, ವ್ಯಕ್ತಿನಾಮ ಸಂಬೋಧನೆಯ ಸಾಧ್ಯತೆಗಳನ್ನು ಕಂಡುಕೊಳ್ಳುವುದು, ಭೂತ ಮತ್ತು ವರ್ತಮಾನ ಸಮಾಜದ ಮೇಲ್ ಸಮುದಾಯ -ಕೆಳಸಮುದಾಯ, ಮೇಲ್ವರ್ಗ-ಕೆಳವರ್ಗಗಳ ನಡುವಿನ ಸಂಬೋಧನೆಯ ಬದಲಾವಣೆಗಳನ್ನು ಸೂಕ್ಷ್ಮವಾಗಿ ಗಮನಿಸುವುದು ಹಾಗೂ ವ್ಯಕ್ತಿನಾಮ ಸಂಬೋಧನೆಯ ಬಗೆಗೆ ಜನರಲ್ಲಿರುವ ನಂಬಿಕೆ. ಇದರ ಹಿಂದಿನ ಸಾಂಸ್ಕೃತಿಕ ರಾಜಕಾರಣವನ್ನು ಚರ್ಚಿಸುವುದು.

೪. ಹೆಸರಿನ ವಿವಿಧ ಆಯಾಮಗಳನ್ನು ಸಾಂಸ್ಕೃತಿಕ ಚೌಕಟ್ಟಿಗೆ ಹೊಂದಿಸಿಕೊಂಡು ವಿವರಿಸುವುದು ಹೆಸರಿನ ತಾತ್ವಿಕತೆ, ನಂಬಿಕೆ, ಆಯ್ಕೆ, ಮರುನಾಮಕರಣ, ಸಂಸ್ಕೃತಾನುಕರಣ, ನಾಮಕರಣದ ಸ್ವರೂಪ ಈ ಅಂಶಗಳನ್ನು ಸಮುದಾಯಗಳ ಹಿನ್ನೆಲೆಯಲ್ಲಿ ಚರ್ಚಿಸುವುದು. ಅಡ್ಡಹೆಸರು, ಕುಲನಾಮಗಳ ವ್ಯಾಖ್ಯಾನ, ಸ್ವರೂಪ, ಕಾರಣ ಹಾಗೂ ಬಳಕೆಯ ಸಾಧ್ಯತೆಗಳ ಬಗೆಗೆ ವಿವರಿಸುವುದು.

೫. ಆಧುನೀಕರಣ ಮತ್ತು ಜಾಗತೀಕರಣ ಬಿರುಗಾಳಿಯಂತೆ ದೇಸೀಯ ಸಂಸ್ಕೃತಿಗಳ ಮೇಲೆ ಗಾಢವಾದ ಪ್ರಭಾವ ಬೀರಿದೆ. ಪರಿಣಾಮವಾಗಿ ವ್ಯಕ್ತಿನಾಮಗಳ ಬಳಕೆಯಲ್ಲಿ ಒಂದು ಕ್ರಾಂತಿಯಾಗಿದೆ. ಜತೆಗೆ ದೇಶೀಯ ಮೂಲ ಸಂಸ್ಕೃತಿಯ ಮರುಕಳಿಕೆಯೂ ಆಗುತ್ತಿದೆ. ಇಂಥ ಚಾರಿತ್ರಿಕ ಬದಲಾವಣೆಗಳನ್ನು ಸಾಮಾಜಿಕ ನೆಲೆಯಲ್ಲಿ ಚರ್ಚಿಸುವುದು.

ಈ ಮೇಲೆ ಸೂಚಿಸಿರುವ ಅಂಶಗಳು ಈ ಅಧ್ಯಯನದ ಮುಖ್ಯ ಉದ್ದೇಶಗಳಾಗಿವೆ. ಈ ಅಂಶಗಳನ್ನು ಒಂದೊಂದು ಅಧ್ಯಾಯಗಳನ್ನಾಗಿ ಮಾಡಿಕೊಂಡು, ಪೂರಕ ಚರ್ಚೆಯನ್ನು ಮಾಡಲಾಗಿದ್ದು, ವ್ಯಕ್ತಿನಾಮಗಳ ಮೂಲಕ ಸಂಸ್ಕೃತಿಯನ್ನು ಅನಾವರಣಗೊಳಿಸುವ ಪ್ರಯತ್ನ ಮಾಡಲಾಗಿದೆ.



**ವ್ಯಾಪ್ತಿ**

'ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು' ಎಂಬ ಈ ನಿಬಂಧದ ಶೀರ್ಷಿಕೆ ಮೊದಲು, 'ಚಿತ್ರದುರ್ಗ ಜಿಲ್ಲೆಯ ವ್ಯಕ್ತಿನಾಮಗಳು' ಎಂಬುದಾಗಿತ್ತು. ಆಗ ಇಡೀ ಜಿಲ್ಲೆಯನ್ನು ಅಧ್ಯಯನದ ವ್ಯಾಪ್ತಿಗೆ ತೆಗೆದುಕೊಳ್ಳುವ ಉದ್ದೇಶ ಹೊಂದಲಾಗಿತ್ತು. ಕ್ಷೇತ್ರಕಾರ್ಯದ ಸಂದರ್ಭದಲ್ಲಿ, ವ್ಯಕ್ತಿನಾಮಗಳ ಬಳಕೆ, ರಾಜಕೀಯ ಗಡಿರೇಖೆಗಳನ್ನು ಮೀರಿ ಸುತ್ತಲಿನ ಇತರ ಭೌಗೋಳಿಕ ಪ್ರದೇಶಗಳಿಗೂ ವ್ಯಾಪಿಸಿಕೊಂಡಿರುವುದು ಕಂಡುಬಂದಿದ್ದರಿಂದ, ಅಂಥ ಸಾಧ್ಯತೆಗಳನ್ನು ಗುರುತಿಸುವ ಉದ್ದೇಶದಿಂದ, ಸಾಂಸ್ಕೃತಿಕವಾಗಿ ಅಧ್ಯಯನದ ವ್ಯಾಪ್ತಿಯನ್ನು ಚಿತ್ರದುರ್ಗ ಜಿಲ್ಲೆಯ ಇತರ ಗಡಿಪ್ರದೇಶಗಳಿಗೂ ವಿಸ್ತರಿಸಿಕೊಳ್ಳಲಾಗಿದೆ. ಆ ಕಾರಣಕ್ಕಾಗಿ ನಿಬಂಧದ ಶೀರ್ಷಿಕೆಯನ್ನು 'ಚಿತ್ರದುರ್ಗ ಜಿಲ್ಲೆಯ ವ್ಯಕ್ತಿನಾಮಗಳು' ಎಂಬುದಕ್ಕೆ ಬದಲಾಗಿ, 'ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು' ಎಂದು ಮಾಡಿಕೊಳ್ಳಲಾಗಿದೆ. ಈ ನಿಬಂಧದ ಶೀರ್ಷಿಕೆಯಲ್ಲಿ 'ಪರಿಸರ' ಎಂಬ ಪದವನ್ನು 'ಭೌಗೋಳಿಕ ಗಡಿ ಪ್ರದೇಶ' ಎಂಬರ್ಥದಲ್ಲಿ ಬಳಸಿರದೆ, 'ಸಾಂಸ್ಕೃತಿಕ ಗಡಿ ಪ್ರದೇಶ' ಎಂದು ಪರಿಭಾವಿಸಿ ಬಳಸಲಾಗಿದೆ.

'ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು' ಎಂಬ ಈ ನಿಬಂಧದಲ್ಲಿ ಚಿತ್ರದುರ್ಗ ಜಿಲ್ಲೆಯ ಆರೂ ತಾಲೂಕುಗಳನ್ನು ಆಯ್ದುಕೊಂಡಿಲ್ಲ. ಮಾದರಿಗಾಗಿ ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ, ಚಳ್ಳಕೆರೆ, ಮೊಳಕಾಲ್ಮೂರು ಈ ಮೂರು ತಾಲೂಕುಗಳಿಗೆ ಅಧ್ಯಯನದ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಳ್ಳಲಾಗಿದೆ. ಕೆಲವು ಸಂದರ್ಭಗಳಲ್ಲಿ ಇತರ ತಾಲೂಕುಗಳ ಉದಾಹರಣೆಗಳನ್ನು ಮಾದರಿಗಾಗಿ ಬಳಸಿಕೊಳ್ಳಲಾಗಿದೆ. ಜತೆಗೆ ರಾಜಕೀಯ ಗಡಿಗಳನ್ನು ಮೀರಿ, ಸಾಮಾಜಿಕ, ಭಾಷಿಕ, ಭೌಗೋಳಿಕ ವ್ಯಾಪ್ತಿಯನ್ನು ಗಮನಿಸಲಾಗಿದೆ. ಕೆಲವು ಮಾದರಿಗಳಿಗೆ ಕೊಟ್ಟೂರು (ಬಳ್ಳಾರಿ ಜಿಲ್ಲೆ), ಮುಸ್ಟೂರು (ದಾವಣಗೆರೆ ಜಿಲ್ಲೆ), ಆಂಧ್ರಪ್ರದೇಶದ ಗಡಿಭಾಗಗಳ ಹಾಗೂ ಉತ್ತರಕರ್ನಾಟಕದ ಕೆಲವು ಹೆಸರುಗಳನ್ನು ಮಾದರಿಗೆ ಬಳಸಿಕೊಳ್ಳಲಾಗಿದೆ. ಅಧ್ಯಯನದ ಭೌಗೋಳಿಕ ವ್ಯಾಪ್ತಿಯಲ್ಲಿ ಹಲವು ಬೇರೆ ಬೇರೆ ಸಮುದಾಯಗಳು ನೆಲೆಸಿವೆ. ಅವುಗಳಲ್ಲಿ ನಾಯಕ, ಮಾದಿಗ, ಬ್ರಾಹ್ಮಣ, ಲಿಂಗಾಯತ, ರೆಡ್ಡಿ, ವೈಶ್ಯ, ಗೊಲ್ಲ, ಕುರುಬ, ವಿಶ್ವಕರ್ಮ, ಲಂಬಾಣಿ ಹಾಗೂ ಮುಸ್ಲಿಂ ಸಮುದಾಯಗಳನ್ನು ಮಾತ್ರ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಈ ಅಧ್ಯಯನದಿಂದ ಅನೇಕ ಸಮುದಾಯಗಳು ಹೊರಗುಳಿದಿವೆ. ಅಧ್ಯಯನದ ಅತಿವ್ಯಾಪ್ತಿಯನ್ನು ಮಿತಿಗೊಳಿಸಿಕೊಳ್ಳುವ ಉದ್ದೇಶದಿಂದ ಮಾತ್ರ ಇತರ ಸಮುದಾಯಗಳನ್ನು ಅಧ್ಯಯನದಿಂದ ಕೈಬಿಡಲಾಗಿದೆ. ಇಲ್ಲಿನ ಸಮುದಾಯಗಳ ಆರ್ಥಿಕ ಸ್ಥಿತಿಗತಿ, ಸಾಮಾಜಿಕ ಸ್ಥಾನಮಾನ, ಶಿಕ್ಷಣ, ಭಾಷೆ, ಭೌಗೋಳಿಕ ಪರಿಸರ, ಚರಿತ್ರೆ, ಆಚಾರ, ವಿಚಾರ, ರೂಢಿ ನಂಬಿಕೆ, ಸಂಪ್ರದಾಯಗಳು, ದೈವ, ಸಂಸ್ಕೃತಿ ಈ ಮೊದಲಾದ ಅಂಶಗಳನ್ನು ಅಧ್ಯಯನದಲ್ಲಿ ಪೂರಕ ಮಾಹಿತಿಗಾಗಿ ಬಳಸಿಕೊಂಡು ವ್ಯಕ್ತಿನಾಮಗಳ ಮುಖೇನ ವಿಶ್ಲೇಷಣೆ ಮಾಡಲಾಗಿದೆ.

## ಅಧ್ಯಯನದ ಮಿತಿಗಳು

ಪ್ರಾಯಶಃ ಕನ್ನಡದಲ್ಲಿ ವ್ಯಕ್ತಿನಾಮಗಳ ಬಗೆಗೆ ಎಂ.ಫಿಲ್, ಪಿಎಚ್.ಡಿ. ಮತ್ತು ಯಾವುದೇ ಸಂಶೋಧನ ಅಧ್ಯಯನಗಳು ನಡೆದಿರುವಂತೆ ಕಾಣಬರುವುದಿಲ್ಲ. 'ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು' ಎಂಬ ಈ ನಿಬಂಧ, ಕನ್ನಡದ ಸಂದರ್ಭದಲ್ಲಿ ಒಂದು ಭೌಗೋಳಿಕ ವ್ಯಾಪ್ತಿಯ ವ್ಯಕ್ತಿನಾಮಗಳ ಬಗೆಗೆ

ಕೈಗೊಂಡಿರುವ ಮೊದಲ ಸಂಶೋಧನ ಅಧ್ಯಯನ ನಿಬಂಧವಾಗಿದೆ. ಈ ದಿಸೆಯಲ್ಲಿ ಈ ನಿಬಂಧ ಹಲವು ಮಿತಿಗಳಿಗೆ ಒಳಪಟ್ಟಿದೆ. ಈ ನಿಬಂಧದಲ್ಲಿ ವ್ಯಕ್ತಿನಾಮಗಳ ರಚನೆ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಬಳಕೆಯ ವಿಧಾನ ಈ ಮೊದಲಾದವು ಅಧ್ಯಯನದ ಪ್ರಮುಖ ಅಂಶಗಳೆಂದು ಪರಿಭಾವಿಸಿ, ಆ ಮೂಲಕ ವ್ಯಕ್ತಿನಾಮಗಳ ವಿವಿಧ ಆಯಾಮಗಳ ಕುರಿತು ಒಂದು ಮಾದರಿ ಅಧ್ಯಯನವೆಂಬಂತೆ ವಿಶ್ಲೇಷಿಸಲಾಗಿದೆ. ಅಧ್ಯಯನದ ಕೆಲ ಸಂದರ್ಭಗಳಲ್ಲಿ, ವ್ಯಾಪ್ತಿಗೆ ಮೀರಿದ ಅಥವಾ ಪ್ರಸ್ತುತ ಸಂದರ್ಭಕ್ಕೆ ಒಳಪಡದ ಸಂಗತಿಗಳನ್ನು, ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಂಡಿದೆ. ಇಂಥ ಅಂಶಗಳು ಅನಗತ್ಯ ಎಂದೆನಿಸಬಹುದಾದರೂ, ವ್ಯಕ್ತಿನಾಮಾಧ್ಯಯನದ ಅಗತ್ಯ ಮತ್ತು ಅನಿವಾರ್ಯ ಸಾಧ್ಯತೆಗಳೆಂದು ಭಾವಿಸಲಾಗಿದೆ. ಅಧ್ಯಯನದ ಭೌಗೋಳಿಕ ವ್ಯಾಪ್ತಿಯನ್ನು ಉಳಿದ ಮೂರು ತಾಲೂಕುಗಳಿಗೆ ಹೆಚ್ಚಿಸಿಕೊಂಡು, ಇನ್ನೂ ಕೆಲವು ಸೂಕ್ಷ್ಮ ಅಂಶಗಳನ್ನು ಎಕ್ಕಿ ತೆಗೆಯಬಹುದಾಗಿತ್ತು. ಆದರೆ ಸಮಯ ಮತ್ತು ಭೌಗೋಳಿಕ ವಲಯದ ಅತಿವ್ಯಾಪ್ತಿಯಿಂದಾಗಿ, ಅಧ್ಯಯನವನ್ನು ಮೂರು ತಾಲೂಕುಗಳಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಈ ಮೂರು ತಾಲೂಕು ಪರಿಸರದ ಎಲ್ಲಾ ಗ್ರಾಮ, ಪಟ್ಟಣ ಮತ್ತು ಸಮುದಾಯಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸದೆ, ಮಾದರಿಗಾಗಿ ಕೆಲವು ಗ್ರಾಮ ಹಾಗೂ ಸಮುದಾಯಗಳನ್ನು ಮಾತ್ರ ಆಯ್ದುಕೊಂಡಿದೆ. ಮಾಹಿತಿ ಪಡೆಯಲಾರದ ಇನ್ನೂ ಅನೇಕ ಗ್ರಾಮ ಮತ್ತು ಸಮುದಾಯಗಳು ಈ ಅಧ್ಯಯನದಿಂದ ಹೊರಗಿವೆ. ಇದು ಈ ಅಧ್ಯಯನದ ಮಿತಿಯೂ ಹೌದು. ಚಿತ್ರದುರ್ಗ ಪರಿಸರದ ಶಾಸನೋಕ್ತ ವ್ಯಕ್ತಿನಾಮಗಳು, ನಿಷ್ಪತ್ತಿ, ಪ್ರಾಚೀನತೆ, ನಿರ್ದಿಷ್ಟ ಕಾಲಮಿತಿ ಇಂಥ ಅಂಶಗಳ ಕಡೆಗೆ ಪ್ರಸ್ತುತ ನಿಬಂಧ ಗಮನಹರಿಸದೆ, ಸಮಕಾಲೀನ ಸಂದರ್ಭದಲ್ಲಿ ಚಲಾವಣೆಯಲ್ಲಿರುವ ವ್ಯಕ್ತಿನಾಮಗಳನ್ನು ಮಾತ್ರ ಅಧ್ಯಯನದ ವಿಶ್ಲೇಷಣೆಗೆ ಒಳಗುಮಾಡಲಾಗಿದೆ.

ಈ ಅಧ್ಯಯನಕ್ಕೆ ಕನ್ನಡದಲ್ಲಿ ಯಾವುದೇ ಸಿದ್ಧಮಾದರಿಗಳು ನನ್ನ ಗಮನಕ್ಕೆ ಬಾರದ ಕಾರಣ ಇರುವುದಿಲ್ಲ. ಹೊಸ ಒಂದು ವಿಧಾನವನ್ನು ರೂಪಿಸಿಕೊಂಡು ಅಧ್ಯಯನ ಮಾಡಲು ಪ್ರಯತ್ನಿಸಿದ್ದೇನೆ. ಈ ಅಧ್ಯಯನದಲ್ಲಿ ಕೆಲವು ಕಡೆ ವಿಷಯಗಳ ಪುನರಾವರ್ತನೆಯಾಗಿದೆ. ಈ ಬಗೆಯ ಅಧ್ಯಯನ ಕನ್ನಡದ ಸಂಶೋಧನ ಕ್ಷೇತ್ರಕ್ಕೆ ಹೊಸ ಸೇರ್ಪಡೆ ಎನಿಸಿದ್ದು, ಮಾಹಿತಿ ಸ್ಪಷ್ಟೀಕರಣದ ಮತ್ತು ವಿಷಯದ ಖಚಿತತೆಯ ಅನಿವಾರ್ಯತೆಗಾಗಿ ಈ ರೀತಿ ಬಳಸಲಾಗಿದೆ. ಇದು ಈ ಅಧ್ಯಯನದ ಮಿತಿಗಳಲ್ಲೊಂದಾಗಿದೆ. ಈ ಅಧ್ಯಯನದಲ್ಲಿ ಕೆಲವು ಸಂಗತಿಗಳು ಚಿತ್ರದುರ್ಗ ಪರಿಸರಕ್ಕೆ ಮಾತ್ರ ಅನ್ವಯಿಸದೆ, ಕರ್ನಾಟಕದ ಇತರ ಭೌಗೋಳಿಕ ಪರಿಸರಗಳಿಗೂ ಅನ್ವಯಿಸುತ್ತವೆ. ಅಂದರೆ ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳ ಕೆಲವು ಆಯಾಮಗಳು ಇತರ ಪ್ರದೇಶಗಳಲ್ಲಿಯೂ ಕಾಣಬರುತ್ತವೆ. ಅವು ಸಾಮಾನ್ಯ ಸಂಗತಿಗಳೆನಿಸಿದರೂ, ಅನಿವಾರ್ಯ ಸಾಧ್ಯತೆಗಳೆಂದು ಅಥವಾ ವೈಶಿಷ್ಟ್ಯಗಳೆಂಬಂತೆ ವಿವರಿಸಲಾಗಿದೆ. ಈ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳು ಯಾವುದೂ ಅಂತಿಮವಲ್ಲ. ಸಂಶೋಧನ ಅವಧಿಯಲ್ಲಿ ಸಂಶೋಧನ ವಿಧಿ-ವಿಧಾನಗಳ ಮಿತಿಯಲ್ಲಿ ಕಂಡುಕೊಂಡ ಫಲಿತಗಳು. ಏಕೆಂದರೆ ವ್ಯಕ್ತಿನಾಮಗಳು ಪರಿವರ್ತನಶೀಲ ಸ್ವಭಾವವನ್ನು ಹೊಂದಿವೆ. ಪರಿಸ್ಥಿತಿಗಳು ಬದಲಾದಂತೆ, ವ್ಯಕ್ತಿನಾಮದ ನಿರ್ದೇಶನ ಮತ್ತು ಬಳಕೆಯಲ್ಲಿ ಸ್ಥಿತ್ಯಂತರಗಳು ಉಂಟಾಗುತ್ತಿರುತ್ತವೆ. ಆದ್ದರಿಂದ ಈ ಅಧ್ಯಯನದ ನಿಯಮಗಳು ಸಮಕಾಲೀನ ಸಂದರ್ಭಕ್ಕೆ ಅನ್ವಯವಾಗುತ್ತಿದ್ದು, ಕಾಲಾಂತರದಲ್ಲಿ ಬದಲಾಗಬಹುದು.

## ವಿಧಾನ

ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಭಾಷಿಕವಾಗಿ ಮತ್ತು ಪ್ರಾದೇಶಿಕವಾಗಿ ವ್ಯಕ್ತಿನಾಮಗಳ ಸ್ವರೂಪ ಹಾಗೂ ಬಳಕೆಯ ಆಯಾಮಗಳನ್ನು ತಿಳಿಯಲು ಸಾಮಾಜಿಕ ಭಾಷಾಶಾಸ್ತ್ರದ ಶಿಸ್ತಿಗೆ ಅಧ್ಯಯನದ ಚೌಕಟ್ಟನ್ನು ಅಳವಡಿಸಲಾಗಿದೆ. 'ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು' ಎಂಬ ಈ ಅಧ್ಯಯನವು ಕ್ಷೇತ್ರಮಾಹಿತಿ ಹಾಗೂ ಕೆಲವು ಪೂರಕ ಅಧ್ಯಯನ ಗ್ರಂಥಗಳ ನೆರವಿನಿಂದ ರೂಪುಗೊಂಡಿದೆ. ಕ್ಷೇತ್ರ ಮಾಹಿತಿಗೆ ಅನುಗುಣವಾಗಿ ಅಧ್ಯಯನದ ವಿಧಿ-ವಿಧಾನಗಳನ್ನು ರೂಪಿಸಿಕೊಳ್ಳಲಾಗಿದೆ. ಮುಖ್ಯವಾಗಿ ಈ ಅಧ್ಯಯನವು ಕ್ಷೇತ್ರಮಾಹಿತಿಯನ್ನು ಅವಲಂಬಿಸಿದೆ. ಪ್ರಶ್ನಾವಳಿಯ ಮೂಲಕ ವಕ್ತೃಗಳಿಂದ ಮಾಹಿತಿಯನ್ನು ಪಡೆಯಲಾಗಿದೆ. ವ್ಯಕ್ತಿಯ ಹೆಸರು, ಆ ಹೆಸರು ಇಡುವುದಕ್ಕೆ ಕಾರಣ, ತಂದೆ-ತಾಯಿ, ಅಜ್ಜ-ಅಜ್ಜಿ ಮತ್ತು ಮಕ್ಕಳ ಹೆಸರು, ಕುಲನಾಮ, ಅಡ್ಡಹೆಸರು - ಈ ಮೊದಲಾದ ಸಂಗತಿಗಳ ಚಾರಿತ್ರಿಕ ಭಾಷಿಕ ಮತ್ತು ಪ್ರಾದೇಶಿಕ ವಲಯಗಳ ಮಾಹಿತಿ ಪಡೆಯಲಾಗಿದೆ. ಆ ಮೂಲಕ ವಿಭಿನ್ನ ಸಂಸ್ಕೃತಿ ವ್ಯಕ್ತಿನಾಮಗಳ ಭಾಷಿಕ ಮತ್ತು ಸಾಮಾಜಿಕ ಚಹರೆಗಳನ್ನು ತಿಳಿಯಲಾಗಿದೆ. ಮತ್ತು ವಿವಿಧ ಸಾಮಾಜಿಕ ಆವರಣಗಳಲ್ಲಿ ವ್ಯಕ್ತಿನಾಮಗಳ ಬಳಕೆಯ ಸ್ವರೂಪ ಅಂದರೆ ಬರೆಹ ಮತ್ತು ಸಂಬೋಧನೆಯ ವಿಧಾನವನ್ನು ಸೂಕ್ಷ್ಮವಾಗಿ ಗಮನಿಸಿಕೊಂಡು, ಮೇಲ್ಜಾತಿ-ಮೇಲ್ವರ್ಗ, ಕೆಳಜಾತಿ-ಕೆಳವರ್ಗಗಳು ಪರಸ್ಪರರನ್ನು ಸಂಬೋಧಿಸುವಾಗ, ವ್ಯಕ್ತಿನಾಮದ ಬಳಕೆಯ ಸಾಧ್ಯತೆಗಳನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಗ್ರಾಮಗಳಿಗೆ ಸಂದರ್ಶಿಸಿದಾಗ, ಆ ಗ್ರಾಮದ ಬೇರೆ ಬೇರೆ ಸಮುದಾಯದ ಪುರುಷ ಮತ್ತು ಸ್ತ್ರೀಯರನ್ನು ಸಂದರ್ಶಿಸಿ ಅವರಿಂದ ವ್ಯಕ್ತಿನಾಮಗಳ ಬಗೆಗೆ ಮಾಹಿತಿಯನ್ನು ಪಡೆಯಲಾಗಿದೆ. ಸಾಧ್ಯವಾದಷ್ಟು ಆಯಾ ಗ್ರಾಮಗಳ ಮತದಾರರ ಪಟ್ಟಿಯನ್ನು ಸಂಗ್ರಹಿಸಲಾಗಿದೆ. ಅಲ್ಲದೆ ಶಾಲಾ-ಕಾಲೇಜುಗಳಿಗೆ ಸಂದರ್ಶಿಸಿ, ವಿದ್ಯಾರ್ಥಿ ಸಮುದಾಯದಿಂದ ಪ್ರಶ್ನಾವಳಿಗಳ ಮೂಲಕ ಹೆಚ್ಚಿನ ಮಾಹಿತಿಯನ್ನು ಪಡೆಯಲಾಗಿದೆ. ಅಂಗನವಾಡಿ ಕೇಂದ್ರಗಳಿಗೆ ಸಂದರ್ಶಿಸಿ ಕಾರ್ಯಕರ್ತೆಯರಿಂದ ವಿದ್ಯಾರ್ಥಿಗಳ ಹೆಸರುಗಳ ಬಗೆಗೆ ಮಾಹಿತಿ ಪಡೆಯಲಾಗಿದೆ. ಸಂದರ್ಶಿಸಿದ ವಕ್ತೃಗಳಿಂದ ಆಯಾ ವ್ಯಕ್ತಿಯ ಕೌಟುಂಬಿಕ ಪರಿಸರದ ವ್ಯಕ್ತಿನಾಮಗಳ ಮಾಹಿತಿ ಪಡೆಯುವುದರ ಜತೆಗೆ ವ್ಯಕ್ತಿಯ ಜಾತಿ, ವೃತ್ತಿ, ಕುಲ, ಕಸುಬು, ವಯಸ್ಸು, ಶಿಕ್ಷಣ, ಮಾತೃಭಾಷೆ, ಮೂಲನೆಲೆ, ಮನೆದೈವ, ಕುಲದೈವ, ಆರಾಧಿಸುತ್ತಿರುವ ದೈವ ಹಾಗೂ ಆಯಾ ಊರುಗಳಲ್ಲಿ ವಾಸಿಸುವ ಸಮುದಾಯಗಳು, ಬಹುಸಂಖ್ಯಾತ ಸಮುದಾಯ, ಪರಸ್ಪರ ಸಮುದಾಯಗಳ ನಡುವಿನ ಸಾಮಾಜಿಕ ಸಂಬಂಧ, ದೇವಾಲಯಗಳು, ಊರಿನ ಸುತ್ತಮುತ್ತ ಇರುವ ಐತಿಹಾಸಿಕ ಕುರುಹುಗಳು, ಜಾತ್ರೆ, ಉತ್ಸವ, ಹಬ್ಬ, ಸಂತೆ ನಡೆಯುವ ದಿನ, ಆ ಊರಿನ ವಿಶಿಷ್ಟ ಸಂಸ್ಕೃತಿ ಮುಂತಾದ ವಿವರಗಳನ್ನು ವಕ್ತೃಗಳಿಂದ ಪಡೆಯಲಾಗಿದೆ. ಆ ಮೂಲಕ ವ್ಯಕ್ತಿನಾಮಗಳ ಭೌಗೋಳಿಕ, ಸಾಂಸ್ಕೃತಿಕ, ಭಾಷಿಕ ಆಯಾಮಗಳನ್ನು ನಿರೂಪಿಸಲು ಈ ಅಂಶಗಳು ಹೆಚ್ಚಿನ ಸಹಕಾರಿಯಾಗಿವೆ.

ಹಿರಿಯರು-ಕಿರಿಯರನ್ನು, ಕಿರಿಯರು-ಹಿರಿಯರನ್ನು, ಪುರುಷರು-ಸ್ತ್ರೀಯರನ್ನು, ಸ್ತ್ರೀಯರು-ಪುರುಷರನ್ನು, ಸ್ನೇಹಿತರು-ಸ್ನೇಹಿತರನ್ನು ಕುಟುಂಬ ಮತ್ತು ಕುಟುಂಬೇತರ ಆವರಣಗಳಲ್ಲಿ ಅಂದರೆ ಸಂತೆ, ಹೋಟೆಲ್ಲು, ಕ್ರೀಡಾಂಗಣ, ಶಾಲಾ-ಕಾಲೇಜು ಮೊದಲಾದ ಪರಿಸರಗಳಲ್ಲಿ ಹೇಗೆ ಸಂಬೋಧಿಸುತ್ತಾರೆ ಎಂಬುದನ್ನು ಪ್ರಶ್ನಾವಳಿ ಮೂಲಕ ಮಾಹಿತಿ ಪಡೆದು, ವಿಶ್ಲೇಷಣೆ ಮಾಡಲಾಗಿದೆ.

ಕಾಲಾಂತರದಲ್ಲಿ ವ್ಯಕ್ತಿನಾಮ ನಿರ್ದೇಶನದಲ್ಲಿ ತಲೆದೋರುವ ಬದಲಾವಣೆಯನ್ನು ತಲೆಮಾರುಗಳ ಮುಖೇನ ಗುರುತಿಸಲಾಗಿದೆ. ಈ ಬದಲಾವಣೆ ಪ್ರಕ್ರಿಯೆಯ ಬೆಳವಣಿಗೆಯನ್ನು ಕ್ಷೇತ್ರದ ಮಾಹಿತಿಯನ್ನು ಆಧರಿಸಿ ಅಂಕಿ-ಅಂಶಗಳ ಮೂಲಕ ವಿಶ್ಲೇಷಿಸಲಾಗಿದೆ. ಕ್ಷೇತ್ರಕಾರ್ಯದಿಂದ ಪಡೆದ ದತ್ತಮಾಹಿತಿಯ ಕೆಲವು ಪ್ರಶ್ನೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

## ಕ್ಷೇತ್ರಕಾರ್ಯದ ಅನುಭವ

ನಾಡಾಭಿಮಾನ, ಭಾಷಾಭಿಮಾನಗಳಂತೆ, ನಾಮಾಭಿಮಾನವೂ ಕೂಡ ಜನರಿಗೆ ಹಿಂದಿನವರಿಂದ ಬಂದ ಬಳುವಳಿಯಾಗಿದೆ. ತಮ್ಮ ಹೆಸರಿನ ಬಗೆಗೆ ಜನತೆಗೆ ತುಂಬಾ ಅಭಿಮಾನ, ಕಾಳಜಿ ಇರುತ್ತದೆ. ಹೆಸರು ಒಬ್ಬ ವ್ಯಕ್ತಿಗೆ ಸಂಬಂಧಪಟ್ಟ ವಿಷಯವಾಗಿರುವುದರಿಂದ, ಅದರ ಬಗೆಗೆ ಎಚ್ಚರ ಮತ್ತು ಅಭಿಮಾನ ಇರುವುದು ಸಹಜವೇ ಆಗಿದೆ. ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಯಾವುದೇ ಪರಿಸ್ಥಿತಿಯಲ್ಲಿದ್ದರೂ, ಹೆಸರು ಸುಂದರವಾಗಿ, ಆಧುನಿಕವಾಗಿ ಇರಬೇಕೆಂದು ಬಯಸುತ್ತಾರೆ. ಹೆಸರಿಗೂ ಮತ್ತು ವ್ಯಕ್ತಿಯ ವ್ಯಕ್ತಿತ್ವಕ್ಕೂ ನೇರ ಸಂಬಂಧವಿರುತ್ತದೆ ಎಂದು ಜನ ಭಾವಿಸಿದಂತಿದೆ. ಆ ಕಾರಣದಿಂದ ಹೆಸರಿಗೆ ಎಳ್ಳಷ್ಟೂ ಚ್ಯುತಿ ಬರದ ಹಾಗೆ ಎಚ್ಚರ ವಹಿಸುತ್ತಾರೆ. ಈ ಹಿನ್ನಲೆಯಲ್ಲಿ ನಾಮಸಂಸ್ಕೃತಿಯ ಬಗೆಗೆ ಸಾಮಾಜಿಕ ಗೌರವವಿದೆ. ಪಾರಂಪರಿಕವಾಗಿ ವ್ಯಕ್ತಿನಾಮಗಳು ಸಮುದಾಯಗಳ ಸಾಂಸ್ಕೃತಿಕ ಪಳಿಯುಳಿಕೆಗಳಾಗಿ ಮುಂದುವರೆದುಕೊಂಡು ಬಂದಿರುವುದರಿಂದ ಅಂಥ ಹೆಸರುಗಳನ್ನು ಉಳಿಸಬೇಕೆಂಬ ಹಂಬಲ ಕೆಲವರಲ್ಲಿದೆ. ಮತ್ತೆ ಕೆಲವರು ವ್ಯಕ್ತಿನಾಮಗಳಲ್ಲಿ ಆಧುನಿಕರಾಗಲು ಉತ್ಸುಕರಾಗಿದ್ದಾರೆ. ಹೆಸರಿನ ಬಗೆಗೆ ಜನರಲ್ಲಿ ಭಿನ್ನಾಭಿಪ್ರಾಯಗಳಿವೆ. ಅಂದರೆ ಹಳೆಯದು-ಹೊಸದು (ಇತ್ತೀಚಿನದು) ಶ್ರೇಷ್ಠ-ಕನಿಷ್ಠ, ಶೀಲ-ಅಶ್ಲೀಲ ಎಂಬ ಅಸಮಾನತೆ ಭಾವನೆಗಳು ಜನರಲ್ಲಿವೆ. ಆದಕಾರಣ ಕೆಲವರು ತಮ್ಮ ಹೆಸರುಗಳನ್ನು ಮುಕ್ತವಾಗಿ, ಹೆಮ್ಮೆಯಿಂದ ಹೇಳಿಕೊಂಡರೆ, ಮತ್ತೆ ಕೆಲವರು ಸಂಕೋಚ ಪಡುತ್ತಾರೆ. ಬಹುತೇಕ ಜನರಿಗೆ ಅವರವರ ಹೆಸರಿನ ಬಗೆಗೆ ಸ್ಪಷ್ಟ ಮಾಹಿತಿ ಇರುವುದಿಲ್ಲ. ನಿನಗೆ ಈ ಹೆಸರು ಇಡಲು ಕಾರಣವೇನು? ಈ ಹೆಸರಿಗೆ ಪ್ರೇರಣೆ ಏನು? ಈ ಹೆಸರಿನ ನಿಷ್ಪತ್ತಿ, ಅರ್ಥವೇನು? ಎಂದು ಕೇಳಿದಾಗ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಪ್ರತಿಕ್ರಿಯಿಸುತ್ತಾರೆ. ಕೆಲವರು ತಬ್ಬಿಬ್ಬಾದರೆ, ಮತ್ತೆ ಕೆಲವರು ತಡವರಿಸುತ್ತಾರೆ. ಮೌನವಾಗುತ್ತಾರೆ. ಇನ್ನೂ ಕೆಲವರು ಉದಾಸೀನ ತೋರಿದರೆ, ಕೆಲವರು ಆಶ್ಚರ್ಯ, ಮುಗುಡಗಳನ್ನು ವ್ಯಕ್ತಪಡಿಸುತ್ತಾರೆ. ಜಾರಿಕೆ ಉತ್ತರ ಕೆಲವರದಾದರೆ, ಮತ್ತೆ ಕೆಲವರು, ಪ್ರಶ್ನೆ ಮಾಡಿದವರಿಗೇ ತಿರುಗಿ ಮರುಪ್ರಶ್ನೆ ಮಾಡುತ್ತಾರೆ. ಕೆಲವರು ಕಾರಣ ಸಮೇತ ಹೆಸರಿನ ಅರ್ಥ, ನಿಷ್ಪತ್ತಿಯನ್ನು ಮಂಡಿಸುತ್ತಾರೆ. ಅಂದರೆ ಬಹಳ ಜನ ತನ್ನ ಹೆಸರಿನ ಹಿನ್ನೆಲೆಯ ಬಗೆಗೆ ತಿಳಿದುಕೊಳ್ಳುವ ಕನಿಷ್ಠ ಪ್ರಯತ್ನವೂ ಮಾಡಿರುವುದಿಲ್ಲ. ಇದರಿಂದಾಗಿ ವಕ್ತೃಗಳಿಂದ ನಿರೀಕ್ಷಿತ ಮಾಹಿತಿ ದೊರೆಯದೆ ಇರಬಹುದು. ಈ ಕಾರಣಗಳಿಂದಾಗಿ ವ್ಯಕ್ತಿನಾಮ ಸಂಶೋಧಕ ಅನೇಕ ಅಡೆ-ತಡೆಗಳನ್ನು ಎದುರಿಸಬೇಕಾಗಿ ಬರುತ್ತದೆ.

ಕುಲನಾಮಗಳ ಬಗೆಗೆ ಗೊತ್ತಿರುವ ಮಾಹಿತಿಯನ್ನು ನೀಡುತ್ತಾರೆ. ಆದರೆ ಬಹುಪಾಲು ಜನರು ಅಡ್ಡಹೆಸರಿನ ಬಗೆಗೆ ಮುಕ್ತವಾಗಿ ಮಾಹಿತಿ ನೀಡಲು ನಿರಾಕರಿಸುತ್ತಾರೆ. ಕೆಲವು ಸಂದರ್ಭಗಳಲ್ಲಿ ಬೇರೆಯವರ ಮೂಲಕ ಮಾಹಿತಿ ಪಡೆಯಬೇಕಾಗಿ ಬರುತ್ತದೆ. ಅಡ್ಡಹೆಸರನ್ನು ಕೇಳಿದ ತಕ್ಷಣವೇ ವ್ಯಕ್ತಿ ಮುಖಚಹರೆಯನ್ನು

ಬದಲಾಯಿಸಿ, ಕೃತಕವಾಗಿ ಮಾತನಾಡಲು ಪ್ರಯತ್ನಿಸುತ್ತಾನೆ. ಮೊಳಕಾಲ್ಮೂರು ತಾಲೂಕಿನ ಬೊಮ್ಮಲಿಂಗನಹಳ್ಳಿಗೆ ಕ್ಷೇತ್ರಮಾಹಿತಿ ಪಡೆಯಲು ಹೋದಾಗ, ಪ್ರಶ್ನಾವಳಿಯನ್ನು ಮುಂದಿಟ್ಟುಕೊಂಡು ಒಬ್ಬ ವಕ್ತೃವಿನಿಂದ ಮಾಹಿತಿ ಪಡೆಯುವ ಸಂದರ್ಭದಲ್ಲಿ, ಅಡ್ಡಹೆಸರಿನ ಬಗೆಗೆ ಪ್ರಶ್ನೆಮಾಡಿದಾಗ, ಆ ವ್ಯಕ್ತಿ ಅದರ ಬಗೆಗೆ ಮಾಹಿತಿ ನೀಡಲು ನಿರಾಕರಿಸಿದ. ಪಕ್ಕದಲ್ಲಿ ಕುಳಿತಿದ್ದ ವ್ಯಕ್ತಿ, ತಟ್ಟನೆ ಆ ವ್ಯಕ್ತಿಗೆ ಇರುವ ಅಡ್ಡಹೆಸರನ್ನು ಹೇಳಿದ. ಮಾಹಿತಿ ನೀಡುತ್ತಿದ್ದ ವ್ಯಕ್ತಿ, ಮಾಹಿತಿ ನೀಡುವುದನ್ನು ನಿಲ್ಲಿಸಿ, ಅಡ್ಡಹೆಸರು ಹೇಳಿದ ವ್ಯಕ್ತಿಯ ಮೇಲೆ ಕೈಮಾಡಲು ಮುಂದಾದ, ನಾನು ಮಧ್ಯೆ ಪ್ರವೇಶಮಾಡಿ ಸಮಾಧಾನಗೊಳಿಸುವ ಪ್ರಸಂಗ ಒದಗಿಬಂತು. ಇವು ವ್ಯಕ್ತಿನಾಮಾಧ್ಯಯನದ ಸಂಕೀರ್ಣತೆಯನ್ನು ಸೂಚಿಸುತ್ತವೆ.

ಕೆಲವರು ಮಾಹಿತಿ ಗೊತ್ತಿದ್ದರೂ ಹೇಳಲು ಅನುಮಾನ ಪಟ್ಟಿದ್ದುಂಟು. ಹೆಸರು ಹೇಳುವುದರಿಂದ ಮುಂದೆ ಜೀವನದಲ್ಲಿ ಕಷ್ಟಗಳು ಬಂದು ಒದಗಬಹುದೆಂಬ ಭಯ. ಅಂದರೆ ಹೆಸರನ್ನು ಮಾಟ-ಮಂತ್ರಕ್ಕೆ ಬಳಸಿಕೊಳ್ಳುತ್ತಾರೆಂಬ ನಂಬಿಕೆ ಈಗಲೂ ಜನರಲ್ಲಿ ಉಳಿದಿರುವಂತಿದೆ. ಮತ್ತು ಬ್ಯಾಂಕಿನಲ್ಲಿ ಸಾಲ ಇರುವವರು, ಸಂಶೋಧಕರನ್ನು ಬ್ಯಾಂಕಿನ ಅಧಿಕಾರಿಯೆಂದು ತಿಳಿದು, ಮಾಹಿತಿ ನೀಡಲು ನಿರಾಕರಿಸುತ್ತಾರೆ. ಒಂದೊಮ್ಮೆ ಮಾಹಿತಿ ನೀಡಿದರೂ, ಸುಳ್ಳುಮಾಹಿತಿ ನೀಡುವ ಸಂಭವವೂ ಇರುತ್ತದೆ. ಆ ಕಾರಣಕ್ಕಾಗಿ ಸಂಶೋಧಕ ತುಂಬಾ ಎಚ್ಚರ ವಹಿಸಬೇಕಾಗುತ್ತದೆ.

ಚಿತ್ರದುರ್ಗ ಪರಿಸರದಲ್ಲಿ ಕ್ಷೇತ್ರಕಾರ್ಯ ಮಾಡುವಾಗ ವಿಶೇಷವಾಗಿ ಕೆಲವು ಬ್ರಾಹ್ಮಣ ಮತ್ತು ಮುಸ್ಲಿಂ ಸಮುದಾಯದವರು ಮಾಹಿತಿ ನೀಡಲು ನಿರಾಕರಿಸಿದರು. ಕೆಲವು ಮಹಿಳೆಯರು ಸಹ ಮುಂದಾಗಲಿಲ್ಲ. ಮಾಹಿತಿ ಕೊಡುವುದರಿಂದ ಸಂಸ್ಕೃತಿ ಬಯಲಾಗುತ್ತದೆ. ಇದರಿಂದ ಸಂಸ್ಕೃತಿಯ ಹಲವು ಗುಪ್ತ ವಿಚಾರಗಳು ಇತರರಿಗೆ ಗೊತ್ತಾಗುತ್ತವೆ ಎಂಬುದು ಇವರ ನಂಬಿಕೆಯಾಗಿರಬಹುದು. ಕೆಲವರನ್ನು ಮಾಹಿತಿ ನೀಡುವಂತೆ ಮತ್ತೆ ಮತ್ತೆ ಕೇಳಿದಾಗ, ನನ್ನನ್ನು ಅವಾಚ್ಯ ಪದಗಳಿಂದ ಬೈದದ್ದೂ ಉಂಟು.

ಕೆಲವರು ತಮ್ಮ ಹೆಸರುಗಳ ಬಗೆಗೆ, ಹೆಸರಿನ ಬಗೆಗೆ ಇರುವ ನಂಬಿಕೆ, ಆಚರಣೆ, ನಿಷೇಧಗಳ ಬಗೆಗೆ ತುಂಬಾ ಉತ್ಸುಕರಾಗಿ ಮಾಹಿತಿ ನೀಡಿದ್ದಾರೆ. ಆ ಸಂಗತಿಗಳನ್ನು ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ವ್ಯಕ್ತಿನಾಮಗಳು ಭಾಷಿಕ ಸಾಧನಗಳಾಗಿರುವಂತೆ, ಸಂಸ್ಕೃತಿಯ ಪಳಿಯುಳಿಕೆಗಳೂ ಆಗಿವೆ. ವ್ಯಕ್ತಿಗೆ ಒಂದು ಹೆಸರು ನಿರ್ದೇಶನ ಮಾಡುವುದರ ಹಿಂದೆ, ಹಲವು ಕಾರಣಗಳು ಇರುತ್ತದೆ. ಅದಕ್ಕಾಗಿ ಅವರವರ ಹೆಸರಿನ ಬಗೆಗೆ ಮನೆಯಲ್ಲಿ ಹಿರಿಯರು, ತಂದೆ ತಾಯಿಗಳು ಕನಿಷ್ಠ ತಿಳುವಳಿಕೆಯನ್ನಾದರೂ ಮೂಡಿಸಬೇಕಾಗುತ್ತದೆ. ಹೆಸರುಗಳು ಆಯಾ ಕಾಲದ ಸಂಸ್ಕೃತಿಯ ಅಭಿವ್ಯಕ್ತಿಯಾಗಿರುವುದರಿಂದ, ಸಂಸ್ಕೃತಿ ಬದಲಾದಂತೆ ಹೆಸರುಗಳು ಬದಲಾಗುತ್ತಿರುತ್ತವೆ. ಇದರಿಂದ ಪಾರಂಪರಿಕ ಸಂಸ್ಕೃತಿಯ ನೆನಪು ಮರೆಯಾದಂತಾಗುತ್ತದೆ. ಅಲ್ಲದೆ, ಪ್ರಾಚೀನ ಸಂಸ್ಕೃತಿಯ ಆಕರ ಸಾಮಗ್ರಿಗಳು ನಶಿಸಿ ಹೋದಂತಾಗುತ್ತದೆ. ಆದಕಾರಣ ವ್ಯಕ್ತಿನಾಮಗಳನ್ನು ಚಲಾವಣೆಯಲ್ಲಿ ಉಳಿಸಿಕೊಳ್ಳುವುದರಿಂದ ಮತ್ತು ದಾಖಲೀಕರಣ ಮಾಡುವುದರಿಂದ ಒಂದು ರೀತಿಯಲ್ಲಿ ಸಂಸ್ಕೃತಿಯನ್ನು ದಾಖಲಿಸಿದಂತೆಯೇ ಆಗುತ್ತದೆ. ಈ ದಿಸೆಯಲ್ಲಿ ಅಂಥ ಪ್ರಯತ್ನಗಳು ನಡೆಯಬೇಕಾಗಿದೆ.



ಅಧ್ಯಾಯ - ೨

# ವ್ಯಕ್ತಿನಾಮಗಳ ರಾಚನಿಕ ವಿಶ್ಲೇಷಣೆ

## ಪ್ರವೇಶ

ವ್ಯಕ್ತಿನಾಮಗಳು ಭಾಷಿಕ ಘಟಕಗಳು. ಸಂಸ್ಕೃತಿಯ ಅಧ್ಯಯನದಲ್ಲಿ ಇವುಗಳ ಪಾತ್ರ ಮಹತ್ತರವಾದುದಾಗಿದೆ. ಒಂದು ಹೆಸರಿನಲ್ಲಿ ಒಂದು ಸಂಸ್ಕೃತಿಯ ಹಲವಾರು ಅಂಶಗಳು ಅಡಗಿರುತ್ತವೆಂಬುದನ್ನು ಗಮನಿಸಬಹುದು. ಇವು "ಬಾಹ್ಯದಲ್ಲಿ ಕೇವಲ ಶಬ್ದಗಳಾಗಿ ಕಂಡರೂ, ಅವುಗಳಲ್ಲಿ 'ಆಕೃತಿ'ಯ ದೃಷ್ಟಿಯಿಂದ ಒಂದು ರಚನೆಯು ಕಂಡುಬರುತ್ತದೆ. ಆಶಯದ ದೃಷ್ಟಿಯಿಂದ ಒಂದು ರಚನೆ ಕಂಡುಬರುತ್ತದೆ. ಆಶಯ ದೃಷ್ಟಿಯಿಂದ ಅವುಗಳಲ್ಲಿ ಸಾಂಸ್ಕೃತಿಕ ದ್ರವ್ಯ ತುಂಬಿಕೊಂಡಿರುತ್ತದೆ."[೧] ಕಾರಣ ವ್ಯಕ್ತಿನಾಮಗಳಿಗೆ ತನ್ನದೇ ಆದ ಮಹತ್ವವಿರುವುದನ್ನು ತಿಳಿಯಬೇಕಾಗುತ್ತದೆ. ಸಂಸ್ಕೃತಿಯ ಅಧ್ಯಯನದಲ್ಲಿ ಇತರೆ ಮೂಲಾಧಾರಗಳಂತೆ ವ್ಯಕ್ತಿನಾಮಗಳನ್ನು ಮುಖ್ಯ ಆಕರಗಳೆಂದು ಸ್ವೀಕರಿಸಿಲ್ಲದಿರುವುದು ಕಂಡುಬರುತ್ತದೆ. ಸಂಸ್ಕೃತಿಯ ಚರಿತ್ರೆಯನ್ನು ಕಟ್ಟುವಲ್ಲಿ ಈ ಬಗೆಯ ವ್ಯಕ್ತಿನಾಮಗಳಿಂದಲೂ ಹಲವಾರು ಮುಖ್ಯ ಸಂಗತಿಗಳು ತಿಳಿಯುತ್ತವೆ. ಕಾರಣ ಸಾಂಸ್ಕೃತಿಕ ಚರಿತ್ರೆಯ ಪೂರ್ಣ ಮಾಹಿತಿಗೆ ವ್ಯಕ್ತಿನಾಮಗಳ ಪಾತ್ರವನ್ನು ಮುಖ್ಯವಾಗಿ ಗಮನಿಸುವ ಅಗತ್ಯವಿದೆ. ಹೆಸರಿನ ಹಿಂದೆ ಒಂದು ಸಮಾಜದ ಸಂಸ್ಕೃತಿಯು ಅಡಗಿರುವಂತೆ ಭಾಷೆಯು ತನ್ನ ಅಸ್ತಿತ್ವವನ್ನು ಪಡೆದಿರುತ್ತದೆ. ಅಂದರೆ ವ್ಯಕ್ತಿನಾಮಗಳ ರಚನೆಯಲ್ಲಿ ಆಯಾ ಕಾಲದ ಭಾಷಿಕ ಚಹರೆಗಳನ್ನು ಕಂಡುಕೊಳ್ಳಲು ಸಾಧ್ಯವಿದೆ. ಹೆಸರುಗಳ ಪೂರ್ವ ಮತ್ತು ಉತ್ತರ ಪದಗಳಲ್ಲಿ ಕೆಲವಾರು ರೀತಿಯ ಭಾಷೆಯ ಅವಸ್ಥಾಂತರಗಳನ್ನು ಹಾಗೆಯೇ ಭಾಷೆಯ ಮೂಲಭೂತ ಕೆಲವು ತತ್ವಗಳನ್ನು ಗುರುತಿಸಲು ಸಾಧ್ಯವಿದೆ. ಕಾರಣ ವ್ಯಕ್ತಿನಾಮಗಳ ಅಧ್ಯಯನ ಸಂದರ್ಭದಲ್ಲಿ ಭಾಷೆಯ ಶಾಸ್ತ್ರೀಯ ಅಧ್ಯಯನವೂ ಆಗಿರುತ್ತದೆ ಎನ್ನಬಹುದು.

ವ್ಯಕ್ತಿನಾಮಗಳ ಮೂಲಕ ಆಯಾ ಕಾಲದ ಭಾಷಿಕ ಅಂಶಗಳನ್ನು ಗುರುತಿಸುವಾಗ ಹಲವಾರು ಸೂಕ್ಷ್ಮ ಭಾಷಿಕ ವಿಚಾರಗಳು ತಿಳಿಯಬಹುದು. ಅಂದರೆ, ಹತ್ತನೆಯ ಶತಮಾನದ ವ್ಯಕ್ತಿನಾಮಗಳನ್ನು ಅಧ್ಯಯನ ಮಾಡಿದರೆ ಆ ಕಾಲದ ಭಾಷಿಕ ಸ್ವರೂಪ ತಿಳಿಯುತ್ತದೆ. ಹತ್ತನೆಯ ಶತಮಾನದಲ್ಲಿ ವ್ಯಕ್ತಿಗಳಿಗೆ ಇದ್ದಂತಹ ಕೆಲವು ಹೆಸರುಗಳಿಂದ ಇದನ್ನು ಸ್ಪಷ್ಟಪಡಿಸಿಕೊಳ್ಳಬಹುದು. ಜನ್ನ, ಅಬ್ಬಣಬ್ಬೆ, ಅತ್ತಿಮಬ್ಬೆ, ದಿವ್ಯಗಾವುಂಡ ಏಚ, ಮಾವುಂಡರಸ, ಕೇತಲಾದೇವಿ, ಸಾವಿಯಬ್ಬೆ, ಪುಲಿಕೇಶಿ ಮುಂತಾದ ಹೆಸರುಗಳ ರಚನೆಯ ಮೂಲಕ ಸಮಕಾಲೀನ ಭಾಷಿಕ ಬಂಧ ಹಾಗೂ ಅವುಗಳ ನಿರ್ದೇಶನದ ಸಂಗತಿಗಳು ಸ್ಪಷ್ಟವಾಗುತ್ತವೆ. ಅಂತೆಯೇ ನಡುಗನ್ನಡದ ಸಂದರ್ಭದಲ್ಲಿ (೧೨ನೇ ಶತಮಾನ - ೧೫ನೇ ಶತಮಾನ) ವ್ಯಕ್ತಿನಾಮಗಳು ಕೊಂಚ ಭಿನ್ನತೆಯನ್ನು ಕಂಡುಕೊಂಡಿವೆ ಎನ್ನಬಹುದು. ಇದಕ್ಕೆ ವಚನ ಚಳುವಳಿಯ ಶರಣರ ಹೆಸರುಗಳನ್ನು ಉದಾಹರಣೆಯನ್ನಾಗಿ ನೋಡಬಹುದು. ಅಂತೆಯೇ ದಾಸರ ಹೆಸರುಗಳೂ ಕೂಡ ಹತ್ತನೆಯ ಶತಮಾನದ ಸಾಮಾಜಿಕ ಪರಿಸರಕ್ಕನುಗುಣವಾಗಿ ಭಾಷಿಕ ಅಂಶಗಳೂ ಹೆಸರಿನ ಮೇಲೆ ಪ್ರಭಾವ ಬೀರಿವೆಯೆಂಬುದನ್ನು ಗಮನಿಸಬಹುದು. ಹೀಗೆ ಇದು ಕಾಲಾಂತರದ ಬದಲಾವಣೆಗೆ ಒಳಗಾಗುವುದು ಸಹಜವೇ ಆಗಿದೆ. ಈ ಸಹಜತೆಯೊಂದಿಗೆ ಸಮಕಾಲೀನ ಭಾಷೆಯೂ ವ್ಯಕ್ತಿ ಹೆಸರುಗಳ ಮೇಲೆ ಪ್ರಭಾವಿಸುತ್ತಿರುತ್ತದೆ. ಈ ದೃಷ್ಟಿಯಿಂದ ಭಾಷಿಕ ಅವಸ್ಥಾಂತರಗಳ ಅಧ್ಯಯನಕ್ಕೆ ವ್ಯಕ್ತಿನಾಮಗಳೂ ಆಕರಗಳಾಗಬಲ್ಲವು.

ಭಾಷಿಕ ಘಟಕಗಳಾದ ವ್ಯಕ್ತಿನಾಮಗಳಿಂದ ಭೌಗೋಳಿಕ ಪರಿಸರದಲ್ಲಿ ಪ್ರಾದೇಶಿಕ ವೈಶಿಷ್ಟ್ಯಗಳನ್ನು ಗುರುತಿಸಲು ಸಾಧ್ಯವಿದೆಯೆಂಬುದನ್ನು ಆಲೋಚಿಸಬೇಕಾಗುತ್ತದೆ. ಒಂದೇ ಭಾಷಿಕ ಪರಿಸರದಲ್ಲಿ ಪ್ರಾದೇಶಿಕ ಭಾಷಾ ನೆಲೆಯಿಂದ ಪ್ರಭಾವಿತಗೊಂಡ ವ್ಯಕ್ತಿನಾಮಗಳ ಮುಖೇನ ಆಯಾ ಪ್ರದೇಶ ಭಾಷಿಕ ಅಂಶಗಳನ್ನು ಗುರುತಿಸುವುದು ಕಷ್ಟಕರ. ಆದರೆ ಪ್ರಾದೇಶಿಕ ಸಂಸ್ಕೃತಿಯ, ಸಮಾಜದ ಕೆಲವಾರು ವೈಶಿಷ್ಟ್ಯತೆಗಳ ನೆರವಿನಿಂದ ಈ ರೀತಿಯ ಅಂಶಗಳನ್ನು ಸೂಕ್ಷ್ಮವಾಗಿ ತಿಳಿಯಲು ಅವಕಾಶವಿದೆ.

ಮೇಲಿನ ಕೆಲವು ಮುಖ್ಯ ಸಂಗತಿಗಳಿಂದ ವ್ಯಕ್ತಿನಾಮಗಳ ರಾಚನಿಕ ಅಧ್ಯಯನ ಮಹತ್ವ ಪಡೆದುಕೊಳ್ಳುತ್ತದೆ. ನಾಮಾಧ್ಯಯನದಲ್ಲಿ ವರ್ಣನಾತ್ಮಕ ಮಾದರಿಯನ್ನು ಇದು ಅವಲಂಬಿಸಿದೆ. ಚಿತ್ರದುರ್ಗ ಪರಿಸರದಲ್ಲಿ ಪ್ರಸ್ತುತ ಚಲಾವಣೆಯಲ್ಲಿರುವ ವ್ಯಕ್ತಿನಾಮಗಳೊಂದಿಗೆ ರಾಚನಿಕ ವಿಶ್ಲೇಷಣೆಯ ಸ್ವರೂಪವನ್ನು ಈ ಅಧ್ಯಯದಲ್ಲಿ ಚರ್ಚಿಸಲಾಗುತ್ತದೆ. ಮುಖ್ಯವಾಗಿ ವ್ಯಕ್ತಿನಾಮಗಳ ನಿರ್ದಿಷ್ಟ, ವಾರ್ಗಿಕ, ಕುಲನಾಮಗಳ ರಚನೆಯನ್ನು ಗಮನಿಸಲಾಗಿದೆ. ಅಲ್ಲದೆ, ಚಿತ್ರದುರ್ಗ ಕರ್ನಾಟಕದ ಪೂರ್ವದ ಗಡಿ ಜಿಲ್ಲೆಯಾಗಿದ್ದು, ಪಕ್ಕದ ಆಂಧ್ರಪ್ರದೇಶದ ಗಡಿಗೆ ಹೊಂದಿಕೊಂಡಿದೆ. ಪರಿಣಾಮವಾಗಿ ದ್ವಿಭಾಷಿಕ ಪರಿಸರಗಳ ನಡುವೆ ಸಾಂಸ್ಕೃತಿಕ ಮುಖಾಮುಖಿ ಉಂಟಾಗಿದೆ. ಆ ಕಾರಣದಿಂದಾಗಿ ಪ್ರಸ್ತುತ ಅಧ್ಯಾಯದಲ್ಲಿ ಇಲ್ಲಿನ ವ್ಯಕ್ತಿನಾಮಗಳ ಮೇಲೆ ಆಗಿರುವ ತೆಲುಗಿನ ಪ್ರಭಾವವನ್ನು ವಿವರಿಸಲಾಗಿದೆ.

## ನಿರ್ದಿಷ್ಟ - ವಾರ್ಗಿಕ

ನಿರ್ದಿಷ್ಟ ಹಾಗೂ ವಾರ್ಗಿಕಗಳ ಸಂಕೀರ್ಣ ರೂಪವೇ ವ್ಯಕ್ತಿನಾಮ. ಆದರೂ ನಿರ್ದಿಷ್ಟ ಘಟಕವು ವ್ಯಕ್ತಿನಾಮದ ಪ್ರಧಾನ ಅಂಗ. ಅದೇ, ವ್ಯಕ್ತಿಯ ನಿಜನಾಮ ಆಗಿರುತ್ತದೆ. ಜೊತೆಗೆ ಪೂರ್ಣ ಹೆಸರೂ

ಆಗಿರುತ್ತದೆ. ಇದು ಮನೆತನದ ಧರ್ಮ, ಹೆಸರಿಟ್ಟವರ ಆಶಯ, ಅವರ ಸಂಸ್ಕೃತಿಯ ಬಿಂಬವನ್ನು ಗುರುತಿಸುತ್ತದೆ. ನಿರ್ದಿಷ್ಟ ಘಟಕದಿಂದ ವ್ಯಕ್ತಿಯನ್ನು ಇತರರಿಂದ ಪ್ರತ್ಯೇಕಿಸಿ ಗುರುತಿಸಲಾಗುತ್ತದ. ಸಂಬೋಧನೆಯಲ್ಲಿ ನಿರ್ದಿಷ್ಟವನ್ನಷ್ಟೇ ಬಳಸಲೂಬಹುದು. ಹೆಸರನ್ನು ಸಂಕ್ಷೇಪಿಸಲು, ವಿರೂಪಗೊಳಿಸಲು ನಿರ್ದಿಷ್ಟ ಭಾಗವನ್ನೇ ಬಳಸಲಾಗುವುದು. ಉದಾಹರಣೆಗೆ ಕೆಲವು ಹೆಸರುಗಳನ್ನು ನೋಡಬಹುದು.

| ಪೂರ್ಣಹೆಸರು | ಸಂಕ್ಷಿಪ್ತ ರೂಪ/ಸೌಲಭ್ಯಾಕಾಂಕ್ಷೆ | ವಿರೂಪ ರೂಪ |
|---|---|---|
| ತಿಪ್ಪಯ್ಯ | ತಿಪ್ಪು | ತಿಪ್ಪ್ಯಾ, ತಿಪ್ಪೆ |
| ಮುರುಘಪ್ಪ | ಮುರು, ಮುರುಘು | ಮುರುಘ್ಯಾ, ಮುರುಘಿ |
| ಚಿತ್ತಣ್ಣ | ಚಿತ್ತು, ಚಿತ್ತ | ಚಿತ್ತ್ಯಾ |
| ನಿಂಗನಗೌಡ | ನಿಂಗು | ನಿಂಗ್ಯಾ |
| ಮಲ್ಲಯ್ಯಸ್ವಾಮಿ | ಮಲ್ಲು | ಮಲ್ಲ್ಯಾ |
| ಪಾಪಮ್ಮ | ಪಾಪು | ಪಾಪಿ |
| ಬಸವ್ವ | ಬಸು | ಬಸ್ಸಿ, ಬಸ್ವಿ |
| ಮಾರಕ್ಕ | ಮಾರು | ಮಾರಿ |
| ದುರುಗಮ್ಮ | ದುರು, ದುರುಗ | ದುರುಗಿ |
| ನೀಲಮ್ಮ | ನೀಲು | ನೀಲಿ |

ಮೇಲಿನ ಪಟ್ಟಿಯನ್ನು ಗಮನಿಸಿದರೆ, ವ್ಯಕ್ತಿಯ ಹೆಸರಿನ ನಿರ್ದಿಷ್ಟ ಭಾಗವನ್ನು ಸಂಕ್ಷಿಪ್ತಗೊಳಿಸಿ ಮತ್ತು ವಿರೂಪಗೊಳಿಸಿ ಬಳಸಲಾಗಿದೆ. ನಿರ್ದಿಷ್ಟ ಭಾಗವನ್ನು ಬಳಸಿದಂತೆ, ವ್ಯಕ್ತಿನಾಮದ ವಾರ್ಗಿಕ ಘಟಕವನ್ನು ಬಳಸಲು ಬರುವುದಿಲ್ಲ. ಅಥವಾ ವಾರ್ಗಿಕಗಳಿಗೆ ಈ ನಿಯಮ ಅನ್ವಯವಾಗುವುದಿಲ್ಲ. ಹೆಸರನ್ನು ಸಂಕ್ಷಿಪ್ತಗೊಳಿಸುವಾಗ ಪುರುಷ ಮತ್ತು ಸ್ತ್ರೀ ಹೆಸರುಗಳು 'ಎ' ಮತ್ತು 'ಇ' ಸ್ವರಾಂತ್ಯಗೊಳಿಸಲಾಗುವುದು. ಅಲ್ಲದೆ ಪುರುಷರ ಹೆಸರಿನ ನಿರ್ದಿಷ್ಟ ಭಾಗವನ್ನು 'ಯ' ('್ಯ' - ಸಿಂಗ್ಯಾ, ದುರುಗ್ಯಾ) ಕಾರಾಂತ್ಯದಿಂದಲೂ ಸ್ತ್ರೀಯರ ಹೆಸರಿನ ನಿರ್ದಿಷ್ಟ ಭಾಗವನ್ನು 'ಇ' (ಪಾಪಿ, ಮಾರಿ) ಕಾರಾಂತ್ಯದಿಂದಲೂ ವಿರೂಪ ಮಾಡಿ (ಸಂಬೋಧಿಸುವುದುಂಟು) ಬಳಸುವುದುಂಟು. ಕೆಲವು ಸಂದರ್ಭಗಳಲ್ಲಿ ಇದು ಪ್ರೀತಿಯಿಂದ ಸಂಬೋಧಿಸುವ ವಿಧಾನವೂ ಆಗಬಹುದು. ಕಾರಣ ವಾರ್ಗಿಕ ಪದಕ್ಕಿಂತ ಪೂರ್ವಪದ ಬಹುಮುಖ್ಯವೆನಿಸುತ್ತದೆ. ವ್ಯಕ್ತಿನಾಮದ ಪೂರ್ವಪದದಿಂದ ಒಂದು ಸಂಸ್ಕೃತಿಯೊಳಗಣ ಸಮಾಜ, ದೈವ, ಆಚರಣೆ, ನಂಬಿಕೆ, ಭೌಗೋಳಿಕ ಚಹರೆ, ಭಾಷೆ ಮುಂತಾದುವನ್ನು ತಿಳಿಯಬಹುದಾಗಿದೆ.

ಭಾಷೆಯ ಒಂದು ಪದ ಘಟಕವೆ ವ್ಯಕ್ತಿನಾಮ ಆಗುವುದುಂಟು. ಉದಾಹರಣೆಗೆ - ಶಂಕರ, ರಾಜು, ಮಹೇಶ್, ದಿನೇಶ್, ಪ್ರಕಾಶ್, ಲಕ್ಷ್ಮಿ, ಲತಾ, ರಾಧಾ, ಮೀನಾಕ್ಷಿ, ಕಮಲ, ಪದ್ಮ ಮೊದಲಾದವು. ವ್ಯಕ್ತಿನಾಮದ ಈ ಘಟಕಗಳಿಗೆ ನಾಮಶಾಸ್ತ್ರದ ಪರಿಭಾಷೆಯಲ್ಲಿ 'ನಿರ್ದಿಷ್ಟ'ವೆಂದು ಕರೆಯಲಾಗುತ್ತದೆ. ನಿರ್ದಿಷ್ಟ'ಗಳೇ ವ್ಯಕ್ತಿನಾಮದ ಕೇಂದ್ರಭಾಗ ಎನಿಸಿರುವುದರಿಂದ, ಅವು ತುಂಬಾ ಮಹತ್ವವನ್ನು ಪಡೆದುಕೊಳ್ಳುತ್ತವೆ. ವ್ಯಕ್ತಿನಾಮ ನಿರ್ದಿಷ್ಟಗಳಿಗೆ ವೃತ್ತಿ, ಜಾತಿ, ಹುದ್ದೆ, ಗೌರವ ಸೂಚಕ ಮೊದಲಾದ

ಪದಗಳು ಸೇರುತ್ತವೆ. ಈ ವರ್ಗವಾಚಿ ಪದಗಳನ್ನು ವಾರ್ಗಿಕ'ಗಳೆಂದು ಕರೆಯಲಾಗುತ್ತದೆ. ನಿರ್ದಿಷ್ಟ'ದಂತೆ ವಾರ್ಗಿಕ'ಗಳಿಗೂ ಕೂಡ ತನ್ನದೇ ಆದ ಮಹತ್ವವಿದೆ. ವಾರ್ಗಿಕಗಳು ನಿರ್ದಿಷ್ಟದ ಜತೆ ಬಳಕೆಯಾಗುವಾಗ, ಕೆಲವು ಸಂದರ್ಭದಲ್ಲಿ ನಿರ್ದಿಷ್ಟದ ಪೂರ್ವ ಪದಗಳಾಗಿಯೂ, ಕೆಲವು ಸಂದರ್ಭಗಳಲ್ಲಿ ನಿರ್ದಿಷ್ಟದ ಉತ್ತರ ಪದಗಳಾಗಿಯೂ ಬಳಕೆಯಾಗುತ್ತವೆ. ಅಂಥ ಸಂದರ್ಭಗಳಲ್ಲಿ ವ್ಯಕ್ತಿನಾಮದ ಸ್ವರೂಪದಲ್ಲಿ ವ್ಯತ್ಯಾಸಗಳಾಗುವುದುಂಟು. ನಿದರ್ಶನಕ್ಕೆ ಕೆಲವು ಉದಾಹರಣೆಗಳನ್ನು ಗಮನಿಸಬಹುದು. 'ವಾರ್ಗಿಕ' ನಿರ್ದಿಷ್ಟದ ಪೂರ್ವಪದವಾಗಿ ಬಳಕೆಯಾಗಿರುವುದು -

ವಾರ್ಗಿಕ + ನಿರ್ದಿಷ್ಟ = ವ್ಯಕ್ತಿನಾಮ

ಗೊರವರ + ಭೀಮಣ್ಣ = ಗೊರವರ ಭೀಮಣ್ಣ

ಲಂಬಾಣಿ + ಚಂದ್ರನಾಯ್ಕ = ಲಂಬಾಣಿ ಚಂದ್ರನಾಯ್ಕ

ಈಡಿಗರ + ವೀರಣ್ಣ = ಈಡಿಗರ ವೀರಣ್ಣ

ಹರಿಜನ + ಭರಮಪ್ಪ = ಹರಿಜನ ಭರಮಪ್ಪ

ಕುಂಬಾರ + ನಾಗಪ್ಪ = ಕುಂಬಾರ ನಾಗಪ್ಪ

ಪಟೇಲ + ಪಾಪನಾಯಕ = ಪಟೇಲ ಪಾಪನಾಯಕ

ಗೌಡರ + ಬಸಣ್ಣ = ಗೌಡರ ಬಸಣ್ಣ

ಗೊಂಚಿಕಾರ + ತಿಪ್ಪಯ್ಯ = ಗೊಂಚಿಕಾರ ತಿಪ್ಪಯ್ಯ

ಗೊಂಚಿಕಾರ + ಬಸಮ್ಮ = ಗೊಂಚಿಕಾರ ಬಸಮ್ಮ

ಗೌಡರ + ಪಾಪಮ್ಮ = ಗೌಡರ ಬಸಮ್ಮ

ಮೇಲಿನ ಪಟ್ಟಿಯ ಹೆಸರುಗಳಲ್ಲಿ ಜಾತಿ, ವೃತ್ತಿ, ಹುದ್ದೆ ಸೂಚಕ ಪದಗಳು ವ್ಯಕ್ತಿನಾಮದ ಪೂರ್ವದಲ್ಲಿ ಬಂದಿವೆ. ಸಮೂಹದಿಂದ ವ್ಯಕ್ತಿಯನ್ನು ಗುರುತಿಸುವಾಗ, ಮೇಲಿನ ಈ ಪೂರ್ವಪದಗಳು ಪ್ರಧಾನ ಪಾತ್ರವಹಿಸುತ್ತಿದ್ದು ಮತ್ತು ವ್ಯಕ್ತಿಯ ಒಂದು ವರ್ಗವನ್ನು ಸೂಚಿಸುವುದರಿಂದ ಇವುಗಳನ್ನು ವಾರ್ಗಿಕಗಳೆಂದು ಪರಿಗಣಿಸಲಾಗಿದೆ. ಅಲ್ಲದೆ ನಿರ್ದಿಷ್ಟದ ಜೊತೆಗೆ, ಗೌರವವಾಚಿ (ಬಂಧುಸೂಚಕ) ಜಾತಿ, (ನಾಯಕ, ನಾಯ್ಕ) ಸೂಚಕ ಪದಗಳು ಬಳಕೆಯಾಗಿದ್ದರೂ, ಅವು ಕ್ರಿಯಾತ್ಮಕತೆಯನ್ನು ಕಳೆದುಕೊಂಡು ನಿರ್ದಿಷ್ಟದ ಭಾಗವಾಗಿ ಸೇರಿಹೋಗಿವೆ. ಈ ಹಿನ್ನಲೆಯಲ್ಲಿ ಇವುಗಳನ್ನು 'ವಾರ್ಗಿಕ'ಗಳೆಂದು ಪರಿಗಣಿಸಲಾಗುವುದಿಲ್ಲ. 'ಜಾತಿ', 'ವೃತ್ತಿ', 'ಹುದ್ದೆ' ಸೂಚಕ ಪದಗಳು ನಿರ್ದಿಷ್ಟದ ಪೂರ್ವದಲ್ಲಿ ವಾರ್ಗಿಕಗಳಾಗಿ ಬಳಕೆಯಾಗುವಂತೆ, ಗೌರವವಾಚಿ (ಅಪ್ಪ, ಅಣ್ಣ, ಅಯ್ಯ, ಅಮ್ಮ, ಅಕ್ಕ, ಅವ್ವ) ಪದಗಳು ಬಳಕೆಯಾಗುವುದಿಲ್ಲ.

ವಾರ್ಗಿಕ' ನಿರ್ದಿಷ್ಟದ ಉತ್ತರ ಪದವಾಗಿ ಬಳಕೆಯಾಗಿರುವುದು -

ನಿರ್ದಿಷ್ಟ + ವಾರ್ಗಿಕ = ವ್ಯಕ್ತಿನಾಮ

ಮಾರ + ನಾಯಕ = ಮಾರನಾಯಕ

ಚಂದ್ರ + ನಾಯ್ಕ = ಚಂದ್ರನಾಯ್ಕ

ವೆಂಕಟ + ಶೆಟ್ಟಿ = ವೆಂಕಟಶೆಟ್ಟಿ

ಕೃಷ್ಣ + ರಾವ್ = ಕೃಷ್ಣರಾವ್

ಪ್ರಕಾಶ್ + ಆಚಾರಿ = ಪ್ರಕಾಶಾಚಾರಿ

ಕರಿಬಸವ + ಅಣ್ಣ + ಗೌಡ = ಕರಿಬಸವನಗೌಡ

ಸಿದ್ಧ + ಅಣ್ಣ + ಗೌಡ = ಸಿದ್ಧನಗೌಡ

ಮೇಲಿನ ಪಟ್ಟಿಯ ಕೊನೆಯ ಎರಡು ಉದಾಹರಣೆಗಳನ್ನು ಗಮನಿಸಿದರೆ, ನಿರ್ದಿಷ್ಟ ಘಟಕದ ನಂತರ 'ಅಣ್ಣ' ಎಂಬ ಗೌರವಸೂಚಕ ವಾರ್ಗಿಕ ಬಂದಿದ್ದು, ಕೊನೆಯಲ್ಲಿ ಹುದ್ದೆ ಸೂಚಕ ವಾರ್ಗಿವಿದೆ. ಸಮಸ್ತ ರಚನೆಯಲ್ಲಿ 'ಅಣ್ಣ' ಎಂಬುದು ನಿರ್ದಿಷ್ಟದೊಡನೆ ಬೆರೆತು ಹೋಗುವುದರಿಂದ, ಅದು ನಿರ್ದಿಷ್ಟದ ಭಾಗವಾಗಿ ಬಳಕೆಯಾಗುತ್ತದೆ. ಆದುದರಿಂದ ಇಲ್ಲಿ 'ಅಣ್ಣ' ಎಂಬುದನ್ನು 'ವಾರ್ಗಿಕ' ಎಂದು ಕರೆಯಲಾಗುವುದಿಲ್ಲ. ಒಂದು ಹೆಸರಿನ ಲಿಂಗವನ್ನು ಸೂಚಿಸುವುದರೊಂದಿಗೆ, ಜಾತಿ, ವೃತ್ತಿ, ವಯಸ್ಸು ಮುಂತಾದ ಕೆಲವು ವಿವರಗಳನ್ನು ವಾರ್ಗಿಕ ಭಾಗವು ತಿಳಿಸುತ್ತದೆ. ವಾರ್ಗಿಕ ಭಾಗಗಳೊಂದಿಗೆ ಭೌಗೋಳಿಕ ಪರಿಸರ ಹಾಗೂ ಕಾಲದ ದೃಷ್ಟಿಯೂ ಮುಖ್ಯವಾಗುತ್ತದೆ. ಅಂದರೆ ಸಮಕಾಲೀನ ಸಾಮಾಜಿಕ ಸಂಗತಿಗಳಿಗೆ ಪ್ರತಿನಿಧಿಗಳಾಗಿ ಉತ್ತರ ಪದದ ಪಾತ್ರ ಮುಖ್ಯವಾದುದಾಗಿರುತ್ತದೆ. "ಪ್ರಾಚೀನ ಕರ್ನಾಟಕದಲ್ಲಿ ನಿರ್ದಿಷ್ಟಗಳಿಗಿಂತ ವಾರ್ಗಿಕಗಳು ಕಾಲವಾಚಿ ಸೀಮಾರೇಖೆ ಎಳೆಯಲು ಉತ್ತಮ ಸಾಮಗ್ರಿಯೆನಿಸಿವೆ. ಪುರುಷನಾಮಗಳ ಕೊನೆಯಲ್ಲಿ ಅಮ್ಮ ಆಮ (ಬಿಲ್ಲಮ), ಸ್ತ್ರೀ ನಾಮಗಳ ಕೊನೆಯಲ್ಲಿ ಅಬ್ಬೆ (ದೇಕಬ್ಬೆ), ಅವ್ವೆ (ಕದಿರೆರೆಮ್ಮವ್ವೆ) ಗಳು ಗೋಚರಿಸುತ್ತವೆ. ಓಜ` ಅಂತ್ಯವುಳ್ಳ ಹೆಸರು ಪ್ರಾಚೀನ ಕಾಲದಲ್ಲಿ ಶಿಲ್ಪವರ್ಗಕ್ಕೆ ಮಾತ್ರ ಕಂಡುಬರುತ್ತದೆ"[೨] ಎಂಬುದನ್ನು ಗಮನಿಸಿದರೆ ವಾರ್ಗಿಕ ಭಾಗದ ಮಹತ್ವವೂ ತಿಳಿದುಬರುತ್ತದೆ. ಆದ್ದರಿಂದ ವ್ಯಕ್ತಿನಾಮ ಪದರಚನೆಯಲ್ಲಿ ನಿರ್ದಿಷ್ಟ ಮತ್ತು ವಾರ್ಗಿಕ ಭಾಗಗಳು ಒಂದು ಹೆಸರಿನ ಒಟ್ಟು ಸಂಸ್ಕೃತಿಯ ಸೌಂದರ್ಯವನ್ನು ಪ್ರತಿನಿಧಿಸುತ್ತವೆ ಎನ್ನಬಹುದು.

ಈ ಹಿನ್ನೆಲೆಯೊಂದಿಗೆ ಪ್ರಾಚೀನ ಕರ್ನಾಟಕದ ವ್ಯಕ್ತಿನಾಮಗಳಿಂದ, ಇಂದಿನ ವ್ಯಕ್ತಿನಾಮಗಳಲ್ಲಿ ಬಳಕೆಯಾಗುತ್ತಿರುವ ವಾರ್ಗಿಕಗಳನ್ನು ಅವು ಸೂಚಿಸುವ ಅರ್ಥದ ಆಧಾರದ ಮೇಲೆ ಕೆಳಗಿನಂತೆ ವರ್ಗೀಕರಿಸಬಹುದು.

೧. ವೃತ್ತಿವಾಚಿ ವಾರ್ಗಿಕ

೨. ಜಾತಿವಾಚಿ ವಾರ್ಗಿಕ

೩. ಗೌರವವಾಚಿ ವಾರ್ಗಿಕ

೪. ಬಂಧುಸೂಚಕ ವಾರ್ಗಿಕ

### ೧. ವೃತ್ತಿವಾಚಿ

ವ್ಯಕ್ತಿನಾಮಗಳ ಉತ್ತರಪದದಲ್ಲಿ ಕೆಲವು ವೃತ್ತಿಗಳನ್ನು ಸೂಚಿಸುವ ಪದಗಳಿವೆ. ಕನ್ನಡ ಸಂಸ್ಕೃತಿಯ ಆರಂಭದಲ್ಲಿ ಈ ಬಗೆಯ ವೃತ್ತಿವಾಚಿಯಿಂದ ಗುರುತಿಸಿಕೊಂಡ ವ್ಯಕ್ತಿಗಳಿದ್ದರು. ಇಂದು ಅವುಗಳಲ್ಲಿ ಕೆಲವೇ ವಾರ್ಗಿಕಗಳು ಮುಂದುವರೆಯುತ್ತಿವೆ. ಅಲ್ಲದೇ ಈ ಹಿಂದೆ ಬಳಕೆಯಾಗುತ್ತಿದ್ದ ವಾರ್ಗಿಕಕ್ಕೂ ಇಂದಿನ

ಹೆಸರಿನೊಂದಿಗೆ ಬಳಕೆಯಾಗುವ ವಾರ್ಗಿಕಕ್ಕೂ ಯಾವುದೇ ನೇರ ಸಂಬಂಧ ಇಲ್ಲದಿರಬಹುದು. ಆದರೆ ಅಂದು ಅವು ಪರಸ್ಪರ ವೃತ್ತಿ ಮತ್ತು ವ್ಯಕ್ತಿಗೆ ಅವಿನಾಭಾವ ಸಂಬಂಧವನ್ನು ಬೆಸೆದಿದೆ ಎನ್ನಬಹುದು. ಮುಖ್ಯವಾಗಿ ಈ ವೃತ್ತಿವಾಚಿ ವಾರ್ಗಿಕಗಳು ಪುರುಷ ಪ್ರಧಾನವಾಗಿದ್ದವು. ಹೆಚ್ಚಾಗಿ ಪುರುಷ ವ್ಯಕ್ತಿನಾಮಗಳಿಗೆ ಹೊಂದಿಕೊಂಡೇ ಬಂದಿರುವುದು ತಿಳಿಯುತ್ತದೆ. ಸಾಂಪ್ರದಾಯಿಕ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ತ್ರೀಯರು ಹೆಚ್ಚಾಗಿ ಮನೆಯ ಹೊರಾವರಣಕ್ಕಿಂತ, ಮನೆಯ ಒಳಾವರಣ ಕಾರ್ಯಗಳಲ್ಲಿಯೇ ನಿರತರಾಗಿರುತ್ತಿದ್ದರು. ಮನೆಯ ಹೊರಗಿನ ಕಾರ್ಯಗಳನ್ನು ಪುರುಷನೇ ನಿರ್ವಹಿಸುತ್ತಿದ್ದನು. ಈ ಹಿನ್ನೆಲೆಯಲ್ಲಿ ಹೆಚ್ಚಾಗಿ ಸ್ತ್ರೀ ವ್ಯಕ್ತಿನಾಮಗಳಲ್ಲಿ ವೃತ್ತಿವಾಚಿ ವಾರ್ಗಿತಗಳು ಬಳಕೆಯಾಗಿರುವುದಿಲ್ಲ. ಈ ಮಿತಿಗಳ ನಡುವೆಯೂ ಕೆಲವೇ ಸ್ತ್ರೀಯರ ಹೆಸರುಗಳಲ್ಲಿ ವೃತ್ತಿವಾಚಿ ವಾರ್ಗಿಕವಿರುವುದು ತಿಳಿಯುತ್ತದೆ.

ಚಿತ್ರದುರ್ಗ ಪರಿಸರದಲ್ಲಿ ಕಾಣಬರುವ ವೃತ್ತಿವಾಚಿ ವಾರ್ಗಿಕಗಳನ್ನು ಈ ರೀತಿ ವರ್ಗೀಕರಿಸಬಹುದು-

೧. ಪುರುಷ ವಾರ್ಗಿಕಗಳು

೨. ಸ್ತ್ರೀ ವಾರ್ಗಿಕಗಳು

**ಪುರುಷ ವಾರ್ಗಿಕಗಳು**

ಗೌಡ (ನುಂಕನಗೌಡ, ಮಲ್ಲನಗೌಡ)

ನಾಯಕ (ಬೋರನಾಯಕ, ಸೂರನಾಯಕ)

ದೊರೆ (ದೊರೆ ಬೈಯ್ಯಣ್ಣ, ದೊರೆ ಸೂರನಾಯಕ)

ಶಾಸ್ತ್ರಿ (ವೆಂಕಟಶಾಸ್ತ್ರಿ, ಅನಿಲ್ ಶಾಸ್ತ್ರಿ)

ರಾಜ (ರಾಜಾ ಮದಕರಿನಾಯಕ, ರಾಜಾ ಅಹೋಬಲನಾಯಕ)

**ಸ್ತ್ರೀ ವಾರ್ಗಿಕಗಳು**

ನಾಗತಿ (ಚನ್ನಮ್ಮ ನಾಗತಿ, ಶ್ವೇತಾ ನಾಗತಿ)

ನಾಯಕಿ/ನಾಯಕಿತಿ (ಓಬವ್ವ ನಾಯಕಿತಿ)

ಗಾವುಂಡಿ

ಇಲ್ಲಿ ಹೆಸರಿಸಿರುವ ರಾಜ, ನಾಯಕಿ/ನಾಯಕಿತಿ, 'ಗಾವುಂಡಿ' ಎಂಬ ವಾರ್ಗಿಕಗಳು ಪಾಳೆಯಗಾರರ ಹೆಸರುಗಳಲ್ಲಿ ಮಾತ್ರ ಕಾಣಬರುತ್ತಿದ್ದು, ಅನಂತರದಲ್ಲಿ ಇವುಗಳ ಬಳಕೆ ಕಾಣಬರುವುದಿಲ್ಲ. 'ದೊರೆ', 'ನಾಗತಿ' ಎಂಬವುಗಳು ಕೂಡ ಹಿಂದೆ ಬಳಕೆಯಲ್ಲಿದ್ದು, ಇತ್ತೀಚೆಗೆ ಇವುಗಳ ಬಳಕೆ ಕಡಿಮೆಯಾಗಿದೆ. ಈ ವಾರ್ಗಿಕಗಳು ಈ ಪರಿಸರದ ರಾಜಾಡಳಿತದ ಪಳೆಯುಳಿಕೆಗಳಾಗಿ ನಿಲ್ಲುತ್ತವೆ ಎಂಬುದು ಗಮನಾರ್ಹ. ಸ್ತ್ರೀಯರ ಹೆಸರಿನೊಂದಿಗೆ ಬಂದಿರುವ ವೃತ್ತಿವಾಚಿ ಉತ್ತರಪದವು, ಅವರು ಮಾಡುತ್ತಿದ್ದ ಕೆಲಸ ಇಲ್ಲವೇ ತನ್ನ ಪತಿ, ತಂದೆ ಮುಂತಾದವರು ಹೊಂದಿದ್ದ ವೃತ್ತಿಯೊಂದಿಗೂ ಕರೆಯಲ್ಪಟ್ಟಿರಬಹುದು.

## ೨. ಜಾತಿವಾಚಿ

ವೃತ್ತಿಯು ಕ್ರಮೇಣ ಜಾತಿಯಾಗಿ ಮಾರ್ಪಟ್ಟಿದೆ. ಆರಂಭದಲ್ಲಿ ವೃತ್ತಿವಾಚಿಯೊಂದಿಗೆ ಬಳಕೆಯಾಗುತ್ತಿದ್ದ ವ್ಯಕ್ತಿನಾಮ ವಾರ್ಗಿಕಗಳು ಕಾಲಾಂತರದಲ್ಲಿ ಜಾತಿಯನ್ನು ನಿರ್ದೇಶಿಸುವ ಹಂತಕ್ಕೆ ಬಂದಿವೆ ಎನ್ನಬಹುದು. ವೃತ್ತಿಯನ್ನು ಸೂಚಿಸುವ ಕೆಲವು ವಾರ್ಗಿಕ (ಗೌಡ, ರೆಡ್ಡಿ, ನಾಯಕ ಇತ್ಯಾದಿ) ಗಳಿಂದ ಜಾತಿಯನ್ನು ನಿರ್ದಿಷ್ಟವಾಗಿ ಗುರುತಿಸಲಾಗುವುದಿಲ್ಲ. ಗೌಡ, ರೆಡ್ಡಿ, ನಾಯಕ ಎಂಬ ಈ ವಾರ್ಗಿಕಗಳು ಯಾವುದೇ ಒಂದು ಸಮುದಾಯದ ಪ್ರತಿನಿಧಿಗಳಾಗಿ ಕಾಣಬರುವುದಿಲ್ಲ. ಭೌಗೋಳಿಕವಾಗಿ ಮತ್ತು ಸಾಮಾಜಿಕ ಭಿನ್ನ ಸಂಸ್ಕೃತಿಗಳಲ್ಲಿ ಕಾಣಬರುತ್ತವೆ. ಆದರೂ ಈ ಬಗೆಯ ಪದಗಳನ್ನು ಇಂದು ನಿರ್ದಿಷ್ಟ ಜಾತಿಗಳಿಗೆ ಸೀಮಿತಗೊಳಿಸಿ ಬಳಸಲಾಗುತ್ತಿದೆ. ಅಂತಹ ಕೆಲವು ವಾರ್ಗಿಕಗಳ ಪಟ್ಟಿ ಕೆಳಗಿನಂತಿದೆ.

**ಪುರುಷ ವಾರ್ಗಿಕಗಳು**

ಆಚಾರ್ಯ (ಹುಲಿಕುಂಟಾಚಾರ್ಯ ತಿಪ್ಪೇಶಾಚಾರ್ಯ)
ಆಚಾರಿ (ಜಕಣಾಚಾರಿ, ಸಿದ್ದೇಶಾಚಾರಿ)
ಅಯ್ಯಂಗಾರ್ (ಶ್ರೀನಿವಾಸ ಅಯ್ಯಂಗಾರ್ , ತಿರುಮಲ ಅಯ್ಯಂಗಾರ್ )
ಕುಂಬಾರ (ಕುಂಬಾರ ಈರಣ್ಣ, ಕುಂಬಾರ ಗಂಗಪ್ಪ)
ತಳವಾರ (ತಳವಾರ ತಿಪ್ಪಯ್ಯ, ತಳವಾರ ಕಾಟಯ್ಯ)
ಬಳೆಗಾರ (ಬಳೆಗಾರ ತಿಮ್ಮಣ್ಣ, ಜಗದೀಶ್ ಬಳೆಗಾರ)
ಮಾದಿಗ (ಮಾದಿಗರ ಹನುಮಂತಪ್ಪ, ಮಾದಿಗರ ಬಸವರಾಜ)
ಯಾದವ (ಮೈಲಾರಪ್ಪ ಯಾದವ್ , ಚಿತ್ರಪ್ಪಯಾದವ್ )
ಉಪ್ಪಾರ (ಸೋಮೇಶ್ ಉಪ್ಪಾರ, ಉಪ್ಪಾರ್ ಹರೀಶ್ )
ರೆಡ್ಡಿ (ತಿಪ್ಪಾರೆಡ್ಡಿ, ವೆಂಕಟರೆಡ್ಡಿ)
ಶೆಟ್ಟಿ (ನಾರಾಯಣಶೆಟ್ಟಿ, ಗೋಪಾಲಶೆಟ್ಟಿ)
ಜಂಗಮ (ಜಂಗಮರ ಮಲ್ಲಯ್ಯಸ್ವಾಮಿ, ಜಂಗಮರ ಸಿದ್ಧಯ್ಯಸ್ವಾಮಿ)
ಅಯ್ನೋರು (ಅಯ್ನೋರ್ ತಿಪ್ಪೇಸ್ವಾಮಿ, ಅಯ್ನೋರ್ ಪತ್ರೆಪ್ಪ)
ಲಂಬಾಣಿ (ಲಂಬಾಣಿ ಗೂರ್ಯಾನಾಯ್ಕ, ಲಂಬಾಣಿ ತಿಪ್ಪ್ಯಾನಾಯ್ಕ)

**ಸ್ತ್ರೀ ವಾರ್ಗಿಕಗಳು**

ನಾಯಕ (ಶ್ವೇತಾ ನಾಯಕ, ಗೀತಾ ನಾಯಕ)
ಶೆಟ್ಟಿ (ಕಲ್ಪನಾ ಶೆಟ್ಟಿ, ಸುಮಾ ಶೆಟ್ಟಿ, ಶೆಟ್ಟರ್ ಗೀತಾ)
ರೆಡ್ಡಿ (ಮಂಜುಳ ರೆಡ್ಡಿ, ಆಶಾ ರೆಡ್ಡಿ, ಪ್ರೇಮಾರೆಡ್ಡಿ)

೩. ಗೌರವವಾಚಿ

ಸಮಾಜದಲ್ಲಿ ವ್ಯಕ್ತಿಗೆ ನೀಡುವ ಗೌರವದ ಪ್ರತೀಕವಾಗಿ ಈ ರೀತಿಯ ವಾರ್ಗಿಕಗಳು ಬಳಕೆಯಲ್ಲಿರುತ್ತವೆ. ಗೌರವವಾಚಿ ವಾರ್ಗಿಕಗಳು ಆಯಾ ವ್ಯಕ್ತಿಯ ಸ್ಥಾನಮಾನವನ್ನು ತಿಳಿಯುವಲ್ಲಿ ಉಪಯುಕ್ತ ಆಕರಗಳಾಗಿವೆ.

ಪುರುಷ ವಾರ್ಗಿಕ

ಸ್ವಾಮಿ (ಕುಮಾರ + ಸ್ವಾಮಿ, ನಾರಾಯಣ + ಸ್ವಾಮಿ, ರಂಗ + ಸ್ವಾಮಿ)

ದೇವ (ಗುರು + ದೇವ, ಮಹಾ + ದೇವ)

ಜೀಯ (ಬಳಕೆಯಲ್ಲಿಲ್ಲ). ಬರೆಹದಲ್ಲಿ ಬಳಕೆಯಲ್ಲಿರುವುದಿಲ್ಲ. ಸಂಬೋಧನೆಯಲ್ಲಿ ಕೆಲವು ಸಂದರ್ಭಗಳಲ್ಲಿ ಮಾತ್ರ ಬಳಕೆಯಾಗುತ್ತದೆ.

'ಸ್ತ್ರೀ ವಾರ್ಗಿಕ'

'ದೇವಿ' (ಶ್ರೀ + ದೇವಿ, ಭೂ + ದೇವಿ, ಮಹಾ + ದೇವಿ)

ಸಣ್ಣ, ದೊಡ್ಡ, (ಸಣ್ಣಪ್ಪ, ದೊಡ್ಡಪ್ಪ) ವಿಶೇಷಣಗಳು ನಿರ್ದಿಷ್ಟದ ಸ್ಥಾನದಲ್ಲಿ ಬಳಕೆಯಾದಾಗ ಅವು ವಿಶೇಷಣಗಳಾಗಿರದೆ, ನಿರ್ದಿಷ್ಟದ ಭಾಗವೇ ಆಗಿರುತ್ತದೆ. ಆ ಹಿನ್ನಲೆಯಲ್ಲಿ ಮೇಲಿನ ಉದಾಹರಣೆಗಳಲ್ಲಿ ಬಳಕೆಯಾಗಿರುವ 'ಮಹಾ' ಎಂಬ ಗುಣವಾಚಕ ಪದ, ನಿರ್ದಿಷ್ಟದ ಸ್ಥಾನದಲ್ಲಿ ಬಳಕೆಯಾಗಿರುವುದರಿಂದ ಅದನ್ನು ವಿಶೇಷಣ ಎಂದು ಕರೆಯಲಾಗುವುದಿಲ್ಲ. ಅದು ಹೆಸರಿನ ನಿರ್ದಿಷ್ಟಭಾಗವಾಗಿ ಬಳಕೆಯಾಗಿರುತ್ತದೆ.

೪. ಬಂಧುಸೂಚಕ

ಬಂಧುವಾಚಕ ವಾರ್ಗಿಕಗಳು ವಿಶಿಷ್ಟವಾಗಿ ಬಳಕೆಯಾಗುವುದು ಕನ್ನಡ ವ್ಯಕ್ತಿನಾಮಗಳಲ್ಲಿ. ಈ ಬಂಧುವಾಚಕ ಪದಗಳು ಮೂಲತಃ ವ್ಯಕ್ತಿನಾಮಗಳಲ್ಲಿ ಗೌರವ ಸೂಚಕಗಳಾಗಿಯೇ ಇದ್ದಿರಬಹುದು. ಆದರೆ ಇಂದು ಇವುಗಳ ಅರ್ಥವ್ಯಾಪ್ತಿ ಬದಲಾವಣೆಗೊಂಡು, ಒಂದು ವರ್ಗದ ವ್ಯಕ್ತಿನಾಮಗಳಿಗೆ ಮಾತ್ರ ಸೀಮಿತವಾಗುತ್ತಿವೆ ಎಂಬ ಭಾವನೆ ಮೂಡುತ್ತಿದೆ.

ಪುರುಷ ವಾರ್ಗಿಕ

ಅಪ್ಪ (ಬೋರಪ್ಪ, ಕರಿಯಪ್ಪ, ಮುರಿಗೆಪ್ಪ, ನುಂಕಪ್ಪ)

ಅಯ್ಯ (ತಿಪ್ಪಯ್ಯ, ಮಲ್ಲಯ್ಯ, ಕಲ್ಲಯ್ಯ, ಕಾಟಯ್ಯ)

ಅಣ್ಣ (ನಿಂಗಣ್ಣ, ಚಿತ್ರಣ್ಣ, ಸಿರಿಯಣ್ಣ, ದುರುಗಣ್ಣ)

ಅಜ್ಜ (ನಿಂಗಜ್ಜ, ಓಬಜ್ಜ, ಭರಮಜ್ಜ, ಮಲ್ಲಜ್ಜಯ್ಯ)

ಮುತ್ತ (ಬೋರಮುತ್ತ, ಪಾಪಮುತ್ತ, ಓಬಮುತ್ತ)

ಸ್ತ್ರೀ ವಾರ್ಗಿಕ

ಅಮ್ಮ (ಪಾಪಮ್ಮ, ಮಲ್ಲಮ್ಮ, ಪಾಲಮ್ಮ, ಓಬಮ್ಮ)

ಅವ್ವ (ಬೋರವ್ವ, ಸೂರವ್ವ, ಹನುಮವ್ವ, ಮಾರವ್ವ)

ಅಕ್ಕ (ನಿಂಗಕ್ಕ, ಸಾಂತಕ್ಕ, ಮಲ್ಲಕ್ಕ, ಚಿತ್ರಕ್ಕ)

ಅಜ್ಜಿ (ಮಾರಜ್ಜಿ, ಗೌರಮ್ಮಜ್ಜಿ, ಪಾಲಜ್ಜಿ, ನಿಂಗಜ್ಜಿ)

ಬಾಯಿ (ಶಾಮಲಾಬಾಯಿ, ರುಕ್ಕುಬಾಯಿ, ಹೇಮ್ಲಿಬಾಯಿ, ಜಮ್ಲಿಬಾಯಿ)

ಈವರೆಗೆ ನಡೆದಿರುವ ಕೆಲವೇ ಅಧ್ಯಯನಗಳಲ್ಲಿ ಕರ್ನಾಟಕದ ಉತ್ತರ ಮತ್ತು ದಕ್ಷಿಣ ಕರ್ನಾಟಕದ ವ್ಯಕ್ತಿನಾಮಗಳ ರಾಚನಿಕ ಕ್ರಮವನ್ನು ಭಿನ್ನವೆಂದು ತೋರಿಸಿದ್ದಾರೆ.

ಪ್ರಸ್ತುತ ಅಧ್ಯಾಯವು ಚಿತ್ರದುರ್ಗ ಪರಿಸರಕ್ಕೆ ಸೀಮಿತಗೊಂಡಿದೆ. ದಕ್ಷಿಣ ಕರ್ನಾಟಕದ ಜಿಲ್ಲೆಗಳಲ್ಲಿ ಚಿತ್ರದುರ್ಗವೂ ಒಂದಾಗಿದೆ. ಕಾರಣ ದಕ್ಷಿಣ ಕರ್ನಾಟಕದ ಹೆಸರುಗಳಿಗಿಂತ ತೀರಾ ಭಿನ್ನವೆಂದು ತೋರುವುದಿಲ್ಲ. ಆದರೆ ಪ್ರಾದೇಶಿಕ ಸಂಸ್ಕೃತಿಯ ನೆಲೆಯಲ್ಲಿ ಕೆಲವು ಬದಲಾವಣೆಗಳಿರುವುದು ತಿಳಿಯುತ್ತದೆ. ಉಳಿದಂತೆ ರಚನಾ ದೃಷ್ಟಿಯಿಂದ ವರ್ಣವ್ಯತ್ಯಾಸ, ಧ್ವನಿವ್ಯತ್ಯಾಸ ಮುಂತಾದ ಭಾಷಿಕ ವ್ಯತ್ಯಾಸಗಳಿರುವುದು ಕಂಡುಬರುತ್ತದೆ.

ಮುಖ್ಯವಾಗಿ ಚಿತ್ರದುರ್ಗ ಪರಿಸರದಲ್ಲಿನ ಉಪಲಬ್ಧ ವ್ಯಕ್ತಿನಾಮಗಳೊಂದಿಗೆ ಈ ಅಧ್ಯಾಯದಲ್ಲಿ ರಾಚನಿಕ ವಿಶ್ಲೇಷಣೆಯನ್ನು ಮಾಡಲಾಗಿದೆ. ಕೆಲವು ಅಂಶಗಳ ಮುಖೇನ ಹೀಗೆ ವಿವರಿಸಿಕೊಳ್ಳಬಹುದು.

ಅಯ್ಯ' ಬಂಧುವಾಚಿ ಲೋಪವಾಗಿ 'ಏ' ದೀರ್ಘಸ್ವರವಾಗುವುದು

ರಾಮ + ಅಯ್ಯ + ಗೌಡ = ರಾಮೇಗೌಡ

ತಮ್ಮ + ಅಯ್ಯ + ಗೌಡ = ತಮ್ಮೇಗೌಡ

ಚಂದ್ರ + ಅಯ್ಯ + ಗೌಡ = ಚಂದ್ರೇಗೌಡ

ರಂಗ + ಅಯ್ಯ + ಗೌಡ = ರಂಗೇಗೌಡ

ಲಕ್ಕ + ಅಯ್ಯ + ಗೌಡ = ಲಕ್ಕೇಗೌಡ

ಈ ವ್ಯಕ್ತಿನಾಮ ರಚನೆಗಳಲ್ಲಿ ಒಂದು ನಿರ್ದಿಷ್ಟ ಘಟಕಕ್ಕೆ ಎರಡು ವಾರ್ಗಿಕಗಳು ಸೇರಿವೆ. ಇದರ ರಾಚನಿಕ ಸ್ವರೂಪವನ್ನು ಹೀಗೆ ಹೇಳಬಹುದು.

ನಿರ್ದಿಷ್ಟ + ಸಂಬಂಧ (ಬಂಧು)ವಾಚಿ + ಜಾತಿ (ವೃತ್ತಿ) ವಾಚಿ. ಮೇಲಿನ ಉದಾಹರಣೆಗಳಲ್ಲಿ ನಿರ್ದಿಷ್ಟದೊಂದಿಗೆ 'ಅಯ್ಯ' ಪ್ರತ್ಯಯವಿದ್ದಡೆ, ಗೌಡ ಬಂದಲ್ಲಿ 'ಏ' ದೀರ್ಘಸ್ವರ ಆಗಿರುವುದು ತಿಳಿಯುತ್ತದೆ. ಅಯ್ಯ' ಪದದ ಮುಂದೆ 'ಗೌಡ' ಇದ್ದಾಗ ಮಾತ್ರ ಈ ಪ್ರಕ್ರಿಯೆ ನಡೆಯುತ್ತದೆಂಬುದು ಕುತೂಹಲಕಾರಿ ಸಂಗತಿ. ಅಲ್ಲದೇ ನಿರ್ದಿಷ್ಟದಲ್ಲಿ ಎರಡು ವರ್ಣಗಳು ಇದ್ದಾಗ ಈ ಕ್ರಿಯೆ ಕಡ್ಡಾಯವಾಗಿ ನಡೆಯುತ್ತದೆ. ಎರಡಕ್ಕಿಂತ ಹೆಚ್ಚು ಅಕ್ಷರಗಳು ಬಂದಾಗ ಈ ಕ್ರಿಯೆ ನಡೆಯುತ್ತದೆಂಬುದಕ್ಕೆ ಕೆಲವು ಉದಾಹರಣೆಗಳು ಮಾತ್ರ ಇವೆ. ಹೆಸರಿನ ಸಮಸ್ತ ರಚನೆಯ ಸಂದರ್ಭದಲ್ಲಿ 'ಅಯ್ಯ' ಎಂಬುದು ವಾರ್ಗಿಕದ ಸ್ಥಾನವನ್ನು ಕಳೆದುಕೊಂಡು, ನಿರ್ದಿಷ್ಟದ ಭಾಗವಾಗಿ ಬಳಕೆಯಾಗುತ್ತದೆ. ಆ ಕಾರಣದಿಂದಾಗಿ, 'ಅಯ್ಯ' ಎಂಬುದನ್ನು

'ವಾರ್ಗಿಕ' ಎಂದು ಪರಿಗಣಿಸಲಾಗುವುದಿಲ್ಲ. ರಾಚನಿಕ ಸ್ವರೂಪದ ಸ್ಪಷ್ಟ ತಿಳುವಳಿಕೆಗಾಗಿ ಈ ರೀತಿ ವಿಂಗಡಿಸಲಾಗಿದೆ.

ಹನುಮ + ಅಯ್ಯ + ಗೌಡ = ಹನುಮೇಗೌಡ

ಶರಣ + ಅಯ್ಯ + ಗೌಡ + ಶರಣೇಗೌಡ

ವೆಂಕಟ + ಅಯ್ಯ + ಗೌಡ = ವೆಂಕಟೇಗೌಡ

ಅಲ್ಲದೇ ನಿರ್ದಿಷ್ಟದ ಜೊತೆ ಅಯ್ಯವೂ ಇದ್ದು, ಅದರೊಂದಿಗೆ ಶೆಟ್ಟಿ, ಸ್ವಾಮಿ ಎಂಬ ಪದಗಳಿದ್ದರೆ 'ಏ' ದೀರ್ಘವಾಗುವುದಿಲ್ಲ. ಅಂತಹ ಕೆಲವು ರಚನೆಗಳು ಹೀಗಿವೆ.

ರಾಮ + ಅಯ್ಯ + ಶೆಟ್ಟಿ = ರಾಮಯ್ಯಶೆಟ್ಟಿ

ಲಕ್ಷ್ಮಿ + ಅಯ್ಯ + ಶೆಟ್ಟಿ = ಲಕ್ಷ್ಮಯ್ಯಶೆಟ್ಟಿ

ಮಲ್ಲ + ಅಯ್ಯ + ಸ್ವಾಮಿ = ಮಲ್ಲಯ್ಯಸ್ವಾಮಿ

ಜಂಭ + ಅಯ್ಯ + ಸ್ವಾಮಿ = ಜಂಭಯ್ಯಸ್ವಾಮಿ

ಮೇಲಿನ ರಚನೆಯಲ್ಲಿ 'ಅಯ್ಯ' ಸವೆಯದೆ ಹಾಗೆಯೇ ಉಳಿದಿದೆ. 'ಗೌಡ' ಪದವಿದ್ದಾಗ 'ಏ' ದೀರ್ಘವಾಗಿ ಮಾರ್ಪಟ್ಟಿರುವುದನ್ನು ಗಮನಿಸಬಹುದು.

'ವ' ಕಾರಾಂತ್ಯ ನಿರ್ದಿಷ್ಟ ಪದಕ್ಕೆ ಬಂಧುವಾಚಕ ಪ್ರತ್ಯಯ ಸೇರಿದಾಗ 'ವ' ಕಾರ ಲೋಪವಾಗುವುದು

ಬಸವ + ಅಪ್ಪ - ಬಸವಪ್ಪ > ಬಸಪ್ಪ

ಬಸವ + ಅಮ್ಮ - ಬಸವಮ್ಮ > ಬಸಮ್ಮ

ಗೋಣಿ + ಬಸವ + ಅಪ್ಪ - ಗೋಣಿಬಸವಪ್ಪ > ಗೋಣಿಬಸಪ್ಪ

ನಂದಿ + ಬಸವ + ಅಮ್ಮ - ನಂದಿಬಸವಮ್ಮ > ನಂದಿಬಸಮ್ಮ

ಈ ರಚನೆಗಳ ವಿಗ್ರಹವಾಕ್ಯ ರಚನೆಯಲ್ಲಿ ನಿರ್ದಿಷ್ಟದ ಕೊನೆಯ ಅಕ್ಷರ 'ವ' ಇದೆ. ಸಮಸ್ತ ಪದರೂಪದಲ್ಲಿ ಅದು ಲೋಪಗೊಂಡಿದೆ. 'ಬಸವ' ಎಂಬ ನಾಮರೂಪದಲ್ಲಿ ಮಾತ್ರ ಈ ವ್ಯತ್ಯಾಸ ಉಂಟಾಗುತ್ತದೆ. ಅದರಂತೆ ಮಾದವಯ್ಯ

ಕೇಶವಯ್ಯ

ಗೊರವಯ್ಯ

ಗುರುವಯ್ಯ ಮುಂತಾದವು

ಈ ಮೊದಲಾದ 'ವ' ಕಾರಾಂತ ನಿರ್ದಿಷ್ಟಗಳ ಪದರಚನೆಯಲ್ಲಿ 'ವ' ಕಾರ ಲೋಪ ಕಾಣದು. ಕಾರಣ ಬಸವ' ಎಂಬ ಒಂದು ಮಾದರಿಯಿಂದ ವಿಶೇಷವಾಗಿ ನಿಯಮವನ್ನು ರೂಪಿಸಬಹುದು. ಇದೊಂದು ಉದಾಹರಣೆ ವಿಕಲ್ಪವೆಂಬಂತೆ ದೊರೆಯುತ್ತದೆನ್ನಬಹುದು.

ನಿರ್ದಿಷ್ಟ ಮತ್ತು ಜಾತಿವಾಚಿ ವಾರ್ಗಿಕದ ವ್ಯಕ್ತಿನಾಮ ರಚನೆಗಳು

| ಅ | ಬ |
|---|---|
| ಮಲ್ಲನಾಯಕ (ಮಲ್ಲ + ಅಪ್ಪ + ನಾಯಕ) | ಕೃಷ್ಣಪ್ಪಯಾದವ್ |
| ಸೂರನಾಯಕ (ಸೂರ + ಅಪ್ಪ + ನಾಯಕ) | ಲಕ್ಷ್ಮಣ ಮಾದಿಗ |
| ಹನುಮಂತರೆಡ್ಡಿ (ಹನುಮಂತ + ರೆಡ್ಡಿ) | ಚಂದ್ರಪ್ಪ ಹೊಲೆಯರ್ |
| ತಿಮ್ಮಾರೆಡ್ಡಿ (ತಿಮ್ಮ + ರೆಡ್ಡಿ) | |
| ಶ್ರೀನಿವಾಸಾಚಾರಿ (ಶ್ರೀ + ನಿವಾಸ + ಆಚಾರಿ) | |
| ರಾಮಾನಾಯ್ಕ (ರಾಮ + ನಾಯಕ) | |

ಕನ್ನಡದ ಒಟ್ಟು ವ್ಯಕ್ತಿನಾಮಗಳನ್ನು ಅನುಲಕ್ಷಿಸಿ ಹೇಳುವುದಾದರೆ ಜಾತಿವಾಚಕ ಪದಗಳು ವಾರ್ಗಿಕಗಳಾಗಿ ಬಳಕೆಯಾಗಿರುವುದೇ ಹೆಚ್ಚು. ನಿರ್ದಿಷ್ಟ ಸ್ಥಾನದಲ್ಲಿ ಬಂದಿರುವುದು ಕಡಿಮೆ. ಮೇಲಿನ ಅ' ಪಟ್ಟಿಯಲ್ಲಿ ಜಾತಿವಾಚಿ ಪ್ರತ್ಯಯಗಳು ವಾರ್ಗಿಕಗಳಾಗಿ ಬಂದಲ್ಲಿ ಸಂಬಂಧವಾಚಕ ಪ್ರತ್ಯಯಗಳು ಹಿಂದೆ ಸರಿದಿವೆ. ಈ ಪಟ್ಟಿಯಲ್ಲಿರುವ ಜಾತಿವಾಚಿ ಪದಗಳು ವ್ಯಕ್ತಿಯನ್ನು ಸಂಬೋಧಿಸುವಲ್ಲಿ ಸ್ವತಂತ್ರವಾಗಿ ಬಳಕೆಯಾಗಬಹುದು. ಅಂದರೆ ನಾಯಕ, ರೆಡ್ಡಿ, ಆಚಾರಿ, ನಾಯ್ಕ ಎಂದಷ್ಟೇ ಕರೆಯಲು ಅನುಕೂಲವಿದೆ. ಅಂತೆಯೇ ಬ' ಪಟ್ಟಿಯಲ್ಲಿನ ಹೆಸರುಗಳಲ್ಲಿ ಸಂಬಂಧವಾಚಿಯ ಮೇಲೆ ಜಾತಿವಾಚಕ ಪದ ಬಂದಿದೆ. ಈ ಪಟ್ಟಿಯಲ್ಲಿನ ಜಾತಿವಾಚಿ ಪದಗಳು ಬಿಡಿಯಾಗಿ ಇಲ್ಲವೇ ಇಡಿಯಾಗಿ ಬಳಕೆಯಾಗುವುದಿಲ್ಲ. ಇವು ಕೇವಲ ದಾಖಲೆಗಳಲ್ಲಿ ಮಾತ್ರ ಪ್ರಯೋಗವಾಗುತ್ತವೆ. ಈ ನಿಷೇಧಕ್ಕೆ ಹಲವಾರು ಸಾಮಾಜಿಕ ಕಾರಣಗಳಿರುತ್ತವೆ.

ಸಾಮಾಜಿಕ ಜಾತಿ, ಕಸುಬುಗಳು ವ್ಯಕ್ತಿನಾಮಗಳ ಮೇಲೆ ಪ್ರಭಾವ ಬೀರಿದೆ. ಈ ಪರಿಣಾಮವಾಗಿ ವೃತ್ತಿ ಮತ್ತು ಜಾತಿವಾಚಿ ಪದಗಳು ವ್ಯಕ್ತಿನಾಮಗಳಲ್ಲಿ ವಾರ್ಗಿಕ ಮತ್ತು ಕುಲನಾಮಗಳಾಗಿ ಬಳಸಲ್ಪಟ್ಟಿವೆ. ಈ ವೃತ್ತಿವಾಚಿ ವಾರ್ಗಿಕಗಳು ಸ್ತ್ರೀಯರಿಗಿಂತ ಪುರುಷರಲ್ಲಿ ವ್ಯಾಪಕವಾಗಿರುವುದು ತಿಳಿದುಬರುತ್ತದೆ. ಶಾಸನ ಮತ್ತು ಶಾಸನೋಕ್ತ ವ್ಯಕ್ತಿನಾಮಗಳಲ್ಲಿಯೂ ವೃತ್ತಿ, ಜಾತಿಯನ್ನು ನಿರ್ದೇಶಿಸುವ ಹೆಸರುಗಳಿವೆ. ಅದರಲ್ಲಿ ಪುರುಷ ಪ್ರಧಾನವಾದ ಜಾತಿವಾಚಕಗಳೇ ಹೆಚ್ಚಾಗಿವೆ. ಈಚೆಗೆ ಆಧುನಿಕ ಸಮಾಜದಲ್ಲಿ ಜಾತಿವಾಚಿ ಹೆಸರುಗಳು ಪುರುಷರಿಂದ ಸ್ತ್ರೀಯರು ತಮ್ಮ ಹೆಸರಿನ ಕೊನೆಯಲ್ಲಿ ಬಳಸುತ್ತಿರುವುದನ್ನು ವ್ಯಾಪಕವಾಗಿ ಗುರುತಿಸಬಹುದಾಗಿದೆ. ಅಲ್ಲದೇ ಆಧುನಿಕ ಸಮಾಜವು ಈ ಪ್ರಕ್ರಿಯೆಯನ್ನು ವ್ಯಾಪಕವಾಗಿಸುತ್ತಿರುವುದು ಒಂದು ಬಗೆಯ ಜೀವನ ಶೈಲಿಯೂ ಆಗಿದೆಯೆನ್ನಬಹುದು. ಅಂತಹ ಕೆಲವು ಮಾದರಿಗಳು ಇಲ್ಲಿವೆ.

| | |
|---|---|
| ಕಲ್ಪನಾರೆಡ್ಡಿ | ರಾಧಾನಾಯಕ |
| ಗುರುಬಸಮ್ಮ ಎಲಿಗಾರು | ರಾಧಿಕಾಶೆಟ್ಟಿ |
| ಪಾರಿಜಾಕ್ಷಿಶೆಟ್ಟಿ | ಲಕ್ಷ್ಮೀರೆಡ್ಡಿ |
| ಪ್ರೀತಿನಾಯಕ | ಶಾಂತಮ್ಮ ಹೂಗಾರ |

ಮೇಲಿನ ಮಾದರಿಗಳಲ್ಲಿ ವ್ಯಕ್ತಿನಾಮದ ಉತ್ತರಪದವು ಜಾತಿವಾಚಿ (ವೃತ್ತಿ) ವಾರ್ಗಿಕವಾಗಿದೆ. ಇದರ

ರಾಚನಿಕ ಸ್ವರೂಪ ಹೀಗಿದೆ - ನಿರ್ದಿಷ್ಟ + ಜಾತಿವಾಚಿವಾರ್ಗಿಕ. ಸ್ತ್ರೀಯರ ಹೆಸರಿನಲ್ಲಿರುವ ಈ ಜಾತಿವಾಚಿ ಪದಗಳನ್ನು ಕೌಟುಂಬಿಕ ವಲಯ, ವ್ಯವಹಾರಿಕ ವಲಯದಲ್ಲಿ ರೆಡ್ಡಿ, ಶೆಟ್ಟಿ, ನಾಯಕ ಎಂದು ಕರೆಯುವುದಿಲ್ಲ. ಬದಲಾಗಿ ಅವರ ಹೆಸರಿನ ಪೂರ್ವಾರ್ಧವನ್ನು ಸಂಬೋಧಿಸುತ್ತಾರೆ. ಇಲ್ಲವೇ ಪೂರ್ಣ ಹೆಸರನ್ನು ಕರೆಯತ್ತಾರೆ. ಉತ್ತರಾರ್ಧದಲ್ಲಿರುವ ಜಾತಿವಾಚಿಗಳನ್ನು ಕರೆದರೆ ಪುರುಷವಾಚಿ ಧ್ವನಿಯನ್ನು ನೀಡುತ್ತದೆ. ಆ ಕಾರಣಕ್ಕಾಗಿ ಸ್ತ್ರೀ ಸಂಬೋಧನೆಯಲ್ಲಿ ವೃತ್ತಿ ಜಾತಿ/ವಾಚಿಗಳನ್ನು ಬಳಸುವುದಿಲ್ಲ. ಜಾತಿಸೂಚಕ ಪ್ರತ್ಯಯಗಳು ವಾರ್ಗಿಕಗಳಾಗಿ ಬಂದಾಗ ಅಲ್ಲಿನ ಯಾವುದೇ ನಿರ್ದಿಷ್ಟ ಸ್ತ್ರೀ ಸಂಬಂಧವಾಚಕ ವಾರ್ಗಿಕಗಳನ್ನು ಹೊಂದಿರುವುದಿಲ್ಲ ಎಂಬುದು ಗಮನಾರ್ಹ ಸಂಗತಿ.

ಜಾತಿ/ವೃತ್ತಿ - ತಂದೆಯ ಹೆಸರು - ವ್ಯಕ್ತಿನಾಮದಿಂದ ಕೂಡಿದಾಗ ಅದರ ರಾಚನಿಕ ಸ್ವರೂಪ ಹೀಗಿರುತ್ತದೆ.

| ಜಾತಿವಾಚಕ | ತಂದೆಯಹೆಸರು | ಹೆಸರು | ಹೆಸರಿನ ಹ್ರಸ್ವರೂಪ |
|---|---|---|---|
| ಕುರುಬರ | ಹನುಮಂತಪ್ಪ | ನಾಗರಾಜ | ಕೆ.ಎಸ್ .ನಾಗರಾಜ |
| ಪಾಳೆಗಾರ | ಗೋಪಾಲಸ್ವಾಮಿನಾಯಕ | ದೊಡ್ಡಸ್ವಾಮಿನಾಯಕ | ಪಿ.ಜಿ.ಎನ್. ದೊಡ್ಡಸ್ವಾಮಿನಾಯಕ |
| ಕೊಲಮೆ | ರಾಜಪ್ಪ | ನಾಗರತ್ನಮ್ಮ | ಕೆ.ಆರ್.ನಾಗರತ್ನಮ್ಮ |
| ಗೊಲ್ಲರ | ಬಸಪ್ಪ | ಬಸವರಾಜ | ಜಿ.ಬಿ.ಬಸವರಾಜ |
| ಭೋವಿ | ತಿಪ್ಪೇಸ್ವಾಮಿ | ತಿಮ್ಮಪ್ಪ | ಬಿ.ಟಿ.ತಿಮ್ಮಪ್ಪ |
| ಹರಿಜನ | ಕುಲ್ಲುಮಾರೆಪ್ಪ | ದುರುಗಪ್ಪ | ಹೆಚ್.ಕೆ.ದುರುಗಪ್ಪ |
| ಗೊಲ್ಲರ | ರಾಮಪ್ಪ | ರಾಜೇಶ್ವರಿ | ಜಿ.ಆರ್.ರಾಜೇಶ್ವರಿ |
| ನಾಯಕರ | ತಿಪ್ಪೇಸ್ವಾಮಿ | ಜ್ಯೋತಿ | ಎನ್.ಟಿ.ಜ್ಯೋತಿ |

ಮೇಲಿನ ಉದಾಹರಣೆಗಳಲ್ಲಿ ಜಾತಿವಾಚಕ ಪದವು ವಾರ್ಗಿಕ ಪದ ಬಂದಂತೆ ಇಲ್ಲಿ ಹೆಸರಿನ ಪೂರ್ವಪದವಾಗಿ ಬಂದು, ವಿಶೇಷಣವೆಂಬಂತೆ ಕಾರ್ಯನಿರ್ವಹಿಸುತ್ತಿದೆ. ಅಲ್ಲದೆ ಉತ್ತರ ಕರ್ನಾಟಕದ ನಾಮನಿರ್ದೇಶನ ವಿಧಾನದಲ್ಲಿ ತಂದೆಯಹೆಸರು, ಜಾತಿಹೆಸರು, ವ್ಯಕ್ತಿಯಹೆಸರು ಪೂರ್ಣವಾಗಿ ಬಳಕೆಯಾಗುತ್ತದೆ. ಆದರೆ ದಕ್ಷಿಣದ ಚಿತ್ರದುರ್ಗ ಪರಿಸರದಲ್ಲಿ ವ್ಯಕ್ತಿಯ ಹೆಸರೇ ಪ್ರಧಾನವಾಗಿರುತ್ತದೆ. ಜಾತಿ ಮತ್ತು ತಂದೆಯ ಹೆಸರನ್ನು ಇಂಗ್ಲಿಶ್ ಅಕ್ಷರಗಳಲ್ಲಿ ಹ್ರಸ್ವಗೊಳಿಸಲಾಗುತ್ತದೆ. ಕೆಲವೆಡೆ ಕೇವಲ ತಂದೆಯ ಹೆಸರಿನೊಂದಿಗೆ ವ್ಯಕ್ತಿಯ ಹೆಸರಿರುವುದೂ ಚಿತ್ರದುರ್ಗದ ಪರಿಸರದಲ್ಲಿದೆ. ಅಂತಹ ಒಂದು ಮಾದರಿ ಇಲ್ಲಿದೆ.

ಆನಂದಾಚಾರಿ - ಲಕ್ಷ್ಮೀನಾರಾಯಣ - ಎ.ಲಕ್ಷ್ಮೀನಾರಾಯಣ

ದಾಸರಪಾಲಯ್ಯ - ನಾಗೇಂದ್ರಪ್ಪ - ಡಿ.ಪಿ.ನಾಗೇಂದ್ರಪ್ಪ

ಓಬಯ್ಯ - ಪ್ರಕಾಶ - ಓ.ಪ್ರಕಾಶ

ದುರುಗಪ್ಪ - ಹನುಮಂತಪ್ಪ - ಡಿ.ಹನುಮಂತಮ್ಮ

ಶ್ರೀಧರ - ಜ್ಯೋತಿ - ಎಸ್ .ಜ್ಯೋತಿ

ಸಣ್ಣಬೋಸಯ್ಯ - ಕಮಲಮ್ಮ - ಎಸ್.ಕಮಲಮ್ಮ

ಇಲ್ಲಿ ತಂದೆಯ ಹೆಸರು ವ್ಯಕ್ತಿನಾಮದ ಪೂರ್ವದಲ್ಲಿ ಬರುತ್ತದೆ. ಉತ್ತರಭಾಗದಲ್ಲಿ ಬರುವುದಿಲ್ಲ. ಇಲ್ಲಿಯೂ ತಂದೆಯ ಹೆಸರನ್ನು ಹ್ರಸ್ವೀಕರಿಸಿಕೊಳ್ಳಲಾಗಿದೆ.

**ವ್ಯಕ್ತಿನಾಮ ನಿರ್ದಿಷ್ಟ ಮತ್ತು ವಾರ್ಗಿಕಗಳ ನಡುವೆ ವಾರ್ಗಿಕ ರೂಪದ ರಚನೆ**

ಅ. ಜಂಭ + ಅಯ್ಯ + ಸ್ವಾಮಿ = ಜಂಭಯ್ಯಸ್ವಾಮಿ

ಗಣೇಶ + ರಾವ್ + ಕುಲಕರ್ಣಿ = ಗಣೇಶ್ ರಾವ್ ಕುಲಕರ್ಣಿ

ಬ. ಸುಬ್ಬ + ರೆಡ್ಡಿ + ನಾಯ್ಕ = ಸುಬ್ಬಾರೆಡ್ಡಿನಾಯ್ಕ

ವೀರ + ಸಿಂಗ್ + ನಾಯ್ಕ = ವೀರಸಿಂಗ್ ನಾಯ್ಕ

ತಿಮ್ಮ + ರೆಡ್ಡಿ + ಗೌಡ = ತಿಮ್ಮಾರೆಡ್ಡಿಗೌಡ

ಈ ಮೇಲಿನ ಉದಾಹರಣೆಗಳು ಮುಖ್ಯವಾಗಿ ಹೇಳುವುದೆಂದರೆ ಒಂದು ನಿರ್ದಿಷ್ಟ + ಜಾತಿವಾಚಿ + ವೃತ್ತಿವಾಚಿ ಇಲ್ಲವೇ ನಿರ್ದಿಷ್ಟ + ಜಾತಿವಾಚಿ + ಜಾತಿವಾಚಿ ಇಲ್ಲವೇ ನಿರ್ದಿಷ್ಟ + ವೃತ್ತಿವಾಚಿ + ವೃತ್ತಿವಾಚಿ. ಈ ಬಗೆಯ ನಾಮರಚನೆಯ ರೂಪವು ಕನ್ನಡದಲ್ಲಿ ಸಾಮಾನ್ಯವೇ ಆಗಿದೆ. ಅಂದರೆ ಒಬ್ಬ ವ್ಯಕ್ತಿಯ ನಾಮಕರಣದ ಸಂದರ್ಭದಲ್ಲಿ ಈ ರೀತಿಯ ಹೆಸರು ನಿರ್ದೇಶಿಸಿರಲಾರರು. ಕ್ರಮೇಣ ಅವರ ಹೆಸರಿನೊಂದಿಗೆ ಕೊನೆಯ ರೂಪಗಳು ಸೇರಿರುವ ಸಾಧ್ಯತೆಗಳಿವೆ. ಈ ಕ್ರಿಯೆಯು ಪುರುಷರ ಹೆಸರುಗಳಲ್ಲಿ ಹೆಚ್ಚಾಗಿದೆ. ಸ್ತ್ರೀಯರ ಹೆಸರುಗಳಲ್ಲಿ ಕಂಡುಬಂದಿರುವುದಿಲ್ಲ. ಆದರೆ ಪ್ರಾಚೀನ ಕಾಲದ ಸ್ತ್ರೀಯರ ಹೆಸರುಗಳಲ್ಲಿ ಇದನ್ನು ಕಾಣಬಹುದು. ಉದಾ : ಚಟ್ಟಿಯಕ್ಕಬ್ಬೆ ಅರಸಿ

ರೇವಕ್ಕಬ್ಬೆ ಗಾವುಂಡಿ

ಕಾಳಿಯಕ್ಕ ದಂಡನಾಯಕಿತಿ

ಮೇಲಿನ ಮಾದರಿಯಲ್ಲಿ ಹೆಸರಿನ ಪೂರ್ವಪದಕ್ಕೆ ಬಂಧುವಾಚಕ ಹಾಗೂ ವಾರ್ಗಿಕ (ವೃತ್ತಿವಾಚಿ) ಸೇರಿಕೊಂಡಿವೆ. ಮೇಲಿನ ಉದಾಹರಣೆಗಳಲ್ಲಿ ಮಧ್ಯದ ವಾರ್ಗಿಕಗಳು ಪೂರ್ವದ ನಿರ್ದಿಷ್ಟದ ಜತೆ ಸೇರಿಹೋಗಿ, ನಿರ್ದಿಷ್ಟದ ಭಾಗವಾಗಿ ಬಳಕೆಯಾಗುತ್ತವೆ. ರಾಚನಿಕ ಸ್ವರೂಪವನ್ನು ಅರಿಯಲು ಈ ರೀತಿ ವಿಗ್ರಹಿಸಲಾಗಿದೆ.

**ಸ್ಥಳನಾಮ + ಬಂಧುವಾಚಕ = ವ್ಯಕ್ತಿನಾಮ :**

| ಪುರುಷರ ಹೆಸರುಗಳು | ಸ್ತ್ರೀಯರ ಹೆಸರುಗಳು |
|---|---|
| ಚಳ್ಳೇರಪ್ಪ | ಚಳ್ಳೇರಮ್ಮ |
| ಮುಷ್ಠೂರಪ್ಪ | ಕೊಟ್ಟೂರಮ್ಮ (>ಕೊಟ್ರಮ್ಮ) |
| ಕೊಟ್ಟೂರಪ್ಪ (ಕೊಟ್ರಪ್ಪ) | ಹೊನ್ನೂರಮ್ಮ (>ಹೊನ್ನಮ್ಮ) |
| ಹೊನ್ನೂರಪ್ಪ (ಹೊನ್ನಪ್ಪ) | ಸೊಂಡೂರಮ್ಮ (ಸೊಂಡ್ರಮ್ಮ) |
| ಯಮನೂರಪ್ಪ | |
| ಯಡಿಯೂರಪ್ಪ | |
| ಕುರುಗೋಡಪ್ಪ | |

ಕೊಟ್ಟೂರಯ್ಯ (ಕೊಟ್ರಯ್ಯ)

ಬಂಡ್ರೆಪ್ಪ

ಸೊಂಡೂರಪ್ಪ (ಸೊಂಡ್ರಪ್ಪ)

ಮೇಲಿನ ಮಾದರಿಗಳು ಕರ್ನಾಟಕದ ಇತರೆ ಭೌಗೋಳಿಕ ಪರಿಸರಕ್ಕೆ ಸಂಬಂಧಿಸಿವೆ. ಮಾದರಿಗಾಗಿ ಈ ಉದಾಹರಣೆಗಳನ್ನು ನೋಡಲಾಗಿದೆ. ಚಿತ್ರದುರ್ಗ ಪರಿಸರದಲ್ಲಿ ಚಳ್ಳಕೆರೆ, ಮುಷ್ಟೂರು ಒಳಗೊಳ್ಳುತ್ತವೆ. ಸ್ಥಳನಾಮಗಳು ವ್ಯಕ್ತಿನಾಮಗಳಾಗಿ ಬಳಕೆಯಾಗುವುದು ಕಡಿಮೆ. ದೈವ, ಸಂತ ಮುಂತಾದವುಗಳಿಂದ ಪ್ರಸಿದ್ಧಿಪಡೆದ ಕೆಲವು ಸ್ಥಳನಾಮಗಳಿಂದ ಮಾತ್ರ ಈ ಬಗೆಯ ಹೆಸರುಗಳು ರೂಢಿಗೆ ಬಂದಿವೆ. ಗ್ರಾಮನಾಮದೊಂದಿಗೆ ಅಪ್ಪ, ಅಮ್ಮ, ಅಯ್ಯ ವಾರ್ಗಿಕ ಸೇರಿ ವ್ಯಕ್ತಿನಾಮವಾಗುತ್ತದೆ. ಉಳಿದಂತೆ ಗ್ರಾಮನಾಮಗಳು ಇತರ ವಾರ್ಗಿಕಗಳೊಡನೆ ಸೇರಿ ವ್ಯಕ್ತಿನಾಮವಾಗಿರುವಂತೆ ರಚನೆಗಳು ಕಾಣಬಂದಿರುವುದಿಲ್ಲ.

**ನಾಮಪದ + ನಾಮಪದ = ವ್ಯಕ್ತಿನಾಮ :**

ರಾಧ + ಕೃಷ್ಣ = ರಾಧಾಕೃಷ್ಣ

ಉಮಾ + ಶಂಕರ = ಉಮಾಶಂಕರ

ಸೀತ + ರಾಮ = ಸೀತಾರಾಮ

ಲಕ್ಷ್ಮೀ + ನಾರಾಯಣ = ಲಕ್ಷ್ಮೀನಾರಾಯಣ

ಚಂದ್ರ + ಶೇಖರ = ಚಂದ್ರಶೇಖರ

ಗೋಪಾಲ + ಕೃಷ್ಣ = ಗೋಪಾಲಕೃಷ್ಣ

ನಾಗ + ಲಕ್ಷ್ಮಿ = ನಾಗಲಕ್ಷ್ಮಿ

ರಾಮ + ಲಕ್ಷ್ಮಿ = ರಾಮಲಕ್ಷ್ಮಿ

ಸುಬ್ಬ + ಲಕ್ಷ್ಮಿ = ಸುಬ್ಬಲಕ್ಷ್ಮಿ

ಈ ಉದಾಹರಣೆಗಳಲ್ಲಿ ಪ್ರತಿ ನಿರ್ದಿಷ್ಟವೂ ಕೂಡ ಪ್ರತ್ಯೇಕ ವ್ಯಕ್ತಿನಾಮವಾಗಿ ವ್ಯವಹರಿಸಬಹುದು. ಇವು ಭಾಷೆಯ ಸಮಾಸರೂಪಗಳೂ ಹೌದು. ಎರಡು ನಾಮಪದಗಳಿದ್ದ ಹೆಸರನ್ನು ಸಂಕ್ಷೇಪಿಸಿ ಇಲ್ಲವೇ ವಿರೂಪಗೊಳಿಸಿ ಹೇಳಬೇಕಾದಲ್ಲಿ ಯಾವುದಾದರೂ ಒಂದು ಘಟಕವನ್ನು ಮಾತ್ರ ಬಳಸಿಕೊಳ್ಳಬಹುದು. ಆದರೆ ಎರಡೂ ನಿರ್ದಿಷ್ಟ ಪದಗಳನ್ನು ಒಟ್ಟಿಗೆ, ಇಲ್ಲವೆ ಏಕಕಾಲಕ್ಕೆ ಉಪಯೋಗ ಮಾಡಲಾಗುವುದಿಲ್ಲ. ಹಾಗೆ ಮಾಡಿದಾಗಲೂ, ಯಾವುದಾದರು ಒಂದು ಪದ ಘಟಕ ಮಾತ್ರ ಮೇಲಿನ ಪ್ರಕ್ರಿಯೆಗೆ ಒಳಗಾಗುತ್ತದೆ.

**ಜಾತಿ, ವೃತ್ತಿಸೂಚಕ + ವ್ಯಕ್ತಿನಾಮ :**

ಗೊಲ್ಲರ - ಸಿರಿಯಣ್ಣ

ಗೊರವರ - ಭರಮಪ್ಪ

ಹರಿಜನ - ಹನುಮಂತಪ್ಪ

ಮಾದಿಗರ - ಪರಮೇಶಿ

ಕುರುಬರ - ಜಡೆಪ್ಪ

ವಡ್ಡರ - ತಿಮ್ಮಪ್ಪ

ನಾಯಕರ - ಸೂರಯ್ಯ

ಈಡಿಗರ - ನಾಗರಾಜ

ನಾಯಕರ - ಕಮಲಮ್ಮ

ಭೋವಿ - ಶ್ವೇತ

| | |
|---|---|
| ಲಂಬಾಣಿ - ಲಚ್ಮನಾಯಕ | ಹರಿಜನ - ತಿಪ್ಪಕ್ಕ |
| ಕುಂಚಿಟಿಗರ - ನಾಗವೇಣಿ ಇತ್ಯಾದಿ. | ಕುರುಬರ - ಪುಟ್ಟಕ್ಕ - ಇತ್ಯಾದಿ |

ಜಾತಿ ಮತ್ತು ವೃತ್ತಿ ಹೆಸರುಗಳು ವ್ಯಕ್ತಿನಾಮಗಳೊಂದಿಗೆ ನಿರ್ದೇಶಿಸಿಕೊಳ್ಳುವುದು ಒಂದು ಪರಂಪರೆಯಾಗಿಯೇ ಬೆಳೆದಿದೆ. ಈ ಜಾತಿ/ವೃತ್ತಿವಾಚಿ ಪದಗಳು ಹೆಸರಿನ ಪೂರ್ವ ಮತ್ತು ಉತ್ತರ ಎರಡೂ ಭಾಗದಲ್ಲಿ ಕಂಡುಬರುತ್ತದೆ. ಉತ್ತರಪದ ಜಾತಿವಾಚಿಯಾಗಿ ಇರುವ ಒಂದು ಮಾದರಿ ಇಲ್ಲಿದೆ.

| | |
|---|---|
| ರಾಮಕೃಷ್ಣಯಾದವ್ | ತಿಮ್ಮಣ್ಣನಾಯಕ |
| ಹನುಮೇಶ ಮಾದಿಗ | ರಮೇಶಕುಮಾರವಾಲ್ಮೀಕಿ |
| ಕೃಷ್ಣಯ್ಯ ಈಡಿಗ | |

ಮೇಲಿನ ಈ ಹೆಸರುಗಳಲ್ಲಿ ಕೆಲವು ವಾರ್ಗಿಕದೊಂದಿಗೆ ಸಂಬೋಧಿಸಲ್ಪಡಬಹುದು. ನಾಯಕ್, ಯಾದವ್ ಮುಂತಾದವು. ಜಾತಿಯ ಕಾರಣದಿಂದ ಕೆಲವು (ಮಾದಿಗ, ಈಡಿಗ, ಗೊಲ್ಲ) ಸಂಬೋಧಿಸಲ್ಪಡಲಾರವು. ಈ ಸಂದರ್ಭದಲ್ಲಿ ಇವು ಕೇವಲ ದಾಖಲೆಯ ವಲಯದಲ್ಲಿ ಬಳಸಲ್ಪಡುತ್ತವೆ. ವ್ಯಕ್ತಿಯ ಗೈರು ಹಾಜರಿಯಲ್ಲಿ ಇವು ಬಳಕೆಯಾಗಬಹುದು.

ವೃತ್ತಿವಾಚಿ + ವ್ಯಕ್ತಿನಾಮ :

ಚಿತ್ರದುರ್ಗ ಪರಿಸರದಲ್ಲಿ ವ್ಯಕ್ತಿನಾಮದ ಪೂರ್ವ ಪದವಾಗಿ ವೃತ್ತಿವಾಚಿಗಳು ವಿಶೇಷಣಗಳೆಂಬಂತೆ ಬಳಕೆಯಾಗುತ್ತವೆ. ಈ ವಿಶೇಷಣಗಳನ್ನು ನಿರ್ದಿಷ್ಟ ಘಟಕಗಳೆಂದು ಹೇಳಲಾಗದು. ಆದರೂ ಇವು ನಿರ್ದಿಷ್ಟದ ಸ್ಥಾನವನ್ನು ಅವಲಂಬಿಸಿರುತ್ತವೆ. ಆದ್ದರಿಂದ ವ್ಯಕ್ತಿನಾಮಗಳಲ್ಲಿ ಈ ಬಗೆಯ ಪದಪಲ್ಲಟದಿಂದ ಸ್ಥಾನ ನಿರ್ದೇಶನವನ್ನು ಖಚಿತವಾಗಿ ಹೇಳಲಾಗದು.

ಪಟೇಲ್ ಬೊಮ್ಮಯ್ಯ

ಗೌಡರ ತಿಪ್ಪೇಸ್ವಾಮಿ

ಗೊಂಚಿಕಾರ ಪಾಲಯ್ಯ

ದೊರೆ ಪಾಪಯ್ಯ

ಗೌಡ್ರು ಹನುಮಕ್ಕ

ಗೌಡರ ಪಾಪಮ್ಮ

ದಳವಾಯಿ ಓಬಣ್ಣ

ತಳವಾರ ಹೊನ್ನೂರಪ್ಪ

ಅಲ್ಲದೇ ಇವುಗಳನ್ನು ಇಂಗ್ಲಿಶ್ ಅಕ್ಷರದಿಂದ ಹ್ರಸ್ವಗೊಳಿಸಿಯೇ ಬಳಸಲಾಗುತ್ತದೆ.

ಪಿ.ಬೊಮ್ಮಯ್ಯ

ಜಿ.ತಿಪ್ಪೇಸ್ವಾಮಿ

ಜಿ.ಪಾಲಯ್ಯ - ಇತ್ಯಾದಿ.

ಪ್ರಾಚೀನ ಕರ್ನಾಟಕದಲ್ಲಿಯೂ ಸ್ತ್ರೀಯರ ವ್ಯಕ್ತಿನಾಮದ ಉತ್ತರ ಪದವಾಗಿ ವೃತ್ತಿವಾಚಕ ಪದ ಬಂದಿರುವುದು ತಿಳಿಯುತ್ತದೆ. ಈ ವೃತ್ತಿವಾಚಿಗಳು ನಿರ್ದಿಷ್ಟವಾಗಿ ಮಹಿಳೆಯರಿಗೆ ಸಂಬಂಧಿಸಿರಲಾರದೆನ್ನಬಹುದು. "ಬೊಮ್ಮಗವುಡಿ, ಜಕ್ಕಿಯಬ್ಬೆ ನಾಳ್ಗಾವುಂಡಿ, ಕಾಳಿಯಕ್ಕ ದಂಡನಾಯಕಿತಿ, ಮೈಲವೆರಾಣಿ, ಕೆಳೆಯಬ್ಬರಸಿ, ಹೆಸರುಗಳ ಕೊನೆಯ ಗವುಡಿ, ನಾಳ್ಗಾವುಂಡಿ ಗಂಡಂದಿರ ಅಧಿಕಾರ ಸೂಚಿಸುತ್ತದೆಯೇ ಹೊರತು ಇವರ ಅಧಿಕಾರವನ್ನಲ್ಲ"[೩] ಎಂಬುದನ್ನು ಒಪ್ಪಬಹುದು. ಆದರೂ ಮಹಿಳೆಯರು ಈ ವೃತ್ತಿಗಳನ್ನು ನಿರ್ವಹಿಸಿದ್ದನ್ನು ಕಡೆಗಾಣಿಸುವಂತಿಲ್ಲ. ಅಲ್ಲದೇ ಈ ವೃತ್ತಿವಾಚಿ ಪದಗಳು ಉತ್ತರ ಕರ್ನಾಟಕದಲ್ಲಿ ಹೆಸರಿನ ಕೊನೆಯಲ್ಲಿ ಬಳಕೆಯಾಗಿ, ಅದೇ ಪ್ರಧಾನವಾಗಿರುತ್ತದೆ.

**ವೃತ್ತಿ / ಜಾತಿ + ವೃತ್ತಿ / ಜಾತಿ + ನಿರ್ದಿಷ್ಟ + ಜಾತಿವಾಚಕ :**

ಪಟೇಲ್ ಗೌಡರ ಪಾಪನಾಯಕ

ಶಾನುಭೋಗ ಪಟೇಲ್ ಹುಲಿಕುಂಟಾಚಾರ್ಯ

ಈ ಉದಾಹರಣೆಗಳಲ್ಲಿ ಎರಡು ವೃತ್ತಿವಾಚಿ ಪದಗಳೊಂದಿಗೆ ನಿರ್ದಿಷ್ಟ ಹಾಗೂ ವಾರ್ಗಿಕವಾಗಿ ಜಾತಿವಾಚಿ ಪದ ಬಂದಿರುವುದು ವಿಶೇಷವಾಗಿದೆ. ಈ ಬಗೆಯ ವ್ಯಕ್ತಿನಾಮ ರಚನೆಗಳು ಇತರೆ ಭೌಗೋಳಿಕ ಪರಿಸರದಲ್ಲಿ ವಿರಳವೆನ್ನಬಹುದು. ಇಂಥ ಉದಾಹರಣೆಗಳು ಒಬ್ಬನೇ ವ್ಯಕ್ತಿ ಅಥವಾ ಕುಟುಂಬ ಒಂದಕ್ಕಿಂತ ಹೆಚ್ಚು ಹುದ್ದೆಗಳನ್ನು ಪಡೆದಿದ್ದರ ಸೂಚನೆಯನ್ನು, ಅಧಿಕಾರ ಕೇಂದ್ರೀಕರಣದ ವ್ಯವಸ್ಥೆಯನ್ನು ಅತ್ಯಂತ ಸೂಕ್ಷ್ಮವಾಗಿ ಪ್ರತಿಬಿಂಬಿಸುವುದನ್ನು ಇಲ್ಲಿ ಗಮನಿಸಬಹುದು.

**ವಿವರಣಾತ್ಮಕ ವ್ಯಕ್ತಿನಾಮಗಳು :**

**- ಗಳ, (ರವರ, ಅವರ) : - ಯಾನೆ' ಗಳ ಬಳಕೆ :**

ತಂದೆಯಹೆಸರು + ವ್ಯಕ್ತಿಯ ಹೆಸರು' ಎಂಬ ರಾಚನಿಕ ಸ್ವರೂಪದ ಮೇಲೆ ಈ ಬಗೆಯ ಹೆಸರುಗಳು ನಿರ್ದೇಶಿಸಲ್ಪಟ್ಟು, ಹೆಸರಿನ ಮಧ್ಯೆ ಗಳ, ಯಾನೆ' ಎಂಬ ಪ್ರತ್ಯಯಗಳು ಬಳಕೆಯಾಗುತ್ತವೆ.

ಗಿರಿಯಪ್ಪಗಳ ಕೃಷ್ಣಯ್ಯ

ಗುಂಡಣ್ಣಗಳ ತಗಾದಿ ಓಬಯ್ಯ

ಮಸಿಯಪ್ಪಗಳ ತಿಪ್ಪಯ್ಯ

ಭರಮ್ಮಪ್ಪಗಳ ಮಲ್ಲಪ್ಪ

ಚೌಡಪ್ಪಗಳ ಮುತ್ತಯ್ಯ

ಇಲ್ಲಿ "ಅಂಕಿತನಾಮಗಳಿಗೆ ಹಾಗೂ ಸಂಬಂಧವಾಚಿಗಳಿಗೆ -ಗಳು' ಪ್ರತ್ಯಯ ಗೌರವ ಸೂಚಕ ಅರ್ಥದಲ್ಲಿ ಬಳಸಲಾಗಿದೆ. ನೀಲಮ್ಮಗಳ, ಅಕ್ಕಗಳ, ತಂದೆಗಳ, ಅಮ್ಮಗಳು ಪ್ರತ್ಯಯ ನಪುಂಸಕ ಲಿಂಗಗಳಿಗೆ ಮಾತ್ರವಲ್ಲ ಸರ್ವನಾಮಗಳಲ್ಲಿಯೂ ಬಂದಿದೆ."[೪] ತಂದೆಯ ಹೆಸರು ಜನ್ಮನಾಮದ ಪೂರ್ವದಲ್ಲಿ ಬಂದಾಗ ತಂದೆಯ ಹೆಸರಿಗೆ ಈ - 'ಗಳು' ಅಂಟುತ್ತದೆ. ಆದರೆ ವ್ಯಕ್ತಿಯ ನಿರ್ದಿಷ್ಟ ನಾಮದೊಡನೆ ಬಳಕೆಯಾಗಿರುವುದಿಲ್ಲ. ಇಲ್ಲಿ 'ಗಳ' ಎಂಬುದು 'ಮಗ' ಎಂಬ ಅರ್ಥವನ್ನು ಧ್ವನಿಸುತ್ತಿರುವುದನ್ನು ಕಾಣಬಹುದು. ಅದರಂತೆ - ರವರು, ಅವರು ಬಳಕೆಯಾಗುತ್ತದೆ.

ಬಾಪನಯ್ಯನವರ ನಿಂಗಪ್ಪ
ಮ್ಯಾಕಲಯ್ಯನವರ ಬಸಪ್ಪ
ಬಸವಣ್ಣನವರ ಹೊಸಕೇರಪ್ಪ
ವಡ್ಡಯ್ಯನವರ ಈರಣ್ಣ
ಆಸ್ಪತ್ರೆಪ್ಪನವರ ದೇವಣ್ಣ
ತಿಪ್ಪಯ್ಯನವರ ಕಾಟಣ್ಣ
ಯರಯ್ಯನವರ ಕೆಂಗಣ್ಣ

ಈ ಉದಾಹರಣೆಗಳಲ್ಲಿ ತಂದೆಯ ಮತ್ತು ವ್ಯಕ್ತಿನಾಮದ ನಡುವೆ 'ಅವರು' ಬಹುವಚನ ಪದ ಬಳಕೆಯಾಗಿದೆ. 'ಅವರು' ಎಂಬುದು ಹೆಸರಿನೊಂದಿಗೆ ಸೇರುವಾಗ 'ನವರ/ರು' ಎಂದಾಗುತ್ತದೆ. ಇಲ್ಲಿ 'ಅ' ಕಾರಕ್ಕೆ ಬದಲಾಗಿ 'ನ' ಕಾರಾದೇಶವಾಗಿ ಬರುತ್ತದೆ. ಸಂಬಂಧವಾಚಿ, ಗೌರವವಾಚಿಯಾಗಿಯೂ 'ರವರು' ಬಳಕೆಯಾಗುತ್ತದೆ. ಇವು ಹೆಚ್ಚಾಗಿ ಬರಹರೂಪದಲ್ಲಿ ಕಂಡುಬರುತ್ತಿದ್ದು, ಸಂಬೋಧನೆಯಲ್ಲಿ ಇವುಗಳ ಬಳಕೆ ಕಡಿಮೆಯೆಂದೇ ಹೇಳಬಹುದು. ಅದೇ ರೀತಿ -ಯಾನೆ'ಯ ಬಗೆಗೆ ಕೆಲವು ಉದಾಹರಣೆಗಳನ್ನು ನೋಡಬಹುದು.

ಚನ್ನಪ್ಪ ಯಾನೆ ಮುಗುಳಪ್ಪ
ನಾಗರಾಜ ಯಾನೆ ಕಾಟಪ್ಪ
ಕುಂಟಪ್ಪ ಯಾನೆ ಮೂಕಣ್ಣ
ಕೆಂಚಪ್ಪ ಯಾನೆ ಡೊಳ್ಳಪ್ಪ
ಮಾರಣ್ಣ ಯಾನೆ ಚೆನಕಪ್ಪ
ಕೆಂಗಪ್ಪ ಯಾನೆ ತಿಪ್ಪಯ್ಯ

ತಂದೆಯ ಹೆಸರಿನ ನಂತರ ಯಾನೆ' ಇದ್ದು ನಂತರ ವ್ಯಕ್ತಿಯ ಹೆಸರು ಬಳಕೆಯಾಗಿದೆ.

-ಗಳ, -ಅವರ ಬಹುವಚನ ಪ್ರತ್ಯಯಗಳು ಅಂಕಿತನಾಮ, ಸರ್ವನಾಮಗಳಲ್ಲಿ ಬಳಕೆಯಾಗುವುದು ಕನ್ನಡ ಪರಿಸರದಲ್ಲಿ ಸಾಮಾನ್ಯ ನಿಯಮವಾಗಿದೆ. ತಂದೆಯ ಹೆಸರಿನ ಬಳಿಕ -ಯಾನೆ' ಬಂದಿರುವುದು ಕುತೂಹಲಕರ ಸಂಗತಿಯಾಗಿದೆ. ಯಾನೆ' ಪದಕ್ಕೆ = ಅರ್ಥಾತ್ , ಅಂದರೆ ಎಂಬ ಅರ್ಥಗಳನ್ನು ಶಬ್ದಕೋಶ ನೀಡುತ್ತದೆ. ಒಬ್ಬ ವ್ಯಕ್ತಿಗೆ ಹಲವು ಹೆಸರುಗಳಿರುವುದು ಕಡೆಗಣಿಸಲಾಗದು. ಆದರೆ ಒಂದು ಖಚಿತ ಹೆಸರು ಇರುತ್ತದೆ. ಅರ್ಥಾತ್ ಎಂದು ಹೇಳುವ ಹೆಸರು ತೀರಾ ಕಡಿಮೆ. ಇದನ್ನು ಕೇವಲ ಆಡುಮಾತಿನ ಪರಿಸರದಲ್ಲಿ ಸೌಲಭ್ಯಾಕಾಂಕ್ಷೆಯಿಂದ ಕರೆಯಬಹುದಷ್ಟೇ. ದಾಖಲೆಗಳಲ್ಲಿ ಈ ಬಗೆಯ ಪ್ರಯೋಗ ಕಡಿಮೆ. ಗಳ, ಅವರ' ಗಳು ಬಳಕೆಯಾದಂತೆ, ಅದೇ ಅರ್ಥದಲ್ಲಿ ಯಾನೆ' ಬಳಸುತ್ತಿದ್ದಿರಬೇಕೆಂಬುದನ್ನು ಊಹಿಸಬಹುದು. ಅಥವಾ 'ಮಗ' (ಚನ್ನಪ್ಪ ಯಾನೆ (ಮಗ) ಮುಗುಳಪ್ಪ) ಎಂಬರ್ಥದ್ದಿರಬೇಕು.

**ಬಂಧುವಾಚಿ + ಬಂಧುವಾಚಿ = ವ್ಯಕ್ತಿನಾಮ :**

ಇಲ್ಲಿ ನಿರ್ದಿಷ್ಟ ಸ್ಥಾನದಲ್ಲಿ ವಾರ್ಗಿಕ ರೂಪದ ರಚನೆಯು ಬಂದು ಸೇರುತ್ತದೆ. ಅಲ್ಲದೇ ಎರಡು ವಾರ್ಗಿಕ ರೂಪದ ರಚನೆಗಳು ಸೇರಿ ವ್ಯಕ್ತಿನಾಮವಾಗುತ್ತದೆ.

| ಅ | ಬ |
|---|---|
| ಅಯ್ಯ + ಅಪ್ಪ = ಅಯ್ಯಪ್ಪ | ಅಕ್ಕ + ಅಮ್ಮ = ಅಕ್ಕಮ್ಮ |
| ಅಯ್ಯ + ಅಣ್ಣ = ಅಯ್ಯಣ್ಣ | ಅಣ್ಣ + ಅಮ್ಮ = ಅಣ್ಣಮ್ಮ |
| ಅಜ್ಜ + ಅಯ್ಯ = ಅಜ್ಜಯ್ಯ | ಅಯ್ಯ + ಅಮ್ಮ = ಅಯ್ಯಮ್ಮ |
| ಅಣ್ಣ + ಅಪ್ಪ = ಅಣ್ಣಪ್ಪ | ಅಮ್ಮ + ಅಣ್ಣ + ಅಮ್ಮ = ಅಮ್ಮಣ್ಣಮ್ಮ |

ತಮ್ಮ + ಅಣ್ಣ = ತಮ್ಮಣ್ಣ

ತಮ್ಮ + ಅಯ್ಯ = ತಮ್ಮಯ್ಯ

ಅಪ್ಪ + ಅಣ್ಣ = ಅಪ್ಪಣ್ಣ

ಅಕ್ಕ + ಅವ್ವ = ಅಕ್ಕವ್ವ

ತಾಯಿ + ಅಮ್ಮ = ತಾಯಮ್ಮ

ತಾಯಿ + ಅವ್ವ + ತಾಯವ್ವ

ಮೇಲಿನ ಉದಾಹರಣೆಗಳಲ್ಲಿ ಅಮ್ಮ + ಅಣ್ಣ + ಅಮ್ಮ ಎಂಬ ಮೂರು ಬಂಧುವಾಚಕಗಳು ಸೇರಿ -ಅಮ್ಮಣ್ಣಮ್ಮ ಎಂಬ ವ್ಯಕ್ತಿನಾಮ ರಚನೆಯಾಗಿದೆ. ಇಲ್ಲಿ 'ಅಣ್ಣ' ಎಂಬ ಪುರುಷ ಸಂಬಂಧವಾಚಕ ಸೇರಿದೆ. ಅಲ್ಲದೆ ಅಯ್ಯ + ಅಮ್ಮ, ಅಣ್ಣ + ಅಮ್ಮ ಎಂಬಲ್ಲಿಯೂ ಒಂದೊಂದು ಪುರುಷವಾಚಿ ಪ್ರತ್ಯಯಗಳಿವೆ. ನಿರ್ದಿಷ್ಟ ಸ್ಥಾನದಲ್ಲಿ ಪುರುಷವಾಚಿ, ವಾರ್ಗಿಕದಲ್ಲಿ ಸ್ತ್ರೀ ವಾಚಿ ಬಂಧುವಾಚಗಳಿವೆ. ಈ ನಿಯಮ ಕನ್ನಡ ನಾಮಪದ ರಚನಾ ವ್ಯವಸ್ಥೆಯಲ್ಲಿ ಸಾಮಾನ್ಯವಾಗಿದೆ. ದೈವಮೂಲದ ಹೆಸರುಗಳಲ್ಲಿ ಹೆಣ್ಣನ್ನು ಗಂಡಿನ ಹೆಸರಾಗಿ, ಗಂಡನ್ನು ಹೆಣ್ಣಿನ ಹೆಸರಾಗಿ ಆಯಾ ಬಂಧುವಾಚ ವಾರ್ಗಿಕ ಸೇರಿಸುವುದರೊಂದಿಗೆ ಬದಲಾಯಿಸುವುದು ಕಂಡುಬರುತ್ತದೆ. (ಚಳ್ಳೇರಪ್ಪ - ಚಳ್ಳೇರಪ್ಪ : ತಿಪ್ಪಣ್ಣ - ತಿಪ್ಪಮ್ಮ ಹೀಗೆ) ಅಲ್ಲದೇ ಎರಡು ಬಂಧುವಾಚಿಗಳಿಂದ ಕೂಡಿದ ನಾಮಗಳನ್ನು ಒಂದೊಂದು ಘಟಕವನ್ನು ಪ್ರತ್ಯೇಕ ಮಾಡಿ ಸಂಬೋಧಿಸಿದಾಗ ವ್ಯಕ್ತಿಯನ್ನು ಪುರುಷನೋ, ಸ್ತ್ರೀಯೋ ಎಂದು ಗುರುತಿಸಲಾಗುವುದಿಲ್ಲ. ಸ್ತ್ರೀಯರ ಹೆಸರುಗಳಲ್ಲಿ ಪೂರ್ವಪದವಾಗಿ ಬಂದಿರುವ -ಅಯ್ಯ, -ಅಣ್ಣ ಎಂಬ ಪುಲ್ಲಿಂಗ ಪ್ರತ್ಯಯಗಳನ್ನು ಅವು ನೀಡುವ ಅರ್ಥವನ್ನಾಧರಿಸಿ, ವ್ಯಕ್ತಿನಾಮದ ನಿರ್ದಿಷ್ಟ ಘಟಕಗಳೆಂದು ಸ್ವೀಕರಿಸಬಹುದು.

**ಬಂಧುವಾಚಕ + ಬಂಧುವಾಚಕ + ಜಾತಿ / ವೃತ್ತಿ = ವ್ಯಕ್ತಿನಾಮ :**

ಅಯ್ಯ + ಅಣ್ಣ + ಗೌಡ = ಅಯ್ಯಣ್ಣಗೌಡ

ಅಯ್ಯ + ಅಪ್ಪ + ಸ್ವಾಮಿ = ಅಯ್ಯಪ್ಪಸ್ವಾಮಿ

ಅಣ್ಣ + ಅಪ್ಪ + ಸ್ವಾಮಿ = ಅಣ್ಣಪ್ಪಸ್ವಾಮಿ

ಅಜ್ಜ + ಅಪ್ಪ + ಸ್ವಾಮಿ = ಅಜ್ಜಪ್ಪಸ್ವಾಮಿ

ಅಯ್ಯ + ಅಣ್ಣ + ರೆಡ್ಡಿ = ಅಯ್ಯಣ್ಣರೆಡ್ಡಿ

ಅಯ್ಯ + ಅಪ್ಪ + ಶೆಟ್ಟಿ = ಅಯ್ಯಪ್ಪಶೆಟ್ಟಿ

ಕೇವಲ ಬಂಧುವಾಚಕಗಳಿಂದ ರಚನೆಗೊಂಡಿರುವ ಹೆಸರುಗಳು ಕೃದಂತರೂಪಗಳಿದ್ದ ಹಾಗೆ ಅವುಗಳ ಮುಂದೆ ಬೇರೆ ಬೇರೆ ವಾರ್ಗಿಕಗಳನ್ನು ಅಂಟಿಸುವುದರ ಮೂಲಕ ಆ ಹೆಸರುಗಳನ್ನು ವಿಸ್ತರಿಸಬಹುದು. ಈ ಪ್ರಕ್ರಿಯೆ ಪುರುಷರ ಹೆಸರಿನಲ್ಲಿ ಕಂಡುಬಂದಂತೆ ಮಹಿಳೆಯರ ಹೆಸರಿನಲ್ಲಿ ಕಾಣಬರುವುದಿಲ್ಲ.

**ವಿಶೇಷಣ + ಬಂಧುವಾಚಿ = ವ್ಯಕ್ತಿನಾಮ :**

ಅ

ದೊಡ್ಡ + ಅಪ್ಪ = ದೊಡ್ಡಪ್ಪ

ಚಿಕ್ಕ + ಅಪ್ಪ = ಚಿಕ್ಕಪ್ಪ

ಸಣ್ಣ + ಅಪ್ಪ = ಸಣ್ಣಪ್ಪ

ಗಿಡ್ಡ + ಅಯ್ಯ = ಗಿಡ್ಡಯ್ಯ

ಪೆದ್ದ + ಅಯ್ಯ = ಪೆದ್ದಯ್ಯ (ತೆಲುಗು)

ಗೊಪ್ಪ + ಅಯ್ಯ = ಗೊಪ್ಪಯ್ಯ (ತೆಲುಗು)

ಪೆದ್ದ + ಅಮ್ಮ = ಪೆದ್ದಮ್ಮ (ತೆಲುಗು)

ಬ

ಪುಟ್ಟ + ಅಮ್ಮ = ಪುಟ್ಟಮ್ಮ

ದೊಡ್ಡ + ಅಮ್ಮ = ದೊಡ್ಡಮ್ಮ

ಸಣ್ಣ + ಅಮ್ಮ = ಸಣ್ಣಮ್ಮ

ಚಿಕ್ಕ + ಅಮ್ಮ = ಚಿಕ್ಕಮ್ಮ

ಸಣ್ಣ + ಅಕ್ಕ = ಸಣ್ಣಕ್ಕ

ಗಿಡ್ಡ + ಅಮ್ಮ = ಗಿಡ್ಡಮ್ಮ

ಮೇಲಿನ ಉದಾಹರಣೆಗಳಲ್ಲಿನ ವ್ಯಕ್ತಿನಾಮ ನಿರ್ದಿಷ್ಟಗಳು ವಿಶೇಷಣಗಳಾಗಿವೆ. ವಿಶೇಷಣಗಳು ವ್ಯಕ್ತಿನಾಮವಾಗಬೇಕಾದಲ್ಲಿ ಅದರ ವಾರ್ಗಿಕ ಘಟಕ ಬಂಧುವಾಚಕವಾಗಿರಬೇಕು. ಬೇರೆ ವಾರ್ಗಿಕಗಳೊಂದಿಗೆ ಈ ಕ್ರಿಯೆ ನಡೆಯುವುದಿಲ್ಲ. ಅಲ್ಲದೇ ವಿಶೇಷಣಗಳು ವಾರ್ಗಿಕ ಸ್ಥಾನದಲ್ಲಿ ಬರಲಾರವು. ಜೊತೆಗೆ ಪೂರ್ವ ಪದದ ವಿಶೇಷಣಗಳ ಆರಂಭದಲ್ಲಿ ಮತ್ತೊಂದು ವಿಶೇಷಣ ಬರಲಾರದು. ಬದಲಾಗಿ ಉತ್ತರ ಪದದ ಮುಂದೆ ಬಂಧುವಾಚಕಗಳನ್ನು ಅಂಟಿಸಿ ಹೆಸರನ್ನು ಇನ್ನಷ್ಟು ವಿಸ್ತರಿಸಲು ಸಾಧ್ಯವಿದೆ. ಉದಾ :

ಸಣ್ಣ + ಅಪ್ಪ + ಅಯ್ಯ = ಸಣ್ಣಪ್ಪಯ್ಯ

ದೊಡ್ಡ + ಅಪ್ಪ + ಅಯ್ಯ = ದೊಡ್ಡಪ್ಪಯ್ಯ

ಚಿಕ್ಕ + ಅಣ್ಣ + ಅಯ್ಯ = ಚಿಕ್ಕಣ್ಣಯ್ಯ

ಮುಖ್ಯವಾಗಿ ಇಲ್ಲಿ ವಿಶೇಷಣ ಮತ್ತು ಬಂಧುವಾಚಕ ವಾರ್ಗಿಕದಿಂದ ಮಾತ್ರ ರಚನೆಗೊಂಡಿದ್ದ ವ್ಯಕ್ತಿನಾಮ ಇನ್ನೊಂದು ಬಂಧುವಾಚಿ ಪ್ರತ್ಯಯವನ್ನು ಸೇರಿಸಿಕೊಂಡರೆ ನಿರ್ದಿಷ್ಟ ಸ್ಥಾನದಲ್ಲಿ ಬಳಕೆಯಲ್ಲಿದ್ದ ವಿಶೇಷಣ ಪದ, ನಿರ್ದಿಷ್ಟದ ಅರ್ಥವನ್ನು ಕಳೆದುಕೊಂಡು ಅಂದರೆ ನಿರ್ದಿಷ್ಟದ ಸ್ಥಾನವನ್ನು ತೆರವು ಮಾಡಿ ವಿಶೇಷಣವಾಗಿಯೇ ಬಳಕೆಯಾಗುತ್ತದೆ. ಹೀಗೆ ವಿಶೇಷಣವಾಗಿ ಬಳಕೆಯಾಗುತ್ತಿದ್ದರೂ ಅದು ವ್ಯಕ್ತಿನಾಮದ ಭಾಗವೇ ಆಗಿರುತ್ತದೆ. ನಿರ್ದಿಷ್ಟಗಳಾಗಿ ಬಳಕೆಯಾಗುವ ವಿಶೇಷಣಗಳ ಕೊನೆಯ -ಣ, -ಕ ದಿಂದ ಕೊನೆಗೊಂಡಿದ್ದರೆ, ಅದೇ ವರ್ಣದಿಂದ ಅಂತ್ಯವಾಗುವ ಬಂಧುವಾಚಕ ಪ್ರತ್ಯಯಗಳು ಈ ನಿರ್ದಿಷ್ಟಕ್ಕೆ ಹತ್ತುವುದಿಲ್ಲ. ಉದಾ : ಸಣ್ಣ + ಅಣ್ಣ = ಸಣ್ಣಣ್ಣ

ಚಿಕ್ಕ + ಅಕ್ಕ = ಚಿಕ್ಕಕ್ಕ

ಈ ಬಗೆಯ ಹೆಸರುಗಳು ಸಂಬೋಧನೆಯಲ್ಲಿ ಕರೆಯಲ್ಪಡಬಹುದು. ಆದರೆ ನಾಮಕರಣ ಈ ರೀತಿ ಮಾಡಲಾರರು. ಪುರುಷರ ಹೆಸರಿನ ನಿರ್ದಿಷ್ಟಗಳು ಪ, ಯ, ಣ ದಿಂದ ಕೊನೆಗೊಂಡಿದ್ದರೆ ಕ್ರಮವಾಗಿ ಅದೇ ವರ್ಣಗಳಿಂದ ಕೊನೆಯಾಗುವ ಅಪ್ಪ, ಅಯ್ಯ, ಅಣ್ಣ ವಾರ್ಗಿಕಗಳು ಆ ನಿರ್ದಿಷ್ಟಗಳಿಗೆ ಹತ್ತುವುದಿಲ್ಲ.

ಉದಾ : - ಅಪ್ಪ:

ಪಾಪ + ಅಪ್ಪ = ಪಾಪಪ್ಪ

ತಿಪ್ಪ + ಅಪ್ಪ = ತಿಪ್ಪಪ್ಪ

- ಅಯ್ಯ :

ಬೈಯ + ಅಯ್ಯ = ಬೈಯ್ಯಯ್ಯ

ತಾಯಿ + ಅಯ್ಯ = ತಾಯಯ್ಯ

- ಅಣ್ಣ :

ಕಣ್ಣ + ಅಣ್ಣ = ಕಣ್ಣಣ್ಣ

ಅಣ್ಣ + ಅಣ್ಣ = ಅಣ್ಣಣ್ಣ

ಮೇಲಿನ ಪುರುಷನಾಮಗಳಂತೆ ಸ್ತ್ರೀ ನಾಮಗಳಲ್ಲಿಯೂ ಈ ಪ್ರಕ್ರಿಯೆ ಕಾಣಬರುತ್ತದೆ. ಸ್ತ್ರೀ ನಾಮ

ನಿರ್ದಿಷ್ಟಗಳು -ಕ, -ಮ, -ವ ದಿಂದ ಅಂತ್ಯಗೊಂಡಿದ್ದರೆ ಕ್ರಮವಾಗಿ ಅಕ್ಕ, ಅಮ್ಮ, ಅವ್ವ ವಾರ್ಗಿಕ ನಿರ್ದಿಷ್ಟಗಳೊಂದಿಗೆ ವ್ಯವಹರಿಸಲಾರವು. ಉದಾ : ತಿಮ್ಮ + ಅಮ್ಮ = ತಿಮ್ಮಮ್ಮ

ಬೊಮ್ಮ + ಅಮ್ಮ = ಬೊಮ್ಮಮ್ಮ

ಸುಂಕ + ಅಕ್ಕ = ಸುಂಕಕ್ಕ

ಯಂಕ + ಅಕ್ಕ = ಯಂಕಕ್ಕ

ಶಿವ + ಅವ್ವ = ಶಿವವ್ವ

ಹೂವ + ಅವ್ವ = ಹೂವವ್ವ

ಈ ಮೇಲಿನ ಮಾದರಿಗಳು ಹೆಚ್ಚಾಗಿ ಸಂಬೋಧನಾ ರೂಪಗಳಲ್ಲಿ ಮಾತ್ರ ಕಂಡುಬರುತ್ತವೆ. ನಾಮಕರಣದ ಸಂದರ್ಭದಲ್ಲಿ ಈ ರೀತಿಯ ನಿರ್ದೇಶನ ಮಾಡಿರುವ ನಿದರ್ಶನಗಳು ಕಾಣಬರುವುದಿಲ್ಲ. ಈ ಬಗೆಯ ಹೆಸರುಗಳಿಗೆ ಯಾವುದೇ ಸಾಂಸ್ಕೃತಿಕ ನಿಷೇಧಗಳಿರದೇ, ಭಾಷಿಕ ಉಚ್ಚಾರಣೆಯ ತೊಡಕು ಕಾರಣವಾಗಿದೆಯೆನ್ನಬಹುದು.

ವಿಶೇಷಣ + ನಿರ್ದಿಷ್ಟ = ವ್ಯಕ್ತಿನಾಮ :

| ಅ | ಬ |
|---|---|
| ದೊಡ್ಡಮಾರಣ್ಣ | ಸಣ್ಣ ಮಲಿಯಮ್ಮ |
| ಸಣ್ಣ ತಿಪ್ಪೇಸ್ವಾಮಿ | ಸಣ್ಣ ತಿಪ್ಪಕ್ಕ |
| ದೊಡ್ಡ ಮದಕರಿನಾಯಕ | ದೊಡ್ಡ ಪಾಪಕ್ಕ |
| ಸಣ್ಣ ಸೂರಪ್ಪ | |

ಇಲ್ಲಿ ಬಂದಿರುವ ಸಣ್ಣ, ದೊಡ್ಡ ವಿಶೇಷಣಗಳು ಅದೇ ಹೆಸರಿನ ಮತ್ತೊಬ್ಬ ವ್ಯಕ್ತಿಯ ಅಸ್ತಿತ್ವವನ್ನು ತಿಳಿಸುತ್ತದೆ. ಸಣ್ಣಮಾರಣ್ಣ ಎಂಬುದು ದೊಡ್ಡ ಮಾರಣ್ಣ ಎಂಬ ಇನ್ನೊಬ್ಬ ವ್ಯಕ್ತಿಯ ಇರುವಿಕೆಯನ್ನು ಪರೋಕ್ಷವಾಗಿ ತಿಳಿಸುತ್ತದೆ.

ತೆಲುಗುಭಾಷೆಯ ವಿಶೇಷಣ + ಕನ್ನಡದ ನಿರ್ದಿಷ್ಟ = ವ್ಯಕ್ತಿನಾಮ :

| ಅ | ಬ |
|---|---|
| ಪೆದ್ದ ಓಬಯ್ಯ | ಪೆದ್ದ ಪಾಪಕ್ಕ |
| ಪೆದ್ದ ಹನುಮಂತಪ್ಪ | ಪೆದ್ದ ಹನುಮಕ್ಕ |
| ಚಿನ್ನ ಸೂರಯ್ಯ | ಚಿನ್ನ ತಿಮ್ಮಕ್ಕ |
| ಚಿನ್ನ ಕಾಮಯ್ಯ | ಚಿನ್ನ ಓಬಮ್ಮ |

'ಸಣ್ಣ', 'ದೊಡ್ಡ' ಎಂಬ ವಿಶೇಷಣಗಳಿಗೆ ಸಂವಾದಿಯಾಗಿ ಚಿನ್ನ, ಪೆದ್ದಗಳು ಬಂದಿವೆ. ಇವು ಚಿತ್ರದುರ್ಗ ಪರಿಸರದ ತೆಲುಗು ಮಾತೃಭಾಷಿಕರಾಗಿರುವ ಮ್ಯಾಸನಾಯಕರಲ್ಲಿ ಈ ಬಗೆಯ ಹೆಸರುಗಳ ಬಳಕೆಯಲ್ಲಿರುವುದು ತಿಳಿದುಬರುತ್ತದೆ.

ವೃತ್ತಿ / ಜಾತಿ ವಾಚಕಗಳು ನಿರ್ದಿಷ್ಟ ಸ್ಥಾನದಲ್ಲಿ ಬರಬಹುದು :

| | |
|---|---|
| ಗೊಲ್ಲ + ಅಪ್ಪ = ಗೊಲ್ಲಪ್ಪ | ಜಂಗಮ + ಅಯ್ಯ = ಜಂಗಮಯ್ಯ |
| ಗೌಡ + ಅಪ್ಪ = ಗೌಡಪ್ಪ | ಸಿಂಗ್ + ನಾಯ್ಕ = ಸಿಂಗ್ ನಾಯ್ಕ |
| ಶೆಟ್ಟಿ + ಅಯ್ಯ = ಶೆಟ್ಟಯ್ಯ | ರೆಡ್ಡಿ + ನಾಯ್ಕ = ರೆಡ್ಡಿನಾಯ್ಕ |
| ರೆಡ್ಡಿ + ಅಪ್ಪ = ರೆಡ್ಡಪ್ಪ | |

ಮೇಲಿನ ಉದಾಹರಣೆಗಳಲ್ಲಿ ನಿರ್ದಿಷ್ಟಗಳಾಗಿ ಜಾತಿ / ವೃತ್ತಿ ವಾಚಿ ಪದಗಳಿವೆ. ವಾರ್ಗಿಕಗಳಾಗಿ ಸಂಬಂಧವಾಚಕ (ಬಂಧುವಾಚಕ) ಪದಗಳು ಬಂದಿವೆ. ಬಂಧುವಾಚಕಗಳ ಹೊರತಾಗಿ ವಾರ್ಗಿಕ ಸ್ಥಾನದಲ್ಲಿ ಬೇರೆ ಪದಗಳು ಬಂದರೆ ವ್ಯಕ್ತಿನಾಮರೂಪ ರಚನೆಯಾಗಲಾರದು.

ಸಿಂಗ್ + ನಾಯ್ಕ

ರೆಡ್ಡಿ + ನಾಯ್ಕ

ಎಂಬಲ್ಲಿ ಎರಡು ಜಾತಿ / ವೃತ್ತಿಗೆ ಸಂಬಂಧಿಸಿದ ಪದಗಳು ಸೇರಿ ವ್ಯಕ್ತಿನಾಮವಾಗಿರುವುದು ವಿಶೇಷವಾಗಿದೆ. ಹೆಚ್ಚಾಗಿ ಎರಡು ಜಾತಿ / ವೃತ್ತಿ ವಾಚಕ ಪದಗಳು ಸೇರಿ ವ್ಯಕ್ತಿನಾಮವಾಗುವುದು ಅಪರೂಪ. ಅವು ಹೆಚ್ಚಾಗಿ ವಾರ್ಗಿಕವಾಗಿ ಇಲ್ಲವೇ ಗುಣವಿಶೇಷಣಗಳಾಗಿ ಬಳಕೆಯಾಗುವುದೇ ಕಂಡುಬರುತ್ತದೆ.

ಜಂಗಮ + ರೆಡ್ಡಿ = ಜಂಗಮರೆಡ್ಡಿ, ಜಂಗಮ + ಶೆಟ್ಟಿ = ಜಂಗಮಶೆಟ್ಟಿ ಎಂಬಂತಹ ಹೆಸರುಗಳಲ್ಲಿ ಎರಡು ಜಾತಿ / ವೃತ್ತಿಯ ಪದಗಳು ಸೇರಿ ವ್ಯಕ್ತಿನಾಮವಾಗಿರುವುದು ಅಪರೂಪವಾಗಿ ತೋರುತ್ತವೆ.

**ನಿರ್ದಿಷ್ಟ + ವೃತ್ತಿ / ಜಾತಿ ಸೂಚಕ + ವಾರ್ಗಿಕ**

(ಬಸವ + ಸೆಟ್ಟಿ + ಅಪ್ಪ = ಬಸ್ಸೆಟ್ಟೆಪ್ಪ)

ಕನ್ನಡದ ವ್ಯಕ್ತಿನಾಮ ರಚನೆಯಲ್ಲಿ ಇಂತಹ ಉದಾಹರಣೆಗಳು ವಿರಳವಾಗಿವೆ. ಆದರೂ ಅಪವಾದಗಳೆಂಬಂತೆ ಕೆಲವೊಂದು ಹೆಸರುಗಳು ದೊರೆಯುತ್ತವೆ. ವಾರ್ಗಿಕದ ಸ್ಥಾನವನ್ನು ತೊರೆದು ವೃತ್ತಿ, ಜಾತಿಸೂಚಕ ಪ್ರತ್ಯಯಗಳು ನಿರ್ದಿಷ್ಟದೊಂದಿಗೆ ಬರುತ್ತವೆ. ಅಲ್ಲದೇ ವಾರ್ಗಿಕದ ಸ್ಥಾನದಲ್ಲಿ ಸಂಬಂಧವಾಚಕ ಪ್ರತ್ಯಯ ಬರುತ್ತವೆ. ಈ ವೃತ್ತಿ ಜಾತಿಸೂಚಕ ಪದಗಳು ನಿರ್ದಿಷ್ಟಗಳಾಗಿ ಬರದೇ ವಾರ್ಗಿಕಗಳಾಗಿಯೂ ಬರುತ್ತವೆ. ಈ ನಿಯಮ ಕನ್ನಡ ವ್ಯಕ್ತಿನಾಮ ರಚನೆಯ ಜಾಯಮಾನಕ್ಕೆ ಹೊಸತಲ್ಲವಾದರೂ ಇವು ವಿಶೇಷವೆಂಬಂತೆ ತೋರುತ್ತವೆ.

ಬಸವ + ಸೆಟ್ಟಿ + ಅಪ್ಪ = ಬಸ್ಸೆಟ್ಟೆಪ್ಪ ಎಂಬಲ್ಲಿ ನಿರ್ದಿಷ್ಟದ ಕೊನೆಯ 'ವ' ಕಾರ ಲೋಪವಾಗಿ 'ಸ' ಕಾರ ದ್ವಿತ್ವವನ್ನು ಪಡೆದಿದೆ. ಬಳಕೆಯಲ್ಲಿ ಹೆಸರಿನ ಕೊನೆಯಲ್ಲಿರುವ -ಅಪ್ಪ ಗೌಣವಾಗಿ 'ಬಸ್ಸೆಟ್ಟಿ' ಎಂದು ಕರೆಯಲ್ಪಡುತ್ತದೆಂಬುದನ್ನು ಗಮನಿಸಬಹುದು.

ಅಣ್ಣ' ವಾರ್ಗಿಕದ ಮೇಲೆ ಗೌಡ' ಜಾತಿಸೂಚಕ ಪ್ರತ್ಯಯ ಬಂದಾಗ -ಅಣ್ಣ ಸವೆದು -ನ ಕಾರವನ್ನು ಪಡೆಯುತ್ತದೆ. (ನಿರ್ದಿಷ್ಟ + ಸಂಬಂಧವಾಚಿ + ಜಾತಿವಾಚಿ) :

ರಾಮ + ಅಣ್ಣ + ಗೌಡ - ರಾಮಣ್ಣಗೌಡ - ರಾಮನಗೌಡ

ಶಿವ + ಅಣ್ಣ + ಗೌಡ - ಶಿವಣ್ಣಗೌಡ - ಶಿವನಗೌಡ

ಸಿದ್ಧ + ಅಣ್ಣ + ಗೌಡ - ಸಿದ್ದಣ್ಣಗೌಡ - ಸಿದ್ಧನಗೌಡ

ಸುಂಕ + ಅಣ್ಣ + ಗೌಡ - ಸುಂಕಣ್ಣಗೌಡ - ಸುಂಕನಗೌಡ

ಹಂಪ + ಅಣ್ಣ + ಗೌಡ - ಹಂಪಣ್ಣಗೌಡ - ಹಂಪನಗೌಡ

ಬಸವ + ಅಣ್ಣ + ಗೌಡ - ಬಸವಣ್ಣಗೌಡ - ಬಸವನಗೌಡ

ಈ ಉದಾಹರಣೆಗಳಲ್ಲಿ ಅಣ್ಣ > ಣ್ಣ > ಣ > ನ ಪ್ರಕ್ರಿಯೆಯು ನಡೆದಿದೆ. ''ರೇಚಣ, ಚಾವಣ, ಮುದ್ದಣ (ಎ.ಕ - XI, ದಾವಣಗೆರೆ, ೧೪೯, ೧೧೩) ಎಂಬಂತಹ ಹೆಸರುಗಳು ಶಾಸನಗಳಲ್ಲಿ ಉಂಟು. ಕನ್ನಡದ -ಣ ಕ್ಕೆ ಸಂವಾದಿಯಾಗಿ ತೆಲುಗಿನ -ನ (ಉದಾ : ಕೇತನ, ಪೆದ್ದನ, ವೇಮನ) ಎಂಬುದು -ಅನ್ನ (= ಅಣ್ಣ) ದಿಂದ ಬಂದಿದೆಯೆಂಬುದನ್ನು ಎಲ್ಲರೂ ಬಲ್ಲರು. ಕನ್ನಡದ -ಣ ವು - ನ ರೂಪದಲ್ಲಿ ದೊಡ್ಡ ಹೆಸರುಗಳ ಮಧ್ಯೆ ಮಾತ್ರ ಸಿಗುತ್ತದೆ. ಬಸವನಗೌಡ, ಹಂಪನಗೌಡಗಳು ಮೂಲತ: ಬಸವಣ್ಣಗೌಡ ಹಂಪಣ್ಣಗೌಡಗಳೇ ಆಗಿವೆ.'' ದಕ್ಷಿಣ ದ್ರಾವಿಡ ಭಾಷಾ ಪರಿಸರದಲ್ಲಿ ಇದು ಸಾಮಾನ್ಯ ಪ್ರಕ್ರಿಯೆಯಾಗಿರುವಂತೆ ತೋರುತ್ತದೆ ಮತ್ತು ಇದು ಈಗಲೂ ಎಲ್ಲಾ ಕಡೆ ಆಗಿರುವಂತಹ ಬದಲಾವಣೆಯೆಂದು ಹೇಳಲಾಗದು. ದಕ್ಷಿಣ ಕರ್ನಾಟಕದ ಮಂಗಳೂರು, ಚಾಮರಾಜನಗರ ಮುಂತಾದ ಕಡೆ -ಅಣ್ಣ ಮೂಲರೂಪದಲ್ಲಿಯೇ ಬಳಕೆಯಾಗುತ್ತಲಿದೆ. ರಾಮಣ್ಣಗೌಡ ಸಿದ್ದಣ್ಣಗೌಡ ಎಂಬ ಹೆಸರುಗಳಲ್ಲಿ ಯಾವ ಬದಲಾವಣೆಯಾಗದೆ ದಾಖಲೆ, ಬರೆಹ, ಬಳಕೆಯಲ್ಲಿ ಯಥಾವತ್ತಾಗಿರುತ್ತದೆ. ಚಿತ್ರದುರ್ಗ ಪರಿಸರದಲ್ಲಿ ಇದು ಮೇಲಿನ ಬದಲಾವಣೆ ಕ್ರಿಯೆಗೆ ಒಳಪಟ್ಟಿರುವುದು ಕಂಡುಬರುತ್ತದೆ.

'ಣ ಕಾರ ಎಲ್ಲಾ ಸಂದರ್ಭಗಳಲ್ಲಿಯೂ 'ನ' ಕಾರವಾಗಿ ಪರಿವರ್ತನೆಯಾದಂತೆ ತೋರುವುದಿಲ್ಲ. ಉದಾಹರಣೆಗೆ -

ರಾಮ + ಅಣ್ಣ + ಶೆಟ್ಟಿ = ರಾಮಣ್ಣಶೆಟ್ಟಿ

ಶೇಷ + ಅಣ್ಣ + ಶೆಟ್ಟಿ = ಶೇಷಣ್ಣಶೆಟ್ಟಿ

ಭೀಮ + ಅಣ್ಣ + ಯಾದವ್ = ಭೀಮಣ್ಣಯಾದವ್

ತಿಮ್ಮ + ಅಣ್ಣ + ಯಾದವ್ = ತಿಮ್ಮಣ್ಣಯಾದವ್

ಈ ಮೇಲಿನ ವ್ಯಕ್ತಿನಾಮಗಳಲ್ಲಿಯೂ 'ಅಣ್ಣ' ಎಂಬ ಬಂಧುವಾಚಿ ಪ್ರತ್ಯಯ, ನಿರ್ದಿಷ್ಟದ ನಂತರದಲ್ಲಿ ಬಳಕೆಯಾಗಿದ್ದು, ಅದರ ಮುಂದೆ 'ಶೆಟ್ಟಿ', 'ಯಾದವ್' ಎಂಬ ಜಾತಿವಾಚಿ ವಾರ್ಗಿಕಗಳು ಬಳಕೆಯಾಗಿವೆ. ಈ ಹೆಸರುಗಳಲ್ಲಿ 'ಅಣ್ಣ' ಎಂಬುದು ಸವೆದು 'ನ' ಕಾರವನ್ನು ಪಡೆಯುವುದಿಲ್ಲ. ಯಾವುದೇ ವ್ಯತ್ಯಾಸವನ್ನು ಪಡೆಯದೆ ಮೂಲರೂಪದಲ್ಲಿಯೇ ಬಳಕೆಯಾಗುತ್ತದೆ. ಅಂದರೆ ಈ ಬದಲಾವಣೆ ಪ್ರಕ್ರಿಯೆಗೆ ಕೆಲವು ಸೀಮಿತ ವಲಯಗಳಿದ್ದು, ಅಂಥ ಸಂದರ್ಭಗಳಲ್ಲಿ ಮಾತ್ರ ವ್ಯತ್ಯಾಸವಾಗುತ್ತದೆ. ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ, 'ಅಣ್ಣ' ಪದದ ಮುಂದೆ 'ಗೌಡ' ಜಾತಿವಾಚಿ ವಾರ್ಗಿಕ ಬಂದಾಗ ಈ ಬದಲಾವಣೆ ಪ್ರಕ್ರಿಯೆ ಉಂಟಾಗುತ್ತಿದ್ದು, 'ಗೌಡ' ಪದದ ಸ್ಥಾನದಲ್ಲಿ ಬೇರೆ ಯಾವುದೇ ಜಾತಿವಾಚಿ ವಾರ್ಗಿಕ ಬಂದಾಗ ಈ

ಬದಲಾವಣೆ ಸಂಭವಿಸಿದಂತೆ ತೋರುವುದಿಲ್ಲ. ಆದಾಗ್ಯೂ ಕೂಡ ಈ ನಿಯಮಗಳ ನಿರೂಪಣೆಗೆ ಇನ್ನಷ್ಟು ಆಧಾರಗಳ ಅವಶ್ಯಕತೆಯಿದೆ.

ನಿರ್ದಿಷ್ಟದ -ಅ ಕಾರಾಂತ್ಯವು ವಾರ್ಗಿಕದ ಸೇರ್ಪಡೆಯಿಂದ ದೀರ್ಘತ್ವವನ್ನು ಪಡೆಯುತ್ತದೆ.

| ಅ | ಬ |
|---|---|
| ಸುಬ್ಬ + ರೆಡ್ಡಿ = ಸುಬ್ಬಾರೆಡ್ಡಿ | ಸೀತ + ಬಾಯಿ = ಸೀತಾಬಾಯಿ |
| ತಿಪ್ಪ + ರೆಡ್ಡಿ = ತಿಪ್ಪಾರೆಡ್ಡಿ | ಲಕ್ಷ್ಮಿ + ಬಾಯಿ = ಲಕ್ಷ್ಮೀಬಾಯಿ |
| ನಿಂಗ + ರೆಡ್ಡಿ = ನಿಂಗಾರೆಡ್ಡಿ | ಉಷ + ರಾಣಿ = ಉಷಾರಾಣಿ |
| ವೀರ + ರೆಡ್ಡಿ = ವೀರಾರೆಡ್ಡಿ | ಗೀತ + ರೆಡ್ಡಿ = ಗೀತಾರೆಡ್ಡಿ |
| ಕೃಷ್ಣ + ನಾಯ್ಕ = ಕೃಷ್ಣಾನಾಯ್ಕ | |
| ಯಂಕ + ನಾಯ್ಕ = ಯಂಕಾನಾಯ್ಕ | |
| ರಾಮ + ನಾಯ್ಕ = ರಾಮಾನಾಯ್ಕ | |
| ಅಯ್ಯ + ಶಾಸ್ರಿ = ಅಯ್ಯಾಶಾಸ್ತ್ರಿ | |
| ಅಪ್ಪ + ರಾವ್ = ಅಪ್ಪಾರಾವ್ | |

ಈ ಉದಾಹರಣೆಗಳಲ್ಲಿ ನಿರ್ದಿಷ್ಟದ ಕೊನೆಯವರ್ಣ ಸಮಸ್ತ ಪದರಚನೆಯಲ್ಲಿ ದೀರ್ಘವಾಗಿದೆ. ಬಹುಶಃ ಅ' ಕಾರಾಂತ್ಯವೇ ಅದರ ಮೂಲರೂಪವಾಗಿದ್ದು, ಉಚ್ಚಾರಣೆಯಲ್ಲಿ ಅದು ದೀರ್ಘವಾಗಿ ಸೌಲಭ್ಯಾಕಾಂಕ್ಷೆಗೆ ಒಳಗಾಗಿರಬೇಕು. ಅಲ್ಲದೇ ನಿರ್ದಿಷ್ಟಭಾಗದಲ್ಲಿ ಎರಡಕ್ಷರವಿದ್ದಾಗ ಈ ಪ್ರಕ್ರಿಯೆ ನಡೆಯುತ್ತದೆ. ಹೆಚ್ಚು ವರ್ಣಗಳಿದ್ದಾಗ ಈ ಬದಲಾವಣೆ ಪ್ರಕ್ರಿಯೆ ಸಂಭವಿಸುವಂತೆ ತೋರುವುದಿಲ್ಲ. ಅಂತೆಯೇ ನಿರ್ದಿಷ್ಟ ಪದದ ಕೊನೆಯ ಅಕ್ಷರವು -ಅ' ಕಾರಾಂತ್ಯವಲ್ಲದೇ ಬೇರೆ ಸ್ವರಗಳಿಂದ ಅಂತ್ಯವಾಗಿದ್ದರೆ ಈ ದೀರ್ಘೀಕರಣ ಕ್ರಿಯೆ ನಡೆಯದಿರುವುದು ಕುತೂಹಲಕರ ಸಂಗತಿಯಾಗಿದೆ.

## ಕುಲನಾಮಗಳು

ಕುಲನಾಮ' ವ್ಯಕ್ತಿನಾಮಗಳಲ್ಲಿ ಒಂದು ಮುಖ್ಯ ಭಾಗವಾಗಿದೆ. ಒಂದು ಕುಟುಂಬದ ಒಂದು ಸಮುದಾಯದ ವ್ಯಕ್ತಿಯ ಹೆಸರುಗಳಲ್ಲಿ ವಂಶಪಾರಂಪರ್ಯವಾಗಿ ಮುಂದುವರೆಯುತ್ತಾ ಬರುವಂತಹುದೇ ಕುಲನಾಮ. ಕುಲನಾಮ ವ್ಯಕ್ತಿಯ, ಮನೆತನದ ಯಾವುದಾದರೂ ಒಂದು ಅಂಶವನ್ನು ಪ್ರತಿನಿಧಿಸುತ್ತಿರುತ್ತದೆ. ಆ ವ್ಯಕ್ತಿಯ ಕೆಲವು ಸಂಗತಿಗಳನ್ನು ಕುಲನಾಮಗಳು ವರ್ಣಿಸುತ್ತಿರುತ್ತವೆ. ಕಾರಣ ಇವು ವರ್ಣನಾತ್ಮಕ ಹೆಸರುಗಳಾಗಿರುತ್ತವೆ. ಇವು ವ್ಯಕ್ತಿಯ ನಿರ್ದಿಷ್ಟ ಹೆಸರಾಗಿರುವುದಿಲ್ಲ. ಕುಲನಾಮಗಳು ಪ್ರಾಚೀನ ಇತಿಹಾಸವನ್ನೊಂದಿರುತ್ತವೆ. ''ಭಾರತದಲ್ಲಿ ಕುಲನಾಮಗಳು ಬಹಳ ಹಿಂದಿನಿಂದಲೂ ಇದ್ದವು. ಮೌರ್ಯ, ಗುಪ್ತ, ಚಾಲುಕ್ಯ, ಹೊಯ್ಸಳ ಮುಂತಾದ ಸುಪ್ರಸಿದ್ಧ ರಾಜಮನೆತನಗಳ ಹೆಸರುಗಳನ್ನು ಇಲ್ಲಿ ನೆನೆಯಬಹುದು.''[೭]

ಕುಲನಾಮಗಳು ಕರ್ನಾಟಕದ ಭೌಗೋಳಿಕ ವಲಯದಲ್ಲಿಯೇ ಪ್ರಾದೇಶಿಕವಾಗಿ ವಿವಿಧ ಅರ್ಥದಲ್ಲಿ ಬಳಕೆಯಾಗುತ್ತವೆ. ದಕ್ಷಿಣ ಕರ್ನಾಟಕದಲ್ಲಿ ಕುಲನಾಮಗಳು ಗೌಣವಾಗಿ ಉತ್ತರ ಕರ್ನಾಟಕದಲ್ಲಿ ಕುಲನಾಮಗಳು ಅತ್ಯಂತ ಮಹತ್ವವಾಗಿಯೂ ಕಂಡುಬರುತ್ತವೆ. ಕುಲನಾಮಗಳನ್ನು ಕುಟುಂಬನಾಮ, ಅಡ್ಡಹೆಸರು, ಮನೆತನದ ಹೆಸರು ಎಂಬುದಾಗಿಯೂ ಕರೆಯುತ್ತಾರೆ.

ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳಲ್ಲಿ ಕುಲನಾಮ' ಪ್ರಧಾನವಾಗಿ ಬರುವುದಿಲ್ಲ. ಕೆಲವೇ ವ್ಯಕ್ತಿನಾಮಗಳಲ್ಲಿ ಕಾಣಿಸಿಕೊಳ್ಳುತ್ತದೆ. ಕೆಲವು ವ್ಯಕ್ತಿನಾಮಗಳಲ್ಲಿ ಕುಲನಾಮ ಇದ್ದರೂ ಅದು ಕೇವಲ ಬರಹರೂಪದಲ್ಲಿ ಬಳಕೆಯಾಗುತ್ತದೆ. ಆದರೆ ಸಂಬೋಧನಾ ಸಂದರ್ಭದಲ್ಲಿ ಕುಲನಾಮ ಪ್ರಧಾನ ಅಂಶವಾಗಿರುವುದಿಲ್ಲ.

ಮಲೆಯರ ಹನುಮಂತಪ್ಪ ನರಸಿಂಹಮೂರ್ತಿ - ಎಂ.ಎಚ್.ನರಸಿಂಹಮೂರ್ತಿ

ಗಾರೆಮನೆ ರಾಜಶೇಖರಪ್ಪ ಕುಮಾರಸ್ವಾಮಿ - ಜಿ.ಆರ್.ಕುಮಾರಸ್ವಾಮಿ

ಬಳೆಗಾರ ಬಸಪ್ಪ ನಾಗರಾಜ - ಬಿ.ಬಿ.ನಾಗರಾಜ

ಕುಲನಾಮ + ತಂದೆಯಹೆಸರು + ವ್ಯಕ್ತಿನಾಮ ಹೀಗೆ ಅಲ್ಲಲ್ಲಿ ಬಳಕೆಯಾಗುತ್ತದೆ. ಉತ್ತರ ಕರ್ನಾಟಕದಲ್ಲಿ ವ್ಯಕ್ತಿಯ ಹೆಸರಿನೊಂದಿಗೆ ಉತ್ತರ ಪದವಾಗಿ ಬಳಕೆಯಾಗುತ್ತದೆ. ಜಾತಿ, ವೃತ್ತಿ, ಮನೆತನದ ಹೆಸರುಗಳು ವ್ಯಕ್ತಿನಾಮದ ಉತ್ತರ ಪದದಲ್ಲಿ ನಿರ್ದೇಶಿಸಿಕೊಳ್ಳುವುದು ಇತ್ತೀಚಿನ ಒಂದು ಪ್ರವೃತ್ತಿಯಾಗಿಯೂ ಈ ಪರಿಸರದಲ್ಲಿ ಬಳಕೆಯಾಗುತ್ತಿದೆ.

ಉದಾ : ಓಬಯ್ಯ ಹೊಸಮನೆ

ಲಕ್ಷ್ಮಣ ಮಾದಿಗ

ಚಂದ್ರಪ್ಪ ಹೊಲೆಯಾರ್

ಇವುಗಳ ರಾಚನಿಕ ರೂಪ ವ್ಯಕ್ತಿನಾಮ + ಕುಲನಾಮ. ಈ ಬಗೆಯ ಹೆಸರುಗಳು ಒಂದೆರೆಡು ದೊರೆಯುತ್ತವೆ. ಆದರೆ ಈ ಪರಿಸರದಲ್ಲಿ ವ್ಯಕ್ತಿನಾಮವೇ ಮುಖ್ಯವಾಗಿರುತ್ತದೆ.

### ವ್ಯಕ್ತಿನಾಮಗಳ ಮೇಲೆ ತೆಲುಗು ಭಾಷೆಯ ಪ್ರಭಾವ

ಭೌಗೋಳಿಕವಾಗಿ ಚಿತ್ರದುರ್ಗ ಜಿಲ್ಲೆಯ ಆಂಧ್ರದ ಅನಂತಪುರ ಜಿಲ್ಲೆಗೆ ಹೊಂದಿಕೊಂಡಿದೆ. ಈ ಕಾರಣದಿಂದ ಜಿಲ್ಲೆಯ ಮೊಳಕಾಲ್ಮೂರು, ಚಳ್ಳಕೆರೆ, ರಾಂಪುರ ತಾಲೂಕುಗಳು ಬಹುತೇಕ ದ್ವಿಭಾಷಿಕ ಪರಿಸರವನ್ನು ಹೊಂದಿವೆ. ಅಲ್ಲದೇ ಮೊಳಕಾಲ್ಮೂರು, ಚಳ್ಳಕೆರೆ, ರಾಂಪುರಗಳಲ್ಲಿ ಹೆಚ್ಚಾಗಿ ಮ್ಯಾಸನಾಯಕ ಸಮುದಾಯವು ನೆಲೆಸಿದೆ. ಮೂಲತಃ ಇವರು ಆಂಧ್ರದಿಂದ ವಲಸೆ ಬಂದವರಾಗಿರುವುದರಿಂದ ಇವರ ಮಾತೃಭಾಷೆ ತೆಲುಗು. ಇವರ ಸಂಸ್ಕೃತಿಯ ಹಲವಾರು ಅಂಶಗಳು ತೆಲುಗು ಮೂಲದ ಆಚರಣಾ ಪದ್ಧತಿಗೆ ಹೋಲುತ್ತವೆ. ಅಂತೆಯೇ ಇವರು ಇಟ್ಟುಕೊಳ್ಳುವ ವ್ಯಕ್ತಿನಾಮಗಳೂ ಸಹಜವಾಗಿಯೇ ತೆಲುಗು ಭಾಷೆ ಮತ್ತು ಸಂಸ್ಕೃತಿಯ ಭಾಗವನ್ನು ಪ್ರತಿನಿಧಿಸುತ್ತವೆ. ದ್ವಿಭಾಷಾ ಪರಿಸರದಲ್ಲಿ ವಾಸಿಸುವ ಅನೇಕ ತೆಲುಗು ಮೂಲ ಕುಟುಂಬಗಳ ಪ್ರಭಾವವೂ ಸ್ಥಳೀಯ ಕನ್ನಡಿಗರ ವ್ಯಕ್ತಿನಾಮಗಳ ಮೇಲಾಗಿದೆ. ಆಧುನಿಕವಾಗಿಯೂ

ತೆಲುಗು ಮಾಧ್ಯಮಗಳ ಪ್ರೇರಣೆಯೂ ಇಂತಹ ಕಾರಣಗಳಲ್ಲಿ ಒಂದು. ಈ ಭಾಗದಲ್ಲಿ ವಾಸಿಸುವ ಮ್ಯಾಸನಾಯಕರ ಒಳಪಂಗಡಗಳನ್ನು ಗಮನಿಸಿದರೆ ಎಲ್ಲವೂ ತೆಲುಗಿನಲ್ಲಿ ಇರುವುದು ಕಂಡುಬರುತ್ತದೆ. ಇದರಿಂದಾಗಿ ಜಾತಿಯೊಂದಿಗೆ ನಿರ್ದೇಶನಗೊಂಡ ಹೆಸರುಗಳಲ್ಲಿ ತೆಲುಗಿನ ಪ್ರಭಾವವು ಸಹಜವಾಗಿಯೇ ಕಂಡುಬರುತ್ತದೆ. ಇವರು ಪೂಜಿಸುವ ಕೆಲವು ದೈವಗಳೂ ಆಂಧ್ರ ಮೂಲದವು (ವೆಂಕಟೇಶ, ತಿರುಪತಿ ಇತ್ಯಾದಿ). ಇದಿರಿಂದಾಗಿ ತಮ್ಮ ದೈವಮೂಲದ ಹೆಸರುಗಳಲ್ಲಿ ಈ ಬಗೆಯ ಪ್ರಭಾವ ಕಂಡುಬರುತ್ತದೆ.

ಆಂಧ್ರಪ್ರದೇಶ ಮತ್ತು ಕರ್ನಾಟಕ ನೆರೆಯ ರಾಜ್ಯಗಳಾಗಿದ್ದು, ಭಾಷೆಯ ದೃಷ್ಟಿಯಿಂದ ಮಹತ್ತರವಾದ ವ್ಯತ್ಯಾಸವಿಲ್ಲ. ಅಲ್ಲದೇ ಸಂಸ್ಕೃತಿ, ದೈವ, ಆಚರಣೆಯಲ್ಲಿ ಅತ್ಯಂತ ಭಿನ್ನತೆಯನ್ನು ಗುರುತಿಸಲಾಗದು. ಈ ಕಾರಣದಿಂದ ತೆಲುಗು ಮತ್ತು ಕನ್ನಡ ಪರಿಸರದ ವ್ಯಕ್ತಿನಾಮಗಳಲ್ಲಿ ವ್ಯಾಪಕವಾದ ವೈವಿಧ್ಯತೆಯು ತೋರಿಬರಲಾರದು. ಬದಲಾಗಿ ವ್ಯಕ್ತಿನಾಮ ರಚನೆಯಲ್ಲಿ ಬರುವ ವಿಶೇಷಣ, ಬಂಧುವಾಚಿ, ವಾರ್ಗಿಕ ಮುಂತಾದ ಕೆಲವೇ ಅಂಶಗಳಿಂದ ತೆಲುಗು ಭಾಷೆಯ ಪ್ರಭಾವವನ್ನು ಗುರುತಿಸಲು ಸಾಧ್ಯವಿದೆ. ಅಂತಹ ಕೆಲವು ಮಾದರಿಯನ್ನು ಇಲ್ಲಿ ಗಮನಿಸಲಾಗಿದೆ.

| **ಸಂಪೂರ್ಣ ತೆಲುಗು ಹೆಸರುಗಳು** | **ಕನ್ನಡದ ಅರ್ಥ** |
|---|---|
| ಆವುಲಯ್ಯ | ಆವುಲು + ಅಯ್ಯ = ದನ, ಪಶು |
| ಗೊಡ್ಲಯ್ಯ | ಗೊಡ್ಲು + ಅಯ್ಯ = ಕುರಿ, ಗೊರ್ರೆ (ತೆಲುಗು) |
| ಮ್ಯಾಕಲಯ್ಯ | ಮ್ಯಾಕಲ + ಅಯ್ಯ = ಆಡು, ಮೇಕೆ |
| ನಲ್ಲಣ್ಣ | ನಲ್ಲ + ಅಣ್ಣ = ಕರಿ, ಕಪ್ಪು |
| ಚಿನ್ನಯ್ಯ | ಚಿನ್ನ + ಅಯ್ಯ = ಚಿಕ್ಕ, ಸಣ್ಣ |
| ಪೆದ್ದಕ್ಕ | ಪೆದ್ದ + ಅಕ್ಕ = ದೊಡ್ಡ |
| ಯರ್ರಮ್ಮ | ಯರ್ರ + ಅಮ್ಮ = ಕೆಂಪು, ಕೆಂಚಿ |

ಈ ಮಾದರಿಯಲ್ಲಿರುವ ಅಯ್ಯ, ಅಣ್ಣ, ಅಕ್ಕ, ಅಮ್ಮ ಎಂಬ ವಾರ್ಗಿಕ ಪದಗಳು ಕನ್ನಡದಲ್ಲಿಯೂ ಯಥಾವತ್ ಬಳಕೆಯಾಗುತ್ತವೆ.

**ಕನ್ನಡದ ನಿರ್ದಿಷ್ಟ + ತೆಲುಗಿನ ವಾರ್ಗಿಕ :**

ಸಣ್ಣ + ಮುತ್ತಿ = ಸಣ್ಣಮುತ್ತಿ

ದೊಡ್ಡ + ಮುತ್ತಿ = ದೊಡ್ಡಮುತ್ತಿ

ದೊರೆ + ಮುತ್ತಿ = ದೊರಮುತ್ತಿ

ಈ ಮಾದರಿಯಲ್ಲಿ -ಮುತ್ತಿ' ಎಂಬ ಪದ ತೆಲುಗಿನ ರಚನೆ. ಇದಕ್ಕೆ ಸಂವಾದಿ ಕನ್ನಡ ಪದ -ಅಜ್ಜ. ಸೂಕ್ಷ್ಮವಾಗಿ ಗಮನಿಸಿದರೆ ಕನ್ನಡದ ವಿಶೇಷಣದೊಂದಿಗೆ ಬಳಕೆಯಾದ -ಮುತ್ತಿ ನಿರ್ದಿಷ್ಟದ ಭಾಗವಾಗಿಯೇ ಕಂಡುಬರುತ್ತದೆ.

ತೆಲುಗು ವಿಶೇಷಣ ಪದ + ಕನ್ನಡ ನಿರ್ದಿಷ್ಟ :

ಅ

ಕೊಂಡನ ಮುತ್ತಯ್ಯ - ಕೊಂಡನ = ಬೆಟ್ಟದ

ಗಂಪುಲ ಓಬಯ್ಯ - ಗಂಪುಲ = ಪುಟ್ಟಿ, ಬುಟ್ಟಿಗಳ

ಜೊನ್ನಲ ಪಾಲಯ್ಯ - ಜೊನ್ನ = ಜೋಳ

ಗುಡುಸ ಬೋಸಯ್ಯ - ಗುಡುಸ = ಗುಡಿಸಲು

ಸೌಟಿಪಾಪಯ್ಯ - ಸೌಟ (ಚವುಟಿ) = ಕಿವುಡ

ಪತ್ತಿ ಬಸಪ್ಪ - ಪತ್ತಿ = ಹತ್ತಿ

ಬ

ಜಿಂಕ್ಲ ಓಂಕಾರಮ್ಮ - ಜಿಂಕ್ಲ = ಜಿಂಕೆಗಳು

ಕುಕ್ಕಲ ಪಾಪಮ್ಮ - ಕುಕ್ಕ = ನಾಯಿ

ಪುರಸ್ಸೇ ತಿಪ್ಪಕ್ಕ - ಪುರಸ್ಸೆ = ರೊಡ್ಡ, ಎಡಗೈ

ಜಡ್ಲ ಓಬಮ್ಮ - ಜಡಲ = ಜಡೆಗಳು

ಮೇಲಿನ ಅ, ಬ. ಮಾದರಿಯ ಹೆಸರುಗಳು ಚಿತ್ರದುರ್ಗ ಪರಿಸರದಲ್ಲಿನ ನಾಯಕ ಸಮುದಾಯದವರ ಹೆಸರುಗಳಾಗಿವೆ. ಇಲ್ಲಿ ಕನ್ನಡ ನಿರ್ದಿಷ್ಟಗಳೆಂದು ಗುರುತಿಸಿರುವ ಪದಗಳು, ತೆಲುಗಿನ ನಿರ್ದಿಷ್ಟ ಪದಗಳೂ ಆಗಿರಬಹುದು. ಚಿತ್ರದುರ್ಗ ಕನ್ನಡ ಪರಿಸರವಾಗಿರುವುದರಿಂದ ಈ ರಚನೆಗಳನ್ನು ಕನ್ನಡ ನಿರ್ದಿಷ್ಟಗಳೆಂದು ಪರಿಗಣಿಸಲಾಗಿದೆ. ಆದರೆ ವಾರ್ಗಿಕಗಳು ಕನ್ನಡದವೆಂದು ಪರಿಗಣಿಸಿಲ್ಲ.

ದ್ವಿಭಾಷಿಕ ಪರಿಸರದ (ರಾಂಪುರ, ಮೊಳಕಾಲ್ಮೂರು)ಲ್ಲಿನ ಕೆಲವು ತೆಲುಗು ವ್ಯಕ್ತಿನಾಮಗಳ ರಾಚನಿಕ ಸ್ವರೂಪ

| | | ಕನ್ನಡದ ರಚನೆ |
|---|---|---|
| ಅ. | ವೆಂಕಟೇಶ/ಲು | ವೆಂಕಟೇಶ |
| | ರಾಮು/ಡು | ರಾಮ, ರಾಮಣ್ಣ |
| | ಸುಬ್ಬಿಗಾ/ಡು | ಸುಬ್ಬಣ್ಣ |
| | ರಾಮಲಿಂ/ಗಂ | ರಾಮಲಿಂಗ |
| | ಪ್ರಕಾ/ಶಂ | ಪ್ರಕಾಶ |
| ಬ. | ರಾಮು/ಲ/ಮ್ಮ | ರಾಮಮ್ಮ |
| | ವರಾ/ಲು | ವರಲಕ್ಷ್ಮಿ |
| | ಸುಬ್ಬು/ಲಕ್ಷ್ಮಿ | ಸುಬ್ಬಲಕ್ಷ್ಮಿ |

ಈ ವ್ಯಕ್ತಿನಾಮ ರಚನೆಗಳು ಚಿತ್ರದುರ್ಗ ಪರಿಸರದಲ್ಲಿ ವಾಸಿಸುವ ಕೆಲವು ತೆಲುಗು ಮೂಲದ ಸಮುದಾಯಗಳಲ್ಲಿ ರೂಢಿಯಲ್ಲಿರುವ ವ್ಯಕ್ತಿನಾಮಗಳಾಗಿವೆ. ಈ ಹೆಸರುಗಳ ರಚನೆಯ ಕೊನೆಗೆ -ಲು, -ಡು, -ಅಂ, ಮುಂತಾದ ಪ್ರತ್ಯಯಾಕ್ಷರಗಳು ಬಂದಿವೆ. ಈ ರೀತಿಯ ರಚನೆಗಳು ಕನ್ನಡ ಪರಿಸರದಲ್ಲಿ ಕಂಡು ಬರುವುದಿಲ್ಲ.

ಜಾತಿ, ಅಂತಸ್ತು, ಅಧಿಕಾರ, ವರ್ಗಗಳನ್ನು ವ್ಯಕ್ತಗೊಳಿಸುವ ಗೌರವ ಸೂಚಕ ಪದ ಪ್ರತ್ಯಯಗಳು ಕನ್ನಡದ ವ್ಯಕ್ತಿನಾಮಗಳಿಗೆ (ಅಂಕಿತನಾಮಗಳಿಗೆ) ಅಂಟಿಸುವ ಸಂಪ್ರದಾಯ, ಕನ್ನಡಕ್ಕೆ ಬಹಳ ವಿಶಿಷ್ಟವಾದುದು. ವ್ಯಕ್ತಿಯ ಸ್ಥಾನಮಾನಕ್ಕೆ ಅನುಗುಣವಾಗಿ ಈ ಗೌರವಸೂಚಕ ಪದಗಳು ಬಳಕೆಯಾಗುತ್ತವೆ. ಕೆಲವು ನಾಮ

ನಿರ್ದಿಷ್ಟ ಹಾಗೂ ವಾರ್ಗಿಕಗಳು. ಜಾತಿ, ವರ್ಗಗಳನ್ನು ಪ್ರತಿನಿಧಿಸುವಂತೆ, ಅಂಥದೇ ಭಿನ್ನ ವರ್ಗಗಳನ್ನು ಈ ಪದ ಪ್ರಯೋಗಗಳಿಂದ ತಿಳಿಯಬಹುದು. ಆದರೆ, ವಾರ್ಗಿಕ, ನಿರ್ದಿಷ್ಟದಷ್ಟು ಖಚಿತವಾಗಿ ಸಮಾಜದ ಬೇರೆ ವ್ಯವಸ್ಥೆಗಳನ್ನು ಗೌರವಸೂಚಕಗಳು ಗುರುತಿಸುವುದಿಲ್ಲವಾದರೂ, ಸೋದಾಹರಣವಾಗಿ ಎಂದಷ್ಟೇ ಈ ಮಾತನ್ನು ಹೇಳಬಹುದು. ಯಾವ ವರ್ಗದ ವ್ಯಕ್ತಿನಾಮಗಳಿಗೆ ಯಾವ ಗೌರವ ಸೂಚಕಗಳು ಹತ್ತುತ್ತವೆ. ಯಾವುದು ಹತ್ತುವುದಿಲ್ಲ. ವ್ಯಕ್ತಿ ನಾಮದೊಂದಿಗೆ ಈ ಪ್ರತ್ಯಯಗಳು ಬಂದಾಗ ಅದರ ರಾಚನಿಕ ಸ್ವರೂಪ ಯಾವ ಬಗೆಯದಾಗಿರುತ್ತದೆ ಎಂಬುದನ್ನು ಕೆಲವು ಉದಾಹರಣೆಗಳ ಮೂಲಕ ಇಲ್ಲಿ ಚರ್ಚಿಸಲಾಗುವುದು.

**ಮಠಾಧಿಪತಿಗಳ ವ್ಯಕ್ತಿ ನಾಮ ರಚನೆಯ ಸ್ವರೂಪ**

ಕರ್ನಾಟಕದಲ್ಲಿ ವೀರಶೈವ ಮಠಗಳಿಗೆ, ಶೈಕ್ಷಣಿಕವಾದ, ಸಾಂಸ್ಕೃತಿಕವಾದ ಒಂದು ಪರಂಪರೆ ಇರುವಂತೆ, ಧಾರ್ಮಿಕ ಆಶೋತ್ತರಗಳೂ ಇವೆ. ಈ ಮಠಗಳ ಮಠಾಧೀಶರನ್ನು ದೇವರೆಂದು, ದೈವಸ್ವರೂಪಿ ಎಂದು ಈ ಸಮಾಜ ಭಾವಿಸುತ್ತದೆ. ಈ ನಂಬಿಕೆಯ ಹಿನ್ನಲೆಯಲ್ಲಿ ಅವರ ಹೆಸರುಗಳನ್ನು ಸಾಮಾನ್ಯರ ಹೆಸರುಗಳ ಹಾಗೆ ಬಳಸದೆ, ಹೆಚ್ಚು ಮರ್ಯಾದೆ ತೋರಿಸಲು ಗೌರವಸೂಚಕ ಪ್ರತ್ಯಯಗಳನ್ನು ಬಳಸುವುದು ಸಂಪ್ರದಾಯ. ಕೆಲವು ಹೆಸರುಗಳನ್ನು ಇಲ್ಲಿ ಗಮನಿಸಬಹುದು. ಉದಾಹರಣೆಗೆ,

ಶ್ರೀ ಶ್ರೀ ಶ್ರೀ ಮನ್.ನಿ.ಪ್ರ.ಸ್ವ.ಜ. ಶಿವಮೂರ್ತಿ ಶರಣರು
ಶ್ರೀ ಶ್ರೀ ಶ್ರೀ ಮ.ನಿ.ಪ್ರ.ಸ್ವ.ಜ. ಸಂಗನಬಸವ ಮಹಾಸ್ವಾಮಿಗಳು
ಶ್ರೀ ಶ್ರೀ ಶ್ರೀ ಮ.ನಿ.ಪ್ರ.ಸ್ವ.ಜ. ಶರಣಬಸವ ಅಪ್ಪಗಳು
ಶ್ರೀ ಶ್ರೀ ಶ್ರೀ ಮ.ನಿ.ಪ್ರ.ಸ್ವ.ಜ. ಪುಣ್ಯಾನಂದಪುರಿ ಸ್ವಾಮಿಗಳು

(ಮ = ಮನ್ (< ಮಾನ್ಯ) = ಗೌರವಸ್ಥ, ನಿ - ನಿರಂಜನ = ಪರಮಾತ್ಮ, ಪ್ರ = ಪ್ರಣವ = ಓಂಕಾರ ಮಂತ್ರ, ಸ್ವ - ಸ್ವರೂಪ = ನಿಜರೂಪ, ಜ - ಜಗದ್ಗುರ = ಲೋಕಕ್ಕೆಲ್ಲ ಪೂಜ್ಯನಾದವನು)

'ಶ್ರೀ' ಎಂಬುದಕ್ಕೆ ಬೇರೆ ಬೇರೆ ಅರ್ಥಗಳಿದ್ದರೂ, ವ್ಯಕ್ತಿ ಹೆಸರಿನ ಹಿಂದೆ ಗೌರವಸೂಚಕವಾಗಿ ಬಳಸಲ್ಪಡುತ್ತದೆ. ಮೇಲಿನ ಹೆಸರುಗಳನ್ನು ಗಮನಿಸಿ, ಪ್ರತಿಯೊಂದು ಹೆಸರಿಗೂ ಮೂರು 'ಶ್ರೀ'ಗಳು ಅಂಟಿವೆ. ಈ ಮೂರು 'ಶ್ರೀ' ಗಳನ್ನು ಬಳಸಿರುವುದರ ಆಶಯ, ಹೆಚ್ಚು ಗೌರವ ಸೂಚಿಸುವ ಉದ್ದೇಶವೇ ಆಗಿದೆ. ಮಾನ್ಯ 'ನಿರಂಜನ ಪ್ರಣವ ಸ್ವರೂಪ ಜಗದ್ಗುರು' ಎನ್ನುವುದನ್ನು ವಿಸ್ತರಿಸಿ ಬರೆಯದೆ, ಆದ್ಯಕ್ಷರಗಳ ಮೂಲಕ ಗುರುತಿಸುವುದು ಕ್ರಮವಾಗಿದೆ. ಬಳಕೆಯಲ್ಲಿ ಬಹುತೇಕವಾಗಿ ವಿಸ್ತರಿಸಿಯೇ ಹೇಳಲಾಗುತ್ತದೆ. ಈ ಹೆಸರುಗಳ ಉತ್ತರ ಭಾಗದಲ್ಲಿ 'ಶರಣರು', ಸ್ವಾಮಿಗಳು, ಮಹಾಸ್ವಾಮಿಗಳು, ಅಪ್ಪಗಳು ಎಂಬ ವಾರ್ಗಿಗಳು ಇವೆ. 'ಮಹಾ', ಎಂಬ ವಿಶೇಷಣ (ಗುಣವಾಚಕ)ವೂ, ರು, ಮತ್ತು 'ಗಳು' ಎಂಬ ಬಹುವಚನ ಪ್ರತ್ಯಯಗಳು ಈ ವಾರ್ಗಿಕಗಳಲ್ಲಿವೆ. ಹೆಚ್ಚು ಗೌರವಸೂಚಿಸಲು ಈ ವಿಶೇಷಣ ಹಾಗೂ ಬಹುವಚನ ಪ್ರತ್ಯಯಗಳು ಬಂದಿವೆ. ಮಠಗಳ ಮೂಲಪುರುಷರ ಹೆಸರನ್ನು ಬಳಸುವಾಗ 'ಪರಮತಪಸ್ವಿ', ಶೂನ್ಯ ಸಿಂಹಾಸನಾಧೀಶ, ಶೂನ್ಯ ಸಿಂಹಾಸನಾಧಿಪತಿ, ಕಾರಣಿಕಪುರುಷ, ಮಹಾಯೋಗಿ ಇತ್ಯಾದಿ ಗೌರವ ವಿಶೇಷಣಗಳು ಪೂರ್ವಪ್ರತ್ಯಯ ರೂಪದಲ್ಲಿ ಬಳಸುತ್ತಾರೆ. ಕರ್ನಾಟಕದ ಎಲ್ಲಾ ಮಠಾಧೀಶರ ವ್ಯಕ್ತಿನಾಮಗಳಿಗೆಲ್ಲ ಈ ಎಲ್ಲಾ ವಿಶೇಷಣಗಳು

ಹತ್ತುತ್ತವೆ ಎಂದಲ್ಲ, `ಶೂನ್ಯಪೀಠ' ಪರಂಪರೆಯ ವ್ಯಕ್ತಿಗಳಿಗೆ ಕಡ್ಡಾಯವಾಗಿ ಬರುತ್ತವೆ. ಮುಂದೆ ಸಾಮಾಜಿಕ ಅಧ್ಯಯನದ ಸಂದರ್ಭದಲ್ಲಿ ಹೆಚ್ಚು ವಿವರವಾಗಿ ಚರ್ಚಿಸಲಾಗುವುದು.

ವ್ಯಕ್ತಿನಾಮಗಳಲ್ಲಿ `ಶ್ರೀ' ಪದದ ಸ್ಥಾನ ಅತ್ಯಂತ ಮಹತ್ವದ್ದಾಗಿದೆ. 'ಶ್ರೀ' ಬಳಕೆಯ ಕೆಲವು ಆಯಾಮಗಳನ್ನು ಇಲ್ಲಿ ಗಮನಿಸಬಹುದು.

| 'ಅ' | 'ಬ' | 'ಕ' |
|---|---|---|
| ಪುರುಷ ಹೆಸರು | ಸ್ತ್ರೀ ಹೆಸರು | ಸ್ತ್ರೀ ಹೆಸರು |
| ಶ್ರೀಕಾಂತ | ಶ್ರೀದೇವಿ | ಪದ್ಮಶ್ರೀ |
| ಶ್ರೀನಿವಾಸ | ಶ್ರೀಲಕ್ಷ್ಮಿ | ರೂಪಶ್ರೀ |
| ಶ್ರೀಪತಿ | ಶ್ರೀಮತಿ | ಜಯಶ್ರೀ |
| ಶ್ರೀಧರ | ಶ್ರೀಲತ | ವಾಣಿಶ್ರೀ |

'ಅ', 'ಬ', 'ಕ' ಪಟ್ಟಿಯಲ್ಲಿನ ಸ್ತ್ರೀ, ಪುರುಷ ಹೆಸರುಗಳನ್ನು ಗಮನಿಸಿದಾಗ ಎಲ್ಲಾ ಹೆಸರುಗಳಲ್ಲೂ 'ಶ್ರೀ' ಪ್ರತ್ಯಯವಿದೆ. ಹಿಂದೆ ಮಠಾಧಿಪತಿಗಳ ವ್ಯಕ್ತಿನಾಮಗಳನ್ನು ಪರಿಶೀಲಿಸುವ ಸಂದರ್ಭದಲ್ಲಿ 'ಶ್ರೀ' ಎಂಬುದು ವ್ಯಕ್ತಿನಾಮಗಳ ಹಿಂದೆ ಗೌರವಸೂಚಕ ಪ್ರತ್ಯಯವಾಗಿ ಬಳಕೆಯಾಗಿದೆ. ಮರ್ಯಾದೆ ಸೂಚಕವಾಗಿ 'ಶ್ರೀ' ಬರುವಾಗ ಅದು ವ್ಯಕ್ತಿನಾಮದ ಭಾಗವಾಗಿರದೆ, ಬೇರೊಂದು ರೂಪವೇ ಆಗಿರುತ್ತದೆ. ಅಂಥ ಸ್ಥಾನದಲ್ಲಿ ಮಾತ್ರ ಗೌರವಾರ್ಥವನ್ನು ನೀಡುತ್ತದೆ. ಮೇಲಿನ ಮೂರು ಪಟ್ಟಿಯ ಹೆಸರುಗಳಲ್ಲಿ, ಮೊದಲೆರಡು ಪಟ್ಟಿಯಲ್ಲಿ 'ಶ್ರೀ' ಪ್ರಥಮಾಕ್ಷರವಾಗಿಯೂ, ಕೊನೆಯ ಪಟ್ಟಿಯಲ್ಲಿ ಹೆಸರಿನ ಉತ್ತರ ಭಾಗದಲ್ಲಿ ಬಂದಿದೆ. ಈ ಎಲ್ಲಾ ಹೆಸರುಗಳಲ್ಲಿ ಯಾವುದೇ ಸ್ಥಾನದಲ್ಲಿ 'ಶ್ರೀ' ಇದ್ದಾಗಲೂ, ಅದು ಗೌರವಸೂಚಕ ಪ್ರತ್ಯಯವಾಗಿರದೆ, ವ್ಯಕ್ತಿನಾಮದ ಭಾಗವಾಗಿಯೇ ಬಳಕೆಯಾಗಿರುವುದನ್ನು ಗಮನಿಸಬೇಕು. 'ಶ್ರೀ' ಎಂಬುದು ವ್ಯಕ್ತಿನಾಮಗಳಲ್ಲಿ ಎಲ್ಲಾ ಸಮಯಕ್ಕೂ ಗೌರವ ಪ್ರತ್ಯಯವಾಗಿ ಬರದೆ, ವ್ಯಕ್ತಿನಾಮದೊಂದಿಗೆ ಅದು ಹೊಂದಿರುವ ಸಂಬಂಧದ ಹಿನ್ನಲೆಯಲ್ಲಿ ಅದರ ಅರ್ಥ ನಿರ್ಧರಿಸಲ್ಪಡುತ್ತದೆ.

### ಮದುವೆಯ ಸಂದರ್ಭದಲ್ಲಿ ವ್ಯಕ್ತಿನಾಮಗಳ ರಚನೆಯ ಸ್ವರೂಪ

ವ್ಯಕ್ತಿನಾಮದೊಂದಿಗೆ ಈ ಪದಗಳ ಬಳಕೆ ಒಂದು ನಿಶ್ಚಿತ ಕಾಲವನ್ನಾಧರಿಸಿರುತ್ತದೆ. ಅಷ್ಟೇ ನಿರಂತರವಾದ ಸಂಬಂಧವನ್ನು ಹೊಂದಿರುವುದಿಲ್ಲ. ಉದಾಹರಣೆಗೆ

| ಪುರುಷ ಹೆಸರು | ಸ್ತ್ರೀ ಹೆಸರು |
|---|---|
| ಚಿ|| ರಾ|| ಪಾಪಣ್ಣ | ಚಿ|| ಕುಂ|| ಸೌ|| ಪ್ರೀತಿ |
| ಚಿ|| ರಾ|| ಓಬಣ್ಣ | ಚಿ|| ಕುಂ|| ಸೌ|| ಕರಿಬಸಮ್ಮ |
| ಚಿ|| ರಾ|| ದೇವೇಂದ್ರಪ್ಪ | ಚಿ|| ಕುಂ|| ಸೌ|| ಸುಪ್ರಿಯ |
| ಚಿ|| ರಾ|| ಶಿವನಗೌಡ | ಚಿ|| ಕುಂ|| ಸೌ|| ರಾಧಾಕುಮಾರಿ |

ಲಗ್ನಪತ್ರಿಕೆಗಳಲ್ಲಿ ವಧು-ವರರ ಹೆಸರಿನ ಮೊದಲಿಗೆ ಶ್ರೀ ಎಂದಾಗಲೀ, ಕುಮಾರಿ ಎಂದಾಗಲೀ, ಬಳಸದೆ, ಪುರುಷ ಹೆಸರಿನ ಮೊದಲಿಗೆ 'ಚಿರಂಜೀವಿ ರಾಜಶ್ರೀ' ಎಂದೂ, 'ಚಿರಂಜೀವಿ ಕುಂಕುಮ ಸೌಭಾಗ್ಯವತಿ' ಎಂದು ಸ್ತ್ರೀ ನಾಮಗಳ ಆರಂಭದಲ್ಲಿ ಬಳಸುವುದು ವಾಡಿಕೆ. ಲಗ್ನಪತ್ರಿಕೆಗಳಲ್ಲಿ ಈ ಗೌರವಸೂಚಕ ಪದಗಳನ್ನು ವಿಸ್ತರಿಸಿ ಬರೆಯದೆ, ಆದ್ಯಕ್ಷರಗಳನ್ನು ಮಾತ್ರ ಬಳಸುವುದು ರೂಢಿಯಲ್ಲಿರುವ ಪದ್ಧತಿಯಾಗಿದೆ. ಈ ಹೆಸರುಗಳ ರಚನೆಯ ವಿನ್ಯಾಸವನ್ನು ಈ ರೀತಿ ಹೇಳಬಹುದು. ಗೌರವಸೂಚಿ + ಗೌರವಸೂಚಿ + ವ್ಯಕ್ತಿನಾಮ (ನಿರ್ದಿಷ್ಟ+ವಾರ್ಗಿಕ), ಗೌರವಸೂಚಿ + ಗೌರವಸೂಚಿ + ಗೌರವಸೂಚಿ + ವ್ಯಕ್ತಿನಾಮ. ಹೆಚ್ಚು ಗೌರವ ಸೂಚಿಸುವ ಸಲುವಾಗಿ ಒಂದಕ್ಕಿಂತ ಹೆಚ್ಚು ಗೌರವಸೂಚಕಗಳನ್ನು ಬಳಸುವ ಕ್ರಮ ಬೆಳೆದು ಬಂದಿರಬೇಕು.

ಚಿ|| ರಾ ಮತ್ತು ಚಿ|| ಕುಂ|| ಸೌ|| ಎಂಬ ಪದಗಳ ಹಿಂದೆ ಕೆಲವು ಶುಭ ಸೂಚನೆಗಳಿರುತ್ತವೆಂದು ಸಮುದಾಯಗಳು ನಂಬಿಕೊಂಡು ಬಂದಿವೆ. ಈ ಕಾರಣದಿಂದ ಕೆಲವು ಸಮಾರಂಭಗಳಲ್ಲಿ ಈ ಬಗೆಯ ಗೌರವವಾಚಿ ಪದಗಳನ್ನು ಬಳಸುವ ರೂಢಿಯು ಬೆಳೆದು ಬಂದಿದೆ. ಮುಂದೆ ಸಾಮಾಜಿಕ ಅಧ್ಯಯನದಲ್ಲಿ ವಿಸ್ತೃತವಾಗಿ ಈ ಬಗ್ಗೆ ಚರ್ಚಿಸಲಾಗುವುದು.

**ಗಣ್ಯವ್ಯಕ್ತಿಗಳ ಹೆಸರುಗಳಿಗೆ ಅಂಟುವ ಗೌರವಸೂಚಕ ಪದಗಳು**

ಭಾರತದಂತಹ ಸಂಪ್ರದಾಯಸ್ಥ ಪರಿಸರದಲ್ಲಿ, ಮಾನವೀಯ ಸಂಬಂಧಗಳು ಅತ್ಯಂತ ಗೌರವದಿಂದ ಕೂಡಿವೆ. ಪ್ರತಿಯೊಬ್ಬ ವ್ಯಕ್ತಿಗೂ ಕೂಡ ತನ್ನ ಸಾಮಾಜಿಕ ನೆಲೆಯಲ್ಲಿ ತಕ್ಕ ಸ್ಥಾನಮಾನಗಳು ಸಿಗುತ್ತವೆ. ಇಂಥ ಪರಿಸರದಲ್ಲಿ ಸಮಾಜದ ಗಣ್ಯ ವ್ಯಕ್ತಿಗಳ ಹೆಸರುಗಳನ್ನು ಬಳಸುವಾಗ, ಕೆಲವು ಗೌರವ ಪ್ರತ್ಯಯಗಳನ್ನು ಸೇರಿಸುವಂಥದ್ದು ರೂಢಿಯಲ್ಲಿದೆ. ಉದಾಹರಣೆಗೆ ಕೆಲವು ಹೆಸರುಗಳನ್ನು ಗಮನಿಸಬಹುದು.

**ಪುರುಷ ಹೆಸರು**

ಶ್ರೀಮಾನ್ (ಶ್ರೀಮಾನ್ಯ) ತಿಪ್ಪೇಸ್ವಾಮಿ

ಮಾನ್ಯಶ್ರೀ ಗೋಪಾಲಕೃಷ್ಣ ನಾಯಕ

ಸನ್ಮಾನ್ಯ ಶ್ರೀ ಬೋರಯ್ಯ ..... ಇತ್ಯಾದಿ

**ಸ್ತ್ರೀ ಹೆಸರುಗಳಲ್ಲಿ**

ಮಾತೃಶ್ರೀ (ಮಾತೋಶ್ರೀ) (ಗಂಗಮ್ಮ)

ಸೌಭಾಗ್ಯವತಿ (ದುರುಗಮ್ಮ)

ಶ್ರೀಮತಿ (ಎಲ್ಲಮ್ಮ) ...ಇತ್ಯಾದಿ

ಮೇಲಿನ ಪುರುಷ ಮತ್ತು ಸ್ತ್ರೀ ವ್ಯಕ್ತಿನಾಮಗಳನ್ನು ಗಮನಿಸಿದಾಗ ಅದರ ಪೂರ್ವದಲ್ಲಿ ಗೌರವಸೂಚಿ ಪ್ರತ್ಯಯ ಬಂದಿದೆ. ಇದನ್ನು ಅನುಸರಿಸಿ ಈ ಹೆಸರುಗಳ ರಚನೆಯನ್ನು ಗೌರವಸೂಚಿ ಪ್ರತ್ಯಯ +ವ್ಯಕ್ತಿನಾಮ ಎಂದು ಗುರುತಿಸಬಹುದು. ಕಾಲದ ಗುಣಧರ್ಮ ಬದಲಾದಂತೆ ಇತ್ತೀಚೆಗೆ ಗೌರವಸೂಚಕಗಳ ಬಳಕೆ ಕಡಿಮೆಯಾಗುತ್ತಿದೆ. ಲೌಕಿಕರ ವಿಷಯದಲ್ಲಿ ಗೌರವಸೂಚಕ ಪದಗಳು ವ್ಯಕ್ತಿನಾಮದ ಪೂರ್ವದಲ್ಲಿ ಬರುವುದೇ

ಹೆಚ್ಚು. ಅಪರೂಪವೆಂಬಂತೆ ವಾರ್ಗಿಕದ ಸ್ಥಾನದಲ್ಲೂ ಗೌರವ ಪ್ರತ್ಯಯವನ್ನು ಬಳಸಲಾಗುತ್ತದೆ. ಸೋನಿಯಾಜೀ, ಕೃಷ್ಣಾಜೀ ಹೆಸರುಗಳಲ್ಲಿ 'ಜೀ' ಎಂಬುದು ಗೌರವಸೂಚಕ ಪ್ರತ್ಯಯವಾಗಿ ಬಂದಿರುವುದನ್ನು ನೋಡಬಹುದು.

**ಸಾಮಾನ್ಯರ ಹೆಸರುಗಳಿಗೆ ಅಂಟುವ ಗೌರವ ಪ್ರತ್ಯಯಗಳು :**

ಜನಸಾಮಾನ್ಯರ ವಿಷಯದಲ್ಲೂ ಸಹ ಗೌರವ ಸೂಚಕ ಪದಗಳು ಬಳಕೆಯಾಗುವುದುಂಟು. ಮಠಾಧೀಶರ, ಗಣ್ಯವ್ಯಕ್ತಿಗಳ ಹೊರತಾಗಿ ಎಲ್ಲಾ ವರ್ಗ, ಸಮುದಾಯದವರ ಹೆಸರುಗಳಿಗೆ ಒಂದೇ ವಿಧದ ಗೌರವಸೂಚಕಗಳು ಬಳಕೆಯಾಗದೆ ಬೇರೆ ಬೇರೆ ಗೌರವ ಪದಗಳಿಂದ ಸೂಚಿಸಲಾಗುತ್ತಿದೆ. ಇಲ್ಲಿಯೂ ಸಹ ವರ್ಗ ಮತ್ತು ಸಂಸ್ಕೃತಿಯ ಹಿನ್ನಲೆಯನ್ನು ಗಮನದಲ್ಲಿರಿಸಿಕೊಂಡೇ ಬರುತ್ತವೆ. ಕೆಲವು ಸಲ ಈ ಗೌರವಸೂಚಕ ಪದಗಳು ಜಾತಿಯ ಹಿನ್ನಲೆಯನ್ನು ಅವಲಂಬಿಸಿರುವುದನ್ನು ಕಾಣಬಹುದು. 'ಶ್ರೀ', 'ರಾಜಶ್ರೀ', 'ರಾಜಮಾನ್ಯ', 'ರಾಜಿಮಾನ್ಯ ರಾಜಶ್ರೀ' ..... ಇತ್ಯಾದಿ ಪದಗಳು ಸಾಮಾನ್ಯವಾಗಿ ಬಳಸಲೂಬಹುದಾದರೂ, ವೈದಿಕರ ವಿಷಯದಲ್ಲಿ, ವೇದಮೂರ್ತಿ, ಬ್ರಹ್ಮಶ್ರೀ ಎಂದು ಬಳಸುತ್ತಾರೆ. ಸುಮಂಗಲಿಯರ ವಿಷಯವಾಗಿ - ಶ್ರೀಮತಿ, ಮಾತೃಶ್ರೀ (ಮಾತೋಶ್ರೀ) ಸೌಭಾಗ್ಯವತಿ ಹರಿದ್ರಾಕುಂಕುಮ ಶೋಭಿತೆಃ ಎಂದರೆ ಸುಮಂಗಲಿ ಅಲ್ಲದವರ ವಿಷಯದಲ್ಲಿ - ಮಾತೃಶ್ರೀ ಗಂಗಾಸಮಾನ, ಕುಮಾರಿ ಎಂದು ಬಳಸುವುದು ರೂಢಿ.

ವ್ಯಕ್ತಿನಾಮಗಳು ಭಾಷಿಕ ಅಂಶಗಳು. ವ್ಯಕ್ತಿನಾಮಗಳ ರಾಚನಿಕ ಅಧ್ಯಯನವೆಂದರೆ, ಒಂದರ್ಥದಲ್ಲಿ ಅದು ಭಾಷಿಕ ಅಧ್ಯಯನವೇ ಆಗಿದೆ. ಭಾಷೆ ನಿಂತ ನೀರಲ್ಲ, ಸದಾ ಹರಿಯುವ ನೀರು ಇದ್ದಂತೆ. ಚಲನಶೀಲ ಗುಣವುಳ್ಳ ಭಾಷೆ ಕಾಲಾಂತರದಲ್ಲಿ ಅನೇಕ ಸ್ಥಿತ್ಯಂತರಗಳನ್ನು ಹೊಂದುತ್ತದೆ. ಈ ಚಹರೆಗಳು ವ್ಯಕ್ತಿನಾಮಗಳಲ್ಲೂ ಗೋಚರಿಸುತ್ತವೆ. ಒಂದು ಭೌಗೋಳಿಕ ಪರಿಸರದ ವ್ಯಕ್ತಿನಾಮಗಳ ಸ್ವರೂಪವನ್ನು ಅಧ್ಯಯನ ಮಾಡುವುದರಿಂದ, ಒಂದು ಪ್ರದೇಶದ ಭಾಷೆಯನ್ನು ಅಧ್ಯಯನ ಮಾಡಿದಂತಾಗುತ್ತದೆ. ಆ ಹಿನ್ನಲೆಯಲ್ಲಿ ಭಾಷೆಯ ಚಾರಿತ್ರಿಕ ಅಧ್ಯಯನಕ್ಕೆ ವ್ಯಕ್ತಿನಾಮಗಳು ಆಕರಗಳಾಗಬಲ್ಲವು. ಮಾತ್ರವಲ್ಲದೆ, ಪಾರಂಪರಿಕವಾಗಿ ವ್ಯಕ್ತಿನಾಮ ನಿರ್ದಿಷ್ಟ, ವಾರ್ಗಿಕ ರಚನೆಗಳಲ್ಲಿ ಉಂಟಾಗಿರುವ ವ್ಯತ್ಯಾಸಗಳನ್ನು ಇಂಥ ಅಧ್ಯಯನಗಳ ಮೂಲಕ ಗ್ರಹಿಸಬಹುದು.

**ಅಡಿಟಿಪ್ಪಣಿ**


೧. ಡಾ. ಎಂ.ಎಂ.ಕಲುಬುರ್ಗಿ, ಕನ್ನಡ ನಾಮವಿಜ್ಞಾನ, ಪು. ೨, ೧೯೮೯
೨. ಅದೇ, ಪು. ೧೭, ೧೯೮೯
೩. ಚನ್ನಕ್ಕ ಎಲಿಗಾರ, ಸಾಧನೆ, ಸಂಪುಟ - ೪೫, ಪು. ೯೧, ೧೯೮೩
೪. ಡಾ. ಸಂಗಮೇಶ ಸವದತ್ತಿಮಠ, ಭಾಷಾಲೇಖ, ಪು. ೨೧೧, ೧೯೯೯
೫. ಡಾ. ಎಂ.ಚಿದಾನಂದಮೂರ್ತಿ, ವಾಗಾರ್ಥ, ಪು. ೫೧, ೧೯೮೧




ಅಧ್ಯಾಯ - ೩

# ವ್ಯಕ್ತಿನಾಮಗಳ ಸಾಮಾಜಿಕ ಅಧ್ಯಯನ

೩. ಪ್ರವೇಶ

೩.೧. ಚಿತ್ರದುರ್ಗ ಪರಿಸರದ ಭೌಗೋಳಿಕತೆ

೩.೨. ಚಿತ್ರದುರ್ಗ ಪರಿಸರದ ಐತಿಹಾಸಿಕ ಹಿನ್ನೆಲೆ

೩.೩. ಚಿತ್ರದುರ್ಗ ಪರಿಸರದ ಸಾಂಸ್ಕೃತಿಕ ಹಿನ್ನೆಲೆ

೩.೪. ಚಿತ್ರದುರ್ಗ ಪರಿಸರದ ಭಾಷಿಕ ಹಿನ್ನೆಲೆ

೩.೫. ವ್ಯಕ್ತಿನಾಮಗಳು : ಸಮುದಾಯಗಳ ಹಿನ್ನೆಲೆಯಲ್ಲಿ

೩.೫.೧. ಬ್ರಾಹ್ಮಣ

೩.೫.೨. ಲಿಂಗಾಯತ

೩.೫.೩. ರೆಡ್ಡಿ

೩.೫.೪. ಕುರುಬ

೩.೫.೫. ಗೊಲ್ಲ

೩.೫.೬. ವೈಶ್ಯ

೩.೫.೭. ಮರಾಠ

೩.೫.೮. ವಿಶ್ವಕರ್ಮ

೩.೫.೯. ನಾಯಕ

೩.೫.೧೦. ಮಾದಿಗ

೩.೫.೧೧. ಲಂಬಾಣಿ

೩.೬. ಇಸ್ಲಾಂ ಪರಿಸರದ ವ್ಯಕ್ತಿನಾಮಗಳು

೩.೭. ಮತಾಂತರ ಪ್ರಕ್ರಿಯೆ

೩.೮. ವ್ಯಕ್ತಿನಾಮ ದ್ವೀಪಗಳು

ಅಧ್ಯಾಯ - ೩

# ವ್ಯಕ್ತಿನಾಮಗಳ ಸಾಮಾಜಿಕ ಅಧ್ಯಯನ

## ೩. ಪ್ರವೇಶ

ವ್ಯಕ್ತಿ ಸಮಾಜದ ಸದಸ್ಯ. ಇಂಥ ವ್ಯಕ್ತಿಗಳ ಸಮೂಹವೇ ಸಾಮಾಜಿಕ ಪರಿಸರ. ಒಂದು ಸಮಾಜದ ಸಂಸ್ಕೃತಿಯಲ್ಲಿ ಈ ವ್ಯಕ್ತಿಗೆ ಹೆಸರಿನ ಅಗತ್ಯವಿದೆ. ಆ ಹೆಸರಿನ ಮೂಲಕವೇ ಸಮಾಜದ ವಿವಿಧ ಭೌಗೋಳಿಕ ವಲಯದಲ್ಲಿ ವಾಸಿಸುವ ಸಮುದಾಯ ಕುರಿತಾಗಿ ಮಾಹಿತಿ ಪಡೆಯುವುದು ಸಾಧ್ಯವಾಗುತ್ತದೆ. ಅಂದರೆ ಒಂದು ಸಂಸ್ಕೃತಿಯ ಅಧ್ಯಯನದಲ್ಲಿ, ಮೂಲ ಆಕರಗಳಾಗಿ ಭೌತಿಕ ವಸ್ತುಗಳ ಅಗತ್ಯ ಎಷ್ಟು ಮುಖ್ಯವೋ ಬೌದ್ಧಿಕವಾಗಿ ಅಲ್ಲಿ ಬದುಕುತ್ತಿರುವ ವ್ಯಕ್ತಿಗಳೂ ಮುಖ್ಯವಾಗುತ್ತಾರೆ. ಒಂದು ಸಮಾಜದ ವಿಭಿನ್ನ ಆಯಾಮಗಳನ್ನು ಚರ್ಚೆಗೆತ್ತಿಕೊಳ್ಳುವಲ್ಲಿ ಹೆಸರಿನ ಮಹತ್ವ ಗಣನೀಯವಾದುದು. ಮೇಲುನೋಟಕ್ಕೆ ಈ ಬಗೆಯ ವ್ಯಕ್ತಿನಾಮಗಳಿಂದ ಸಂಸ್ಕೃತಿಯನ್ನು ನಿರ್ವಚಿಸಲು ಸಾಧ್ಯವಾಗಬಹುದೇ? ಎಂಬಂಥ ಜಿಜ್ಞಾಸೆಗಳು ಎದುರಾದರೂ ಸಾಮಾಜಿಕ ಆಯಾಮಗಳಲ್ಲಿ ಸಮುದಾಯದ ಚರಿತ್ರೆಗೆ ಮುಖ್ಯ ಕೊಂಡಿಯಾಗಿ ವ್ಯಕ್ತಿನಾಮಗಳು ನಿಲ್ಲಬಲ್ಲವು ಎಂಬುದನ್ನು ಸೂಕ್ಷ್ಮ ಅಧ್ಯಯನದಿಂದ ತಿಳಿಯಬಹುದು.

ಈವರೆಗೆ ಚರಿತ್ರ ಅಧ್ಯಯನಕಾರರು, ಸಂಸ್ಕೃತಿ ಶೋಧಕರು ಇತರ ಭೌತಿಕ ಆಧಾರಗಳನ್ನು ಇಟ್ಟುಕೊಂಡು ಸಂಸ್ಕೃತಿ ಚಿಂತನೆ ನಡೆಸಿದಂತೆ, ಸಂಸ್ಕೃತಿಗೆ ಅಥವಾ ಸಮಾಜಕ್ಕೆ ಮುಖ್ಯ ಪ್ರತಿನಿಧಿಗಳಾಗಿ ನಿಲ್ಲಬಲ್ಲಂಥ ವ್ಯಕ್ತಿ ನಾಮಗಳನ್ನೂ, ಸ್ಥಳನಾಮಗಳನ್ನೂ, ನಗಣ್ಯಗೊಳಿಸಿದ್ದಾರೆ. ಹೆಸರುಗಳ ಮೂಲಕ ಸಂಸ್ಕೃತಿಯ ಚಿಂತನೆಯನ್ನು ನಡೆಸಿದವರಲ್ಲಿ ಶಂಬಾಜೋಶಿಯವರು ಕರ್ನಾಟಕದ ಮಟ್ಟಿಗೆ ಮೊದಲಿಗರಾಗಿದ್ದಾರೆ. ಆ ಮೂಲಕ ಅವರು ನಾಮಾಧ್ಯಯನದ ಅನಿವಾರ್ಯತೆಯನ್ನು ಎತ್ತಿ ತೋರಿಸಿದರು. ಮುಂದಿನ ದಶಕಗಳಲ್ಲಿ ಈ

ಅನಿವಾರ್ಯತೆಯನ್ನು ವ್ಯಾಪಕವಾಗಿ ಮುಂದುವರೆಸುವ ಪ್ರಯತ್ನಗಳು ನಡೆಯಲಿಲ್ಲ. ಬದಲಾಗಿ ವರ್ಣನಾತ್ಮಕ ಮತ್ತು ರಾಚನಿಕ ಮಾದರಿಯ ಸಾಂಪ್ರದಾಯಿಕ ನೆಲೆಯಲ್ಲಿಯೇ ಮುಂದುವರೆಸಲಾಯಿತು. ಅಂದರೆ ವ್ಯಕ್ತಿನಾಮಗಳನ್ನು ಭಾಷಿಕ ಆಕರಗಳಾಗಿ ಸ್ವೀಕರಿಸಲಾಯಿತು. ಇದು ಒಂದು ಬಗೆಯ ಅಗತ್ಯ ಚರ್ಚೆಯಾದರೂ ಸಮಕಾಲೀನ ಸಂದರ್ಭದ ಸಮುದಾಯದ ಸಂಸ್ಕೃತಿಯನ್ನು ಅನಾವರಣಗೊಳಿಸುವಲ್ಲಿ ವ್ಯಕ್ತಿನಾಮಗಳನ್ನು ಸಮಾಜೋಭಾಷಿಕ ನೆಲೆಯಲ್ಲಿ ಅರ್ಥೈಸುವುದು ಅತ್ಯಂತ ಅಗತ್ಯವಾಗಿದೆ.

ಒಂದು ಸಾಮಾಜಿಕ ಪರಿಸರದ ಅಧ್ಯಯನಕ್ಕೆ ತೊಡಗುವಾಗ ಅಲ್ಲಿನ ಭೌಗೋಳಿಕ ಚಹರೆಯು ಮುಖ್ಯವಾಗಿರುತ್ತದೆ. ಈ ದೃಷ್ಟಿಯಿಂದ ಚಿತ್ರದುರ್ಗ ಪರಿಸರದ ನೈಸರ್ಗಿಕ ಅಂಶಗಳನ್ನು ಪ್ರಸ್ತಾಪಿಸುತ್ತಲೇ ಸಾಮಾಜಿಕ ಅಧ್ಯಯನದ ಸಾಧ್ಯತೆಯನ್ನು ವಿವಿಧ ಆಯಾಮಗಳಲ್ಲಿ ಚರ್ಚೆಗೊಳಪಡಿಸಲಾಗಿದೆ. ಮುಖ್ಯವಾಗಿ ಆಯಾ ಭೌಗೋಳಿಕ ಪರಿಸರ ನಾಮ ನಿರ್ದೇಶನ ಮಾಡುವಲ್ಲಿ ಮಹತ್ತರ ಪಾತ್ರ ವಹಿಸುತ್ತದೆ. ಅಂದರೆ ಕರ್ನಾಟಕದಲ್ಲಿಯೂ ಉತ್ತರ ಮತ್ತು ದಕ್ಷಿಣಭಾಗದಲ್ಲಿ ಈ ರೀತಿಯ ವೈಶಿಷ್ಟ್ಯಗಳನ್ನು ಗುರುತಿಸಬಹುದು. ಭೌಗೋಳಿಕ ಪರಿಸರದಲ್ಲಿ ವ್ಯಕ್ತಿ, ಅವನ ಸುತ್ತಣ ಪರಿಸರ, ಕುಟುಂಬದ ಧರ್ಮಾಚರಣೆಗಳು ನಂಬಿದ ದೈವ, ವ್ಯವಸ್ಥೆಯಲ್ಲಿ ಬದುಕುವ ಇತರೆ ಸಮುದಾಯಗಳು ಮುಂತಾದವು ಒಳಗೊಳ್ಳುತ್ತವೆ. ಈ ಒಟ್ಟು ಆಕರಗಳು ಸಾಂಸ್ಕೃತಿಕ ಆಯಾಮಗಳ ಒಳಗೆ ಸ್ಥಿರೀಕರಿಸಲ್ಪಟ್ಟಿರುತ್ತವೆ.

ವ್ಯಕ್ತಿನಾಮಗಳನ್ನು ಸಮುದಾಯದ ಪ್ರತಿನಿಧಿಗಳೆಂದು ಅಧ್ಯಯನ ಮಾಡುವಲ್ಲಿ ಬ್ರಾಹ್ಮಣ, ಲಿಂಗಾಯತ, ಕುರುಬ, ನಾಯಕ, ಗೊಲ್ಲ, ಮಾದಿಗ, ಮುಸಲ್ಮಾನ, ಕ್ರಿಶ್ಚಿಯನ್, ರೆಡ್ಡಿ - ಹೀಗೆ ಮುಂತಾದ ಜಾತಿಗಳು ನಿರ್ದೇಶಿಸಿಕೊಳ್ಳುವ ಹೆಸರುಗಳು ಆ ಹೆಸರಿಗೆ ಕಾರಣ, ಆ ಹೆಸರಿನ ಮೂಲ, ಪರಂಪರೆ, ಆಚರಣಾ ವಿಧಿಗಳು ತಿಳಿದುಬರುತ್ತವೆ. ಆ ಹೆಸರಿನೊಂದಿಗೆ ಬರುವ ವಾರ್ಗಿಕಗಳು, ಅವುಗಳ ರಚನೆ, ಅವುಗಳ ಸೀಮಿತ ವ್ಯಾಪ್ತಿ, ಬಳಕೆಯ ವ್ಯಾಪಕತೆ, ಕಾಲಾಂತರದ ಬದಲಾವಣೆಯ ಮಜಲುಗಳು, ಪಡೆದುಕೊಂಡ ಅರ್ಥಾಂತರ, ಅಂದರೆ, ಸಮುದಾಯಗಳು ನಿರ್ವಹಿಸಿದ ವೃತ್ತಿ, ಅವು ಮುಂದೆ ಜಾತಿಗಳಾಗಿ ಮಾರ್ಪಟ್ಟಿದ್ದು, ಹೀಗೆ ಹೆಕ್ಕಿ ತೆಗೆದಂತೆ ಹಲವಾರು ವೈಶಿಷ್ಟ್ಯತೆಗಳು ನಮ್ಮ ಮುಂದೆ ನಿಲ್ಲುತ್ತವೆ. ಈ ಎಲ್ಲ ಸಂಗತಿಗಳು ಪ್ರಾಚೀನ ಸಂಸ್ಕೃತಿಯೊಂದರ ಚಿತ್ರಣವನ್ನು ನೀಡುತ್ತವೆ. ಅಂತೆಯೇ ಚಿತ್ರದುರ್ಗ ಪರಿಸರದಲ್ಲಿ ಬದುಕುತ್ತಿರುವ ಧರ್ಮಧರ್ಮಗಳ ನಡುವಿನ ನಾಮನಿರ್ದೇಶನದ ಭಿನ್ನತೆಗಳು, ಸಾಮ್ಯತೆಗಳು ಅಲ್ಲದೆ ಮತಾಂತರ ಪ್ರಕ್ರಿಯೆಯ ಮೂಲಕ ಆಗುವ ಹೆಸರಿನ ಸ್ಥಿತ್ಯಂತರ, ಮೂಲ ಹೆಸರನ್ನು ಉಳಿಸಿಕೊಳ್ಳುವ ವ್ಯಕ್ತಿಯ ಹಂಬಲ ಈ ಬಗೆಯ ಅಂಶಗಳು ನಮ್ಮ ಮುಂದೆ ಗೋಚರಿಸುತ್ತವೆ.

ಸಮಕಾಲೀನ ಸಂಸ್ಕೃತಿಗೆ ಆಧುನಿಕತೆಯೆನ್ನುವುದು ಸಹಜವಾಗಿಯೇ ತನ್ನ ವ್ಯಾಪಕವಾದ ಪ್ರಭಾವವನ್ನು ವ್ಯಕ್ತಿನಾಮಗಳ ಮೇಲೂ ಬೀರಿದೆ. ಈ ಬದಲಾವಣೆಯ ಹಂತದಲ್ಲಿ ಸಮುದಾಯಗಳು ತಮ್ಮ ಪ್ರಾಚೀನ ಪರಂಪರೆಯೆಂಬುದು ಸಹಜವಾಗಿಯೆ ಬದಲಾವಣೆಗೆ ತೊಡಗಿಕೊಂಡಿದೆ. ಪ್ರಾಚೀನ ಹೆಸರುಗಳಿಂದ ಒಂದು ಸಂಸ್ಕೃತಿಯನ್ನು, ಒಂದು ಸಮುದಾಯವನ್ನು ಗುರುತಿಸುವಂತೆ, ಇಂದಿನ ಹೆಸರುಗಳಿಂದ ಗುರುತಿಸಲಾಗದು. ಹೆಚ್ಚಾಗಿ ಭಾವನಾಮಗಳು, ವ್ಯಕ್ತಿಗಳ ಹೆಸರುಗಳಲ್ಲಿ ಸ್ಥಾನ ಪಡೆದಿವೆ. ಈ ಭಾವನಾಮಗಳಿಗೆ ಒಂದು ವರ್ಗದ, ಒಂದು ಜಾತಿಯ ಮಿತಿ ಇಲ್ಲ. ಈ ಹಂಗನ್ನು ತೊರೆದು ಸಂಸ್ಕೃತಿಯು ಮುನ್ನಡೆಯುತ್ತಿರುವುದು ಗಮನಾರ್ಹ

ಬದಲಾವಣೆ. ಹಾಗೆಂದು ಇದು ದೋಷವಲ್ಲ. ಈ ಕಾಲದ ಸಹಜ ಮನೋಧರ್ಮ. ಈ ತೀವ್ರವಾದ ಬದಲಾವಣೆಯನ್ನು ಸಂಘಟಿತರಾಗುತ್ತಿರುವ ಸಮುದಾಯಗಳಲ್ಲಿ ಪರಂಪರೆಯು ಕೃಚಿತ್ತಾಗಿ ಮರುಕಳಿಸುತ್ತಿದೆ. ಅಂದರೆ ವರ್ಗ, ಜಾತಿ, ವೃತ್ತಿಸೂಚಕ ಪದಗಳು ಭಾವನಾಮದೊಂದಿಗೆ ಪುನರಾವರ್ತನೆಯಾಗುವುದು, ಒಂದು ಕಡೆ ಆಧುನಿಕ ಮನೋಧರ್ಮವಾದರೂ, ರಾಜಕೀಯ ಪ್ರೇರಿತಯೆನ್ನುವುದು ಇದಕ್ಕೆ ಪರೋಕ್ಷ ಕಾರಣ. ಇದರ ಜತೆಯಲ್ಲಿಯೇ ತಳಸಮುದಾಯಗಳು ಆಧುನಿಕತೆಯೊಂದಿಗೆ ವ್ಯಾಪಕವಾಗಿ ಪ್ರತಿಕ್ರಿಯಿಸಲು ತೊಡಗಿವೆಯಾದರೂ, ತಮ್ಮ ಮೂಲಸಂಸ್ಕೃತಿಯ ಕೆಲವು ಅಂಶಗಳನ್ನು ನವೀಕರಿಸಿಕೊಂಡು, ಪರಂಪರೆಯೊಂದಿಗೆ ಬದುಕುವ ನಿಟ್ಟಿನಲ್ಲಿದ್ದಾರೆ.

ಚಿತ್ರದುರ್ಗದ ಸಾಮಾಜಿಕ ಪರಿಸರದಲ್ಲಿ ಆಧುನಿಕತೆಯ ಪ್ರಭಾವ ತೀವ್ರವಾಗಿ ಪ್ರವೇಶಿಸಿರುವುದು ಸ್ತ್ರೀಯರಲ್ಲಿ. ದೈವಮೂಲದ ಹೆಸರುಗಳು ಪುರುಷರಲ್ಲಿ ಹೆಚ್ಚಾಗಿ ಉಳಿದಿವೆ. ಲಿಂಗಾಧಾರಿತ ನೆಲೆಯಲ್ಲಿ ಆಲೋಚಿಸುವಾಗ, ಯಾವುದೇ ಹೊಸತನಕ್ಕೆ ಮಹಿಳೆಯರು ಒಳಗಾಗುವಂತೆ ನಾಮ ನಿರ್ದೇಶನದಲ್ಲಿಯೂ ಅದೇ ಸ್ವರೂಪವನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಸಂಖ್ಯಾವಾರು ನೆಲೆಯಲ್ಲಿ ಈಚಿನ ತಲೆಮಾರು ಪುರುಷ ಮತ್ತು ಸ್ತ್ರೀ ಇಬ್ಬರೂ ಸಮಾನ ಅಂತರದಲ್ಲಿ ಬದಲಾವಣೆಯ ಕಡೆ ಸಾಗುತ್ತಿದ್ದಾರೆ. ಈ ವಿವರಣೆಗೆ ಮುಖ್ಯಕಾರಣವೆಂದರೆ, ಪ್ರಾದೇಶಿಕ ನೆಲೆಯಲ್ಲಿ ಆಯಾ ಸಮುದಾಯಗಳ ಪ್ರಸಿದ್ಧ ದೈವಗಳಿಂದ ನಾಮ ನಿರ್ದೇಶನಗೊಂಡು, ವ್ಯಕ್ತಿನಾಮ ದ್ವೀಪಗಳಾಗಿ ಗುರುತಿಸಿಕೊಳ್ಳುತ್ತಿದ್ದ ಪರಿಸರ ಇಂದು ಸಂಪೂರ್ಣವಾಗಿ ಬದಲಾಗುತ್ತಿದೆ. ಈಚಿನ ದಿನಗಳಲ್ಲಿ ಶಿಕ್ಷಣ, ಸಮಾಜ, ಸಂಸ್ಕೃತಿಗಳು ಜಾಗತೀಕರಣದ ಪ್ರಭಾವದಿಂದ ಪ್ರೇರಿತಗೊಂಡು, ವ್ಯಾಪಕವಾಗಿ ತನ್ನನ್ನು ತಾನು ಜಾಗತಿಕವಾಗಿ ಗುರುತಿಸಿಕೊಳ್ಳುವ ಪ್ರೌಢಾವಸ್ಥೆಯಲ್ಲಿ ಹೆಸರಿನ ತಾತ್ವಿಕತೆಯೂ ಸಮಕಾಲೀನ ಸಂದರ್ಭಕ್ಕೆ ತಕ್ಕ ಹಾಗೆ ಬದಲಾವಣೆಗೊಳ್ಳುತ್ತಿದೆ. ಒಂದರ್ಥದಲ್ಲಿ ಇದನ್ನು ಆತಂಕಯೆನ್ನಬಹುದಾದರೂ ಕಾಲಕ್ರಮೇಣ ಸಹಜ ಮನೋಧರ್ಮವಾಗಿಯೂ ಮುಂದುವರೆಯುತ್ತಿದೆ.

ಹೀಗೆ ವ್ಯಕ್ತಿನಾಮಗಳ ಪರಂಪರೆ ಮತ್ತು ಪ್ರಾಚೀನತೆ ಗ್ರಾಮೀಣ ಪರಿಸರದಲ್ಲಿ ಕಡಿಮೆ ಪ್ರಮಾಣದಲ್ಲಿಯೂ ಪಟ್ಟಣ ಮತ್ತು ನಗರ ಪರಿಸರದಲ್ಲಿ ಅಧಿಕ ಪ್ರಮಾಣದಲ್ಲಿಯೂ ಕಳಚಿಕೊಳ್ಳುತ್ತಿದೆ. ಪ್ರಾಚೀನತೆ ಮತ್ತು ಆಧುನಿಕತೆ ಈ ಎರಡರ ನಡುವಿನ ಸಾಂಘರ್ಷಿಕ ಹಂತದಲ್ಲಿ, ಸಮಕಾಲೀನ ಸಮಾಜದಲ್ಲಿ ವ್ಯಕ್ತಿನಾಮಗಳು ಮುಖಾಮುಖಿಯಾಗುವ ಹಲವಾರು ಆಯಾಮಗಳನ್ನು ಚಿತ್ರದುರ್ಗ ಪರಿಸರದೊಂದಿಗೆ ಪ್ರಸ್ತುತ ಅಧ್ಯಯನದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

## ೩.೧ ಚಿತ್ರದುರ್ಗ ಪರಿಸರದ ಭೌಗೋಳಿಕತೆ

ಚಿತ್ರದುರ್ಗ ಜಿಲ್ಲೆಯು ಕರ್ನಾಟಕದ ಮಧ್ಯ ಭಾಗದಲ್ಲಿದೆ. ಈ ಜಿಲ್ಲೆಯ ಉತ್ತರಕ್ಕೆ ಬಳ್ಳಾರಿ ಜಿಲ್ಲೆ, ಪೂರ್ವಕ್ಕೆ ಅನಂತಪುರ ಜಿಲ್ಲೆ, ಆಗ್ನೇಯ ದಿಕ್ಕಿಗೆ ತುಮಕೂರು ಜಿಲ್ಲೆ, ಪಶ್ಚಿಮಕ್ಕೆ ದಾವಣಗೆರೆ, ವಾಯುವ್ಯಕ್ಕೆ ಧಾರವಾಡ ಜಿಲ್ಲೆಗಳು ಸುತ್ತುವರಿಯಲ್ಪಟ್ಟಿವೆ. ಈ ಜಿಲ್ಲೆಯಲ್ಲಿ ಆರು ತಾಲೂಕುಗಳಿವೆ. ಅವುಗಳೆಂದರೆ, ಚಳ್ಳಕೆರೆ, ಚಿತ್ರದುರ್ಗ, ಹಿರಿಯೂರು, ಮೊಳಕಾಲ್ಮೂರು, ಹೊಸದುರ್ಗ ಮತ್ತು ಹೊಳಲ್ಕೆರೆ. ಜಿಲ್ಲೆಯು ದಖ್ಖನ್ ಪ್ರಸ್ಥಭೂಮಿಯ ಭಾಗವಾಗಿದ್ದು, ರಾಜ್ಯದಲ್ಲಿ ಬಿಜಾಪುರ ಜಿಲ್ಲೆಯನ್ನು ಬಿಟ್ಟರೆ ಇದು ಎರಡನೆಯ

ಜಿಲ್ಲೆ. ವಾರ್ಷಿಕ ಸರಾಸರಿ ಮಳೆ ೬೫೫ ಮಿಲಿಮೀಟರ್. ಆಗಾಗ ಜಿಲ್ಲೆ ಅನಾವೃಷ್ಟಿಗೆ ಒಳಗಾಗಿ ಬರಗಾಲವನ್ನು ಅನುಭವಿಸುತ್ತದೆ. ಜಿಲ್ಲೆ ಕೃಷ್ಣ ಜಲಾನಯನ ಪ್ರದೇಶದಲ್ಲಿದ್ದು, ಇಲ್ಲಿ ವೇದಾವತಿ ನದಿ ೨೦೮ ಕಿ.ಮೀ. ತುಂಗಭದ್ರಾನದಿ ೪೭ ಕಿ.ಮೀ. ಉದ್ದ ಹರಿಯುತ್ತದೆ. ಜಿನಗಹಳ್ಳ ಪ್ರಮುಖವಾಗಿದ್ದು, ೧೨೮ ಕಿ.ಮೀ. ಹರಿದು, ಅನೇಕ ಕೆರೆಗಳಿಗೆ ನೀರು ಒದಗಿಸಿದೆ. ಸ್ವರ್ಣಮುಖಿಹಳ್ಳ ೨೨೦೦ ಎಕರೆಗೆ ನೀರು ಒದಗಿಸುತ್ತದೆ. ಜಿಲ್ಲೆಯಲ್ಲಿ ಭದ್ರಾ ಜಲಾಶಯದಿಂದ ೬೭,೪೬೦ ಹೆಕ್ಟೇರ್, ವಾಣಿವಿಲಾಸ ಜಲಾಶಯದಿಂದ ೧೦,೦೦೦ ಹೆಕ್ಟೇರು, ಗಾಯಿತ್ರಿ ಜಲಾಶಯದಿಂದ ೯೨೮ ಹೆಕ್ಟೇರುಗಳಿಗೆ ನೀರಾವರಿ ಸೌಲಭ್ಯ ಒದಗುತ್ತದೆ. ಮೊಳಕಾಲ್ಮೂರು ತಾಲೂಕಿನ ರಂಗಯ್ಯನದುರ್ಗದ ಜಲಾಶಯ ೯,೦೦೦ ಎಕರೆಗಳಿಗೆ ನೀರಾವರಿ ಸೌಲಭ್ಯವಿದೆ. ಚಳ್ಳಕೆರೆ ತಾಲೂಕಿನ ರಾಣಿಕೆರೆ ಫೀಡರ್ ನಾಲೆ, ಹಿರಿಯೂರು ತಾಲೂಕಿನ ಧರ್ಮಪುರ ಫೀಡರ್ ನಾಲೆಗಳಿಂದ ಒಟ್ಟು ೫,೧೭,೬೬೩ ಹೆಕ್ಟೇರು ಪ್ರದೇಶ ವ್ಯವಸಾಯಕ್ಕೆ ಅನುಕೂಲವಿದೆ. ಇದರಲ್ಲಿ ೧೦,೦೦೦ ಎಕರೆ ನೀರಾವರಿ ಕ್ಷೇತ್ರವಾಗಿದೆ.

ಜಿಲ್ಲೆಯ ಒಟ್ಟು ವ್ಯಾಪ್ತಿಯಲ್ಲಿ ಸುಮಾರು ೨೨ ರಕ್ಷಿತ ಅರಣ್ಯ ಪ್ರದೇಶವಿದೆ. ಜಿಲ್ಲೆಯಲ್ಲಿ ಹೆಚ್ಚು ಜನ ಕಣಶಿಲೆಯ ಬೋಳುಬೆಟ್ಟಗಳಿಂದ ಅಲ್ಲಲ್ಲಿ ಕಣಿವೆಗಳಿಂದ ಒಳಗೊಂಡಿದೆ. ಮುಖ್ಯವಾದ ಬೆಟ್ಟದ ಸಾಲುಗಳು ದಕ್ಷಿಣ ಆಗ್ನೇಯದಿಂದ, ಉತ್ತರ ವಾಯುವ್ಯದ ಕಡೆಗೆ ಸಮಾಂತರದಲ್ಲಿ ಸಾಗಿವೆ. ಪೂರ್ವದ ಬೆಟ್ಟದ ಸಾಲುಗಳು ಹಿರಿಯೂರಿನ ಪಶ್ಚಿಮದಿಂದ ಚಿತ್ರದುರ್ಗದ ಪರ್ಯಾಂತ ಹಬ್ಬಿ, ಮುಂದೆ ಸ್ವಲ್ಪ ದೂರದಲ್ಲಿ ವಾಯುವ್ಯದ ಕಣಕುಪ್ಪೆ ಬೆಟ್ಟದಲ್ಲಿ ಮುಂದುವರೆದು, ಜಿಲ್ಲೆಯ ಗಡಿಯವರೆಗೆ ಸಾಗುತ್ತದೆ. ಮುಖ್ಯವಾಗಿ

**ಚಿತ್ರದುರ್ಗ ತಾಲೂಕಿನಲ್ಲಿ :**

ಭೈರನಕಲ್ಲು ಗುಡ್ಡ　ಓಬಳದೇವರ ಗುಡ್ಡ　ಜೋಗಿಮಠ ಗುಡ್ಡ
ಈಚಲು ಗುಡ್ಡ　ಧವಳಪ್ಪನ ಗುಡ್ಡ

**ಮೊಳಕಾಲ್ಮೂರು ತಾಲೂಕಿನಲ್ಲಿ :**

ಜಟ್ಟಂಗಿ ಗುಡ್ಡ　ಬ್ರಹ್ಮಗಿರಿ ಬೆಟ್ಟ　ಜೋಗಪ್ಪನ ಗುಡ್ಡ
ನುಂಕೆ ಗುಡ್ಡ　ಸುವರ್ಣಗಿರಿ

**ಹೊಳಲ್ಕೆರೆ ತಾಲೂಕಿನಲ್ಲಿ :**

ದೊಡ್ಡಹೊಟ್ಟೆ ರಂಗಪ್ಪನ ಗುಡ್ಡ　ಬಡ್ಡೇರುಗುಡ್ಡ

**ಹೊಸದುರ್ಗ ತಾಲೂಕಿನಲ್ಲಿ :**

ಹಾಲು ರಾಮೇಶ್ವರ ಬೆಟ್ಟ　ನೀರುಗುಡ್ಡ　ತಿರುಮಲದೇವರ ಗುಡ್ಡ
ಕೋಟೆಕಲ್ಲು ಗುಡ್ಡ　ದೊಡ್ಡರಸಿಗುಡ್ಡ

**ಹಿರಿಯೂರು ತಾಲೂಕಿನಲ್ಲಿ :**

**ಮಾರಿಕಣಿವೆ ಬೆಟ್ಟ**

ಅಲ್ಲದೆ ಜಿಲ್ಲೆಯಲ್ಲಿ ಹಾಗೂ ಸುತ್ತಮುತ್ತಣ ಪರಿಸರದಲ್ಲಿ ಅನೇಕ ಸಣ್ಣ-ಪುಟ್ಟ ಬೆಟ್ಟಗಳಿವೆ. ಅವುಗಳಲ್ಲಿ ಕಟ್ಟೆಗುಡ್ಡದ ಮಾರಮ್ಮನ ಬೆಟ್ಟ, ಶರಣರ ಬೆಟ್ಟ, ಪಾಂಡವರ ಗುಡ್ಡ, ಮಲ್ಲಪ್ಪನ ಗುಡ್ಡ ಇತ್ಯಾದಿ. ಮೇಲಿನ ಭೌಗೋಳಿಕ ಪರಿಸರವನ್ನು ಅನುಸರಿಸಿ ಅನೇಕ ವ್ಯಕ್ತಿನಾಮಗಳು ಸೃಷ್ಟಿಗೊಂಡಿರುವುದನ್ನು ಇಲ್ಲಿ ಗುರುತಿಸಬಹುದು. ಪ್ರಕೃತಿ ಮತ್ತು ಮನುಷ್ಯನ ನಡುವೆ ಇರುವ ಗಾಢವಾದ ಸಂಬಂಧ ಪ್ರಾಚೀನವಾದುದು. ವ್ಯಕ್ತಿಯಿಂದ ಪರಿಸರಕ್ಕೆ ನಾಮ ನಿರ್ದೇಶನ ನಡೆದಿದ್ದು ಇದೆ. ಈ ಕಾರಣದಿಂದ ಯಾವುದೇ ಒಂದು ಭೌಗೋಳಿಕ ಪರಿಸರ, ಆ ಪರಿಸರದಲ್ಲಿ ಬದುಕುವ ವ್ಯಕ್ತಿಯ ಹೆಸರಿನ ಮೇಲೆ ಪ್ರಭಾವ ಬೀರುತ್ತದೆ ಎಂಬುದನ್ನು ಕಡೆಗಣಿಸುವಂತಿಲ್ಲ. 'ಗಾಳೆಪ್ಪ', 'ಗಾಳೆಮ್ಮ', 'ಕಲ್ಲಪ್ಪ', 'ಗುಂಡಮ್ಮ', 'ಗುಂಡಪ್ಪ', 'ಕಾಡಪ್ಪ' ಎಂಬ ಹೆಸರುಗಳನ್ನು ಇಡುವುದರ ಆಶಯ ಏನೇ ಇದ್ದರೂ, ಅವುಗಳ ಮೂಲ ನಿಸರ್ಗ ಮೂಲವಾಗಿರುವುದು ಗಮನಾರ್ಹ. ಮನುಷ್ಯ ಮತ್ತು ಪ್ರಕೃತಿಯ ನಡುವೆ ನಾಮ ನಿರ್ದೇಶನದ ಕ್ರಿಯೆ ನಡೆಯುತ್ತಿರುತ್ತದೆ. ಈ ಕಾರಣದಿಂದ ನಾಮಾಧ್ಯಯನದಲ್ಲಿ ಭೌಗೋಳಿಕ ಪರಿಸರದ ಪರಿಚಯ ಅಗತ್ಯ. ಆ ಮೂಲಕ ಭೌಗೋಳಿಕ ಪರಿಸರಕ್ಕೆ ಸಂಬಂಧಿಸಿದ ಹೆಸರುಗಳು ಮಹತ್ವವನ್ನು ಪಡೆಯುತ್ತವೆ.

## ೩.೨ ಚಿತ್ರದುರ್ಗ ಪರಿಸರದ ಐತಿಹಾಸಿಕ ಹಿನ್ನೆಲೆ

ಈ ಪರಿಸರವು ತನ್ನದೇ ಆದ ಐತಿಹಾಸಿಕ ಮಹತ್ವವನ್ನೊಂದಿದೆ. ನವ ಶಿಲಾಯುಗದಿಂದಲೂ ಇಲ್ಲಿ ಜನವಸತಿಯಿದ್ದಿತೆಂದು ತಿಳಿದುಬರುತ್ತದೆ. ಬ್ರಹ್ಮಗಿರಿ, ಚಿಕ್ಕಮದಿರೆ, ತುರವನೂರು ಮೊದಲಾದ ಕಡೆ ಬೃಹತ್ ಶಿಲಾಸಮಾಧಿಗಳು ದೊರಕಿದ್ದು, ಕಬ್ಬಿಣ ಯುಗದ ಸಂಸ್ಕೃತಿ ಇದ್ದಿತೆಂದು ತಿಳಿದುಬರುತ್ತದೆ.

ಬ್ರಹ್ಮಗಿರಿ, ಸಿದ್ದಾಪುರ, ಜಟಿಂಗರಾಮೇಶ್ವರದಲ್ಲಿ ದೊರೆತ ಶಿಲಾಶಾಸನಗಳಿಂದ ಅಶೋಕನ ಆಡಳಿತ, ಮೌರ್ಯ ಸಾಮ್ರಾಜ್ಯದ ಆಳ್ವಿಕೆಯ ಬಗ್ಗೆ ತಿಳಿಯುತ್ತದೆ. ಚಂದ್ರವಳ್ಳಿಯ ಉತ್ಖನನದಿಂದ ಶಾತವಾಹನರ ಆಳ್ವಿಕೆ, ನಂತರ ಬನವಾಸಿಯ ಕದಂಬರೂ, ಬಾದಾಮಿ ಚಾಲುಕ್ಯರಿಗೂ, ರಾಷ್ಟ್ರಕೂಟರಿಗೂ ಈ ಪರಿಸರ ಆಡಳಿತಕ್ಕೆ ಒಳಪಟ್ಟಿದೆ.

ಮುಂದೆ ನೊಳಂಬರ ಆಳ್ವಿಕೆ ಆರಂಭವಾಗಿ ನೊಳಂಬವಾಡಿ ಮೂವತ್ತೆರಡು ಸಾವಿರ ರಾಜ್ಯ ಎಂದಾಯಿತು. ಹತ್ತನೆಯ ಶತಮಾನದಲ್ಲಿ ಮತ್ತೆ ಚಾಲುಕ್ಯರ ವಶಕ್ಕೆ ಸೇರಿ, ನಂತರ ಹೊಯ್ಸಳರ ಆಳ್ವಿಕೆ ಆರಂಭವಾಯಿತು. ಪಾಂಡ್ಯರು ಈ ಜಿಲ್ಲೆಯನ್ನು ಆಳಿದರು. ಆದ್ದರಿಂದ ಈ ಭಾಗಕ್ಕೆ 'ಪಾಂಡವರಾಜ್ಯ', 'ಪಾಂಡ್ಯಮಂಡಲ' ಎಂದು ಹೆಸರಾಗಿತ್ತು. ಜಿಲ್ಲೆಯ ಪೂರ್ವಭಾಗದಲ್ಲಿ ಚೋಳರು, ವಾಯುವ್ಯಕ್ಕೆ ದೇವಗಿರಿಯ ಯಾದವರು ಆಳ್ವಿಕೆ ನಡೆಸಿದರು. ಹದಿನೈದನೆಯ ಶತಮಾನದಲ್ಲಿ ಈ ಜಿಲ್ಲೆಯು ವಿಜಯನಗರ ಸಾಮ್ರಾಜ್ಯಕ್ಕೆ ಒಳಪಟ್ಟಿತು. ಅದೇ ಸಮಯದಲ್ಲಿ ಅಲ್ಲಲ್ಲಿ ಪಾಳೆಯಗಾರರು ಕೂಡ ಆಳ್ವಿಕೆ ಮಾಡತೊಡಗಿದರು. ಇವರಲ್ಲಿ ಚಿತ್ರದುರ್ಗದ ನಿಡಗಲ್ಲು, ಹಟ್ಟಿ ಪಾಳೆಯಗಾರರು ಮುಖ್ಯರಾದವರು. ಕ್ರಿ.ಶ. ೧೫೬೫ರಲ್ಲಿ ವಿಜಯನಗರದ ಪತನಾನಂತರ ಪಾಳೆಯಗಾರರು ಸ್ವತಂತ್ರರಾದರು. ೧೭೭೯ರಲ್ಲಿ ಪತನವಾಗಿ ಹೈದರ್-ಟಿಪ್ಪುವಿನ ವಶಕ್ಕೆ, ನಂತರ ಬ್ರಿಟೀಷರ ಆಳ್ವಿಕೆ ಪ್ರಾರಂಭವಾಗಿ, ಮೈಸೂರು ಸಂಸ್ಥಾನದ ಬ್ರಿಟೀಷ್ ಕಮೀಷನರ್‌ಗೆ ಸೇರಿತು. ೧೮೮೬ರಲ್ಲಿ ಚಿತ್ರದುರ್ಗ ಸ್ವತಂತ್ರ ಜಿಲ್ಲೆಯಾಗಿ ಮಾರ್ಪಾಡಾಯಿತು.

ಬಹು ಮುಖ್ಯವಾಗಿ ಈ ಜಿಲ್ಲೆಯನ್ನಾಳಿ ಪ್ರಭಾವ ಬೀರಿದ ಅರಸರೆಂದರೆ ಪಾಳೆಯಗಾರರು. ಇವರಲ್ಲಿ ಬಹುಮುಖ್ಯರಾದವರೆಂದರೆ -

ಮತ್ತಿ ತಿಮ್ಮಣ್ಣನಾಯಕ

ಓಬಣ್ಣನಾಯಕ

ಕಸ್ತೂರಿರಂಗಪ್ಪನಾಯಕ

ಇಮ್ಮಡಿ ಮದಕರಿನಾಯಕ

ಚಿಕ್ಕಣ್ಣನಾಯಕ

ಮುಮ್ಮಡಿ ಲಿಂಗಣ್ಣನಾಯಕ

ಬಿಚ್ಚುಗತ್ತಿ ಭರಮಣ್ಣನಾಯಕ

ಹಿರೇ ಮದಕರಿನಾಯಕ

ಕಸ್ತೂರಿರಂಗಪ್ಪನಾಯಕ - II

ರಾಜಾ ಮದಕರಿನಾಯಕ

ಈ ಜಿಲ್ಲೆಯಲ್ಲಿ ಈ ಪಾಳೆಯಗಾರರ ಆಡಳಿತದಿಂದಾಗಿ ಜನಜೀವನದ ಮೇಲೆ ಅತ್ಯಂತ ಗಾಢವಾಗಿ ಪ್ರಭಾವವಾಗಿದೆ.

ಈ ಜಿಲ್ಲೆಯ ಪಾಳೆಯಗಾರರ ಮನೆತನಕ್ಕೆ ಸಂಬಂಧಿಸಿದ ಚದುರೆ ತಿಮ್ಮವ್ವ ನಾಗತಿ, ಹೊನ್ನವ್ವೆ ನಾಗತಿ, ಕನಕವ್ವೆ ನಾಗತಿ, ಚನ್ನವ್ವ ನಾಗತಿ, ಓಬಮ್ಮ ನಾಗತಿ, ಲಿಂಗಮ್ಮ ನಾಗತಿ, ರುದ್ರಮ್ಮ ನಾಗತಿ, ಬೊಮ್ಮವ್ವ ನಾಗತಿ, ದೊಡ್ಡಸಿದ್ಧಮ್ಮಾಜಿ, ಚಿಕ್ಕಸಿದ್ಧಮ್ಮಾಜಿ, ಕುರುಬರ ಮುರುಡವ್ವ, ರಂಗವ್ವ, ಗಂಡೋಬಳವ್ವ ನಾಗತಿ, ಕೋನಮ್ಮ, ವೆಂಕಟಮ್ಮ ನಾಗತಿ, ರಣಹುಚ್ಚು ಗಿರಿಜವ್ವೆ ಎಂಬ ಅನೇಕ ಮಹಿಳೆಯರು ಈ ಪರಿಸರದ ಜನಜೀವನದ ಮೇಲೆ ಗಾಢವಾದ ಪ್ರಭಾವವನ್ನು ಬೀರಿದ್ದಾರೆ. ಅಂದರೆ ಪಾಳೆಯಗಾರರು ಆಡಳಿತ ನಡೆಸಿದ ಆಧುನಿಕ ಕಾಲದ ಈಚೆಗಿನ ವ್ಯಕ್ತಿನಾಮಗಳಲ್ಲಿ ಅವರ ಹೆಸರುಗಳು ಪ್ರಭಾವ ಬೀರಿರುವುದನ್ನು ಗುರುತಿಸಬಹುದು. ಇತಿಹಾಸ ಸಮಕಾಲೀನ ಪರಿಸರಕ್ಕೆ ಬುನಾದಿಯಾಗಿ ನಿಂತು, ಹೇಗೆ ಆ ಪರಿಸರದ ಸಾಂಸ್ಕೃತಿ ಸ್ಥಿತ್ಯಂತರ ಹಾಗೂ ಸ್ಥಿರತೆಗೆ ಪ್ರೇರಕವಾಗುತ್ತದೆಯೆಂಬುದನ್ನು ತಿಳಿಯಲು ಐತಿಹಾಸಿಕ ಹಿನ್ನೆಲೆ ಬೇಕಾಗುತ್ತದೆ. ಆ ಮೂಲಕ ವ್ಯಕ್ತಿನಾಮಗಳ ಕಾಲಾಂತರದ ಚಾರಿತ್ರಿಕ ಬೆಳವಣಿಗೆಯ ಆಯಾಮಗಳನ್ನು ಗುರುತಿಸಲು ಸಾಧ್ಯವಾಗುತ್ತದೆ.

## ೩.೩ ಚಿತ್ರದುರ್ಗ ಪರಿಸರದ ಸಾಂಸ್ಕೃತಿಕ ಹಿನ್ನೆಲೆ

ಚಿತ್ರದುರ್ಗ ಪರಿಸರವು ಸಂಪದ್ಭರಿತವಾದ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದೆ. ಈ ಪರಿಸರದಲ್ಲಿ ವಾಸಿಸುವ ಜನಸಮುದಾಯವು ಆ ಪರಂಪರೆಯ ರಕ್ಷಣೆ ಮತ್ತು ಮುಂದುವರಿಕೆಯಾಗಿ ತಮ್ಮದೆ ಆದ ಕೊಡುಗೆಯನ್ನು ನೀಡಿದ್ದಾರೆ. ಮುಖ್ಯವಾಗಿ ಈ ಪರಿಸರದಲ್ಲಿ ಹಿಂದು, ಮುಸಲ್ಮಾನ, ಕ್ರೈಸ್ತ, ಜೈನ ಧರ್ಮದವರು ವಾಸಿಸುತ್ತಿದ್ದಾರೆ. ಹಿಂದೂಧರ್ಮದಲ್ಲಿ ಬ್ರಾಹ್ಮಣ, ಲಿಂಗಾಯತ, ನಾಯಕ, ಒಕ್ಕಲಿಗ, ಕುರುಬ, ಗೊಲ್ಲ, ರೆಡ್ಡಿ, ಲಂಬಾಣಿ, ಮಾದಿಗ, ಹೊಲೆಯ, ಕಂಬಾರ, ಕುಂಬಾರ, ಪದ್ಮಶಾಲಿ (ನೇಕಾರ), ವಿಶ್ವಕರ್ಮ, ಶೆಟ್ಟಿ

(ಕೋಮಟಿಗ), ಜೋಗಿ, ಜಂಗಮ, ಡೊಂಬ ಹೀಗೆ ಹಲವಾರು ಜಾತಿಗಳು ವಾಸಿಸುತ್ತಿವೆ. ಇವರಲ್ಲಿ ಆಯಾ ಸಮುದಾಯಗಳಿಗೆ ಸಂಬಂಧಿಸಿದಂತೆ ಒಂದೊಂದು ಸಂಸ್ಕೃತಿಯೂ, ಜೀವನ ಶೈಲಿಯೂ ರೂಪಗೊಂಡಿದೆ. ಜಾತಿ, ಕುಲ-ಕಸುಬುಗಳ ನೆಲೆಯಲ್ಲಿ ಅವರ ಜೀವನ ವಿಧಾನ ಭಿನ್ನವಾಗಿ ಕಂಡುಬರುತ್ತದೆ. ಈ ಪರಿಸರದಲ್ಲಿ ವಾಸಿಸುವ ಈ ಎಲ್ಲಾ ಸಮುದಾಯದವರು ಮುಖ್ಯವಾಗಿ ದಸರಾ, ದೀಪಾವಳಿ, ಯುಗಾದಿ, ನಾಗರಪಂಚಮಿ, ಕಾರಹುಣ್ಣಿಮೆ, ಮೊಹರಂ (ಪೀರ್ಲಹಬ್ಬ) ಮುಂತಾದ ಹಬ್ಬ-ಹರಿದಿನಗಳನ್ನು ಹಾಗೂ ಕೆಲವು ಜಾತ್ರೆ, ಉತ್ಸವಗಳನ್ನು ಆಚರಿಸುತ್ತಾರೆ. ಮೇಲ್ಜಾತಿ ಮತ್ತು ಕೆಳಜಾತಿಗಳು ಭಿನ್ನ ನೆಲೆಯಲ್ಲಿ ಸಂಪ್ರದಾಯ ಮತ್ತು ನಂಬಿಕೆಗಳನ್ನು ಉಳಿಸಿಕೊಂಡು ಬಂದಿದ್ದಾರೆ. ಈ ಸಮುದಾಯಗಳು ಪೂಜಿಸುವ ದೈವಗಳು ಕೂಡ ಭಿನ್ನಭಿನ್ನವಾಗಿರುವುದು ತಿಳಿಯುತ್ತದೆ. ಮೇಲ್ಜಾತಿ ಪೂಜಿಸುವ ದೈವವೂ, ಕೆಳಜಾತಿ ಪೂಜಿಸುವ ದೈವವೂ, ಆಯಾ ಸಮುದಾಯಗಳು ಸ್ವೀಕರಿಸಿದ ಕುರುಹುಗಳಾಗಿ ಆರಾಧನೆಗೊಳ್ಳುತ್ತಿವೆ. ಅಂದರೆ ಕೆಳಜಾತಿ ಪೂಜಿಸುವ ಮಾರಿ, ಮಸಣಾದಿ ದೈವಗಳನ್ನು ಮೇಲ್ಜಾತಿ ಪೂಜಿಸಲಿಕ್ಕಿಲ್ಲ. ಮೇಲ್ಜಾತಿಯವರು ಪೂಜಿಸುವ ವಿಷ್ಣು, ಶಿವ ಮೊದಲಾದ ದೈವಗಳನ್ನು ಕೆಳಜಾತಿಗಳು ಪೂಜಿಸಲಿಕ್ಕಿಲ್ಲ. ಆದರೆ ಇದರ ಪ್ರಸ್ತುತ ಸಂದರ್ಭ ಬದಲಾಗಿರಬಹುದು. ಒಟ್ಟು ನೋಟದಲ್ಲಿ ಮೇಲಿನ ಅಭಿಪ್ರಾಯ ಸಮುದಾಯದ ಸ್ವೀಕರಿಸುವಿಕೆಯ ಮನೋಧರ್ಮವನ್ನು ಹೇಳುತ್ತದೆ. ಜತೆಗೆ ಆಧುನಿಕವಾಗಿ ಸೃಷ್ಟಿಸಿಕೊಂಡ ಅನೇಕ ದೈವಗಳು ಈ ಜನಸಮುದಾಯದ ಮೇಲೆ ಪ್ರಭಾವ ಬೀರಿವೆ. ಈ ಮುಂದೆ ಈ ಪರಿಸರದಲ್ಲಿದ್ದ ಹನುಮಂತ, ಬಸವಣ್ಣ, ಈಶ್ವರ, ವಿಷ್ಣು, ಮಾರಮ್ಮ, ದುರ್ಗಮ್ಮ, ಕೊಲ್ಲಾರಮ್ಮ, ಗಾಳೆಮ್ಮ ಹೀಗೆ ಅನೇಕ ದೈವಗಳು ಈ ಜನರ ಜೀವನದಲ್ಲಿ ಹಾಸು ಹೊಕ್ಕಾಗಿದ್ದಾರೆ. ಹದಿನೆಂಟನೆಯ ಶತಮಾನದಲ್ಲಿ ಸ್ಥಾಪನೆಗೊಂಡ ಅನೇಕ ವೀರಶೈವ ಮಠಗಳು, ವೈಷ್ಣವ ಮಠಗಳು, ಸಾಧು-ಸಂತರು ಪ್ರಭಾವವನ್ನು ಬೀರಿದ್ದಾರೆ.

ಈ ಪರಿಸರದಲ್ಲಿ ಅನೇಕ ದೇವಾಲಯಗಳಿದ್ದು, ಮಠಗಳೂ ಇವೆ. ಸಾಂಸ್ಕೃತಿಕ ವೀರರು, ಐತಿಹಾಸಿಕ ಪುರುಷರು ಆಗಿ ಹೋಗಿದ್ದಾರೆ. ಇಲ್ಲಿ ವಾಸಿಸುವ ಜನತೆ ಕೆಲವು ದೈವಗಳಿಗೆ ಒಕ್ಕಲಾಗಿದ್ದಾರೆ, ಅಂದರೆ ವೀರಶೈವ ಮತದವರಿಗೆ ಮುರುಘರಾಜೇಂದ್ರಮಠ, ಸಿರಿಗೆರೆ ಮಠ ಇತ್ಯಾದಿ ಅವರ ಸಂಸ್ಕೃತಿಯ ಮೇಲೆ ಪರಿಣಾಮಬೀರಿರುವಂತೆ, ಅವರ ಹೆಸರುಗಳ ಮೇಲೆಯೂ ಇದರ ಪ್ರಭಾವ ದಟ್ಟವಾಗಿದೆ. ಈ ಜಿಲ್ಲೆಯಲ್ಲಿ ಪ್ರಭಾವೀ ಸಮುದಾಯವಾಗಿರುವ ನಾಯಕರಿಗೆ, ಬೋರಸ್ವಾಮಿ, ನರಸಿಂಹಸ್ವಾಮಿ, ನಾಯ್ಕನಹಟ್ಟಿ ತಿಪ್ಪೇಸ್ವಾಮಿ, ಸೂರೇ ಪಾಪಯ್ಯ, ಮುತ್ತೈದಿಗಳು, ಜಗಳೂರಜ್ಜ, ಓಬಳಸ್ವಾಮಿ ಮುಂತಾದ ದೇವರುಗಳು ಪೂಜ್ಯನೀಯವಾಗಿವೆ. ಜೊತೆಗೆ ಅವರ ಹೆಸರುಗಳು ಜಿಲ್ಲೆಯಾದ್ಯಂತ ಪ್ರಸಾರಗೊಂಡಿರುವುದು ತಿಳಿಯುತ್ತದೆ. ಅಲ್ಲದೆ ಇನ್ನುಳಿದ ಸಮುದಾಯಗಳು ತಂತಮ್ಮ ಕುಲದೈವ, ಮನೆದೈವ, ಪ್ರಸಿದ್ಧದೈವ ಹೀಗೆ ಹಲವಾರು ದೈವ ಸಂಬಂಧಿ ಸಂಗತಿಗಳನ್ನು ಈ ಅಧ್ಯಯನದ ಮುಂದಿನ ಭಾಗದಲ್ಲಿ ಸಾಧ್ಯಂತವಾಗಿ ಚರ್ಚಿಸಲಾಗುತ್ತದೆ.

ಇಸ್ಲಾಂ ಧರ್ಮ ಹಾಗೂ ಕ್ರೈಸ್ತಧರ್ಮಗಳು ಈ ಜಿಲ್ಲೆಯಲ್ಲಿದ್ದು, ಆ ಧರ್ಮದ ಜನರು ಅವರ ದೈವ, ಅವರ ಆಚರಣೆ, ಅವರ ವಿಶಿಷ್ಟ ಸಂಪ್ರದಾಯ ಆ ಮೂಲಕ ಕಟ್ಟಿಕೊಂಡ ಸಂಸ್ಕೃತಿ ಇವೆಲ್ಲವೂ ಅವರ ಹೆಸರುಗಳಿಗೂ ಪ್ರೇರಕವಾಗಿವೆ. ಕನ್ನಡ ಪರಿಸರದ ಅದರಲ್ಲಿಯೂ ಚಿತ್ರದುರ್ಗ ಪರಿಸರದ ಮುಸ್ಲಿಂ ಹಾಗೂ ಕ್ರೈಸ್ತರುಗಳ ಸಾಮಾಜಿಕ ಸಂಗತಿಗಳನ್ನು ಸ್ಥೂಲವಾಗಿ ಈ ಅಧ್ಯಯನದಲ್ಲಿ ಚರ್ಚಿಸಲಾಗುವುದು.

ಧರ್ಮ-ಧರ್ಮಗಳ ನಡುವೆ ಸಾಂಸ್ಕೃತಿಕ ಕೊಡುಕೊಳ್ಳುವಿಕೆಗಳು ಆಗಿರುವಂತೆ, ವ್ಯಕ್ತಿನಾಮಗಳಲ್ಲೂ ಈ ಪ್ರಕ್ರಿಯೆ ಜರುಗಿದೆ. ಧರ್ಮದ ಜತೆ ಮಾತ್ರವಲ್ಲ, ಈ ಪರಿಸರದಲ್ಲಿ ವಾಸಿಸುವ ಹಿಂದೂಧರ್ಮದಲ್ಲಿರುವ ಅನೇಕ ಜಾತಿಗಳು ಪರಸ್ಪರ ಕೊಡುಕೊಳ್ಳುವಿಕೆಯ ಜೀವನವನ್ನು ನಡೆಸುತ್ತಿದ್ದಾರೆ. ಜೊತೆಗೆ ವಿರುದ್ಧ ನೆಲೆಯಲ್ಲಿ ಜಾತಿ-ವರ್ಗದ ಶೋಷಣೆಯ ನೆಲೆ ಅಥವಾ ಪ್ರತ್ಯೇಕತೆಯ ಸಂಗತಿಗಳು ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿ ಮೇಲ್ಜಾತಿ-ವರ್ಗಗಳ ಪ್ರಾಬಲ್ಯ ಮತ್ತು ಕೆಳಜಾತಿ-ವರ್ಗಗಳ ದೈನ್ಯತೆ, ಮೇಲ್ಜಾತಿ-ವರ್ಗಗಳು ಅನುಸರಿಸುವ ಹೆಸರುಗಳು ಮತ್ತು ಕೆಳಜಾತಿ-ವರ್ಗಗಳು ಅನುಸರಿಸುವ ಹೆಸರುಗಳು ಭಿನ್ನವಾಗಿರುತ್ತವೆ. ಮೇಲ್ವರ್ಗ-ಜಾತಿಗಳ ದಬ್ಬಾಳಿಕೆ ಮತ್ತು ಕೆಳಜಾತಿ-ವರ್ಗಗಳ ಪ್ರತಿಭಟನೆ, ಈ ನೆಲೆಯಲ್ಲಿ ವ್ಯಕ್ತಿನಾಮಗಳ ಮೂಲಕ ನಡೆಯುವ ಸ್ವೀಕರಣ ಸಂಘರ್ಷಗಳ ಮುಖಾಮುಖಿಯ ಸಂದರ್ಭವನ್ನು ಸಮಾಜದಲ್ಲಿ ನಡೆಯುವ ಈ ಬಗೆಯ ಸಾಂಸ್ಕೃತಿಕ ಅಂಶಗಳನ್ನು ಹೆಸರುಗಳ ಮೂಲಕ ಗುರುತಿಸಬಹುದು. ಪರಸ್ಪರ ಹೊಂದಾಣಿಕೆಯಿಂದ ಬದುಕುತ್ತಿರುವ ಮೇಲ್ಜಾತಿ-ವರ್ಗ ಮತ್ತು ಕೆಳಜಾತಿ-ವರ್ಗಗಳ ಜಾತಿ ನೆಲೆಯ ಉಪಕ್ರಮದಲ್ಲಿ ಘಟಿಸುವ ನಾಮಕರಣ ಪ್ರಕ್ರಿಯೆಯೂ ಕೂಡ ಅತ್ಯಂತ ಕುತೂಹಲಕರ ಮತ್ತು ವೈಶಿಷ್ಟ್ಯಪೂರ್ಣವಾದುದು. ಮೇಲ್ಜಾತಿ ಬ್ರಾಹ್ಮಣ ಮತ್ತು ಲಿಂಗಾಯತರಲ್ಲಿ ಆಯಾ ಸಮುದಾಯದ ಪುರೋಹಿತ, ಜಂಗಮರು ನಾಮಕರಣ ಮಾಡಿದರೆ ಕೆಳಜಾತಿಗಳಲ್ಲಿ ಸೋದರತ್ತೆ, ಸೋದರಮಾವ ನಾಮಕರಣ ಮಾಡುತ್ತಾರೆ.

ಧರ್ಮವನ್ನು ಹೊರತುಪಡಿಸಿ, ಧಾರ್ಮಿಕ ಸಾಮರಸ್ಯವನ್ನು ವ್ಯಕ್ತಿಗಳ ಹೆಸರಿನಿಂದ ಗುರುತಿಸಬಹುದು. ಹಿಂದೂಧರ್ಮದ ಒಬ್ಬ ವ್ಯಕ್ತಿ, ಇಸ್ಲಾಂಧರ್ಮದ ಹೆಸರುಗಳನ್ನು ಇಟ್ಟುಕೊಂಡರೆ ಅಥವಾ ಮುಸ್ಲಿಂ ಧರ್ಮದ ಒಬ್ಬ ವ್ಯಕ್ತಿ ಹಿಂದೂಧರ್ಮದ ಯಾವುದೋ ಹೆಸರನ್ನು ಇಟ್ಟುಕೊಂಡಿರುವ ಕೆಲವು ಅಂಶಗಳು ಈ ಪರಿಸರದಲ್ಲಿ ದೊರೆಯುತ್ತವೆ. ಇದು ಎಲ್ಲರಲ್ಲೂ ಎಲ್ಲಾ ಸಂದರ್ಭದಲ್ಲೂ ನಡೆಯದೆ ಇದಕ್ಕೆ ನಿರ್ದಿಷ್ಟ ಮಿತಿಗಳು ಇರುತ್ತವೆ. ಈ ಬಗೆಯ ವಿಶ್ಲೇಷಣೆಯನ್ನು ಮುಂದೆ ಚರ್ಚಿಸಲಾಗುವುದು.

ಚಿತ್ರದುರ್ಗ ಪರಿಸರವು ಆರು ತಾಲೂಕುಗಳನ್ನು ಹೊಂದಿದ್ದು, ಆಯಾ ತಾಲೂಕುಗಳಲ್ಲಿ ಸ್ಥಳೀಯವಾಗಿ ಅನೇಕ ವಿಶಿಷ್ಟ ಸಂಗತಿಗಳನ್ನು ಒಳಗೊಂಡಿದೆ. ಸಮುದಾಯ ಸೃಷ್ಟಿಸಿಕೊಂಡ ಪ್ರಾದೇಶಿಕ ದೈವಗಳು ಆ ಸಮುದಾಯದ ವ್ಯಕ್ತಿನಾಮಗಳ ಮೇಲೆ ಅಥವಾ ಒಟ್ಟು ಪರಿಸರದ ಮೇಲೆ ವಿಶೇಷ ಪ್ರಭಾವವನ್ನು ಬೀರಿರುವುದು ತಿಳಿಯುತ್ತದೆ. ಈ ಬಗೆಯ ಪ್ರಾದೇಶಿಕ ದೈವಗಳು ಕೆಲವೇ ಸಮುದಾಯಗಳಿಗೆ ಮಾತ್ರ ಸೀಮಿತವಾಗಿರುವುದೂ ಇದೆ. ಅದರಂತೆ ಆ ಸಮುದಾಯಗಳ ಚೌಕಟ್ಟುಗಳನ್ನು ಮೀರಿ ಮೇಲ್ಜಾತಿಯವರ ಅಥವಾ ಕೆಳಜಾತಿಯವರ ಹೆಸರುಗಳಿಗೆ ಕಾರಣವಾಗಿದ್ದೂ ಇದೆ. ಹೀಗೆ ಪ್ರಾದೇಶಿಕವಾರು ವ್ಯಕ್ತಿನಾಮಗಳು ಆಯಾ ಸ್ಥಳೀಯ ಚರಿತ್ರೆಯ, ಸಾಂಸ್ಕೃತಿಕ ಅನಾವರಣಕ್ಕೆ ಬಹುಮುಖ್ಯ ಆಕರಗಳಾಗುತ್ತವೆ. ಈ ದೃಷ್ಟಿಯಿಂದ ವ್ಯಕ್ತಿನಾಮಗಳು ಸಾಮಾಜಿಕ ಸಂರಚನೆಯ ವಿವಿಧ ಆಯಾಮಗಳನ್ನು ವಿಭಿನ್ನ ದೃಷ್ಟಿಕೋನಗಳನ್ನು ಅರ್ಥೈಸಲು ಸಹಾಯಕವಾಗುತ್ತವೆ.

## ೩.೪ ಚಿತ್ರದುರ್ಗ ಪರಿಸರದ ಭಾಷಿಕ ಹಿನ್ನೆಲೆ

ಚಿತ್ರದುರ್ಗ ಜಿಲ್ಲೆಯು ಕರ್ನಾಟಕದ ಮಧ್ಯಭಾಗದಲ್ಲಿರುವುದರಿಂದ, ಈ ಜಿಲ್ಲೆಯ ಮುಖ್ಯವಾದ ಭಾಷೆ ಕನ್ನಡ. ನಂತರ ಉರ್ದು, ತೆಲುಗು, ತಮಿಳು, ಮರಾಠಿ ಮುಂತಾದ ಭಾಷೆಗಳು ಬಳಕೆಯಲ್ಲಿವೆ. ಕನ್ನಡ

ಮಾತೃಭಾಷಿಕರು ಹೆಚ್ಚಾಗಿರುವುದರಿಂದ ಒಟ್ಟು ಜಿಲ್ಲೆಯಲ್ಲಿ ಕನ್ನಡ ಸಂಸ್ಕೃತಿಗೆ ಸಂಬಂಧಿಸಿದ ಸಾಂಸ್ಕೃತಿಕ ಅಂಶಗಳೇ ವ್ಯಕ್ತಿನಾಮಗಳ ಮೇಲೆ ಪ್ರಭಾವಬೀರಿವೆ. ಉಳಿದಂತೆ ಮೊಳಕಾಲ್ಮೂರು, ಚಳ್ಳಕೆರೆ, ಹಿರಿಯೂರು ತಾಲೂಕುಗಳು ನೆರೆಯ ಆಂಧ್ರಪ್ರದೇಶದ ಗಡಿಭಾಗಕ್ಕೆ ಹೊಂದಿಕೊಂಡಿರುವುದರಿಂದ ತೆಲುಗು ಭಾಷೆಯನ್ನಾಡುವ ಜನರು ಈ ತಾಲೂಕುಗಳಲ್ಲಿ ಅಧಿಕವಾಗಿದ್ದಾರೆ. ಜತೆಗೆ ಆ ಸಂಸ್ಕೃತಿಯ ಕೆಲವು ಅಂಶಗಳು ಕನ್ನಡ ಪರಿಸರದ ವ್ಯಕ್ತಿನಾಮಗಳ ಮೇಲೆ ಪ್ರಭಾವ ಬೀರಿವೆ. ಆಂಧ್ರದ ರೆಡ್ಡಿ, ಕಮ್ಮಾ, ಕೋಮಟಿಗ ಅಲ್ಲದೆ ಕೆಲವು ಬುಡಕಟ್ಟು ಸಮುದಾಯಗಳು ತೆಲುಗು ಮಾತೃಭಾಷೆಯನ್ನು ಹೊಂದಿ ಇಲ್ಲಿ ವಾಸಿಸುತ್ತಿದ್ದಾರೆ. ಇವರ ವ್ಯಕ್ತಿನಾಮಗಳಲ್ಲಿ ಕನ್ನಡ ಪರಿಸರಕ್ಕಿಂತ ಭಿನ್ನವಾದ ಕೆಲವು ಅಂಶಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಆ ಮೂಲಕ ದ್ವಿಭಾಷಿಕ ಪರಿಸರದ ವ್ಯಕ್ತಿನಾಮಗಳ ಅಧ್ಯಯನ ಮಹತ್ವವನ್ನು ಪಡೆಯುತ್ತದೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಉರ್ದು ಭಾಷಿಕರು ವಾಸಿಸುತ್ತಿದ್ದು, ಅವರ ಭಾಷೆ ಮತ್ತು ಸಂಸ್ಕೃತಿ ಇವೆರಡರ ಹಿನ್ನೆಲೆಯಲ್ಲಿ ವ್ಯಕ್ತಿನಾಮಗಳ ರಚನೆಯ ಸ್ವರೂಪವು ಕನ್ನಡ ಪರಿಸರಕ್ಕನುಗುಣವಾಗಿ ಹೇಗೆ ಹೊಂದಿಕೊಂಡು ಅದರಲ್ಲಿಯೇ ಪ್ರತ್ಯೇಕವಾಗಿ ವಿಶಿಷ್ಟ ರಚನೆಗಳಾಗಿ ನಿಲ್ಲುತ್ತವೆ ಎಂಬುದನ್ನು ಈ ಮುಂದೆ ಚರ್ಚಿಸಲಾಗುತ್ತದೆ. ಈ ಜಿಲ್ಲೆಯಲ್ಲಿ ನಂತರದ ಸ್ಥಾನ ಮರಾಠಿ ಮತ್ತು ತಮಿಳು ಭಾಷೆಯದು. ಭೌಗೋಳಿಕವಾಗಿ ಮಹಾರಾಷ್ಟ್ರ ಹಾಗೂ ತಮಿಳುನಾಡುಗಳು ಈ ಜಿಲ್ಲೆಗೆ ದೂರವಿದ್ದರೂ, ಅಲ್ಲಿನ ಮರಾಠಿ ಮತ್ತು ತಮಿಳರು ವಲಸೆ ಬಂದು ನೆಲೆಸಿದ್ದಾರೆ. ಅವರಲ್ಲಿ ಮರಾಠಿ ವ್ಯಕ್ತಿನಾಮಗಳ ರಾಚನಿಕ ಹಾಗೂ ಸಾಮಾಜಿಕ ಸ್ವರೂಪವನ್ನು ಗಮನಿಸಲಾಗಿದೆ. ಒಂದು ಭಾಷೆ ವ್ಯಕ್ತಿನಾಮಗಳ ಮೇಲೆ ಬೀರಿರುವ ಪ್ರಭಾವ ಅದರಂತೆ ದ್ವಿಭಾಷಿಕ ಹಾಗೂ ಬಹುಭಾಷಿಕ ಸಂದರ್ಭದಲ್ಲಿ ಈ ನಾಮಗಳಲ್ಲಿ ಕಂಡುಬರುವ ಸಾಮ್ಯ ಹಾಗೂ ಭಿನ್ನತೆ ಇವು ಒಟ್ಟು ಒಂದು ಸಂಸ್ಕೃತಿಯ ನಿರ್ವಚನದಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ಈ ಕುರಿತಾಗಿ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

## ೩.೫ ವ್ಯಕ್ತಿನಾಮಗಳು : ಸಮುದಾಯಗಳ ಹಿನ್ನೆಲೆಯಲ್ಲಿ

ವ್ಯಕ್ತಿನಾಮಗಳು ಸಾಮಾಜಿಕ ಅಧ್ಯಯನದ ಮುಖ್ಯ ಆಕರಗಳಲ್ಲಿ ಒಂದು ಎಂದು ಪರಿಗಣಿಸಬಹುದು. ಈ ಆಕರಗಳನ್ನು ಇಟ್ಟುಕೊಂಡು ವಿಶ್ಲೇಷಣೆಗೆ ಒಳಪಡಿಸಿದಲ್ಲಿ ಒಂದು ಸಂಸ್ಕೃತಿಯ ಸೂಕ್ಷ್ಮ ಸಂಗತಿಗಳನ್ನು ಬಿಡಿಬಿಡಿಯಾಗಿ ತಿಳಿಯಲು ಸಾಧ್ಯವಾಗುತ್ತದೆ. ಭಾರತೀಯ ಸಮಾಜ ಜಾತಿಪ್ರಧಾನ ವ್ಯವಸ್ಥೆಯಿಂದ ಕೂಡಿದೆ. ಕನ್ನಡ ಪರಿಸರವೂ ಈ ವ್ಯವಸ್ಥೆಯನ್ನು ಹೊಂದಿದೆ. ಈ ದೃಷ್ಟಿಯಿಂದ ಆಯಾ ಜಾತಿ, ಧರ್ಮ, ಪ್ರದೇಶ ಇವುಗಳಿಗೆ ಸಂಬಂಧಿಸಿ ವ್ಯಕ್ತಿಗೆ ಹೆಸರಿಡುವ ಪ್ರಕ್ರಿಯೆ ನಡೆಯುತ್ತದೆ. ಜಾತಿ, ಧರ್ಮ, ಪ್ರದೇಶ ಈ ಮೂರು ಸಂದರ್ಭಗಳಲ್ಲೂ ಮೇಲ್ಜಾತಿ ಮತ್ತು ಕೆಳಜಾತಿಗಳಲ್ಲಿ ಹೆಸರಿಡುವಿಕೆಯು ಭಿನ್ನತೆಯಿಂದ ಕೂಡಿದೆ. ಒಮ್ಮೊಮ್ಮೆ ಈ ಎರಡೂ ಜಾತಿಗಳ ಮಧ್ಯೆ ಹೆಸರಿಡುವಿಕೆಯ ಪರಸ್ಪರ ಅಂತರ್ ಸಂಬಂಧ ಉಳಿದಿರುವುದೂ ತಿಳಿಯುತ್ತದೆ. ಈ ಕ್ರಿಯೆ ಆಯಾ ಜಾತಿಗಳು ಸ್ವೀಕರಿಸಿದ ಒಂದು ಮನೋಧರ್ಮದ ಭಾವನೆಯನ್ನು ಅವಲಂಬಿಸಿರುತ್ತವೆ. ಕನ್ನಡ ಪರಿಸರದಲ್ಲಿ ಮೇಲ್ ಸ್ತರದ ಸಮುದಾಯಗಳು ಈ ಬಗೆಯ ಸ್ವೀಕೃತ ಮನೋಭಾವನೆಯನ್ನು ತಳೆದಿರುವುದು ಕಡಿಮೆಯೆಂದೇ ಹೇಳಬಹುದು. ಆದರೆ ಕೆಳಸಮುದಾಯಗಳು ಮೇಲ್ ಸಮುದಾಯಗಳ ಹೆಸರುಗಳ ಸ್ವೀಕರಣೆಯನ್ನು ಮಾಡಿರುವುದು ತಿಳಿಯುತ್ತದೆ. ಇದಕ್ಕೆ ಅವರ ಸಾಮಾಜಿಕ, ಆರ್ಥಿಕ, ರಾಜಕೀಯ,

ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಮುಂತಾದ ಅಂಶಗಳ ಅಸಮತೋಲನ ಕಾರಣವಾಗಿರಲೂ ಸಾಕು. ಈ ಅಸಮತೋಲನದ ಪ್ರಕ್ರಿಯೆಯಲ್ಲಿಯೇ ಆಯಾ ಜಾತಿಗಳು ತಮ್ಮದೇ ಜಾತಿಯನ್ನು ಪ್ರತಿನಿಧಿಸುವಂಥ ಕೆಲವು ಹೆಸರುಗಳನ್ನು ಹೊಂದಿರುತ್ತವೆ. ಬುಡಕಟ್ಟು ಸಮುದಾಯಗಳಲ್ಲಿ ಈ ಸ್ಥಿರತೆಯನ್ನು ಕಾಣಬಹುದು. ಅವುಗಳನ್ನು ಸಮಾಜದ ಬೇರೊಂದು ವರ್ಗ ಅನುಸರಿಸಲಾರದು. ಆಧುನಿಕ ಸಂದರ್ಭದಲ್ಲಿಯೂ ಈ ಬಗೆಯ ಸಾಂಪ್ರದಾಯಿಕ ಹೆಸರಿಡುವ ಪದ್ಧತಿಯು ಕೆಲವು ಕಡೆ ಉಳಿದಿರುವುದು ಪರಂಪರೆಯ ಮುಂದುವರಿಕೆಯಾಗಿ ತೋರಿಬರುತ್ತದೆ. ಹೆಸರನ್ನು ಪರಂಪರೆಯ ರಕ್ಷಣೆಯೆಂಬಂತೆ ಉಳಿಸಿಕೊಂಡು ಬರುತ್ತಿರುವುದು ಒಂದರ್ಥದಲ್ಲಿ ಸಂಸ್ಕೃತಿಯ ರಕ್ಷಣೆಯೇ ಆಗಿದೆ. ಜಾತಿಯಂತೆ ಲಿಂಗದ ನೆಲೆಯು ಕೂಡ ಹೆಸರುಗಳ ಅಧ್ಯಯನದಲ್ಲಿ ಮಹತ್ವದ ಅಂಶಗಳನ್ನು ದಾಖಲಿಸುತ್ತದೆ. ಅಂದರೆ ಮೇಲ್ಜಾತಿ ಗಂಡಸರ ಹೆಸರುಗಳಿಗೂ, ಹೆಂಗಸರ ಹೆಸರುಗಳಿಗೂ ಭಿನ್ನತೆಯಿದೆ. ಅದರಂತೆ ಕೆಳಜಾತಿಯ ಗಂಡಸರಿಗೂ ಮತ್ತು ಹೆಂಗಸರ ಹೆಸರುಗಳಿಗೂ ಪ್ರತ್ಯೇಕ ಅಂಶಗಳು ಇವೆ. ಲಿಂಗದ ನೆಲೆಯಲ್ಲಿ ವ್ಯಕ್ತಿಗೆ ನಾಮವನ್ನು ಇಡುವಾಗ ಅನುಸರಿಸುವ ಪದ್ಧತಿಗಳು ಬೆಳೆದುಬಂದ ಬಗೆ, ಅದರಂತೆ ಲಿಂಗ ತಾರತಮ್ಯದ ನೆಲೆಯಲ್ಲಿ ಹೆಸರಿನ ಸಾಮಾಜಿಕ ಆಯಾಮ ಬಹುಮುಖ್ಯ ಸಂಗತಿಗಳಾಗುತ್ತವೆ. ಲಿಂಗ ಸಂಬಂಧಿ ಗಂಡು ಮತ್ತು ಹೆಣ್ಣು ಇಬ್ಬರಲ್ಲಿಯೂ ಏಕ ರೀತಿಯ ಹೆಸರುಗಳು ಇರುವುದು ಸಾಧ್ಯವಿಲ್ಲ. ಮೇಲ್ ಸಮುದಾಯದ ಗಂಡಸರ ಹೆಸರುಗಳಿಗೂ, ಕೆಳ ಸಮುದಾಯದ ಗಂಡಸರ ಹೆಸರುಗಳಿಗೂ ಅದರಂತೆ ಮೇಲ್ ಸಮುದಾಯದ ಹೆಣ್ಣು ಹಾಗೂ ಕೆಳಸಮುದಾಯದ ಹೆಣ್ಣಿನ ಹೆಸರುಗಳು ಸಾಕಷ್ಟು ಭಿನ್ನ, ದ್ವಂದ್ವ, ವೈರುದ್ಧ ಈ ಮೂರು ನೆಲೆಯಲ್ಲಿ ಸಾಕಷ್ಟು ಅಂತರಗಳು ಇರುವುದನ್ನು ಗಮನಿಸಬಹುದು. ಲಿಂಗ ಸಂಬಂಧಿ ನೆಲೆಯಲ್ಲಿ ಧರ್ಮಾಧರ್ಮಗಳ ನಡುವೆಯೂ (ಹಿಂದೂ, ಮುಸ್ಲಿಂ, ಕ್ರೈಸ್ತ) ಸಾಕಷ್ಟು ವ್ಯತ್ಯಾಸವಿರುವುದನ್ನು ಕಾಣಬಹುದು. ವೃತ್ತಿ ಮೂಲದಿಂದಲೂ ಹೆಸರುಗಳು ಬಳಕೆಯಲ್ಲಿರುವುದು ತಿಳಿಯುತ್ತದೆ. ಸಮುದಾಯಗಳ ವೃತ್ತಿಗಳನ್ನು ಆಧರಿಸಿದ ಜಾತಿಶ್ರೇಣಿಗಳ ನೆಲೆಯಲ್ಲಿ ಅವರ ಸಂಸ್ಕೃತಿಯು ರೂಪುಗೊಂಡಿರುತ್ತದೆ. ಕಾರಣ ವೃತ್ತಿಯು ಕೂಡ ಕ್ರಮೇಣ ಅದರ ಪರಿಧಿಯಲ್ಲಿ ಕೆಲವು ಹೆಸರುಗಳನ್ನು ಸೃಷ್ಟಿಸಿಕೊಳ್ಳುತ್ತದೆ. ಅಂದರೆ ಕುಂಬಾರ ವೃತ್ತಿಯುಳ್ಳವನು ಆ ವೃತ್ತಿಗೆ ಸಂಬಂಧಿಸಿದ ಮೂಲಪುರುಷ, ದೈವ, ವೃತ್ತಿ ಸಂಬಂಧಿ ಚಟುವಟಿಕೆಗಳ ಹೆಸರುಗಳನ್ನು ಹೊಂದಿರುತ್ತಾನೆ. ಅದರಂತೆ ಒಬ್ಬ ಪುರೋಹಿತ ತನ್ನ ಪೂಜಾರಿಕೆ ವೃತ್ತಿಯಿಂದ ಶಿಷ್ಟ ಎನ್ನಬಹುದಾದ ದೈವ ಹಾಗೂ ಪರಂಪರೆಯ ಮುಖೇನ ಬಂದಂತಹ ಕೆಲವು ಹೆಸರುಗಳನ್ನು ಧರಿಸುತ್ತಾನೆ. ಈ ಪ್ರಕ್ರಿಯೆ ಹೆಸರುಗಳಲ್ಲಿ ಸಮುದಾಯಗಳು ತೋರಿಸುವಂತಹ ಸಾಮಾಜಿಕ ಸ್ತರವಿನ್ಯಾಸವನ್ನು ಸ್ಪಷ್ಟಪಡಿಸುತ್ತದೆ.

ಮೇಲಿನ ಅಂಶಗಳಿಂದ ಚಿತ್ರದುರ್ಗ ಜಿಲ್ಲೆಯ ವ್ಯಕ್ತಿನಾಮಗಳ ಜಾತಿ, ಲಿಂಗ, ವೃತ್ತಿ, ತಲೆಮಾರುಗಳ ಮೂಲಕ ಉಂಟಾದ ಸಾಮಾಜಿಕ ಸಂಗತಿಗಳ ಕಡೆಗೆ ಗಮನಹರಿಸಲಾಗುತ್ತದೆ. ಬಹುಮುಖ್ಯವಾಗಿ ಜಿಲ್ಲೆಯ ಹನ್ನೊಂದು ಸಮುದಾಯಗಳನ್ನು ಮಾತ್ರ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಆಯಾ ಸಮುದಾಯಗಳ ವ್ಯಕ್ತಿನಾಮಗಳನ್ನು ವಯೋಮಾನಾಧಾರದ ಮೇಲೆ ಮೂರು ತಲೆಮಾರುಗಳಲ್ಲಿ ಗುರುತಿಸಿಕೊಂಡು, ಆ ತಲೆಮಾರುಗಳಲ್ಲಿ ಉಂಟಾದ ಹೆಸರಿನ ಬದಲಾವಣೆಯನ್ನು ವಾರ್ಗಿಕ ಮತ್ತು ನಿರ್ದಿಷ್ಟಗಳ ಹಿನ್ನಲೆಯಲ್ಲಿ ಗುರುತಿಸಲಾಗಿದೆ. ಇಲ್ಲಿ ಒಂದೊಂದು ಜಾತಿಯ ಹೆಸರುಗಳ ಮೂರು ತಲೆಮಾರುಗಳನ್ನು ಸಂಕ್ಷಿಪ್ತವಾಗಿ

ಪರಿಚಯಿಸುವ ಮೂಲಕ ಮುಂದಿನ ವಿಶ್ಲೇಷಣೆ ಪ್ರವೇಶಿಕೆಯನ್ನು ರೂಪಿಸಿಕೊಳ್ಳಲಾಗಿದೆ. ಅಂಥ ಕೆಲವು ಮಾದರಿಗಳನ್ನು ಇಲ್ಲಿ ನೀಡಲಾಗಿದೆ.

ಒಂದು ಪ್ರದೇಶದ, ಒಂದು ಜನಾಂಗದ, ಒಂದು ಕಾಲಘಟ್ಟದ ವ್ಯಕ್ತಿನಾಮಗಳನ್ನು ಕುರಿತು ಅಧ್ಯಯನ ಮಾಡುವುದು ಎಂದರೆ ಇಡೀ ಪ್ರದೇಶದ, ಇಡೀ ಕಾಲಘಟ್ಟದ, ಇಡೀ ಜನಾಂಗದ ಲಭ್ಯವಾದ ಎಲ್ಲಾ ವ್ಯಕ್ತಿನಾಮಗಳನ್ನು ವಿಶ್ಲೇಷಣೆ ಮಾಡುವುದು ಎಂಬುದಲ್ಲ. ಹಾಗೆ ಒಂದು ಪ್ರದೇಶದಲ್ಲಿ ವಾಸಿಸುವ ಭಿನ್ನ ಸಮುದಾಯಗಳಲ್ಲಿ ಬಳಕೆಯಲ್ಲಿರುವ ಪ್ರತಿಯೊಂದು ಹೆಸರಿನ ಬಗೆಗೆ ಅಧ್ಯಯನ ಮಾಡುವುದು ಕಷ್ಟಕರ. ಮೇಲಿನ ವಿವರಣೆ ಎಲ್ಲಾ ಸಮಾಜಗಳ ವ್ಯಕ್ತಿನಾಮಗಳಿಗೆ ಅನ್ವಯಿಸದೆ ಇರಬಹುದು. ಏಕೆಂದರೆ ಕೆಲವೇ ಸಂಖ್ಯೆಯ ಜನರನ್ನು ಹೊಂದಿರುವ ಸಮುದಾಯಗಳು (ಸೋಲಿಗ, ಬಡಿಗ... ಮುಂತಾದವು) ಕೆಲವು ಮಾದರಿಯ ಹೆಸರುಗಳನ್ನು ಹೊಂದಿರುವುದರಿಂದ, ಆ ಕುರಿತ ಅಧ್ಯಯನವು ಬೇರೆಯೇ ಆಗಬಹುದು. ಸಮಾಜಮುಖಿ ಅಧ್ಯಯನಗಳಿಗೆ ಈ ಬಗೆಯ ಮಿತಿಗಳು ಇರುವುದು ಸಹಜವೆಂದೇ ಹೇಳಬಹುದು. ಬದಲಿಗೆ ಒಂದು ಸಮುದಾಯದಲ್ಲಿ ಕಂಡುಬರುವ ಅಗತ್ಯವೆನಿಸಿದ ಕೆಲವು ಹೆಸರುಗಳನ್ನು ಮಾದರಿಗೆ ತೆಗೆದುಕೊಂಡು, ಆ ಮೂಲಕ ಅಲ್ಲಿನ ಸಂಸ್ಕೃತಿಯ ನಿರ್ವಚನವನ್ನು ಮಾಡಲಾಗುವುದು. ಪ್ರಸ್ತುತ ಸಾಮಾಜಿಕ ಅಧ್ಯಯನವು ಚಿತ್ರದುರ್ಗ ಪರಿಸರದ ಸಮಕಾಲೀನ ವ್ಯಕ್ತಿನಾಮಗಳ ಕೆಲವು ಮಾದರಿಗಳನ್ನು ಆಯ್ದುಕೊಂಡು, ಆ ಮೂಲಕ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಯಾಮಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ದತ್ತ ಮಾಹಿತಿಯ ಆಧಾರದ ಮೇಲೆ ನಿರೂಪಿಸಲ್ಪಡುವ ಅಂಶಗಳು, ತತ್ವಬದ್ಧವಾದ ನಿಯಮಗಳೆನಿಸುತ್ತವೆಂದು ಹೇಳಲಾಗದಾದರೂ, ಅಂತಹ ಕೆಲವಾರು ಸಾಧ್ಯತೆಗಳನ್ನು ಒಳಗು ಮಾಡಬಲ್ಲವೆಂದು ಹೇಳಬಹುದು.

'ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು' ಎಂಬ ವಿಷಯ ಕುರಿತ ಅಧ್ಯಯನ, ಆ ಭೌಗೋಳಿಕ ಪರಿಸರದಲ್ಲಿ ವಾಸಿಸುವ ಎಲ್ಲಾ ಸಮುದಾಯಗಳ ವ್ಯಕ್ತಿನಾಮಗಳನ್ನು ಅಧ್ಯಯನಕ್ಕೆ ಒಳಗು ಮಾಡದೇ ಕೆಲವು ಮುಖ್ಯ ಪ್ರದೇಶಗಳಿಂದ, ಅಧ್ಯಯನಕ್ಕೆ ನೇರವಾಗಿ ಸಹಾಯಕವಾಗಬಲ್ಲ ವ್ಯಕ್ತಿ ನಾಮಗಳನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಕೆಲವು ಸಮುದಾಯಗಳನ್ನು ನಿರ್ದಿಷ್ಟಪಡಿಸಿಕೊಂಡಿದೆ. ಬ್ರಾಹ್ಮಣ, ಲಿಂಗಾಯತ, ನಾಯಕ, ರೆಡ್ಡಿ, ಕುರುಬ, ಗೊಲ್ಲ, ಲಂಬಾಣಿ, ಮರಾಠಿ, ವಿಶ್ವಕರ್ಮ, ಮಾದಿಗ, ವೈಶ್ಯ ಸಮುದಾಯಗಳ ಹೆಸರುಗಳನ್ನು ವಿಶ್ಲೇಷಣೆಗೆ ಗುರಿಪಡಿಸುವ ಪ್ರಯತ್ನ ಮಾಡಲಾಗಿದೆ. ಇದು ಈ ನಿಬಂಧದ ಮಿತಿಯೂ ಆಗಿದೆ.

ಪ್ರಸ್ತುತ ಸಾಮಾಜಿಕ ಅಧ್ಯಯನದಲ್ಲಿ, ಅಧ್ಯಯನದ ಅನುಕೂಲಕ್ಕಾಗಿ ಕೆಲವು ವರ್ಗೀಕರಣ ಮಾಡಿಕೊಳ್ಳಲಾಗಿದೆ. ಅವುಗಳ ಸ್ಪಷ್ಟೀಕರಣವನ್ನು ಇಲ್ಲಿ ಕೊಡಲಾಗಿದೆ.

೧. ಪ್ರತಿ ಸಮುದಾಯದ ಹೆಸರುಗಳನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡಲಾಗಿದೆ. ಕಾಲಾಂತರದಲ್ಲಿ ಆಯಾ ಸಮುದಾಯಗಳಲ್ಲಿ ವ್ಯಕ್ತಿನಾಮಗಳ ಬಳಕೆಯಲ್ಲಿ ಉಂಟಾಗಿರುವ ಸ್ಥಿತ್ಯಂತರಗಳನ್ನು ಗುರುತಿಸುವ ಉದ್ದೇಶದಿಂದ, ವಯಸ್ಸಿನ ಆಧಾರದ ಮೇಲೆ ಮೂರು ತಲೆಮಾರುಗಳನ್ನು ಗುರುತಿಸಿಕೊಳ್ಳಲಾಗಿದೆ.

ತಲೆಮಾರು ಒಂದು : ೪೦ ರಿಂದ ೬೦ ವಯಸ್ಸಿನವರು.

ತಲೆಮಾರು ಎರಡು : ೨೫ ರಿಂದ ೪೦ ವಯಸ್ಸಿನವರು.

ತಲೆಮಾರು ಮೂರು : ೧೫ ರಿಂದ ೨೫ ವಯಸ್ಸಿನವರು.

೨. ವ್ಯಕ್ತಿನಾಮಗಳ ಬಳಕೆಯ ಪ್ರಸರಣ (ಪ್ರಮಾಣ)ವನ್ನು ಗುರುತಿಸುವ ಉದ್ದೇಶಕ್ಕಾಗಿ, ವ್ಯಕ್ತಿನಾಮ ನಿರ್ದಿಷ್ಟದ ಮೂಲ ಮತ್ತು ಅರ್ಥವನ್ನಾಧರಿಸಿ ಐದು ಗುಂಪುಗಳಾಗಿ ವಿಂಗಡಿಸಿಕೊಳ್ಳಲಾಗಿದೆ.

ಗುಂಪು - ೧. ದೈವ, ಧರ್ಮ, ಪುರಾಣ ಮೂಲದ ಹೆಸರುಗಳು

ಗುಂಪು - ೨. ಸಮಕಾಲೀನ ಪ್ರಸಿದ್ಧ ವ್ಯಕ್ತಿಗಳ ಪ್ರೇರಣೆ-ಪ್ರಭಾವದಿಂದ ಬಂದಿರುವ ಹೆಸರುಗಳು

ಗುಂಪು - ೩. ಆಧುನೀಕರಣದ ಪ್ರಭಾವದಿಂದ ಬಂದಿರುವ ಹೆಸರುಗಳು

ಗುಂಪು - ೪. ಚರಿತ್ರೆ ಮೂಲದ ಹೆಸರುಗಳು

ಗುಂಪು - ೫. ಇತರೆ ಮೂಲದ ಹೆಸರುಗಳು

೩. ವ್ಯಕ್ತಿನಾಮ ವಾರ್ಗಿಕಗಳನ್ನು ಅವುಗಳ ಅರ್ಥವನ್ನಾಧರಿಸಿ ಎರಡು ಪ್ರಕಾರಗಳಾಗಿ ವಿಂಗಡಿಸಿಕೊಳ್ಳಲಾಗಿದೆ.

೧. ಸಂಬಂಧವಾಚಿ ವಾರ್ಗಿಕಗಳು

೨. ವೃತ್ತಿ/ಜಾತಿವಾಚಿ ವಾರ್ಗಿಕಗಳು

೪. ತಲೆಮಾರುಗಳ ಅಂತರದಲ್ಲಿ ನಿರ್ದಿಷ್ಟ ಮತ್ತು ವಾರ್ಗಿಕಗಳ ಬಳಕೆಯ ಬೆಳವಣಿಗೆಯಲ್ಲಾಗಿರುವ ಬದಲಾವಣೆಯನ್ನು ಶೇಕಡವಾರು ಅಂಕಿ-ಸಂಖ್ಯೆ (ಪ್ರಮಾಣ)ಗಳ ಮೂಲಕ ಗುರುತಿಸುವ ಪ್ರಯತ್ನ ಮಾಡಿದೆ. ಇಲ್ಲಿನ ಅಂಕಿ-ಸಂಖ್ಯೆಗಳು ಸಮಾಜದ ಯಥಾಸ್ಥಿತಿಯನ್ನು ಬಹುತೇಕ ಸ್ಪಷ್ಟಪಡಿಸುತ್ತವೆಯಾದರೂ, ಇವು ನಿರ್ದಿಷ್ಟ ತತ್ವದಂತೆ ಯಾವುದೇ ಸಿದ್ಧಾಂತಕ್ಕೆ ಬದ್ಧವಾಗಿರದೇ ಹೆಚ್ಚು ಕಡಿಮೆ ಈ ರೀತಿಯ ನಿರ್ದಿಷ್ಟ ಪರಿಸರವನ್ನು ಖಚಿತಪಡಿಸಬಲ್ಲವು.

ಈ ನಾಲ್ಕು ಅಂಶಗಳು ಈ ಅಧ್ಯಾಯದ ಪರಿಕಲ್ಪನೆಗಳಾಗಿವೆ. ಮತ್ತು ಇದು ಅಧ್ಯಯನದ ಮಿತಿಯೂ ಆಗಿದೆ.

### ೩.೫.೧ ಬ್ರಾಹ್ಮಣ

ಕರ್ನಾಟಕದಲ್ಲಿ ಬ್ರಾಹ್ಮಣ ಸಮುದಾಯವು ಅಲ್ಪಸಂಖ್ಯಾತರಾಗಿದ್ದು ಇವರು ಭಾರತಕ್ಕೆ ಆಗಮಿಸಿದ ಆರ್ಯಮೂಲ ಸಮುದಾಯವೆಂದು ಹೇಳಲಾಗುತ್ತದೆ. ಪ್ರಾಚೀನ ಕಾಲದಲ್ಲಿ ಭಾರತಕ್ಕೆ ಬಂದು ನೆಲೆಯೂರಿದ ಆರ್ಯರು ಪಿತೃಪ್ರಧಾನ ಸಮಾಜದ ಅನುಯಾಯಿಗಳಾಗಿದ್ದು, ಪ್ರಕೃತಿ ಮತ್ತು ಶಕ್ತಿ ಆರಾಧಕರಾಗಿದ್ದುದು ಚರಿತ್ರೆಯಿಂದ ತಿಳಿಯುತ್ತದೆ. ಉತ್ತರ ಭಾರತದಲ್ಲಿ ತಮ್ಮ ನಾಗರಿಕತೆಯನ್ನು ನೆಲೆಯೂರಿಕೊಂಡು

ಪ್ರಬಲರಾಗಿದ್ದ ಆರ್ಯ ಸಮುದಾಯ ದಕ್ಷಿಣ ಭಾರತದ ಮೂಲನಿವಾಸಿಗಳಾಗಿದ್ದ ದ್ರಾವಿಡರ ಮೇಲೆ ಯುದ್ಧಮಾಡಿದರು. ಆ ಮೂಲಕ ದ್ರಾವಿಡರ ಪ್ರದೇಶಗಳಲ್ಲಿ ಅವರು ಭದ್ರವಾಗಿ ನೆಲೆಯೂರಿದರು. ದ್ರಾವಿಡ ಮತ್ತು ಆರ್ಯರ ನಡುವಿನ ಈ ಸಂಘರ್ಷದ ಅವಧಿಯಲ್ಲಿ ಸಾಮಾಜಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ಸಂಕರಗಳು ಏರ್ಪಟ್ಟವು. ಈ ಸಂಕರ ದ್ರಾವಿಡ ಮೂಲಸಂಸ್ಕೃತಿಯ ಮೇಲೆ ಸಾಕಷ್ಟು ಪ್ರಭಾವವನ್ನು ಬೀರಿತು. ಸ್ಥಳೀಯ ಸಂಸ್ಕೃತಿಯು ಆರ್ಯೀಕರಿಸಲ್ಪಟ್ಟಿತು. ಆರ್ಯ ಮತ್ತು ದ್ರಾವಿಡರಿಗೆ ವೈವಾಹಿಕ ಸಂಬಂಧಗಳು ನಡೆದು ಆರ್ಯಪ್ರಧಾನ ಸಂಸ್ಕೃತಿ ದಕ್ಷಿಣ ಭಾರತದುದ್ದಕ್ಕೂ ಹರಡಿತು. ಈ ಅವಧಿಯಲ್ಲಿಯೇ ದಕ್ಷಿಣ ಭಾರತದಲ್ಲಿ ವೈದಿಕರ ಪುನರುಜ್ಜೀವನವಾಯಿತೆಂದು ಹೇಳಬಹುದು. ಕ್ರಮೇಣ ಈ ಪುನರುಜ್ಜೀವನಗೊಂಡ ವೈದಿಕ ಸಮುದಾಯ ಪ್ರತ್ಯೇಕಗೊಂಡು ಸ್ಥಳೀಯ ಸಮುದಾಯಗಳನ್ನು ಬೇರ್ಪಡಿಸಿತು. ಕರ್ನಾಟಕದಲ್ಲಿಯೂ ಇಂಥ ವೈದಿಕ ಮೂಲದ ಪ್ರತ್ಯೇಕಿತ ಗುಂಪನ್ನು ಬ್ರಾಹ್ಮಣ ಸಮುದಾಯವಾಗಿ ಗುರುತಿಸಲಾಗುತ್ತದೆ.

ಆರ್ಯರ ಪ್ರಕೃತಿ ಮತ್ತು ಶಕ್ತಿ ಪೂಜೆಯಿಂದ ಕಾಲಾಂತರದಲ್ಲಿ ವೇದಗಳು, ಆಗಮಗಳು, ಉಪನಿಷತ್ತುಗಳು ರಚನೆಗೊಂಡ ನಂತರ ವಿಷ್ಣು, ಬ್ರಹ್ಮ, ಲಕ್ಷ್ಮಿ, ನಾರಾಯಣ ಮುಂತಾದ ದೈವಗಳನ್ನು ಪೂಜಿಸುವ ಪದ್ಧತಿ ಆರಂಭವಾಯಿತೆನ್ನಬಹುದು. ಈ ಹಿನ್ನೆಲೆಯಲ್ಲಿ ವಿಷ್ಣುಪುರಾಣ, ಗರುಡಪುರಾಣ, ನಾರಾಯಣನ ಮಹಿಮೆಗಳಂಥ ವೈದಿಕ ದೇವತೆಗಳ ಸ್ತೋತ್ರದ ಸಾಹಿತ್ಯ ರಚನೆಗೊಂಡಿತು. ಅದರಂತೆ ದಕ್ಷಿಣಭಾರತದಲ್ಲಿ ಕ್ರಿ.ಶ. ೬ನೆಯ ಶತಮಾನದ ಅವಧಿಯಲ್ಲಿ ವೈದಿಕ ಮೂಲ ಸಂಬಂಧವಾದ ವೈಷ್ಣವಧರ್ಮ ಪುನರುಜ್ಜೀವನಗೊಂಡಿತು. ಬಹುತೇಕ ಕನ್ನಡ ರಾಜಮನೆತನಗಳು ಆರಂಭದಲ್ಲಿ ಶ್ರೀ ವೈಷ್ಣವ ಧರ್ಮವನ್ನು ನಾಡಿನ ರಾಜಧರ್ಮವನ್ನಾಗಿ ಸ್ವೀಕರಿಸಿದ್ದು ಶಾತವಾಹನರಿಂದ ವಿಜಯನಗರದ ಅರಸರವರೆಗೆ ಕಂಡುಬರುತ್ತದೆ. ಅಂತೆಯೇ ಸಮಕಾಲೀನ ಸಾಮಾಜಿಕ ಸ್ಥಿತಿಯೂ ಕೂಡ ಈ ಧರ್ಮದೊಂದಿಗೆ ಬೆಳೆದುಬಂದಿದೆ.

ರಾಮಾಯಣ, ಮಹಾಭಾರತ, ಭಾಗವತಗಳಂಥ ಕಾವ್ಯಗಳಿಂದ ದಟ್ಟವಾದ ಪ್ರೇರಣೆಯನ್ನು ಪಡೆದ ದೇಶೀ ಸಂಸ್ಕೃತಿ, ಆ ಕಾವ್ಯಗಳ ರಾಮ ಕೃಷ್ಣರಂಥ ವೈದಿಕ ಮೂಲದ ದೈವಗಳನ್ನು ಆರಾಧಿಸಿದ್ದು ಇದೆ. ಸಹಜವಾಗಿಯೆ ಆ ದೈವಗಳ ಪ್ರಭಾವ ಸಮುದಾಯಗಳ ಮೇಲೆ ಹರಡಿಕೊಂಡಿದೆ.

ವೈಷ್ಣವ ಧರ್ಮದ ಪುನರುಜ್ಜೀವನ ಕಾಲದಲ್ಲಿ ಧರ್ಮ ಎರಡು ಕವಲುಗಳುಂಟಾದುದು ತಿಳಿಯುತ್ತದೆ. ಹಾಗಾಗಲೇ ಶೈವಧರ್ಮವು ಕೂಡ ಇಲ್ಲಿ ಗಟ್ಟಿಗೊಂಡಿತ್ತು. ಸಿಂಧೂ ನಾಗರಿಕತೆಯಲ್ಲಿ ಪಶುಪತಿಯ ಆರಾಧನೆ ಇದ್ದ ಬಗ್ಗೆ ಚರಿತ್ರೆಯ ಕುರುಹುಗಳು ತಿಳಿಸುತ್ತವೆ. ಆರ್ಯರು ಶಿವನನ್ನೂ ಪೂಜಿಸುತ್ತಿದ್ದರು ಎಂಬುದು ಇದರಿಂದ ತಿಳಿಯುತ್ತದೆ. ಕ್ರಮೇಣ ಇದು ಬೆಳೆದು ಶಿವನನ್ನು ಪೂಜಿಸುವ ಸಮುದಾಯವು ಶೈವ ಬ್ರಾಹ್ಮಣವೆಂದು, ವಿಷ್ಣುವನ್ನು ಪೂಜಿಸುವ ಸಮುದಾಯವು ಶ್ರೀ ವೈಷ್ಣವರೆಂದು ಕವಲುಗಳಾಗಿವೆ. ಕನ್ನಡ ಪರಿಸರದಲ್ಲಿಯೂ ಈ ಎರಡು ಧರ್ಮದ ಆರಾಧಕರಿದ್ದಾರೆ. ಇವರ ವ್ಯಕ್ತಿನಾಮಗಳು ಕೂಡ ಆ ಧರ್ಮ ಮತ್ತು ದೈವ ನೆಲೆಯನ್ನು ನಿರ್ದೇಶಿಸುತ್ತದೆ.

ಪ್ರಾಚೀನ ಕಾಲದಿಂದಲೂ ಬ್ರಾಹ್ಮಣರು ಕ್ಷತ್ರಿಯರೊಂದಿಗೆ ರಾಜ್ಯದ ಆಡಳಿತದಲ್ಲಿ ತಮ್ಮದೇ ಆದ ಸ್ಥಾನವನ್ನು ಪಡೆದುಕೊಂಡಿದ್ದರು. ರಾಜಗುರುಗಳಾಗಿ ಪೌರೋಹಿತ್ಯ ಮಾಡುತ್ತ ಕುಲಕರ್ಣಿ ಮುಂತಾದ ವೃತ್ತಿಗಳೊಂದಿಗೆ ಆಡಳಿತ ಅಧಿಕಾರಿಗಳಾಗಿಯೂ ಕಾರ್ಯ ನಿರ್ವಹಿಸಿದ ಬಗ್ಗೆ ಶಾಸನಗಳು ಮಾಹಿತಿಯನ್ನು

ಒದಗಿಸುತ್ತವೆ. ಈ ವೃತ್ತಿಯಲ್ಲಿಯೇ ಮುಂದುವರೆದ ಸಮುದಾಯಗಳು ಕ್ರಮೇಣ ಆ ವೃತ್ತಿಯ ಹೆಸರನ್ನ ಜಾತಿಗೆ ಬೆಸೆದುಕೊಂಡಿದ್ದನ್ನು ಗುರುತಿಸಬಹುದು. ಈ ವೃತ್ತಿಗಳು ಕೇವಲ ಬ್ರಾಹ್ಮಣರಿಗೆ ಮಾತ್ರ ಸೀಮಿತವಾಗಿದ್ದವು. ವಿಜಯನಗರೋತ್ತರ ಕರ್ನಾಟಕದಲ್ಲಿ ಈ ವೃತ್ತಿಗಳನ್ನು ಬೇರೆ ಸಮುದಾಯಗಳು ಮಾಡಿದ ಬಗ್ಗೆ ಉಲ್ಲೇಖಗಳಿವೆ. ಹೀಗಿದ್ದರೂ, ಈ ವೃತ್ತಿಗಳು ನೇರವಾಗಿ ಬ್ರಾಹ್ಮಣ ಸಮುದಾಯಕ್ಕೆ ಆರೋಪಿತವಾಗುತ್ತಿರುವುದು ಕಂಡುಬರುತ್ತದೆ.

ಕನ್ನಡ ಪರಿಸರದಲ್ಲಿ ಆರ್ಯ ಮತ್ತು ದ್ರಾವಿಡ ಮೂಲದ ಹೆಸರುಗಳು ಸಮ್ಮಿಶ್ರಣಗೊಂಡಿರುವುದು ತಿಳಿಯುತ್ತದೆ. ಅದರಂತೆ ಆ ಎರಡೂ ಜನಾಂಗಗಳ ಹೆಸರುಗಳು ಕೂಡ ಈ ಬಗೆಯ ತಾದ್ಯಾತ್ಮ ಸಂಬಂಧವನ್ನು ಹೊಂದಿವೆ. ಬ್ರಾಹ್ಮಣ ಸಮುದಾಯವು ದ್ರಾವಿಡರ ದೇಶೀ ದೈವಗಳಾದ ಮಾರಿ, ದುರ್ಗಿ, ಮಸಣಿ ಮುಂತಾದ ಶಕ್ತಿದೇವತೆಗಳನ್ನು ಸಂಸ್ಕೃತಾನುಕರಣಗೊಳಿಸುವ ಮೂಲಕ ಅವುಗಳನ್ನು ತಮ್ಮ ಹೆಸರುಗಳಂತೆ ಬದಲಿಸಿಕೊಂಡಿರುವುದು ತಿಳಿಯುತ್ತದೆ. (ಮಾರಿ : ಮಾರಿಮಾಂಬ, ದುರ್ಗಿ : ಕನಕದುರ್ಗಾಂಬ) ಆ ಮೂಲಕ ಈ ಸಮುದಾಯವು ವ್ಯಕ್ತಿನಾಮಗಳ ಮೇಲೆಯೂ ತಮ್ಮ ಅಧಿಪತ್ಯ ಹೊಂದಿರುವುದನ್ನು ಗುರುತಿಸಬಹುದು. ಅಲ್ಲದೆ ಇನ್ನೂ ಕೆಲವು ದೇವರುಗಳಿಗೆ ಪೌರೋಹಿತ್ಯವನ್ನು ವಹಿಸಿ, ಆ ಹೆಸರುಗಳನ್ನು ತಮ್ಮ ಕೌಟುಂಬಿಕ ವಲಯದಲ್ಲಿ ನಿರ್ದೇಶಿಸಿರುವುದು ಕಂಡುಬರುತ್ತದೆ. ಇಂಥ ಆಧುನಿಕ ಸಂದರ್ಭಗಳನ್ನು ಮುಂದೆ ವಿಸ್ತೃತವಾಗಿ ಚರ್ಚಿಸಲಾಗಿದೆ.

ಈ ಹಿನ್ನಲೆಯೊಂದಿಗೆ ಬ್ರಾಹ್ಮಣರ ವ್ಯಕ್ತಿನಾಮಗಳನ್ನು ಆರ್ಯಮೂಲ, ದ್ರಾವಿಡಮೂಲ ಮತ್ತು ಆರ್ಯದ್ರಾವಿಡ ಸಂಕರ ಎಂಬ ನೆಲೆಗಳೊಂದಿಗೆ ತಲೆಮಾರುಗಳ ಅಂತರದಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗುತ್ತದೆ. ಇಂದು ದ್ರಾವಿಡ ಪುರಾಣ ಪುರುಷನಾದ ಹನುಮಂತ ಆರ್ಯರ ಪ್ರಾಣದೇವರಾಗಿ ಪ್ರತಿಷ್ಠಾಪನೆಗೊಂಡಿರುವುದರ ಜೊತೆಗೆ ಅವರ ವ್ಯಕ್ತಿನಾಮಗಳಾಗಿಯೂ ಕಂಡುಬರುತ್ತಿರುವುದು ಚರ್ಚಿತ ವಿಷಯವಾಗಿದೆ. ದ್ರಾವಿಡ ಮೂಲದ ಕೆಲವು ದೈವಗಳನ್ನು ಹೀಗೆ ಆರ್ಯೀಕರಿಸಿ ಸ್ವೀಕರಿಸುತ್ತಿರುವುದರ ಹಿಂದೆ ಇರುವ ಸಾಮಾಜಿಕ ಅನಿವಾರ್ಯತೆಗಳೇನು ಎಂಬ ಸಂದೇಹಗಳು ವ್ಯಕ್ತವಾಗುತ್ತವೆ. ಆ ಮೂಲಕ ಬ್ರಾಹ್ಮಣ ಮತ್ತು ಇತರ ಸಮುದಾಯಗಳು ಧರ್ಮ, ದೈವ, ವೃತ್ತಿ ಈ ನೆಲೆಯಲ್ಲಿ ಏರ್ಪಡಿಸಿಕೊಳ್ಳುತ್ತಿರುವ ಸಂಘರ್ಷಗಳೆಂಥವು. ಹಾಗೆಯೇ ಯಾವ ನೆಲೆಯಲ್ಲಿ ಈ ಸಮುದಾಯಗಳು ಮುಖಾಮುಖಿಗೊಳ್ಳುತ್ತಿವೆ ಎಂಬುದನ್ನು ವ್ಯಕ್ತಿನಾಮಗಳ ಮುಖೇನ ಸಾಮಾಜಿಕ ಸಂಗತಿಗಳ ಕಡೆ ಗಮನ ಹರಿಸುವ ಸಾಧ್ಯತೆಗಳಿವೆ. ಆ ಸಾಧ್ಯತೆಗಳ ಹಿನ್ನಲೆಯಲ್ಲಿ ಬ್ರಾಹ್ಮಣರ ವ್ಯಕ್ತಿನಾಮಗಳನ್ನು ಕೆಲವು ಅಂಶಗಳಲ್ಲಿ ಹೀಗೆ ಗುರುತಿಸಬಹುದು.

ಈ ಅಧ್ಯಾಯದಲ್ಲಿ ಬೇರೆ ಬೇರೆ ಸಮುದಾಯಗಳ ವ್ಯಕ್ತಿನಾಮಗಳನ್ನು ಕುರಿತು ಚರ್ಚಿಸಲಾಗಿದೆ. ಪ್ರತಿ ಸಮುದಾಯದಲ್ಲಿ ಕಾಲಕ್ರಮೇಣ ತಲೆಮಾರುಗಳ ಅಂತರಗಳಲ್ಲಿ ಹೆಸರುಗಳ ಬಳಕೆಯಲ್ಲಿ ಕಾಣಬರುವ ಬದಲಾವಣೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಎಲ್ಲಾ ಸಮುದಾಯಗಳಲ್ಲಿ ತಲೆಮಾರುಗಳ ಅಂತರದಲ್ಲಿ ದೈವಸಂಬಂಧಿ ಹೆಸರುಗಳು ಕಡಿಮೆಯಾಗುತ್ತಿದ್ದು, ಆಧುನೀಕರಣದ ಪ್ರಭಾವ ಅಧಿಕವಾಗುತ್ತಿರುವುದು ಒಂದು ಸಾಮಾನ್ಯ ನಿಯಮದಂತೆ ಕಾಣಬರುತ್ತದೆ. ವ್ಯಕ್ತಿನಾಮಗಳ ಬಳಕೆಯಲ್ಲಿ ಸಮುದಾಯಗಳ ನಡುವೆ ವ್ಯತ್ಯಾಸಗಳಿರುವಂತೆ, ಒಂದೇ ಸಮುದಾಯದ ಬೇರೆ ಬೇರೆ ತಲೆಮಾರುಗಳಲ್ಲಿಯೂ

ವ್ಯತ್ಯಾಸಗಳು ಕಾಣಿಸಿಕೊಳ್ಳುತ್ತವೆ. ಈ ಬದಲಾವಣೆ ಕೆಲವು ಸಮುದಾಯ ಮತ್ತು ತಲೆಮಾರುಗಳ ನಡುವೆ ಕಡಿಮೆ ಅಂತರವಿದ್ದರೆ, ಮತ್ತೆ ಕೆಲವು ಕಡೆ ಹೆಚ್ಚಾಗಿದೆ. ಕೋಷ್ಟಕಗಳ ಮೂಲಕ ಈ ವಿಷಯವನ್ನು ಸ್ಪಷ್ಟಪಡಿಸಿಕೊಳ್ಳಬಹುದು. ಬ್ರಾಹ್ಮಣ ಸಮುದಾಯದ ವ್ಯಕ್ತಿನಾಮಗಳನ್ನು ಚರ್ಚಿಸುವಾಗ, ಕೋಷ್ಟಕಗಳನ್ನು ವಿವರವಾಗಿ ವಿಶ್ಲೇಷಿಸಲಾಗಿದೆ. (ಮಾದರಿಗಾಗಿ) ಇದೇ ರೀತಿ ಮುಂದೆ ಚರ್ಚಿಸಲ್ಪಡುವ ಬೇರೆ ಬೇರೆ ಸಮುದಾಯಗಳ ಕೋಷ್ಟಕಗಳನ್ನು ವಿವರವಾಗಿ ವಿಶ್ಲೇಷಣೆ ಮಾಡುವುದರಿಂದ, ವಿಷಯ, ಪದ, ವಾಕ್ಯಗಳ ಪುನರಾವರ್ತನೆಯಾಗುತ್ತದೆ ಎಂಬ ಕಾರಣಕ್ಕಾಗಿ ಮುಂದಿನ ಭಾಗದಲ್ಲಿ ಚರ್ಚೆಗೊಳ್ಳುವ ಸಮುದಾಯಗಳ ಮಾದರಿ ಸಮೀಕ್ಷೆ ಕೋಷ್ಟಕಗಳನ್ನು ವಿವರವಾಗಿ ವಿಶ್ಲೇಷಣೆ ಮಾಡದೆ, ಒಟ್ಟು ಆಶಯವನ್ನು ಸಂಗ್ರಹ ರೂಪದಲ್ಲಿ ವಿವರಿಸಲಾಗಿದೆ. ಇದು ಪ್ರಸ್ತುತ ನಿಬಂಧದ ಮಿತಿಯೂ ಆಗಿದೆ.

ಚಿತ್ರದುರ್ಗ ಪರಿಸರದ ಬ್ರಾಹ್ಮಣ ಸಮುದಾಯದಲ್ಲಿ ಮೂರು ತಲೆಮಾರುಗಳಲ್ಲಿ ಬಳಕೆಯಾಗಿರುವ ವ್ಯಕ್ತಿನಾಮಗಳ ಕೆಲವು ಮಾದರಿ ಉದಾಹರಣೆಗಳನ್ನು ಇಲ್ಲಿ ಗಮನಿಸಬಹುದು.

ಪುರುಷರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
|---|---|---|
| ಕೃಷ್ಣರಾಯ | ರಾಘವೇಂದ್ರರಾವ್ | ಗುರುಪ್ರಸಾದ್ |
| ಭೀಮಸೇನರಾಯ | ರಾಮಚಂದ್ರರಾವ್ | ಅಶ್ವಥ್ |
| ರಾಘಪ್ಪಾಚಾರ್ಯ | ವೇಣುಗೋಪಾಲಾಚಾರ್ಯ | ಚೇತನ್ |
| ಹನುಮಂತ ಜೋಯಿಸ | ಕೃಷ್ಣಮೂರ್ತಿ ಜೋಯಿಸ | ಚಿನ್ಮಯಾನಂದ |
| ತಿಪ್ಪೇಶ್ ಶಾಸ್ತ್ರಿ | ನಾರಾಯಣಶಾಸ್ತ್ರಿ | ಅಜಿತ್ |
| ಗೋಪಾಲಭಟ್ಟ | ಕೃಷ್ಣಭಟ್ಟ | ವಿಲಾಸ್ |
| ವಿಷ್ಣುಶರ್ಮ | ಕೇಶವಶರ್ಮ | ರಘುನಾಥ |
| ಶ್ರೀನಿವಾಸ | ಜೋಯಿಸ ಸತ್ಯಮೂರ್ತಿ | ಕಿರಣ್ |
| ಶೇಷಗಿರಿಶಾಸ್ತ್ರಿ | ವೇದಮೂರ್ತಿ | ಗುರುರಾಜ್ |
| ಕೇಶವಭಟ್ಟ | ಅನಿಲ್ ಕುಮಾರ | ವಿನಯ್ ಕುಮಾರ್ |
| ರಾಮಚಂದ್ರಶರ್ಮ | ವಾಸುದೇವ | ಮಾರುತಿ |

ಸ್ತ್ರೀಯರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
|---|---|---|
| ಶಾಮಲಾಬಾಯಿ | ಕೃಷ್ಣಾಬಾಯಿ | ಅಮೃತ |
| ಸೀತಾಬಾಯಿ | ತುಂಗಾಬಾಯಿ | ಪ್ರಣಿತ |
| ತುಳಸೀಬಾಯಿ | ರಮಾಮಣಿ | ಪರಿಮಳ |
| ಜಾನಕಿಬಾಯಿ | ಭಾಗೀರಥಿ | ಪಲ್ಲವಿ |
| ರಿಂದಮ್ಮ | ರುಕ್ಮಣಮ್ಮ | ಶೈಲಜ |
| ಭೀಮವ್ವ | ಸುಬ್ಬಮ್ಮ | ಕೌಸಲ್ಯ |
| ಗೌರಮ್ಮ | ರಾಧಮ್ಮ | ಪದ್ಮಾವತಿ |
| ಭಾಗ್ಯಮ್ಮ | ಯಶೋಧಮ್ಮ | ವೇದಾವತಿ |

ಮೇಲಿನ ಬ್ರಾಹ್ಮಣ ಸಮುದಾಯದ ವ್ಯಕ್ತಿನಾಮಗಳನ್ನು ಗಮನಿಸಿದರೆ, ಕಾಲಾಂತರದಲ್ಲಿ ಬ್ರಾಹ್ಮಣರ ವ್ಯಕ್ತಿನಾಮ ನಿರ್ದೇಶನದಲ್ಲಿ ಆಗಿರುವ ಕೆಲ ಸೂಕ್ಷ್ಮ ಬದಲಾವಣೆಗಳು ಗೊತ್ತಾಗುತ್ತವೆ. ಈ ಬದಲಾವಣೆಗಳು ಆಯಾ ಕಾಲಕ್ಕೆ ಆ ಸಮುದಾಯ ಪ್ರತಿಕ್ರಿಯಿಸಿದ ಬಗೆಯನ್ನು ಸೂಚಿಸುತ್ತದೆ. ಅಂದರೆ ಸಮಕಾಲೀನ ಸಂದರ್ಭಕ್ಕೆ ಹೊಂದಿಕೊಳ್ಳುವ ರೀತಿ ಅದು. ಚಿತ್ರದುರ್ಗ ಪರಿಸರದಲ್ಲಿ ಶೈವ ಬ್ರಾಹ್ಮಣರಿಗಿಂತ ವೈದಿಕ ಬ್ರಾಹ್ಮಣರು ಅಧಿಕವಾಗಿದ್ದಾರೆ. ಈ ವೈದಿಕ ಬ್ರಾಹ್ಮಣರು ವಿಷ್ಣುವಿನ ಆರಾಧಕರಾಗಿರುವುದರಿಂದ ಆ ವರ್ಗದವರು ನಿರ್ದೇಶನ ಮಾಡಿಕೊಳ್ಳುವ ಹೆಸರುಗಳು ಆ ಪರಂಪರೆಯನ್ನನುಸರಿಸಿ ಬಂದವುಗಳೇ ಆಗಿರುತ್ತವೆ. ಇದು ಆ ಸಮುದಾಯ ಮತ್ತು ಧರ್ಮದ ನಡುವಿನ ಸಂಬಂಧವನ್ನು ಸೂಚಿಸುತ್ತದೆ. ಉದಾಹರಣೆಗೆ ಮೇಲಿನ ಪಟ್ಟಿಯ ಒಂದನೆ ತಲೆಮಾರಿನ ಹೆಸರುಗಳನ್ನು ಗಮನಿಸಬಹುದು. ಈ ಹೆಸರುಗಳು ದೈವಸಂಬಂಧಿ ಹೆಸರುಗಳಾಗಿದ್ದು, ಬಹುಪಾಲು ಹೆಸರುಗಳು ವೈಷ್ಣವ ಮೂಲದವುಗಳೇ ಆಗಿವೆ. ಅಂದರೆ ವೈದಿಕೇತರ ದೈವಗಳ ಪ್ರಭಾವ ಇವರ ವ್ಯಕ್ತಿನಾಮಗಳ ಮೇಲೆ ಆಗಿಯೇ ಇಲ್ಲವೆಂದಲ್ಲ, ಆಗಿದೆ. ಆದರೂ ಅದು ಅತ್ಯಲ್ಪ. ಇತರ ಸಮುದಾಯಗಳಿಂದ ಸ್ವೀಕರಿಸಿರುವ ಹೆಸರುಗಳು ಇಲ್ಲ ಎನ್ನುವಷ್ಟರ ಮಟ್ಟಿಗೆ ಕಡಿಮೆ ಎಂದು ಹೇಳಬಹುದು. ಇದು ಆ ಸಮುದಾಯದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಪರಂಪರೆಯ ಬದ್ಧತೆಗಳನ್ನು ಸೂಚಿಸುತ್ತದೆ.

ವಂಶಪಾರಂಪರ್ಯವಾಗಿ ಅನುಸರಿಸುತ್ತ ಬಂದಿರುವ ಹೆಸರುಗಳು ಎರಡನೆ ತಲೆಮಾರಿನಲ್ಲೂ ಮುಂದುವರೆದಿವೆ. ಒಂದು ಮತ್ತು ಎರಡನೆ ತಲೆಮಾರಿನ ವ್ಯಕ್ತಿನಾಮಗಳ ನಿರ್ದಿಷ್ಟಗಳಲ್ಲಿ ಯಾವುದೇ ಗಮನಾರ್ಹ ಬದಲಾವಣೆಗಳು ತಲೆದೋರಿರುವುದಿಲ್ಲ. ಮೂರನೆ ತಲೆಮಾರಿನಲ್ಲಿ ಬಳಕೆಯಾಗಿರುವ ಹೆಸರುಗಳು, ಪಾರಂಪರಿಕ ಹೆಸರುಗಳಿಗಿಂತ ಭಿನ್ನವಾಗಿದ್ದು, ವೈಶಿಷ್ಟ್ಯಪೂರ್ಣವಾಗಿವೆ. ಅಂದರೆ ಬ್ರಾಹ್ಮಣರಲ್ಲಿ ಇಂದು ಹಳೆಯ ವ್ಯಕ್ತಿನಾಮಗಳು ಹಿಂದೆ ಸರಿಯುತ್ತಿದ್ದು, ಪರಂಪರೆಗೆ ಹೊಸದಾದ ಹೆಸರುಗಳು ಚಾಲನೆಗೆ ಬರುತ್ತಿವೆ. ಬ್ರಾಹ್ಮಣ ಸಮುದಾಯ ವ್ಯಕ್ತಿನಾಮ ನಿರ್ದೇಶನದಲ್ಲಿ ಮಾಡಿಕೊಂಡಿರುವ ಪರ್ಯಾಯ ಸ್ಥಿತಿಗಳನ್ನು ಈ ಪ್ರಕ್ರಿಯೆ ವ್ಯಕ್ತಮಾಡುತ್ತದೆ. ಅಂದರೆ ಸಾಂಪ್ರದಾಯಿಕ ಪರದಿಯಿಂದ ಹೊರಗೆ ಬಂದು, ಆಧುನೀಕರಣದ ಹೊಸ ಸವಾಲುಗಳಿಗೆ ಮುಖಾಮುಖಿಯಾದ ರೀತಿಯನ್ನು ಇಲ್ಲಿ ಗಮನಿಸಬಹುದು. ಈ ಬದಲಾವಣೆ ಪ್ರಕ್ರಿಯೆ ಕೇವಲ ಪುರುಷ ವ್ಯಕ್ತಿನಾಮಗಳಲ್ಲಿ ಮಾತ್ರವಾಗಿರದೆ ಸ್ತ್ರೀ ವ್ಯಕ್ತಿನಾಮಗಳಲ್ಲೂ ಕಾಣಬರುತ್ತದೆ. ಇಲ್ಲಿನ ಮೂರೂ ತಲೆಮಾರುಗಳಲ್ಲಿನ ವ್ಯಕ್ತಿನಾಮಗಳನ್ನು ಗಮನಿಸಿದರೆ, ತಲೆಮಾರಿನಿಂದ ತಲೆಮಾರಿಗೆ ವ್ಯಕ್ತಿನಾಮ ನಿರ್ದಿಷ್ಟಗಳಲ್ಲಿ ಬದಲಾವಣೆಗಳು ಆಗಿರುವುದು ಸ್ಪಷ್ಟವಾಗುತ್ತದೆ. ಒಂದು ಮತ್ತು ಎರಡನೆ ತಲೆಮಾರುಗಳ ನಡುವೆ ಈ ಬದಲಾವಣೆಯ ಸ್ವರೂಪ ತುಂಬಾ ಕಡಿಮೆಯಿದ್ದು, ಮೂರನೆ ತಲೆಮಾರಿನಲ್ಲಿ ಗಮನಾರ್ಹವಾಗಿದೆ.

ನಿರ್ದಿಷ್ಟಗಳನ್ನು ಚರ್ಚಿಸಿದ ಹಾಗೆ ವಾರ್ಗಿಕಗಳನ್ನು ಗಮನಿಸಬಹುದು. ಮೊದಲ ತಲೆಮಾರಿನ ವ್ಯಕ್ತಿನಾಮಗಳಲ್ಲಿ ವೃತ್ತಿ (ಹುದ್ದೆ), ಜಾತಿವಾಚಿ ವಾರ್ಗಿಕಗಳು ಬಳಕೆಯಾಗಿವೆ. ಈ ವಾರ್ಗಿಕಗಳು ಈ ಸಮುದಾಯದ ಸಾಂಸ್ಕೃತಿಕ ಜೀವನ ಪದ್ಧತಿಯನ್ನು ವ್ಯಕ್ತಗೊಳಿಸುತ್ತವೆ. ಎರಡನೆ ತಲೆಮಾರಿಗೆ ವಾರ್ಗಿಕಗಳ ಬಳಕೆಯಲ್ಲಿ ಕೆಲ ಬದಲಾವಣೆಗಳಾಗಿವೆ. ಪಾರಂಪರಿಕವಾಗಿ ಹರಿದುಬಂದ ವಾರ್ಗಿಕಗಳು ಬಳಕೆಯಿಂದ ಹಿಂದೆ ಸರಿಯುತ್ತಿದ್ದು, ಇತ್ತೀಚಿನವರ ಹೆಸರುಗಳಲ್ಲಿ ವಾರ್ಗಿಕಗಳ ಬಳಕೆ ತೀವ್ರವಾಗಿ ಕಡಿಮೆಯಾಗಿರುವುದು ಕಂಡುಬರುತ್ತದೆ. ಆಧುನಿಕವಾಗಿ ಹೆಚ್ಚು ಹೆಚ್ಚು ಮುಂದುವರೆದಂತೆಲ್ಲಾ ಹಳೆಯ ಹೆಸರುಗಳನ್ನು ಬಿಟ್ಟು

ಹೊಸ ಹೆಸರುಗಳನ್ನು ನಿರ್ದೇಶಿಸಿಕೊಳ್ಳುತ್ತಿರುವುದನ್ನು ಇಲ್ಲಿ ಗಮನಿಸಬಹುದುದಾಗಿದೆ. ಜನರ ಅಭಿರುಚಿಗಳಿಗೆ ಅನುಗುಣವಾಗಿ ಜೀವನ ಶೈಲಿಯೂ ಬದಲಾಗುತ್ತದೆ. ಪರಿಣಾಮವಾಗಿ, ವ್ಯಕ್ತಿನಾಮಗಳೂ ಸಹ ಬದಲಾಗುತ್ತವೆ. ಹೆಸರುಗಳ ಬದಲಾವಣೆ ಏಕಕಾಲಕ್ಕೆ ಎಲ್ಲಾ ಜಾತಿ, ವರ್ಗ, ಪರಿಸರಗಳಲ್ಲಿ ಒಂದೇ ರೀತಿ ಇರುವುದಿಲ್ಲ. ಗ್ರಾಮೀಣ-ನಗರ, ಅನಕ್ಷರಸ್ಥ-ಅಕ್ಷರಸ್ಥ, ಮೇಲ್ಜಾತಿ-ಕೆಳಜಾತಿ, ಹೆಣ್ಣು-ಗಂಡು ಮೊದಲಾದ ವರ್ಗಗಳಲ್ಲಿ ಬೇರೆ ಬೇರೆಯಾಗಿರುತ್ತದೆ. ಶಿಕ್ಷಣ, ರಾಜಕೀಯ, ಸಾಮಾಜಿಕ ಸ್ಥಾನಮಾನಗಳು, ಹೆಸರುಗಳ ಬದಲಾವಣೆಗೆ ಮುಖ್ಯ ಪ್ರೇರಕ ಕಾರಣಗಳಾಗಿರುತ್ತವೆ. ವ್ಯಕ್ತಿನಾಮಗಳಲ್ಲಿ ತಲೆದೋರುವ ಇಂಥ ಬದಲಾವಣೆಯ ಬೆಳವಣಿಗೆಗಳು ಜಾತಿ, ವರ್ಗ, ವಯಸ್ಸು ಮತ್ತು ಲಿಂಗ ನೆಲೆಯಲ್ಲಿ ಭಿನ್ನವಾಗಿರುವುದನ್ನು ನೋಡಬಹುದು.

ವ್ಯಕ್ತಿನಾಮಗಳ ಬದಲಾವಣೆ ಪ್ರಕ್ರಿಯೆಯನ್ನು ಗುರುತಿಸುವ ಉದ್ದೇಶದಿಂದ ಮಾದರಿ ಸಮೀಕ್ಷೆಯ ಕೋಷ್ಟಕ ಪಟ್ಟಿಯನ್ನು ನೀಡಲಾಗಿದೆ. ಈ ಕೋಷ್ಟಕವನ್ನು ಪೂರ್ವಯೋಜಿತ ಯಾವುದೇ ಮಾನ ದಂಡಗಳನ್ನು ಅನುಸರಿಸಿ ರೂಪಿಸದೆ, ಕ್ಷೇತ್ರಕಾರ್ಯದಲ್ಲಿ ದೊರೆತ ದತ್ತ ಮಾಹಿತಿಯನ್ನು ಆಧರಿಸಿ ರೂಪಿಸಲಾಗಿದೆ. ಕಾಲಾಂತರದಲ್ಲಿ ವ್ಯಕ್ತಿನಾಮಗಳ ಮೇಲೆ ಯಾವುದರ ಪ್ರೇರಣೆ ಪ್ರಭಾವ ಅಧಿಕವಾಗುತ್ತಿದೆ ಮತ್ತು ಯಾವುದರ ಪ್ರೇರಣೆ ಪ್ರಭಾವ ಕಡಿಮೆಯಾಗುತ್ತಿದೆ ಎಂಬುದನ್ನು ತಿಳಿಯುವುದರ ಜತೆಗೆ ಒಟ್ಟು ಸಮಾಜದ ಬೆಳವಣಿಗೆಯನ್ನು ಗ್ರಹಿಸುವ ಪ್ರಯತ್ನ ಮಾಡಲಾಗಿದೆ.

ಪ್ರಸ್ತುತ ಅಧ್ಯಾಯದಲ್ಲಿ ಬ್ರಾಹ್ಮಣ ಪುರುಷ ಮತ್ತು ಸ್ತ್ರೀಯರ ೧೪೬ ಹೆಸರುಗಳನ್ನು ವಿಶ್ಲೇಷಣೆಗೆ ಒಳಗು ಮಾಡಲಾಗಿದೆ. ಈ ಹೆಸರುಗಳಲ್ಲಿ ಧಾರ್ಮಿಕ (ದೈವ), ಸಮಕಾಲೀನ ವ್ಯಕ್ತಿಗಳು, ಆಧುನೀಕರಣ, ಚರಿತ್ರೆ ಈ ಮುಂತಾದ ಪ್ರೇರಣೆ ಪ್ರಭಾವಗಳು, ಯಾವ ತಲೆಮಾರಿನ ಹೆಸರುಗಳ ಮೇಲೆ ಎಷ್ಟರಮಟ್ಟಿಗೆ ಪ್ರೇರಣೆಯಾಗಿವೆ ಎಂಬುದನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ. ಅಂದರೆ ಯಾವುದರ ಪ್ರೇರಣೆ ಯಾವ ತಲೆಮಾರಿನವರ ಹೆಸರುಗಳ ಮೇಲೆ ಅಧಿಕವಾಗುತ್ತಿದೆ ಅಥವಾ ಕಡಿಮೆಯಾಗುತ್ತಿದೆ, ಇವುಗಳ ಮುನ್ನಡೆ ಮತ್ತು ಹಿನ್ನಡೆ ಬೆಳವಣಿಗೆಗೆ ಕಾರಣವಾಗುವ ಅಂಶಗಳನ್ನು ಈ ಮೂಲಕ ತಿಳಿಯುವ ಯತ್ನ ಮಾಡಲಾಗಿದೆ. ಈ ನಿಯಮ ಬ್ರಾಹ್ಮಣರ ವ್ಯಕ್ತಿನಾಮಗಳಿಗೆ ಅನ್ವಯಿಸುವಂತೆ, ಈ ಅಧ್ಯಾಯದ ಇತರ ಸಮುದಾಯಗಳಿಗೂ ಅನ್ವಯವಾಗುತ್ತದೆ.

### ಬ್ರಾಹ್ಮಣ ಸಮುದಾಯದ ವ್ಯಕ್ತಿನಾಮಗಳ ಮಾದರಿ ಸಮೀಕ್ಷೆ, ಕೋಷ್ಟಕ ಪಟ್ಟಿ - ೧

| ತಲೆ ಮಾರು | ಧಾರ್ಮಿಕ ಪ್ರಭಾವ ಶೇಕಡವಾರು (%) | | | ಸಮಕಾಲೀನ ಪ್ರಸಿದ್ಧ ವ್ಯಕ್ತಿಗಳ ಪ್ರಭಾವ ಶೇಕಡವಾರು (%) | | | ಆಧುನೀಕರಣದ ಪ್ರಭಾವ ಶೇಕಡವಾರು (%) | | | ಚರಿತ್ರೆ ಪ್ರಭಾವ ಶೇಕಡವಾರು (%) | | | ಇತರೆ ಪ್ರಭಾವ ಶೇಕಡವಾರು (%) | | | ಒಟ್ಟು ಶೇಕಡವಾರು (%) | | |
|---|---|---|---|---|---|---|---|---|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೩ | ೭೫ | ೫೦ | ೭೧ | ೨೦ | ೨೮ | ೨೨ | ೧೪ | ೨೨ | ೧೭ | - | - | - | - | - | - | ೭೦ | ೬೦ | ೪೦ |
| ೨ | ೧೦೦ | ೭೧ | ೮೫ | - | ೧೧ | ೫೫ | - | ೧೮ | ೯ | - | - | - | - | - | - | ೪೮ | ೫೨ | ೩೭ |
| ೧ | ೧೦೦ | ೮೧ | ೯೦ | - | - | - | - | ೧೮ | ೯ | - | - | - | - | - | - | ೫೨ | ೪೮ | ೨೨ |
| ಒಟ್ಟು | ೮೩ | ೭೮ | ೭೭ | ೯.೫ | ೧೨ | ೭.೧ | ೭.೯ | ೧೯ | ೧೨ | - | - | - | - | - | - | ೫೭ | ೪೩ | - |

ಕೋಷ್ಟಕ - ೧.೧

ಮೇಲಿನ ಕೋಷ್ಟಕವನ್ನು ಗಮನಿಸಿದರೆ, ಬ್ರಾಹ್ಮಣರಲ್ಲಿ ದೈವಸಂಬಂಧಿ ಹೆಸರುಗಳ ಬಳಕೆ ಅಧಿಕವಾಗಿರುವುದು ಸ್ಪಷ್ಟವಾಗುತ್ತದೆ. ಸರಾಸರಿ ನೂರರಲ್ಲಿ ಶೇಕಡ ೭೭ರಷ್ಟು ದೈವಸಂಬಂಧಿ ಹೆಸರುಗಳೇ ನಿರ್ದೇಶನಗೊಂಡಿದ್ದು, ಅದರಲ್ಲಿ ಶೇಕಡ ೮೩ರಷ್ಟು ಪುರುಷರಲ್ಲಿಯೂ ಹಾಗೂ ಶೇಕಡ ೬೮ರಷ್ಟು ಸ್ತ್ರೀಯರಲ್ಲಿಯೂ ಬಳಕೆಯಲ್ಲಿದೆ. ಸ್ತ್ರೀಯರಿಗಿಂತ ಪುರುಷರಲ್ಲಿ ಶೇಕಡ ೧೫ರಷ್ಟು ಅಧಿಕವಾಗಿದೆ. ಅಂದರೆ ಪುರುಷರಲ್ಲಿ ದೈವಸಂಬಂಧಿ ಹೆಸರುಗಳ ಬಳಕೆ ಜಾಸ್ತಿ ಇರುವುದು ತಿಳಿದುಬರುತ್ತದೆ. ತಲೆಮಾರುಗಳ ಅಂತರದಲ್ಲಿ ದೈವಸಂಬಂಧಿ ಹೆಸರುಗಳ ಬಳಕೆಯ ಪ್ರಕ್ರಿಯೆಯನ್ನು ನೋಡಿದಾಗ ಹಲವು ಸಂಗತಿಗಳು ಗೋಚರವಾಗುತ್ತವೆ. ಮೊದಲ ತಲೆಮಾರಿನಲ್ಲಿ ಪುರುಷರಲ್ಲಿ ಶೇಕಡ ೧೦೦ರಷ್ಟು ಹಾಗೂ ಸ್ತ್ರೀಯರಲ್ಲಿ ಶೇಕಡ ೮೧ರಷ್ಟು ದೈವಸಂಬಂಧಿ ಹೆಸರುಗಳು ಬಳಕೆಯಲ್ಲಿರುವುದು ತಿಳಿದುಬರುತ್ತದೆ. ಇಲ್ಲಿ ಪುರುಷ ಮತ್ತು ಸ್ತ್ರೀಯರ ನಡುವೆ ಅಂತರಗಳಿದ್ದು, ಸ್ತ್ರೀಯರಿಗಿಂತ ಪುರುಷರಲ್ಲಿ ಶೇಕಡ ೧೯ರಷ್ಟು ಅಧಿಕವಾಗಿದೆ. ಎರಡನೆಯ ತಲೆಮಾರಿನಲ್ಲಿ ಪುರುಷರಲ್ಲಿ ಯಾವುದೇ ಬದಲಾವಣೆ ಉಂಟಾಗಿರದೆ, ಮೊದಲ ತಲೆಮಾರಿನ ಪ್ರಕ್ರಿಯೆ ಇಲ್ಲಿಯೂ ಮುಂದುವರೆದಿದ್ದರೆ, ಸ್ತ್ರೀಯರಲ್ಲಿ ಶೇಕಡ ೧೦ರಷ್ಟು ಕಡಿಮೆಯಾಗಿದೆ. ಎರಡನೆ ತಲೆಮಾರಿನ ಪುರುಷ ಮತ್ತು ಸ್ತ್ರೀಯರ ಮಧ್ಯೆ ಶೇಕಡ ೨೯ರಷ್ಟು ಅಂತರವಿರುವುದನ್ನು ಕಾಣಬಹುದು. ಮೂರನೆ ತಲೆಮಾರಿನ ಪುರುಷರಲ್ಲಿ ಶೇಕಡ ೬೫ರಷ್ಟು ಹಾಗೂ ಸ್ತ್ರೀಯರಲ್ಲಿ ಶೇಕಡ ೫೦ರಷ್ಟು ಬಳಕೆಯಲ್ಲಿದೆ. ಎರಡನೆ ತಲೆಮಾರಿನಿಂದ ಮೂರನೆ ತಲೆಮಾರಿಗೆ ಪುರುಷರಲ್ಲಿ ಶೇಕಡ ೩೫ರಷ್ಟು ಹಾಗೂ ಸ್ತ್ರೀಯರಲ್ಲಿ ಶೇಕಡ ೨೧ರಷ್ಟು ಕಡಿಮೆಯಾಗಿದೆ. ಮೂರನೆ ತಲೆಮಾರಿನ ಪುರುಷ ಮತ್ತು ಸ್ತ್ರೀಯರ ನಡುವೆ ಶೇಕಡ ೧೫ರಷ್ಟು ಅಂತರವಿದೆ. ಅಂದರೆ ತಲೆಮಾರಿನಿಂದ ತಲೆಮಾರಿಗೆ ದೈವಸಂಬಂಧಿ ಹೆಸರುಗಳ ಬಳಕೆ ಕಡಿಮೆಯಾಗುತ್ತಾ ಬಂದಿದ್ದು, ಅದು ಪುರುಷರಿಗಿಂತ ಸ್ತ್ರೀಯರಲ್ಲಿ ಅಧಿಕವಾಗಿದೆ. ಪ್ರಸ್ತುತ ಸಮುದಾಯವು ಸಾಂಪ್ರದಾಯಿಕ ಸಂಸ್ಕೃತಿಗೆ ಬದಲಾಗಿ ಆಧುನೀಕರಣಕ್ಕೆ ತೆರೆದುಕೊಂಡಿರುವುದನ್ನು ಇಲ್ಲಿ ಕಾಣಬಹುದು.

ಸಮಕಾಲೀನ ಪ್ರಸಿದ್ಧ ವ್ಯಕ್ತಿಗಳ ಪ್ರಭಾವವೂ ಇವರ ವ್ಯಕ್ತಿನಾಮಗಳ ಮೇಲೆ ಆಗಿರುವುದು ಕಾಣಬರುತ್ತದೆ. ಅಂದರೆ ಸಿನಿಮಾ, ಕ್ರೀಡೆ, ನಾಟ್ಯ, ಸಂಗೀತ, ಸಾಹಿತ್ಯ ಮೊದಲಾದ ಕ್ಷೇತ್ರಗಳಲ್ಲಿ ಹೆಸರುವಾಸಿಯಾಗಿರುವ ವ್ಯಕ್ತಿಗಳ ಹೆಸರನ್ನು ಜನರು ತಮ್ಮ ಅಭಿರುಚಿಗೆ ಅನುಗುಣವಾಗಿ ಸ್ವೀಕರಿಸುವುದುಂಟು. ಉದಾಹರಣೆಗೆ ಕೆಲವು ಹೆಸರುಗಳನ್ನು ಇಲ್ಲಿ ಗಮನಿಸಬಹುದು.

| ಪುರುಷರಲ್ಲಿ | ಸ್ತ್ರೀಯರಲ್ಲಿ |
|---|---|
| ಸಚಿನ್ /ತೆಂಡೂಲ್ಕರ್ | ಸುಧಾರಾಣಿ |
| ಕುಂಬ್ಳೆ | ಶೃತಿ |
| ದ್ರಾವಿಡ್ | ಮಾಲಾಶ್ರೀ |
| ಚಿರಂಜೀವಿ | ಇಂದಿರಾಗಾಂಧಿ - ಇತ್ಯಾದಿ |
| ನಾಗಾರ್ಜುನ | |
| ಗಾಂಧಿ (ಮಹಾತ್ಮಗಾಂಧಿ) - ಇತ್ಯಾದಿ | |

ಬ್ರಾಹ್ಮಣರಲ್ಲಿ ಸಮಕಾಲೀನ ವ್ಯಕ್ತಿಗಳ ಪ್ರಭಾವ-ಪ್ರೇರಣೆಗಳಿಂದ ನಿರ್ದೇಶಿಸಲ್ಪಟ್ಟ ಹೆಸರುಗಳು ಕಡಿಮೆಯೆಂದೇ ಹೇಳಬಹುದು. ಸರಾಸರಿ ಶೇಕಡ ೭ರಲ್ಲಿ, ಪುರುಷರಲ್ಲಿ ಶೇಕಡ ೯.೫ರಷ್ಟು ಹಾಗೂ ಸ್ತ್ರೀಯರಲ್ಲಿ ಶೇಕಡ ೧೨ರಷ್ಟು ಇವೆ. ಪುರುಷರಿಗಿಂತ ಸ್ತ್ರೀಯರಲ್ಲಿ ಶೇಕಡ ೨.೫ರಷ್ಟು ಅಧಿಕವಾಗಿದ್ದರೂ ಹೆಚ್ಚುಕಡಿಮೆ ಸಮಾನವಾಗಿದೆ ಎಂದು ಹೇಳಬಹುದು. ಈ ಪ್ರಕ್ರಿಯೆಯನ್ನು ತಲೆಮಾರುಗಳ ಅಂತರದಲ್ಲಿ ಗಮನಿಸಿದಾಗ ಮೊದಲೆರಡು ತಲೆಮಾರುಗಳಲ್ಲಿ ಇಂಥ ಹೆಸರುಗಳು ಕಾಣಬರುವುದಿಲ್ಲವಾದರೂ ಎರಡನೆ ತಲೆಮಾರಿನ ಸ್ತ್ರೀಯರಲ್ಲಿ ಶೇಕಡ ೧೧ರಷ್ಟಿದೆ. ಮೂರನೆ ತಲೆಮಾರಿನ ಪುರುಷರಲ್ಲಿ ಶೇಕಡ ೨೦ರಷ್ಟು ಹಾಗೂ ಸ್ತ್ರೀಯರಲ್ಲಿ ಶೇಕಡ ೨೮ರಷ್ಟು ಇದೆ. ಪುರುಷ ಮತ್ತು ಸ್ತ್ರೀಯರ ಮಧ್ಯೆ ಶೇಕಡ ೮ರಷ್ಟು ಅಂತರವಿದ್ದು, ಸ್ತ್ರೀಯರಲ್ಲಿ ಅಧಿಕವಾಗಿರುವುದು ಮೇಲಿನ ಕೋಷ್ಟಕದಿಂದ ತಿಳಿದುಬರುತ್ತದೆ. ಸ್ತ್ರೀಯರಲ್ಲಿ ಎರಡನೆಯ ತಲೆಮಾರಿನಿಂದ ಮೂರನೆ ತಲೆಮಾರಿಗೆ ಶೇಕಡ ೧೭ರಷ್ಟು ಅಧಿಕವಾಗಿದೆ. ಅಂದರೆ ಜನರು ಕ್ರಮೇಣವಾಗಿ ಈ ಬಗೆಯ ಹೆಸರುಗಳ ಪ್ರೇರಣೆ-ಪ್ರಭಾವಗಳಿಗೆ ಒಳಗಾಗುತ್ತಿರುವುದು ಸ್ಪಷ್ಟವಾಗುತ್ತದೆ.

ಆಧುನೀಕರಣ ಸಂಸ್ಕೃತಿಯ ಹಲವು ರಂಗಗಳಲ್ಲಿ ಪ್ರಭಾವ ಬೀರಿರುವಂತೆ ವ್ಯಕ್ತಿನಾಮಗಳ ಮೇಲೂ ಪ್ರಭಾವ ಬೀರಿದೆ. ಸಾಂಪ್ರದಾಯಿಕ ನಂಬಿಕೆಗಳನ್ನು ಆಧರಿಸಿ ಬದುಕುತ್ತಿದ್ದ ಸಮುದಾಯಗಳು ಆಧುನಿಕತೆಯ ಜತೆ ಮುಖಾಮುಖಿಯಾಗತೊಡಗಿವೆ. ಪರಿಣಾಮವಾಗಿ ಪಾರಂಪರಿಕ ಹೆಸರುಗಳಿಗೆ ಬದಲಾಗಿ ಆಧುನಿಕ ಹೆಸರುಗಳೆಂದು ಗುರುತಿಸಲ್ಪಡುವ ವ್ಯಕ್ತಿನಾಮಗಳನ್ನು ನಿರ್ದೇಶನ ಮಾಡುವುದರ ಕಡೆಗೆ ಜನರ ಒಲವು ವಾಲುತ್ತಿದೆ. ಸಾಮಾನ್ಯವಾಗಿ ಈ ಹೆಸರುಗಳು ಯಾವುದೇ ಜಾತಿ, ಧರ್ಮವಾಚಿಗಳಾಗಿರದೆ, ಇವುಗಳನ್ನು ಮೀರಿದವುಗಳಾಗಿವೆ. ಅಂದರೆ ಹೆಚ್ಚಾಗಿ ಈ ಹೆಸರುಗಳು ವಸ್ತುವಾಚಿ, ವಿಷಯವಾಚಿ ಮತ್ತು ಭಾವವಾಚಿ ನಾಮಗಳಾಗಿರುತ್ತವೆ. ಉದಾಹರಣೆಗೆ -

| ಪುರುಷರಲ್ಲಿ | ಸ್ತ್ರೀಯರಲ್ಲಿ |
|---|---|
| ಆದರ್ಶ | ಪ್ರಜ್ಞಾ |
| ಪ್ರಾಮಾಣಿಕ | ಚೈತನ್ಯ |
| ಪ್ರಶಾಂತ | ಶ್ವೇತ |
| ಆನಂದ್ | ಪಲ್ಲವಿ |
| ಕಿರಣ್ | ಅಕ್ಷತ |
| ವಿಲಾಸ್ | ವರ್ಣ |
| ಸುಂದರೇಶ್ | ಕಮಲ - ಇತ್ಯಾದಿ |
| ಲತ - ಇತ್ಯಾದಿ | |

ಆಧುನೀಕರಣದ ಪ್ರಭಾವ ಬ್ರಾಹ್ಮಣ ಸಮುದಾಯದ ವ್ಯಕ್ತಿನಾಮಗಳ ಮೇಲೆ ಉಂಟುಮಾಡಿರುವ ಪರಿಣಾಮ ಕಡಿಮೆಯೆಂದೇ ಹೇಳಬಹುದು. ಸರಾಸರಿ ಶೇಕಡ ೧೨ರಲ್ಲಿ, ಪುರುಷರಲ್ಲಿ ಶೇಕಡ ೭.೯ರಷ್ಟು ಹಾಗೂ ಸ್ತ್ರೀಯರಲ್ಲಿ ಶೇಕಡ ೧೯ರಷ್ಟು ಈ ಪ್ರಕ್ರಿಯೆ ಕಾಣಬರುತ್ತಿದೆ. ಪುರುಷರಿಗಿಂತ ಸ್ತ್ರೀಯರಲ್ಲಿ ಶೇಕಡ ೧೦ರಷ್ಟು ಅಧಿಕವಾಗಿದೆ. ಅಂದರೆ ಪುರುಷರಿಗಿಂತ ಸ್ತ್ರೀಯರು ಹೆಸರುಗಳಲ್ಲಿ ಆಧುನಿಕತೆಗೆ ಹೆಚ್ಚು ತೆರೆದುಕೊಂಡಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ. ತಲೆಮಾರುಗಳ ಅಂತರದಲ್ಲಿ ಆಧುನೀಕರಣದ

ಪ್ರಭಾವ-ಪ್ರೇರಣೆಯನ್ನು ಗಮನಿಸಿದರೆ, ಮೊದಲೆರಡು ತಲೆಮಾರಿನ ಪುರುಷರಲ್ಲಿ ಇದರ ಪ್ರಭಾವ ಕಾಣಬರದೆ, ಸ್ತ್ರೀಯರಲ್ಲಿ ಮಾತ್ರ ಶೇಕಡ ೧೮ರಷ್ಟಿದೆ. ಮೂರನೆ ತಲೆಮಾರಿನ ಪುರುಷರಲ್ಲಿ ಶೇಕಡ ೧೪ರಷ್ಟಿದ್ದರೆ, ಸ್ತ್ರೀಯರಲ್ಲಿ ಶೇಕಡ ೨೨ರಷ್ಟಿದೆ. ಸ್ತ್ರೀಯರಲ್ಲಿ ಎರಡನೆ ತಲೆಮಾರಿನಿಂದ ಮೂರನೆ ತಲೆಮಾರಿಗೆ ಶೇಕಡ ೪ರಷ್ಟು ಅಧಿಕವಾಗಿದೆ. ಮೂರನೆ ತಲೆಮಾರಿನ ಪುರುಷ ಮತ್ತು ಸ್ತ್ರೀಯರ ನಡುವೆ ಶೇಕಡ ೮ರಷ್ಟು ಅಂತರವಿದ್ದು, ಸ್ತ್ರೀಯರಲ್ಲಿ ಅಧಿಕವಾಗಿದೆ. ಸೂಕ್ಷ್ಮವಾಗಿ ಗಮನಿಸಿದಾಗ ತಲೆಮಾರುಗಳ ಅಂತರದಲ್ಲಿ ಆಧುನೀಕರಣದ ಪ್ರಭಾವ ಮೇಲ್ಮುಖ ಚಲನೆಯನ್ನು ಹೊಂದಿದೆ. ಅಲ್ಲದೆ ಪುರುಷರಿಗಿಂತ ಸ್ತ್ರೀಯರಲ್ಲಿ ಈ ಪ್ರಕ್ರಿಯೆ ವ್ಯಾಪಕವಾಗಿರುವುದು ತಿಳಿದುಬರುತ್ತದೆ.

ಚರಿತ್ರೆಯಲ್ಲಿ ಆಗಿಹೋದ ಪ್ರಸಿದ್ಧ ರಾಜರುಗಳ (ವ್ಯಕ್ತಿಗಳ) ಹೆಸರು, ನಂತರದ ವ್ಯಕ್ತಿನಾಮಗಳಿಗೆ ಆಕರಗಳಾಗುತ್ತವೆ. ಉದಾಹರಣೆಗೆ ಮದಕರಿನಾಯಕ, ಓಬವ್ವ, ಶಿವಾಜಿ, ಜೀಜಾಬಾಯಿ, ರಾಣಿಚೆನ್ನಮ್ಮ, ಹೇಮರೆಡ್ಡಿ ಮಲ್ಲಮ್ಮ, ಅಶೋಕ ಮೊದಲಾದವರ ಹೆಸರು ಈಗಲೂ ಜನರಲ್ಲಿ ಬಳಕೆಯಾಗುತ್ತಿರುವುದನ್ನು ಗಮನಿಸಬಹುದು. ಆದರೆ ಬ್ರಾಹ್ಮಣರಲ್ಲಿ ಇಂಥ ಹೆಸರುಗಳು ಇರುವುದರ ಬಗೆಗೆ ಕ್ಷೇತ್ರಮಾಹಿತಿಯಿಂದ ತಿಳಿದುಬಂದಿಲ್ಲ.

ಮೇಲಿನ ನಾಲ್ಕು ವರ್ಗಗಳಿಗೆ ಸೇರದ ಹೆಸರುಗಳೂ ಇವೆ. ಚಂದ್ರಪ್ಪ, ಗುರುರಾಜ, ಪ್ರಭಾಕರ, ಮೇಘರಾಜ, ಅಶ್ವಿನಿ, ರೋಹಿಣಿ, ವೃಚ್ಛಿಕ, ಕೋಕಿಲ ಮೊದಲಾದ ಹೆಸರುಗಳನ್ನು ಉದಾಹರಿಸಬಹುದು. ಬ್ರಾಹ್ಮಣರಲ್ಲಿ ಇಂಥ ಹೆಸರುಗಳು ರೂಢಿಯಲ್ಲಿರುವುದು ಗೋಚರವಾಗಿಲ್ಲ. ಇತರ ಸಮುದಾಯಗಳಲ್ಲಿ ಬಳಕೆಯಲ್ಲಿರುವುದನ್ನು ಅಧ್ಯಯನದ ಮುಂದಿನ ಭಾಗದಲ್ಲಿ ಕಂಡುಕೊಳ್ಳಬಹುದು.

ಬ್ರಾಹ್ಮಣ ಸಮುದಾಯದ ವ್ಯಕ್ತಿನಾಮಗಳಲ್ಲಿ ಕಂಡುಬರುವ ವಾರ್ಗಿಕಗಳನ್ನು ಈ ರೀತಿ ಗುರುತಿಸಲಾಗಿದೆ.

**ಪುರುಷರಲ್ಲಿ**

| ಸಂಬಂಧವಾಚಿ ವಾರ್ಗಿಕ | ವೃತ್ತಿ/ಜಾತಿವಾಚಿ ವಾರ್ಗಿಕ |
|---|---|
| ಅಪ್ಪ | ರಾವ್ /ರಾಯ |
| | ಆಚಾರ್ಯ |
| | ಭಟ್ಟ |
| | ಜೋಯಿಸ/ಜೋಶಿ |
| | ಶರ್ಮ |
| | ಶಾಸ್ತ್ರೀ |
| | ಅಯ್ಯಂಗಾರ್ |
| | ಪಂಡಿತ |
| | ಶಾನುಭೋಗ/ಶಾನುಭಾಗ್ |
| | ಹೆಗಡೆ |

## ಸ್ತ್ರೀಯರಲ್ಲಿ

ಸಂಬಂಧವಾಚಿ ವಾರ್ಗಿಕ

ಅವ್ವ ಅಮ್ಮ ಬಾಯಿ

ಕನ್ನಡ ಪರಿಸರದಲ್ಲಿ, ಬೇರೆಲ್ಲಾ ಸಮುದಾಯಗಳಿಗಿಂತ ಬ್ರಾಹ್ಮಣರಲ್ಲಿ ಹೆಚ್ಚು ವಾರ್ಗಿಕಗಳು ಬಳಕೆಯಾಗಿವೆ. ಬ್ರಾಹ್ಮಣರಲ್ಲಿ ಸಂಬಂಧವಾಚಿ ವಾರ್ಗಿಕಗಳ ಬಳಕೆ ಪುರುಷರಲ್ಲಿ ಕಡಿಮೆಯಿದ್ದು, ಬದಲಿಗೆ ಹುದ್ದೆ, ವೃತ್ತಿ/ಜಾತಿವಾಚಿ ವಾರ್ಗಿಕಗಳು ಹೆಚ್ಚು ಕಂಡುಬರುತ್ತವೆ. ಇಲ್ಲಿ ಒಂದೊಂದು ವಾರ್ಗಿಕವನ್ನು ಕುರಿತು ಪ್ರತ್ಯೇಕವಾಗಿ ಚರ್ಚಿಸಲಾಗುವುದು.

## ರಾಯ/ರಾವ್

'ರಾಯ' ಎಂಬುದಕ್ಕೆ 'ಅರಸ', ದೊರೆ, ರಾಜ, ಯಜಮಾನ ಇತ್ಯಾದಿ ಅರ್ಥಗಳಿವೆ. ಪುರುಷರ ಹೆಸರಿನ ಕೊನೆಯಲ್ಲಿ 'ರಾಜ' ಎಂಬರ್ಥದಲ್ಲಿ ಇದು ಬಳಸಲ್ಪಡುತ್ತದೆ. ಪ್ರಭುಕೇಂದ್ರಿತ ಆಡಳಿತ ವ್ಯವಸ್ಥೆಯಲ್ಲಿ ಬ್ರಾಹ್ಮಣರು ರಾಜನ ಪ್ರೀತಿಗೆ ಪಾತ್ರರಾಗಿದ್ದು, ರಾಜ್ಯಾಡಳಿತದ ಪ್ರಧಾನ ವೃತ್ತಿಗಳಲ್ಲಿ ಕೆಲಸ ಮಾಡುತ್ತಿದ್ದು, ರಾಜನಷ್ಟೇ ಗೌರವಕ್ಕೆ ಪಾತ್ರರಾಗಿದ್ದರು. ಆದಕಾರಣ ಗೌರವಸೂಚಕವಾಗಿ ಬ್ರಾಹ್ಮಣರನ್ನು 'ರಾಯ' ಎಂದು ಕರೆಯಲಾಗುತ್ತಿತ್ತು. ಅದು ಹಾಗೆಯೇ ಮುಂದುವರೆದು 'ವಾರ್ಗಿಕ'ವಾಗಿ ಬಳಕೆಯಾಗಿದೆ. ರಾಜರು ಬ್ರಾಹ್ಮಣರಿಗೆ ಜಹಗೀರುಗಳನ್ನು ಕೊಡುತ್ತಿದ್ದರಿಂದ ಮತ್ತು ಅವರು ರಾಜರ ಹಾಗೇನೇ ಇರುತ್ತಿದ್ದುದರಿಂದ 'ರಾಯ' ಎಂಬುದು ಗೌರವ ಸೂಚಿಯಾಗಿ ಬಂದಿರಬಹುದಾದ ಸಾಧ್ಯತೆಯೂ ಇದೆ.

'ರಾವ್' ಎಂಬುದು 'ರಾಯ'ದ ಇಂಗ್ಲೀಶೀಕರಣವಾಗಿದೆ. ಪ್ರಾಚೀನ ಹೆಸರುಗಳಲ್ಲಿ 'ರಾಯ' ಎಂದೇ ಬಳಕೆಯಾಗಿದ್ದು, ಕನ್ನಡದಲ್ಲಿ ವಸಹಾತೋತ್ತರ ಸಂದರ್ಭದಲ್ಲಿ 'ರಾಯ', 'ರಾವ್' ಎಂಬುದಾಗಿ ಬಳಸಲ್ಪಟ್ಟಿದೆ. ಶ್ರೀಪಾದರಾಯ, ವ್ಯಾಸರಾಯ ಎಂಬ ಹೆಸರುಗಳನ್ನು ಇಲ್ಲಿ ಉಲ್ಲೇಖಿಸಬಹುದು. ಚಿತ್ರದುರ್ಗ ಪರಿಸರದಲ್ಲಿ 'ರಾಯ' ಅಥವಾ 'ರಾವ್' ಎಂಬುದು ಬ್ರಾಹ್ಮಣರ ಹೆಸರುಗಳಲ್ಲಿ ಬಳಕೆಯಾಗುತ್ತಿದೆ. ಇದು ಕರ್ನಾಟಕದ ಇತರ ಪ್ರದೇಶಗಳಲ್ಲಿ ಸಾಮಾಜಿಕವಾಗಿ ಬೇರೆ ಬೇರೆ ಜನಸಮುದಾಯಗಳ ಹೆಸರುಗಳಲ್ಲಿಯೂ ಬಳಸಲ್ಪಡುತ್ತದೆ. ಅದೇ ರೀತಿ ಆಂಧ್ರಪ್ರದೇಶದ 'ಕಮ್ಮಾ' ಜನಾಂಗದವರಲ್ಲೂ ಮಹಾರಾಷ್ಟ್ರದಲ್ಲಿ ಮರಾಠಿ ಮತ್ತು ಇತರ ಜನಾಂಗಗಳಲ್ಲೂ ಇದರ ಬಳಕೆ ಇದೆ. ಮಹಾರಾಷ್ಟ್ರದಲ್ಲಿ ಇದರ ಪ್ರಭಾವ ತೀವ್ರವಾಗಿದ್ದು, ಕರ್ನಾಟಕದ ಗಡಿಪ್ರದೇಶಗಳ ಮೇಲೆ ಇದರ ಛಾಪು ಮೂಡಿದೆ. 'ಬೀದರ್ ' ಮತ್ತು 'ಗುಲ್ಬರ್ಗಾ' ಪ್ರದೇಶದಲ್ಲಿ ಬ್ರಾಹ್ಮಣ, ಲಿಂಗಾಯತ, ಮಾದಿಗ, ನಾಯಕ ಮುಂತಾದವರ ಹೆಸರುಗಳಲ್ಲಿಯೂ ಕಂಡುಬರುತ್ತಿದ್ದು, ತುಂಬಾ ಕುತೂಹಲವನ್ನುಂಟುಮಾಡುತ್ತದೆ. ಮುಂಬೈ ಕರ್ನಾಟಕದಲ್ಲಿ 'ರಾವ್' ಎಂಬುದು ಬ್ರಾಹ್ಮಣ ಹೆಸರುಗಳ ಕೊನೆಗೆ, ಹೈದ್ರಾಬಾದ್ ಕರ್ನಾಟಕದಲ್ಲಿ ಬ್ರಾಹ್ಮಣ-ಬ್ರಾಹ್ಮಣೇತರ ವ್ಯಕ್ತಿನಾಮಗಳ ಕೊನೆಗೆ ಕಾಣಿಸಿಕೊಳ್ಳುತ್ತದೆ.[೧] ಹೀಗೆ 'ರಾವ್' ಎಂಬುದು ಸಾಮಾಜಿಕವಾಗಿ ಬೇರೆ ಬೇರೆ ಜನವರ್ಗಗಳ ವ್ಯಕ್ತಿನಾಮಗಳಲ್ಲಿ ಕಂಡುಬಂದರೂ, ಆ ಹೆಸರಿನ ನಿರ್ದಿಷ್ಟ ಭಾಗದಿಂದ ಸಾಮಾಜಿಕ ಪ್ರಭೇದಗಳನ್ನು ಪ್ರತ್ಯೇಕವಾಗಿ ಗುರುತಿಸಲು ಸಾಧ್ಯವಿದೆ. ಉದಾಹರಣೆಗೆ ಕೆಲವು ಹೆಸರುಗಳನ್ನು ನೋಡಬಹುದು.

| 'ಅ' | 'ಬ' | 'ಕ' | 'ಡ' |
| --- | --- | --- | --- |
| ಮಾಧವರಾವ್ | ವೆಂಕೋಬರಾವ್ | ನಾಗೇಶ್ವರರಾವ್ | ಜಟಿಂಗ್ ರಾವ್ |
| ರಾಘುವೇಂದ್ರರಾವ್ | ವಿಠೋಬರಾವ್ | ರಾಮರಾವ್ | ಕಿಶನ್ ರಾವ್ |
| ಶ್ರೀನಿವಾಸರಾವ್ | ವಿಠಲರಾವ್ | ಸುಬ್ಬರಾವ್ | ಅಣ್ಣಾರಾವ್ |
| ಶ್ರೀಪಾದರಾವ್ | ರಂಗೋಜಿರಾವ್ | ವೆಂಕಟೇಶ್ವರರಾವ್ | |
| ನಾರಾಯಣರಾವ್ | ಕೃಷ್ಣೋಜಿರಾವ್ | ಗೋಪಾಲರಾವ್ | |

ಮೇಲೆ ಅ, ಬ, ಕ, ಡ, ಎಂಬ ನಾಲ್ಕು ಪಟ್ಟಿಗಳಿವೆ. ಈ ನಾಲ್ಕು ಪಟ್ಟಿಯ ಹೆಸರುಗಳಲ್ಲಿ ಪ್ರತಿ ನಿರ್ದಿಷ್ಟಕ್ಕೆ 'ರಾವ್ ' ಎಂಬ ವಾರ್ಗಿಕ ಸೇರಿದೆ. 'ರಾವ್ ' ಎಂಬುದು ಈ ಎಲ್ಲಾ ಹೆಸರುಗಳಲ್ಲಿ ಇದ್ದರೂ, ಈ ಎಲ್ಲಾ ಹೆಸರುಗಳು ಯಾವುದೇ ಒಂದು ವರ್ಗಕ್ಕೆ ಸೇರಿರದೆ, ಸಾಮಾಜಿಕವಾಗಿ ಭಿನ್ನ ಸಂಸ್ಕೃತಿಗಳಿಗೆ ಸೇರಿದವುಗಳಾಗಿವೆ. ಈ ಪ್ರತ್ಯೇಕತೆಯನ್ನು ನಿರ್ದಿಷ್ಟ ಘಟಕಗಳಿಂದ ತಿಳಿಯಬಹುದು. ಮೇಲ್ನೋಟಕ್ಕೆ ಈ ಹೆಸರುಗಳು ಒಂದೇ ಎನಿಸಿದರೂ, ಆ ಹೆಸರುಗಳ ನಿರ್ದಿಷ್ಟಗಳು ಸಾಮಾಜಿಕವಾಗಿ ಬೇರೆ ಬೇರೆ ಸಮುದಾಯಗಳನ್ನು ಪ್ರತಿನಿಧಿಸುತ್ತವೆ. 'ಅ' ಪಟ್ಟಿಯ ಹೆಸರುಗಳು ಚಿತ್ರದುರ್ಗ ಪರಿಸರದ ವೈದಿಕ ಬ್ರಾಹ್ಮಣರಲ್ಲಿ ಕಂಡುಬರುತ್ತವೆ. (ವೈಷ್ಣವ ಬ್ರಾಹ್ಮಣರಾದ ಅಯ್ಯಂಗಾರರಲ್ಲಿ ಈ ಹೆಸರುಗಳು ಕಾಣಬರುವುದಿಲ್ಲ) 'ಬ' ಪಟ್ಟಿಯ ಹೆಸರುಗಳು ಮಹಾರಾಷ್ಟ್ರ ಪರಿಸರದ ದೈವಗಳ ಪ್ರಭಾವದಿಂದ ಬಂದಿದ್ದು, ಮರಾಠಿ ಸಮುದಾಯದವರಲ್ಲಿ ಈ ಹೆಸರುಗಳು ಬಳಕೆಯಾಗುತ್ತವೆ. 'ಕ' ಪಟ್ಟಿಯ ಹೆಸರುಗಳು ಆಂಧ್ರಪ್ರದೇಶದ 'ಕಮ್ಮಾ' ಜನಾಂಗದವರಲ್ಲಿ ಕಂಡುಬರುವ ಹೆಸರುಗಳಾಗಿವೆ. 'ಡ' ಪಟ್ಟಿಯ ಹೆಸರುಗಳು ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದ, ಕೆಳವರ್ಗದವರ ಹೆಸರುಗಳಾಗಿರುತ್ತವೆ. ಮಹಾರಾಷ್ಟ್ರದ ಮರಾಠಿ ಸಮುದಾಯದವರ ಹೆಸರು ಹಾಗೂ ಆಂಧ್ರಪ್ರದೇಶದ 'ಕಮ್ಮಾ' ಜನಾಂಗದವರ ಹೆಸರುಗಳು ಕೆಲವೊಮ್ಮೆ ಒಂದೇ ರೀತಿಯಿದ್ದು ಗೊಂದಲ ಉಂಟುಮಾಡುತ್ತವೆ. ಈ ಎರಡೂ ಜನಸಮುದಾಯಗಳನ್ನು ಹೆಸರಿನ ಯಾವುದೇ ಭಾಗದಿಂದ ಪ್ರತ್ಯೇಕಿಸಿ ನೋಡುವುದು ಕಷ್ಟಕರ. ಪ್ರಾದೇಶಿಕ ಅಂತರಗಳಿಂದ ಗುರುತಿಸಬಹುದಾದರೂ, ತುಂಬಾ ಎಚ್ಚರವಿರಬೇಕಾದುದು ಅವಶ್ಯ.

'ರಾವ್ ' ಎನ್ನುವುದು ಚಿತ್ರದುರ್ಗ ಪರಿಸರದಲ್ಲಿ ಬ್ರಾಹ್ಮಣರ ವ್ಯಕ್ತಿನಾಮಗಳಲ್ಲಿ ಕಂಡುಬರುತ್ತದೆ. ಆದರೆ ಇದರ ಬಳಕೆ ೩೦-೪೦ ವಯಸ್ಸನ್ನು ದಾಟಿದ ಪುರುಷರಲ್ಲಿ ವ್ಯಾಪಕವಾಗಿ ಕಂಡುಬರುತ್ತಿದ್ದು, ಇತ್ತೀಚಿನವರ ಹೆಸರುಗಳಲ್ಲಿ ಇದರ ಬಳಕೆ ಕಡಿಮೆಯಾಗಿರುವುದು ಸ್ಪಷ್ಟವಾಗುತ್ತದೆ. ಈ ಬಗೆಯ ಹಿನ್ನಡೆಗೆ ಭಿನ್ನ ಅಂಶಗಳು ಕಾರಣವಾಗಿರಬಹುದಾದರೂ, ಆಧುನೀಕರಣದ ಪ್ರಭಾವ ಇದಕ್ಕೆ ಮುಖ್ಯ ಕಾರಣವಾಗಿದೆ ಎಂದು ಹೇಳಬಹುದು.

### ಆಚಾರ್ಯ

'ಆಚಾರ್ಯ' ಎಂದರೆ ಗುರು, ಪುರೋಹಿತ, ವಿದ್ವಾಂಸ ಎಂದರ್ಥ. ನಮ್ಮ ಸಮಾಜ ಜಾತಿ ಆಧಾರಿತ ಸಾಮಾಜಿಕ ವ್ಯವಸ್ಥೆಯಾಗಿದ್ದು, ಇದರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು

ವರ್ಗಗಳಿವೆ. ಈ ವರ್ಗ ಕ್ರಮದಲ್ಲಿ ಬ್ರಾಹ್ಮಣರು ಎಲ್ಲರಿಗಿಂತಲೂ ಶ್ರೇಷ್ಠರೆಂದು ಮೊದಲಸ್ಥಾನವನ್ನು ಕೊಡಲಾಗಿದೆ. ಆದುದರಿಂದ ಬ್ರಾಹ್ಮಣರು ರಾಜರುಗಳಿಗೆ ಮಾತ್ರವಲ್ಲ, ಇಡೀ ಸಮಾಜಕ್ಕೆ ಗುರುಗಳು ಇದ್ದ ಹಾಗೆ ಎಂದು ಜನ ಭಾವಿಸಿದ್ದಾರೆ. ಹೀಗಾಗಿ ವಿದ್ಯಾಬುದ್ಧಿ ಕಲಿತ ಜನಾಂಗವಾಗಿರುವುದರಿಂದ ಗೌರವಸೂಚಕವಾಗಿ ಬ್ರಾಹ್ಮಣರಿಗೆ 'ಆಚಾರ್ಯ' ಎಂದು ಕರೆಯಲಾಗುತ್ತದೆ. ಎಲ್ಲಾ ಬ್ರಾಹ್ಮಣರ ಹೆಸರುಗಳಿಗೂ ಅಥವಾ ಎಲ್ಲಾ ಬ್ರಾಹ್ಮಣರನ್ನು 'ಆಚಾರ್ಯ' ಎಂದು ಕರೆಯಲಾಗುವುದಿಲ್ಲ. ಬ್ರಾಹ್ಮಣರಲ್ಲಿ ಒಂದು ವರ್ಗಕ್ಕೆ ಮಾತ್ರ ಈ ಹೆಸರು ಸೀಮಿತವಾಗಿದ್ದು, ಅವರ ಹೆಸರುಗಳಲ್ಲಿ ಮಾತ್ರ 'ಆಚಾರ್ಯ' ಎಂಬುದು ಬಳಕೆಯಾಗುತ್ತದೆ. ಬ್ರಾಹ್ಮಣರಲ್ಲಿ ದಾನ-ದಕ್ಷಿಣೆ ಸ್ವೀಕರಿಸುವ ಮತ್ತು ಕೊಡುವ ಅಧಿಕಾರವಿರುವವರು ಅಥವಾ ಪೌರೋಹಿತ್ಯ ಮಾಡಿಸುವ ಹಾಗೂ ಮಾಡುವ ಎರಡೂ ಅಧಿಕಾರ ಇರುವವರು ಮಾತ್ರ ತಮ್ಮ ಹೆಸರುಗಳಲ್ಲಿ 'ಆಚಾರ್ಯ' ಎಂದು ಇಟ್ಟುಕೊಳ್ಳುತ್ತಾರೆ. ಚಿತ್ರದುರ್ಗ ಪರಿಸರದಲ್ಲಿ 'ಆಚಾರ್ಯ'ದಿಂದ ಕೊನೆಗೊಳ್ಳುವ ವ್ಯಕ್ತಿನಾಮಗಳು ಕಂಡುಬರುತ್ತಿವೆಯಾದರೂ ಇದರ ಬಳಕೆ ಹಳೆಯ ತಲೆಮಾರಿನವರ ಹೆಸರುಗಳಲ್ಲಿ ಹೆಚ್ಚು ಕಂಡುಬರುತ್ತಿದ್ದು, ಇತ್ತೀಚಿನವರ ಹೆಸರುಗಳಲ್ಲಿ ಕಡಿಮೆಯಾಗಿದೆ. ಸಾಂಪ್ರದಾಯಿಕ ಮನಸ್ಥಿತಿಯುಳ್ಳ ಕೆಲವರು ಮಾತ್ರ ಪರಂಪರೆಯ ಮುಂದುವರಿಕೆಯಾಗಿ ಈಗಲೂ ಉಳಿಸಿಕೊಂಡು ಬಂದಿರುವುದು ತಿಳಿದು ಬರುತ್ತದೆ.

### ಭಟ್ಟ/ಭಟ್

'ಭಟ್ಟ' ಎನ್ನುವುದು ಹುದ್ದೆಸೂಚಕ ಪದ. ಈ ಪದಕ್ಕೆ ಪಂಡಿತ, ಪುರೋಹಿತ, ಅಡುಗೆ ಮಾಡುವವ ಎಂಬಿತ್ಯಾದಿ ಅರ್ಥಗಳಿವೆ. 'ಭಟ್ಟ' ಎಂಬುದು ವೈದಿಕ ಇಲ್ಲವೆ ಸಂಪ್ರದಾಯಸ್ಥ ಬ್ರಾಹ್ಮಣರ ಹೆಸರುಗಳಲ್ಲಿ ವಾರ್ಗಿಕವಾಗಿ ಬಳಕೆಯಾಗುತ್ತದೆ. 'ಭಟ್ಟ' ಎಂಬುದು ಎರಡು ಭಿನ್ನ ಸಂದರ್ಭಗಳಲ್ಲಿ ಬೇರೆ ಬೇರೆ ಅರ್ಥದಲ್ಲಿ ಬಳಕೆಯಾಗುತ್ತದೆ. ಒಂದು ಪದವಿ (ಹುದ್ದೆ) ಸೂಚಕವಾಗಿ ಇನ್ನೊಂದು ವೃತ್ತಿಸೂಚಕವಾಗಿ. ಅನೇಕ ಶಾಸ್ತ್ರಗಳಲ್ಲಿ ಪಾರಂಗತನಾದವನಿಗೆ ಬಳಸುವಾಗ, ಪಂಡಿತ ಎಂಬರ್ಥದಲ್ಲಿಯೂ, 'ಅಡುಗೆ' ಮಾಡುವ ವೃತ್ತಿಯನ್ನು ಅವಲಂಬಿಸಿರುವವನಿಗೆ ಹೇಳುವಾಗ ವೃತ್ತಿಸೂಚಕವಾಗಿಯೂ ಬಳಸಲ್ಪಡುತ್ತದೆ.

ಪ್ರಾಚೀನ ಕಾಲದಲ್ಲಿ ರಾಜರು ಮೋಕ್ಷ ಸಂಪಾದಿಸಲು ಅನೇಕ ಪುಣ್ಯದ ಕಾರ್ಯಗಳನ್ನು ಮಾಡುತ್ತಿದ್ದರು. ಅಂಥ ಕಾರ್ಯಗಳಲ್ಲಿ 'ಅನ್ನದಾಸೋಹ'ವೂ ಒಂದು. ಹೀಗೆ ಅನ್ನದಾಸೋಹ ಮಾಡುವಾಗ ಅಡುಗೆ ತಯಾರಿಸುವುದು ಬ್ರಾಹ್ಮಣರಿಗೆ ಮಾತ್ರ ಸೀಮಿತವಾಗಿತ್ತು. ಕಾರಣ ಅವರಲ್ಲದೆ ಬೇರೆ ಯಾವುದೆ ಜಾತಿಯವರು ಮಾಡಿದರೆ, ಸಾಮಾಜಿಕವಾಗಿ ಉನ್ನತ ಜನಾಂಗದವರು ಊಟಮಾಡುತ್ತಿರಲಿಲ್ಲ. ಆದಕಾರಣ ಅಡುಗೆ ಮಾಡುವ ಕಾಯಕಕ್ಕೆಂದೇ ಕೆಲವು ಬ್ರಾಹ್ಮಣರನ್ನು ನೇಮಕ ಮಾಡುತ್ತಿದ್ದರು. ಹೀಗೆ ನೇಮಿಸಲ್ಪಟ್ಟವರು ತಮ್ಮ ಹೆಸರಿನ ಮುಂದೆ ವೃತ್ತಿನಾಮವನ್ನು ಅಭಿಮಾನದಿಂದ ಸೂಚಿಸುವ ಕ್ರಮ ರೂಢಿಗೆ ಬಂದು, ಅದು ಇಂದಿಗೂ ಮುಂದುವರೆದು ಬಂದಿರಬಹುದು. ಇದು ಬ್ರಾಹ್ಮಣರಲ್ಲಿ ಮಾತ್ರ ಬಳಕೆಯಲ್ಲಿದ್ದು, ಇತರ ಸಮುದಾಯಗಳಲ್ಲಿ ಬಳಕೆಯಲ್ಲಿರುವುದು ಕಂಡುಬಂದಿಲ್ಲ. ಅದರಲ್ಲಿಯೂ ಇದು ವಿಶೇಷವಾಗಿ ಉಡುಪಿ ಮತ್ತು ದಕ್ಷಿಣಕನ್ನಡ (ಕರಾವಳಿ ತೀರದ) ಪರಿಸರದ ಬ್ರಾಹ್ಮಣರ ಹೆಸರುಗಳಲ್ಲಿ ಹೆಚ್ಚು ಬಳಕೆಯಲ್ಲಿರುವುದು ತಿಳಿದುಬರುತ್ತದೆ. ಚಿತ್ರದುರ್ಗ ಪರಿಸರದ ಕೆಲವು ಬ್ರಾಹ್ಮಣರ ವ್ಯಕ್ತಿನಾಮಗಳಲ್ಲಿ ಇದರ ಪ್ರಯೋಗ ಇರುವುದು

ಕಾಣಬರುತ್ತದೆ. ಪಾರಂಪರಿಕ ಸಾಮಾಜಿಕ ರಚನೆಯಲ್ಲಾಗಿರುವ ಬದಲಾವಣೆ ಮತ್ತು ಆಧುನೀಕರಣ ಪ್ರಭಾವಕ್ಕೆ ಒಳಗಾಗಿ, ಪಾರಂಪರಿಕ ವ್ಯಕ್ತಿನಾಮಗಳನ್ನು ಕೈಬಿಡುವಂಥದ್ದು ಸಹಜವೇ ಆಗಿದೆ. ಆ ಕಾರಣದಿಂದ ಇತ್ತೀಚಿಗೆ ಇದರ ಬಳಕೆ ಕಡಿಮೆಯಾಗಿರುವುದು ತಿಳಿದುಬರುತ್ತದೆ.

### ಶಾಸ್ತ್ರಿ

'ಶಾಸ್ತ್ರಿ' ಎಂದರೆ ಶಾಸ್ತ್ರಜ್ಞ ಎಂದರ್ಥ. ಅಂದರೆ ಶಾಸ್ತ್ರ ಅಭ್ಯಾಸಗಳಲ್ಲಿ ಪಾರಂಗತನಾದವನು. ಕೆಲವು ಬ್ರಾಹ್ಮಣರ ವ್ಯಕ್ತಿನಾಮಗಳಲ್ಲಿ ಇದು ಗೌರವವಾಚಿಯಾಗಿ ಬಳಕೆಯಾಗುತ್ತದೆ. ಶಾಸ್ತ್ರ ಅಧ್ಯಯನಗಳನ್ನು ತಿಳಿದವನಿಗೆ ಮಾತ್ರ ಈ ಉಪನಾಮದಿಂದ ಕರೆಯಲಾಗುತ್ತಿತ್ತು. ಆದರೆ ಬರಬರುತ್ತಾ ಅದನ್ನು ಒಂದು ಪರಂಪರೆಯನ್ನಾಗಿ ಬಳಸಿಕೊಳ್ಳತೊಡಗಿದರು. ಏನೂ ಓದದೆ ಇರುವವನು ಕೂಡ 'ಶಾಸ್ತ್ರಿ' ಎಂದು ಇಟ್ಟುಕೊಳ್ಳಬಹುದು. ಹಳೆಯ ತಲೆಮಾರಿನವರ ಹೆಸರುಗಳಲ್ಲಿ ಬಳಕೆಯಲ್ಲಿದ್ದಷ್ಟು ದಟ್ಟವಾಗಿ, ಆಧುನಿಕ ಸಂದರ್ಭದ ವ್ಯಕ್ತಿನಾಮಗಳಲ್ಲಿ ಇರುವುದಿಲ್ಲ. ಮೇಲಿನ ಈ ಮಾತು ಚಿತ್ರದುರ್ಗ ಪರಿಸರಕ್ಕೆ ಮಾತ್ರ ಅನ್ವಯಿಸದೆ, ಹೆಚ್ಚೂಕಡಿಮೆ ಇಡೀ ಕರ್ನಾಟಕಕ್ಕೇ ಅನ್ವಯಿಸುತ್ತದೆ. ಅಂದರೆ ಇಲ್ಲಿಯೂ ಕೂಡ ಹಿಂದಿನ ವ್ಯಕ್ತಿನಾಮಗಳಲ್ಲಿ ಬಳಕೆಯಾಗಿದ್ದು, ಸಮಕಾಲೀನರಲ್ಲಿ ಅದರ ಬಳಕೆ ಕಡಿಮೆಯಾಗಿರುವುದನ್ನು ಗಮನಿಸಬಹುದು.

### ಜೋಯಿಸ

ಜ್ಯೋತಿಷ್ಯವನ್ನು ಬಲ್ಲವನಿಗೆ 'ಜೋಯಿಸ' ಎಂಬ ಹೆಸರಿನಿಂದ ಕರೆಯಲಾಗುತ್ತದೆ. 'ಜೋಯಿಸವನ್ನು ಓದುವವನು ಜೋಯಿಸಿಗಂ'' ಪ್ರಾಚೀನ ಕಾಲದಲ್ಲಿ ಶಾಸ್ತ್ರಭ್ಯಾಸ ಮಾಡುವುದು ಮೇಲ್ಜಾತಿ ಅಂದರೆ ಬ್ರಾಹ್ಮಣರಿಗಲ್ಲದೆ ಇತರ ಜನಾಂಗದವರಿಗೆ ಇರಲಿಲ್ಲ. ಗ್ರಹ ಗತಿಗಳನ್ನು ತಿಳಿಸಿ ಹೇಳುವ ಅಥವಾ ಜೋತಿಷ್ಯವನ್ನು ಹೇಳುವುದು ಬ್ರಾಹ್ಮಣರಿಗೆ ಮಾತ್ರ ಮೀಸಲಾಗಿತ್ತು. ಹೀಗೆ ಶಾಸ್ತ್ರ ಹೇಳುವವರಿಗೆ ಜೋಯಿಸ ಎಂದು ಕರೆಯುತ್ತಿದ್ದರು. ಇತರ ಬ್ರಾಹ್ಮಣರಿಂದ ಪ್ರತ್ಯೇಕವಾಗಿ ಗುರುತಿಸಿಕೊಳ್ಳಲು ತಮ್ಮ ವೃತ್ತಿಯನ್ನು ಹೆಸರಿನ ಮುಂದೆ ದಾಖಲಿಸುವಂಥದ್ದು ಪ್ರಾಚೀನಕಾಲದಲ್ಲಿ ಸಾಮಾನ್ಯ ಪದ್ಧತಿಯಾದಂತಿದೆ. ಹೀಗೆ ದಾಖಲಿಸುವಂಥದ್ದು ಒಂದು ಪರಂಪರೆಯಾಗಿ ಮುಂದುವರೆದುಕೊಂಡು ಬಂದಿದೆ. ಇದು ಬ್ರಾಹ್ಮಣ ಸಮುದಾಯದಲ್ಲಿ ಮಾತ್ರ ಕಂಡುಬರುತ್ತದೆ. ಶಾಸ್ತ್ರಕಾವ್ಯಗಳನ್ನು ಅಭ್ಯಾಸ ಮಾಡುವಂಥ ಅವಕಾಶ ಬ್ರಾಹ್ಮಣರಿಗೆ ಮಾತ್ರ ಸೀಮಿತವಾಗಿತ್ತು ಎಂಬ ಸಂಗತಿ ಇದರಿಂದ ತಿಳಿದುಬರುತ್ತದೆ. ಆದರೆ ಇತ್ತೀಚಿನವರ ವ್ಯಕ್ತಿನಾಮಗಳಲ್ಲಿ ಇದರ ಬಳಕೆ ಕಡಿಮೆಯಾಗುತ್ತಿದೆ. ಇದಕ್ಕೆ ಸಾಮಾಜಿಕ ರಚನೆಯಲ್ಲಾಗಿರುವ ಬದಲಾವಣೆ ಮುಖ್ಯಕಾರಣವಾಗಿದೆ ಎಂದು ಹೇಳಬಹುದು.

### ಶಾನುಭೋಗ

ಒಂದು ಗ್ರಾಮದ ಅಥವಾ ಹಳ್ಳಿಯ ಲೆಕ್ಕಪತ್ರಗಳನ್ನು ಬರೆಯುವವನಿಗೆ 'ಶಾನುಭೋಗ', ಕುಲಕರ್ಣಿ ಎಂದು ಕರೆಯಲಾಗುತ್ತಿತ್ತು. ಶಾನುಭೋಗ ಎಂಬುದು 'ಗೌಡ', 'ಪಟೇಲ'ಗಳ ಹಾಗೆ ಒಂದು ಹುದ್ದೆಯನ್ನು

ಸೂಚಿಸುವ ಪದವಾಗಿದೆ. ಪ್ರಾಚೀನ ಕಾಲದಲ್ಲಿ ಈ ವೃತ್ತಿಯನ್ನು ಮಾಡುವವರು ಬ್ರಾಹ್ಮಣರೇ ಆಗಿದ್ದು, ಅವರನ್ನು 'ಶಾನುಭೋಗ' ಎಂದೇ ಕರೆಯಲಾಗುತ್ತಿತ್ತು. ಕಾಲಕ್ರಮೇಣ ಅದು ಅವರ ಹೆಸರಿನ ಮುಂದೆ ಬರೆಯುವುದು ರೂಢಿಯಾದಂತೆ, ಪಾರಂಪರಿಕ ಸಾಮಾಜಿಕ ಸಂರಚನೆಯಲ್ಲಿ ಬದಲಾವಣೆ ಆಗಿದ್ದರೂ ಸಹ, 'ಶಾನುಭೋಗ' ಎಂಬುದು ಈಗಲೂ ಗ್ರಾಮೀಣ ಪರಿಸರದ ಕೆಲವು ಬ್ರಾಹ್ಮಣರ ಹೆಸರುಗಳಲ್ಲಿ ಉಳಿದುಬಂದಿರುವುದು ಕಂಡುಬರುತ್ತದೆ. 'ಶಾನುಭೋಗ' ಎಂಬುದು ಆಧುನೀಕರಣ ಪ್ರಕ್ರಿಯೆ ಅಥವಾ ಇಂಗ್ಲೀಶ್ ನ ಪ್ರಭಾವದಿಂದ ಇತ್ತೀಚಿಗೆ 'ಶಾನಭಾಗ/ಗ್ ಎಂದು ಬಳಕೆಯಾಗುತ್ತಿರುವುದನ್ನು ಗಮನಿಸಬಹುದು. ಆದರೂ, ಹಿಂದಿಗಿಂತ ಇಂದು ಇದರ ಬಳಕೆ ಕಡಿಮೆಯಾಗಿದೆ ಎಂದು ಹೇಳಬಹುದು.

ಚಿತ್ರದುರ್ಗ ಪರಿಸರದ ಕೆಲವು ಬ್ರಾಹ್ಮಣರ ಹೆಸರುಗಳಲ್ಲಿ 'ಶಾನುಭೋಗ' ಎಂಬುದು ಬಳಕೆಯಾಗಿರುವುದು ತಿಳಿದುಬರುತ್ತದೆ. ಉದಾಹರಣೆಗೆ 'ಹುಲಿರಾಜ ಶಾನುಭೋಗ' ಮಾಧವರಾವ್ ಶಾನುಭೋಗ ಇತ್ಯಾದಿ. 'ಶಾನುಭೋಗ' ಎಂಬುದು 'ಹುದ್ದೆ' ಸೂಚಕ ಅರ್ಥವನ್ನು ಕಳೆದುಕೊಂಡು ಕೆಲವೊಮ್ಮೆ ಜಾತಿವಾಚಿಯಾಗಿಯೂ ಬಳಕೆಯಾಗುತ್ತದೆ. ಬ್ರಾಹ್ಮಣರ ಹೋಟೆಲ್‌ಗಳಿಗೆ ಈ ಹೆಸರು ಇಡುವುದನ್ನು ಇಲ್ಲಿ ಮುಖ್ಯವಾಗಿ ಗಮನಿಸಬಹುದು.

### ಶರ್ಮ

'ಶರ್ಮ' ಎಂಬುದು ಬ್ರಾಹ್ಮಣ ಪುರುಷ ವ್ಯಕ್ತಿನಾಮಗಳಲ್ಲಿ ಬಳಕೆಯಾಗುವ ಒಂದು ವಾರ್ಗಿಕ ಘಟಕವಾಗಿದೆ. 'ಶರ್ಮ' ಎಂಬುದು ಸಂಸ್ಕೃತದ ಶರ್ಮಣ:'ದಿಂದ ನಿಷ್ಪನ್ನಗೊಂಡಿರಬಹುದು. ಶರ್ಮಣ: ಎಂದರೆ, ನಾಯಕ, ಮುಖಂಡ, ಮುಂದಾಳು ಎಂದರ್ಥ. ಬ್ರಾಹ್ಮಣರು ಸಾಮಾಜಿಕವಾಗಿ ಉನ್ನತ ಕುಲದವರೆನಿಸಿರುವುದರಿಂದ 'ಶರ್ಮ' ಎಂಬುದು ಗೌರವವಾಚಿಯಾಗಿ ಬಳಕೆಯಾಗಿರಬಹುದು. 'ಶರ್ಮ' ವಾರ್ಗಿಕದಿಂದ ಕೊನೆಗೊಳ್ಳುವ ಕೆಲವು ಬ್ರಾಹ್ಮಣ ಹೆಸರುಗಳನ್ನು ಇಲ್ಲಿ ನಿದರ್ಶನಕ್ಕೆ ಗಮನಿಸಬಹುದು.

ಕೇಶವಶರ್ಮ, ಮಾಧವಶರ್ಮ, ಮಾರುತಿಶರ್ಮ ಇತ್ಯಾದಿ. ಚಿತ್ರದುರ್ಗ ಪರಿಸರದಲ್ಲಿ 'ಶರ್ಮ'ದಿಂದ ಅಂತ್ಯಗೊಳ್ಳುವ ಹೆಸರುಗಳು ಬಳಕೆಯಲ್ಲಿವೆಯಾದರೂ ಹೊಸ ತಲೆಮಾರಿನವರ ಹೆಸರುಗಳಲ್ಲಿ ಇದರ ಬಳಕೆ ಕಡಿಮೆಯಾಗುತ್ತಿರುವುದು ಕಂಡುಬರುತ್ತದೆ. 'ವರ್ಮ' ಎಂಬುದು ಸಾಮಾನ್ಯವಾಗಿ ಕ್ಷತ್ರಿಯರ ಹೆಸರುಗಳಲ್ಲಿ ಕಂಡುಬಂದರೆ, 'ಶರ್ಮ' ಎಂಬುದು ಬ್ರಾಹ್ಮಣರ ಹೆಸರುಗಳಲ್ಲಿ ಕಂಡುಬರುತ್ತದೆ. ಇತಿಹಾಸ ಪ್ರಸಿದ್ಧ ಅರಸ ಮಯೂರಶರ್ಮ, ಮಯೂರವರ್ಮನಾದುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

### ಹೆಗ್ಗಡೆ/ಹೆಗ್ಡೆ/ಹೆಗಡೆ

ಹೆಗ್ಗಡೆ ಅಥವಾ ಹೆಗಡೆ ಎಂಬುದು ಪುರುಷ ವ್ಯಕ್ತಿನಾಮಗಳಲ್ಲಿ ಬಳಕೆಯಾಗುತ್ತಿರುವ ಒಂದು ವಾರ್ಗಿಕ ಪದವಾಗಿದೆ. 'ಹೆಗ್ಗಡೆ' ಎಂಬುದು 'ಪೆರ್ಗಡೆ' ಎಂಬ ಸಂಸ್ಕೃತ ಪದದಿಂದ ಅಪಭ್ರಂಶಗೊಂಡ ಪದವಾಗಿದೆ. ಹೆಗ್ಗಡೆ/ಹೆಗಡೆ ಎಂಬುದು ನಾಯಕ, ಮುಂದಾಳು, ಮುಖಂಡ ಎಂಬ ಅರ್ಥಗಳನ್ನು ನೀಡುತ್ತದೆ. 'ಹೆಗ್ಗಡೆ', 'ಹೆಗ್ಡೆ' ಮತ್ತು 'ಹೆಗಡೆ' ಎಂಬ ಈ ರೂಪಗಳು ಒಂದೇ ಮೂಲಪದದಿಂದ ನಿಷ್ಪನ್ನಗೊಂಡ ಬೇರೆ ಬೇರೆ

ರೂಪಗಳಾಗಿರುವುದರಿಂದ, ಮೂರು ಪದಗಳು ಸೂಚಿಸುವ ಅರ್ಥ ಸಾಮಾನ್ಯವಾಗಿ ಒಂದೇ ಆಗಿದೆ. ಆದರೆ ಈ ಮೂರೂ ಪದರೂಪಗಳು ಸಾಮಾಜಿಕವಾಗಿ ಮತ್ತು ಭೌಗೋಳಿಕವಾಗಿ ಬೇರೆ ಬೇರೆ ಸಮುದಾಯಗಳನ್ನು ಪ್ರತಿನಿಧಿಸುತ್ತವೆ. ಉದಾಹರಣೆಗೆ

| 'ಅ' | 'ಬ' |
|---|---|
| ಜನಾರ್ಧನ ಹೆಗಡೆ | ವೀರೇಂದ್ರ ಹೆಗ್ಗಡೆ |
| ರಾಮಕೃಷ್ಣ ಹೆಗಡೆ | ಸುರೇಂದ್ರನಾಥ ಹೆಗ್ಗಡೆ |
| ನಾರಾಯಣ ಹೆಗಡೆ | ಮಂಜುನಾಥ ಹೆಗ್ಗಡೆ |
| ನರಸಿಂಹ ಹೆಗಡೆ | ಮಂಜು ಹೆಗ್ಗಡೆ |
| ಶ್ರೀನಿವಾಸ ಹೆಗಡೆ | ಸದಾಶಿವ ಹೆಗ್ಡೆ |
| ಪ್ರಕಾಶ್ ಹೆಗ್ಡೆ | |

ಮೇಲಿನ ಎರಡೂ ಪಟ್ಟಿಯ ಹೆಸರುಗಳನ್ನು ಗಮನಿಸಿದರೆ, ಕೆಲವು ಕುತೂಹಲಕರವಾದ ಅಂಶಗಳು ಇರುವುದು ಮನದಟ್ಟಾಗುತ್ತದೆ. 'ಅ' ಪಟ್ಟಿಯ ಹೆಸರುಗಳು ಹವ್ಯಕ ಬ್ರಾಹ್ಮಣರಲ್ಲಿ ಕಂಡುಬರುವಂಥ ಹೆಸರುಗಳಾಗಿದ್ದು, ವಿಶೇಷವಾಗಿ ಈ ಹೆಸರುಗಳು ಉತ್ತರಕರ್ನಾಟಕದ ಭಾಗದಲ್ಲಿ ಹೆಚ್ಚು ಕಂಡುಬರುತ್ತವೆ. 'ಬ' ಪಟ್ಟಿಯ ಹೆಸರುಗಳು ವೈದಿಕೇತರ ಸಮುದಾಯಗಳಲ್ಲಿ ಕಂಡುಬರುತ್ತವೆ. ಹೆಗ್ಗಡೆ ಅಥವಾ 'ಹೆಗ್ಡೆ' ಎಂಬುದು ದಕ್ಷಿಣ ಕರ್ನಾಟಕ ಪರಿಸರದ ಬಂಟ್ಸ್, ಜೈನ ಮತ್ತು ಕೆಲವು ಒಕ್ಕಲಿಗರಲ್ಲಿ ಬಳಕೆಯಾಗುತ್ತದೆ. ಇಲ್ಲಿ 'ಹೆಗಡೆ' ಎಂಬುದು ಬ್ರಾಹ್ಮಣ ಸಮುದಾಯವನ್ನು ಪ್ರತಿನಿಧಿಸಿದರೆ, ಹೆಗ್ಗಡೆ, ಹೆಗ್ಡೆ ಎಂಬುದು ಬ್ರಾಹ್ಮಣೇತರ ಸಮುದಾಯಗಳಾದ ಬಂಟ್ಸ್ ಮತ್ತು ಜೈನರನ್ನು ಪ್ರತಿನಿಧಿಸುತ್ತವೆ. ಇದು ಎಲ್ಲ ಸಂದರ್ಭದಲ್ಲಿ ಹೀಗೆಯೇ ಬಳಕೆಯಾಗುತ್ತದೆ ಎಂದು ಖಚಿತವಾಗಿ ಹೇಳುವುದು ಕಷ್ಟ. ಏಕೆಂದರೆ ಹೆಗ್ಗಡೆ, ಹೆಗ್ಡೆ ಎಂಬುದು ಕೆಲವೊಮ್ಮೆ ಬ್ರಾಹ್ಮಣರಲ್ಲಿಯೂ ಬಳಕೆಯಾಗುತ್ತದೆ. ಅಂಥ ಸಂದರ್ಭಗಳಲ್ಲಿ ಈ ಹೆಸರಿನ ನಿರ್ದಿಷ್ಟ ಭಾಗದಿಂದ ಪ್ರತ್ಯೇಕತೆಯನ್ನು ಗುರುತಿಸಬಹುದು. ಬ್ರಾಹ್ಮಣರ ವ್ಯಕ್ತಿನಾಮ ನಿರ್ದಿಷ್ಟಗಳು ಸಾಮಾನ್ಯವಾಗಿ ವೈಷ್ಣವ ಪರಂಪರೆಯನ್ನು ಅನುಸರಿಸಿ ಬಂದರೆ, ಬಂಟ್ಸ್ ಮತ್ತು ಜೈನರ ಹೆಸರುಗಳು, ವೈದಿಕೇತರ ಪರಂಪರೆಯಾದ, ಶಿವ ಮತ್ತಿತರ ಮೂಲವನ್ನನುಸರಿಸಿ ಬಂದಿರುವುದನ್ನು ಸೂಕ್ಷ್ಮವಾಗಿ ತಿಳಿಯಬಹುದು. ಆದರೆ ಇಂದು ಹೆಸರುಗಳು ಧಾರ್ಮಿಕ ಗಡಿಗಳನ್ನು ದಾಟಿ ನಡೆಯುವುದರಿಂದ, ವ್ಯತ್ಯಾಸವನ್ನು ಗುರುತಿಸುವುದು ತೊಂದರೆಯೆನಿಸಬಹುದು.

ಚಿತ್ರದುರ್ಗ ಪರಿಸರದಲ್ಲಿ 'ಹೆಗಡೆ' ವಾರ್ಗಿಕದಿಂದ ಕೊನೆಗೊಳ್ಳುವ ಹೆಸರುಗಳು ಹಿಂದೆ ಇದ್ದಿರಬಹುದಾದರೂ ಇಂದು ಈ ಪರಿಸರದಲ್ಲಿ ಇರುವುದು ಕಂಡುಬಂದಿಲ್ಲ.

'ಹೆಗ್ಗಡತಿ' ಎಂಬುದು 'ಹೆಗ್ಗಡೆ' ಎಂಬುದರ ಸ್ತ್ರೀಲಿಂಗ ಸೂಚಕವಾಗಿದೆ. ರಾಜ-ರಾಣಿ, ಅರಸ-ಅರಸಿ, ನಾಯಕ-ನಾಯಕಿ, ಗೌಡ-ಗೌಡತಿ ಎಂಬ ರೂಪಗಳ ಹಾಗೆ. ಗಂಡನ ಹುದ್ದೆಯನ್ನು ಆಧರಿಸಿ ಸ್ತ್ರೀಗೆ ಈ 'ಹೆಗ್ಗಡತಿ' ಎಂಬುದು ಬಂದಿದ್ದು. ಸ್ತ್ರೀಗೆ ಪ್ರತ್ಯೇಕವಾಗಿ ಈ ಹುದ್ದೆ ಇರುವುದಿಲ್ಲ. 'ಹೆಗ್ಗಡತಿ' ಎಂಬುದು

ಈಗಲೂ ದಕ್ಷಿಣ ಕನ್ನಡದ ಜೈನ, ಬಂಟ್ಸ್ ಸಮುದಾಯದ ಸ್ತ್ರೀ ವ್ಯಕ್ತಿನಾಮಗಳಲ್ಲಿ ಬಳಕೆಯಲ್ಲಿರುವುದು ಗಮನಾರ್ಹ ಸಂಗತಿಯಾಗಿದೆ. ಉದಾಹರಣೆಗೆ ಧರ್ಮಸ್ಥಳ ಮಂಜುನಾಥಸ್ವಾಮಿ ದೇವಾಲಯದ ಧರ್ಮಾಧಿಕಾರಿ ಶ್ರೀ ವೀರೇಂದ್ರ ಹೆಗ್ಗಡೆಯವರ ತಾಯಿಯ ಹೆಸರು - ರತ್ನಮ್ಮ ಹೆಗ್ಗಡತಿ ಎಂಬುದು ಇಲ್ಲಿ ಉಲ್ಲೇಖನೀಯವಾದುದು.

'ಹೆಗಡೆ/ಹೆಗ್ಗಡೆ' ಎಂಬುದು ಬೇರೆ ಬೇರೆ ಸಾಮಾಜಿಕ ಪರಿಸರದ ವ್ಯಕ್ತಿನಾಮಗಳಲ್ಲಿ ಕಂಡುಬರುವುದಾದರೂ ಅದು ಸಾಮಾಜಿಕವಾಗಿ ಬಲಿಷ್ಠವಾದ ಜನಸಮುದಾಯಗಳಲ್ಲಿ ಮಾತ್ರ ಎಂಬುದು ತುಂಬಾ ಕುತೂಹಲಕರ ಸಂಗತಿಯಾಗಿದೆ.

**ಅಯ್ಯಂಗಾರ್**

'ಅಯ್ಯಂಗಾರ್' ಎಂಬುದು ಬ್ರಾಹ್ಮಣ ಸಮುದಾಯದ ವ್ಯಕ್ತಿನಾಮಗಳಲ್ಲಿ ಬಳಕೆಯಾಗುವ ಜಾತಿವಾಚಿ ವಾರ್ಗಿಕ ಪದ. ಇದು ಎಲ್ಲಾ ಬ್ರಾಹ್ಮಣರ ಹೆಸರುಗಳಲ್ಲಿ ಕಾಣಬರದೆ, ಶ್ರೀ ವೈಷ್ಣವರ ಅಂದರೆ, ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಪರಂಪರೆಯವರಲ್ಲಿ ಮಾತ್ರ ಬಳಕೆಯಾಗುತ್ತದೆ. ಉದಾಹರಣೆಗೆ ಕೆಲವು ಹೆಸರುಗಳನ್ನು ಗಮನಿಸಬಹುದು. ದೊರೆಸ್ವಾಮಿ ಅಯ್ಯಂಗಾರ್, ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಶೇಷಾದ್ರಿ ಅಯ್ಯಂಗಾರ್, ತಿರುಮಲ ಅಯ್ಯಂಗಾರ್ ಇತ್ಯಾದಿ. ಈ ಪಂಥದ ಬ್ರಾಹ್ಮಣರು ಚಿತ್ರದುರ್ಗ ಪರಿಸರದಲ್ಲಿ ತುಂಬಾ ವಿರಳವಾಗಿದ್ದು ಮೈಸೂರು ಮತ್ತು ದಕ್ಷಿಣ ಕರ್ನಾಟಕ ಪರಿಸರದಲ್ಲಿ ವಿಪುಲವಾಗಿರುವುದು ತಿಳಿದುಬರುತ್ತದೆ. ಹಳೆಯ ತಲೆಮಾರಿನವರ ಹೆಸರುಗಳಲ್ಲಿ ಮಾತ್ರ ಇದು ಬಳಕೆಯಾಗಿದ್ದು, ಇತ್ತೀಚಿನ ಹೆಸರುಗಳಲ್ಲಿ ಇದರ ಬಳಕೆ ಗೌಣವಾಗಿರುವುದು ತಿಳಿದುಬರುತ್ತದೆ.

**ಪಂಡಿತ**

ಸಕಲ ಶಾಸ್ತ್ರಾಭ್ಯಾಸಗಳಲ್ಲಿ ಪಾರಂಗತನಾದವನಿಗೆ ಗೌರವಸೂಚಕವಾಗಿ 'ಪಂಡಿತ' ಎಂಬುದನ್ನು ಸೇರಿಸಲಾಗುತ್ತದೆ. ಪ್ರಾಚೀನ ಕಾಲದಲ್ಲಿ ಶಾಸ್ತ್ರಾಭ್ಯಾಸಗಳನ್ನು ಓದುವಂಥ, ಕಲಿಯುವಂಥ ಅವಕಾಶಗಳು ಬ್ರಾಹ್ಮಣರಿಗೆ ಮಾತ್ರ ಉಪಲಬ್ಧವಿದ್ದುದರಿಂದ ಬ್ರಾಹ್ಮಣರಲ್ಲಿ ಮಾತ್ರ ಕಂಡುಬರುತ್ತದೆ. ಹೀಗೆ ವ್ಯಕ್ತಿನಾಮಗಳಿಗೆ ಅಂಟುತ್ತಿದ್ದ ವೃತ್ತಿ, ಪದವಿ ಸೂಚಕಗಳು ಮೊದಮೊದಲು ಅನ್ವರ್ಥವಾಗಿದ್ದು, ಕ್ರಮೇಣ ಅದೊಂದು ಪರಂಪರೆಯಾಗಿ ಬೆಳೆದು ಏನೂ ಕಲಿಯದ ಪಂಡಿತನ ಮಗನು ಪಂಡಿತನೆಂದು ಇಟ್ಟುಕೊಂಡ ಉದಾಹರಣೆಗಳಿವೆ. ಆದರೆ ಪ್ರಸ್ತುತ ಆಧುನಿಕ ಸಂದರ್ಭದಲ್ಲಿ ಇದರ ಬಳಕೆ ಹಿಂದೆ ಸರಿಯುತ್ತಿರುವುದನ್ನು ಗಮನಿಸಬಹುದು.

ಬ್ರಾಹ್ಮಣ ವ್ಯಕ್ತಿನಾಮಗಳಿಗೆ ಅಂಟುವ ವಾರ್ಗಿಕಗಳನ್ನು ಚಾರಿತ್ರಿಕವಾಗಿ ಚರ್ಚಿಸಿದಾಗ ಆ ಸಮುದಾಯ ಸಾಮಾಜಿಕವಾಗಿ ಪಡೆದಿದ್ದ ಸ್ಥಾನಮಾನ, ಸಂಸ್ಕೃತಿ, ಕೈಗೊಳ್ಳುತ್ತಿದ್ದ ವೃತ್ತಿ ಮುಂತಾದ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತವೆ.

ಬ್ರಾಹ್ಮಣ ಸ್ತ್ರೀ ವ್ಯಕ್ತಿನಾಮಗಳಲ್ಲಿ ಬಳಕೆಯಾಗುವ ವಾರ್ಗಿಕಗಳನ್ನು ಇಲ್ಲಿ ಗಮನಿಸಬಹುದು.

ಸಂಬಂಧವಾಚಿ ವಾರ್ಗಿಕಗಳು

ಅಪ್ಪ ಅಮ್ಮ ಬಾಯಿ

ಇತರ ಸಾಮಾಜಿಕ ಜನವರ್ಗಗಳ ಹೆಸರುಗಳಲ್ಲಿ ಕಾಣಬರುವಂತೆ, ಬ್ರಾಹ್ಮಣರ ಹೆಸರುಗಳಲ್ಲಿಯೂ ಸಂಬಂಧವಾಚಿ ವಾರ್ಗಿಕಗಳು ಬಳಕೆಯಾಗುತ್ತವೆ. ಪ್ರಮಾಣದ ದೃಷ್ಟಿಯಿಂದ ನೋಡಿದಾಗ ಉಳಿದ ಸಮುದಾಯಗಳಿಗಿಂತ ಬ್ರಾಹ್ಮಣರಲ್ಲಿ ಇವುಗಳ ಬಳಕೆ ತೀರಾ ಕಡಿಮೆ ಎಂದೇ ಹೇಳಬಹುದು. ಈ ಕುರಿತು ಮುಂದಿನ ಭಾಗದಲ್ಲಿ ವಿಸ್ತೃತವಾಗಿ ಚರ್ಚಿಸಲಾಗುವುದು.

ಬಾಯಿ

'ಬಾಯಿ' ಎಂಬುದು ಬ್ರಾಹ್ಮಣ ಸ್ತ್ರೀ ವ್ಯಕ್ತಿನಾಮಗಳಲ್ಲಿ ಬಳಕೆಯಾಗುವ ಒಂದು ವಾರ್ಗಿಕ ಘಟಕ. ಒಂದು ಕಾಲಕ್ಕೆ ಸಾಮಾಜಿಕವಾಗಿ ಉನ್ನತ ಜನಸಮುದಾಯಗಳ ಅಥವಾ ಪ್ರತಿಷ್ಠಿತ ಸ್ತ್ರೀ ವ್ಯಕ್ತಿನಾಮಗಳಿಗೆ ಗೌರವ ಸೂಚಕವಾಗಿ ಈ ಪದವನ್ನು ಅಂಟಿಸಲಾಗುತ್ತಿತ್ತು. ಆದರೆ ಇಂದು ಜನಸಾಮಾನ್ಯರ ಹೆಸರುಗಳಲ್ಲಿಯೂ ಇದು ಬಳಕೆಯಾಗುತ್ತಿದೆ. ಬ್ರಾಹ್ಮಣರು ಸಾಮಾಜಿಕವಾಗಿ ಮೇಲ್ವರ್ಗವೆಂದು ಗುರುತಿಸಿಕೊಂಡಿದ್ದರಿಂದ ಹೆಚ್ಚು ಗೌರವ ಸೂಚಿಸುವ ಉದ್ದೇಶದಿಂದ 'ಬಾಯಿ' ಎಂಬುದನ್ನು ಇವರ ಹೆಸರುಗಳ ಮುಂದೆ ಸೇರಿಸುತ್ತಿರಬಹುದು. ಚಿತ್ರದುರ್ಗ ಪರಿಸರದಲ್ಲಿ ಬ್ರಾಹ್ಮಣ, ಲಂಬಾಣಿ ಮತ್ತು ಮರಾಠಿ ಸ್ತ್ರೀ ವ್ಯಕ್ತಿನಾಮಗಳಲ್ಲಿ ಬಳಕೆಯಾಗುತ್ತಿರುವುದು ಕಂಡುಬರುತ್ತದೆ. ಗುಲ್ಬರ್ಗಾ ಮತ್ತು ಬೀದರ್ ಜಿಲ್ಲೆಗಳಲ್ಲಿ ಮಹಾರಾಷ್ಟ್ರದ ಪ್ರಭಾವದಿಂದ ಇದರ ಬಳಕೆ ತೀರಾ ಸಾಮಾನ್ಯವಾಗಿದ್ದು, ಬಹುತೇಕ ಸಮುದಾಯಗಳ ಹೆಸರುಗಳಲ್ಲಿ ಕಾಣಿಸಿಕೊಳ್ಳುತ್ತದೆ. ಹೀಗೆ ಒಂದು ವಾರ್ಗಿಕ ಘಟಕ ಹಲವು ಸಾಮಾಜಿಕ ಜನವರ್ಗಗಳಲ್ಲಿ ಬಳಕೆಯಾಗುತ್ತಿದ್ದರೂ, ಆ ಹೆಸರುಗಳ ನಿರ್ದಿಷ್ಟ ಘಟಕಗಳಿಂದ ಸಾಮಾಜಿಕ ಪ್ರಭೇದಗಳನ್ನು ಗುರುತಿಸಲು ಸಾಧ್ಯವಿದೆ. ಸ್ಪಷ್ಟನೆಗಾಗಿ ಕೆಲವು ಮಾದರಿಗಳನ್ನು ಇಲ್ಲಿ ಗಮನಿಸಬಹುದು.

| 'ಅ' | 'ಬ' | 'ಕ' | 'ಡ' |
|---|---|---|---|
| ಶ್ಯಾಮಲಾಬಾಯಿ | ಪಂಡಿರೀಬಾಯಿ | ಜಮಲೀಬಾಯಿ | ಕಾಶೀಬಾಯಿ |
| ತುಳಸೀಬಾಯಿ | ಸಕ್ಕೂಬಾಯಿ | ಚಾಕೀಬಾಯಿ | ಹುಸನಾಬಾಯಿ |
| ರಾಧಾಬಾಯಿ | ಜೀಜಾಬಾಯಿ | ಛನ್ನೀಬಾಯಿ | ಕಮಲಾಬಾಯಿ |
| ಜಾನಕಿಬಾಯಿ | ತುಳಜಾಬಾಯಿ | ಹೇಮ್ಲೀಬಾಯಿ | ಪಾರ್ವತಿಬಾಯಿ |
| ಕೃಷ್ಣಬಾಯಿ | ಸಾವಿತ್ರಿಬಾಯಿ | ಗೋಮ್ಲೀಬಾಯಿ | ಸರಸ್ವತಿಬಾಯಿ |
| ಸೀತಾಬಾಯಿ | ಅನಸೂಯಬಾಯಿ | ಲಚ್ಮೀಬಾಯಿ | ಗೌರೀಬಾಯಿ |
| ಸುಮಿತ್ರಾಬಾಯಿ | ಕೌಸಲ್ಯಾಬಾಯಿ | ಭೀಮಾಬಾಯಿ | ರಮಾಬಾಯಿ |

ಮೇಲೆ ತಿಳಿಸಿರುವ ಅ, ಬ, ಕ, ಡ ಎಂಬ ನಾಲ್ಕು ಗುಂಪುಗಳಲ್ಲಿ ಒಂದೇ ವಾರ್ಗಿಕ ಭಿನ್ನ ನಿರ್ದಿಷ್ಟಗಳನ್ನು ಹೊಂದಿರುವ ಗುಂಪುಗಳನ್ನು ಕಾಣಬಹುದು. ಈ ಹೆಸರುಗಳ ಎರಡನೇ ಭಾಗದಿಂದ ವ್ಯಕ್ತಿಯ ಸ್ತರಗಳನ್ನು ಸೂಕ್ಷ್ಮವಾಗಿ ತಿಳಿಯಲು ಸಾಧ್ಯವಿದೆ. 'ಅ' ಪಟ್ಟಿಯ ಹೆಸರುಗಳು ಸಾಮಾಜಿಕವಾಗಿ ಅತ್ಯಂತ ಮೇಲ್ ಸ್ತರದ

ಬ್ರಾಹ್ಮಣ ಮಹಿಳೆಯರ ಹೆಸರುಗಳಾದರೆ 'ಬ' ಪಟ್ಟಿಯ ಹೆಸರುಗಳು ಮರಾಠಿ ಸಮುದಾಯದ ಸ್ತ್ರೀಯರನ್ನು ಸೂಚಿಸುತ್ತವೆ. ಅದೇ ರೀತಿ 'ಕ' ಪಟ್ಟಿಯ ಹೆಸರುಗಳು ಲಂಬಾಣಿ ಸ್ತ್ರೀಯರ ಹೆಸರುಗಳಾದರೆ, 'ಡ' ಪಟ್ಟಿಯ ಹೆಸರುಗಳು ಸಾಮಾಜಿಕವಾಗಿ ಅತ್ಯಂತ ಕೆಳಸ್ತರದ ಮಹಿಳೆಯರ ಹೆಸರುಗಳಾಗಿವೆ. 'ಡ' ಪಟ್ಟಿಯ ಹೆಸರುಗಳು ಸಾಮಾನ್ಯವಾಗಿ ಬೀದರ್, ಗುಲ್ಬರ್ಗಾ ಭಾಗದ ಮಹಿಳೆಯರಲ್ಲಿ ಕಂಡುಬರುವಂತ ಹೆಸರುಗಳು ಎಂಬುದು ಗಮನಾರ್ಹ. ಮೇಲಿನ ನಾಲ್ಕು ಪಟ್ಟಿಯ ಹೆಸರುಗಳು ಸಾಮಾಜಿಕಾಗಿ ನಾಲ್ಕು ವರ್ಗಗಳನ್ನು ಸೂಚಿಸುತ್ತವೆ. ಇಲ್ಲಿನ ಪ್ರತಿಗುಂಪಿನ ಹೆಸರುಗಳು, ಆಯಾವರ್ಗದ ಸಾಮಾಜಿಕ ಹಿನ್ನೆಲೆಯಿಂದ ಬಂದಿರುವುದನ್ನು ಸೂಕ್ಷ್ಮವಾಗಿ ಗಮನಿಸಬಹುದು. ಆದರೂ ಇತ್ತೀಚೆಗೆ ಬೇರೆ ಬೇರೆ ಸಮುದಾಯಗಳು, ಬೇರೆ ಬೇರೆ ಸಮುದಾಯಗಳ ಸಂಸ್ಕೃತಿಯನ್ನು ಬಹಳ ಮುಕ್ತವಾಗಿ ಸ್ವೀಕರಿಸುತ್ತಿವೆ. ಇದರಿಂದಾಗಿ ಯಾವ ಹೆಸರನ್ನು ಯಾರು ಬೇಕಾದರೂ ನಿರ್ದೇಶನ ಮಾಡಿಕೊಳ್ಳಬಹುದು; ಮಾಡಿಕೊಳ್ಳುತ್ತಿದ್ದಾರೆ. ಇಂತಹ ಸನ್ನಿವೇಶಗಳಲ್ಲಿ ಸಾಮಾಜಿಕ ಅಂತರಗಳನ್ನು ಗುರುತಿಸುವುದು ತುಂಬಾ ಕಷ್ಟ.

'ಬಾಯಿ' ಎಂಬುದು ಕರ್ನಾಟಕದ ಎಲ್ಲಾ ಬ್ರಾಹ್ಮಣ ಸ್ತ್ರೀ ವ್ಯಕ್ತಿನಾಮಗಳಲ್ಲಿ ಕಂಡುಬರುವುದಿಲ್ಲ. ಚಿತ್ರದುರ್ಗವನ್ನು ಬಳಸಿಕೊಂಡು ಹೈದ್ರಾಬಾದ್ ಕರ್ನಾಟಕದ ಪರಿಸರದಲ್ಲಿ ಹೆಚ್ಚು ಕಂಡುಬರುತ್ತಿದ್ದು, ಉಳಿದ ಭಾಗಗಳಲ್ಲಿ ಇದರ ಬಳಕೆ ಇದ್ದಂತೆ ಕಾಣಬರುವುದಿಲ್ಲ. ವಾಸ್ತವವಾಗಿ 'ಬಾಯಿ' ಎಂಬುದು ಕನ್ನಡದ ಪದವಾಗಿದ್ದರೂ, ಮರಾಠಿ ಸ್ತ್ರೀ ವ್ಯಕ್ತಿನಾಮಗಳಲ್ಲಿ ಹೆಚ್ಚು ಬಳಕೆಯಲ್ಲಿರುವುದು ಕುತೂಹಲದಾಯಕವಾದ ಸಂಗತಿಯಾಗಿದೆ. ಈ ಮರಾಠಿ ಸಂಪರ್ಕ ಹೈದ್ರಾಬಾದ್ ಕರ್ನಾಟಕದಲ್ಲಿ ಹೆಚ್ಚು ಇರುವುದರಿಂದ 'ಬಾಯಿ' ಎಂಬುದು ಈಗಲೂ ಇಲ್ಲಿನ ಸ್ತ್ರೀಯರ ಹೆಸರುಗಳಲ್ಲಿ ವ್ಯಾಪಕವಾಗಿ ಬಳಕೆಯಲ್ಲಿದೆ. ಆಧುನೀಕರಣದ ಪ್ರಭಾವಕ್ಕೆ ಒಳಗಾಗಿ ಸಾಂಪ್ರದಾಯಿಕ ವ್ಯಕ್ತಿನಾಮಗಳ ಬಗೆಗೆ ವರ್ಜ್ಯಭಾವನೆ ಹೊಂದಿ, ವಿನೂತನ ಹೆಸರುಗಳನ್ನು ಪಡೆಯುತ್ತಿರುವುದರಿಂದ ಇದರ ಬಳಕೆ ಕ್ರಮೇಣ ಕಡಿಮೆಯಾಗುತ್ತಿರುವುದು ತಿಳಿದುಬರುತ್ತದೆ.

ಅಧ್ಯಯನಕ್ಕೆ ಆಯ್ದುಕೊಂಡ ವ್ಯಕ್ತಿನಾಮಗಳನ್ನು ಆಧರಿಸಿ, ವಾರ್ಗಿಕಗಳು ತಲೆಮಾರುಗಳಲ್ಲಿ ಬಳಕೆಯಾಗಿರುವ ಬಗೆಯನ್ನು ಶೇಕಡವಾರು ಪ್ರಮಾಣದಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

**ಪುರುಷ ವಾರ್ಗಿಕಗಳು [ ಶೇಕಡವಾರು (%) ]**

| ತಲೆ ಮಾರು | ಅಪ್ಪ** | ರಾಯ* | ರಾವ್* | ಆಚಾರ್ಯ* | ಭಟ್ಟ* | ಅಯ್ಯಂಗಾರ್* | ಶಾಸ್ತ್ರಿ* | ಜೋಯಿಸ* | ಪಂಡಿತ* | ಶರ್ಮ* | ಮಠದ* |
|---|---|---|---|---|---|---|---|---|---|---|---|
| ೩ | - | - | ೭ | - | - | - | - | - | - | - | - |
| ೨ | - | - | ೩೪ | ೭ | ೪ | - | ೪ | ೪ | - | - | - |
| ೧ | ೧೨ | ೧೮ | ೩೫ | ೨೯ | ೧೭ | ೧೨ | ೨೩ | ೧೨ | ೧೨ | ೧೨ | ೧೭ |
| ಒಟ್ಟು | ೨.೫ | ೩.೫ | ೨೧ | ೮ | ೫ | ೨ | ೬ | ೩.೫ | ೨ | ೨ | ೫ |
| ಸರಾಸರಿ | **ಸಂಬಂಧವಾಚಿ ವಾರ್ಗಿಕ : ೨.೪ | | | | | *ವೃತ್ತಿ/ಜಾತಿಸೂಚಕ ವಾರ್ಗಿಕ : ೫೮ | | | | | |

**ಕೋಷ್ಟಕ ೧.೨**

ಮೇಲಿನ ಪಟ್ಟಿಯಲ್ಲಿ ವಾರ್ಗಿಕಗಳ ಬಳಕೆಯ ಪ್ರಮಾಣವನ್ನು ಗಮನಿಸಿದಾಗ ಸಂಬಂಧವಾಚಿ ವಾರ್ಗಿಕಗಳ ಪ್ರಮಾಣ ಸರಾಸರಿ ಶೇಕಡ ೨.೪ರಷ್ಟಿದ್ದರೆ, ವೃತ್ತಿ/ಜಾತಿವಾಚಿ ವಾರ್ಗಿಕಗಳ ಪ್ರಮಾಣ ಸರಾಸರಿ ಶೇಕಡ ೫೮ರಷ್ಟಿದೆ. ಅಂದರೆ ಬ್ರಾಹ್ಮಣರ ಪುರುಷ ವ್ಯಕ್ತಿನಾಮಗಳಲ್ಲಿ ಸಂಬಂಧವಾಚಿ ವಾರ್ಗಿಕಗಳ ಬಳಕೆ

ಕಡಿಮೆಯಿದ್ದು, ವೃತ್ತಿ/ಜಾತಿವಾಚಿ ವಾರ್ಗಿಕಗಳ ಬಳಕೆ ಜಾಸ್ತಿ ಇರುವುದು ತಿಳಿಯುತ್ತದೆ. ತಲೆಮಾರುಗಳ ಅಂತರಗಳಲ್ಲಿ ಇವುಗಳ ಬಳಕೆಯ ಸಾಧ್ಯತೆಗಳನ್ನು ಗಮನಿಸಿದರೆ 'ಅಪ್ಪ' ಎಂಬುದು ಮೊದಲ ತಲೆಮಾರಿನಲ್ಲಿ ಮಾತ್ರ ಶೇಕಡ ೧೨ರಷ್ಟು ಇದ್ದು ನಂತರದ ತಲೆಮಾರುಗಳಲ್ಲಿ ಬಳಕೆಯಾಗಿರುವುದಿಲ್ಲ. 'ರಾಯ' ಎಂಬುದು ಒಂದನೆ ತಲೆಮಾರಿನಲ್ಲಿ ವ್ಯಾಪಕವಾಗಿ ಬಳಕೆಯಲ್ಲಿದ್ದು, ಇತ್ತೀಚಿನ ಹೆಸರುಗಳಲ್ಲಿ ಬಿಟ್ಟು ಹೋಗಿದೆ. ಮೊದಲ ತಲೆಮಾರಿನಲ್ಲಿ ಮಾತ್ರ ಶೇ. ೧೮ರಷ್ಟು ಪ್ರಮಾಣ ಕಂಡುಬಂದಿದ್ದು, ಮುಂದಿನವರ ಹೆಸರುಗಳಲ್ಲಿ ಕಾಣಬರುವುದಿಲ್ಲ. 'ರಾವ್ ' ಎಂಬುದು ಎಲ್ಲಾ ವಾರ್ಗಿಕಗಳಿಗಿಂತ ದಟ್ಟವಾಗಿದೆ. ಒಂದನೆ ತಲೆಮಾರಿನಲ್ಲಿ ಶೇಕಡ ೩೫ರಷ್ಟಿದ್ದರೆ, ಎರಡನೆ ತಲೆಮಾರಿನಲ್ಲಿ ಹೆಚ್ಚು ಕಡಿಮೆ ಅದೇ ಪ್ರಮಾಣದಲ್ಲಿ ಬಳಕೆಯಾಗಿದ್ದು, ಮೂರನೆ ತಲೆಮಾರಿನಲ್ಲಿ ಇದರ ಬಳಕೆ ತೀವ್ರವಾಗಿ ಕಡಿಮೆಯಾಗಿದೆ. 'ರಾವ್' ಎಂಬುದು ಎರಡನೆ ತಲೆಮಾರಿನಿಂದ ಮೂರನೆ ತಲೆಮಾರಿಗೆ ಶೇಕಡ ೨೭ರಷ್ಟು ಕಡಿಮೆಯಾಗಿದೆ. ತಲೆಮಾರಿನಿಂದ ತಲೆಮಾರಿಗೆ ಕಡಿಮೆಯಾಗುತ್ತ ಬಂದಿರುವುದನ್ನು ಇಲ್ಲಿ ಗಮನಿಸಬಹುದು. ಆಚಾರ್ಯ, ಭಟ್ಟ, ಅಯ್ಯಂಗಾರ್, ಶಾಸ್ತ್ರಿ, ಜೋಯಿಸ, ಪಂಡಿತ, ಶರ್ಮ, ಮಠದ ಈ ವಾರ್ಗಿಕಗಳು ಮೊದಲ ತಲೆಮಾರಿನಲ್ಲಿ ಅಧಿಕವಾಗಿದ್ದು, ನಂತರದ ತಲೆಮಾರುಗಳಲ್ಲಿ ಅವುಗಳ ಬಳಕೆ ಗೌಣವಾಗುತ್ತಾ ಬಂದಿರುವುದನ್ನು ಗಮನಿಸಬಹುದು. ಈ ಪ್ರಕ್ರಿಯೆಗೆ ಹಲವು ಬಗೆಯ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಕಾರಣಗಳು ಇರಬಹುದಾದರೂ, ಆಧುನೀಕರಣ ಪ್ರಭಾವ ಈ ವಾರ್ಗಿಕಗಳ ಓಸ್ನತೆಗೆ ಮುಖ್ಯ ಕಾರಣವಾಗಿದೆ ಎಂದೆನ್ನಬಹುದು.

ಪುರುಷ ವಾರ್ಗಿಕಗಳನ್ನು ವಿಶ್ಲೇಷಿಸಿದಂತೆ ಸ್ತ್ರೀ ವಾರ್ಗಿಕಗಳನ್ನು ಇಲ್ಲಿ ವಿಶ್ಲೇಷಿಸಬಹುದು.

ಸ್ತ್ರೀ - ವಾರ್ಗಿಕಗಳು

| ತಲೆಮಾರು | ಅಮ್ಮ | ಅಕ್ಕ | ಅವ್ವ | ಬಾಯಿ |
|---|---|---|---|---|
| ೩ | - | - | - | - |
| ೨ | ೨೧ | ೩ | - | ೭ |
| ೧ | ೪೪ | ೬ | ೬ | ೧೯ |
| ಒಟ್ಟು | ೨೧ | ೩ | ೧.೬ | ೮ |

ಸರಾಸರಿ ಸಂಬಂಧವಾಚಕಗಳ ಶೇಕಡವಾರು ಪ್ರಮಾಣ ೩.೩

ಕೋಷ್ಟಕ - ೧.೩

ಮೇಲಿನ ಪಟ್ಟಿಯಲ್ಲಿನ ವಾರ್ಗಿಕಗಳ ಬಳಕೆಯ ಸಾಧ್ಯತೆಗಳನ್ನು ಗಮನಿಸಿದರೆ, ತಲೆಮಾರಿನಿಂದ ತಲೆಮಾರಿಗೆ ವ್ಯತ್ಯಾಸಗಳು ಆಗಿರುವುದು ಕಂಡುಬರುತ್ತದೆ. 'ಅಮ್ಮ' ಎಂಬುದು ಮೊದಲ ತಲೆಮಾರಿನಲ್ಲಿ ಶೇಕಡ ೪೪ರಷ್ಟು ಇದ್ದರೆ, ಎರಡನೆ ತಲೆಮಾರಿನಲ್ಲಿ ಶೇಕಡ ೨೧ರಷ್ಟು ಇದೆ. ಒಂದನೆ ತಲೆಮಾರಿನಿಂದ ಎರಡನೆ ತಲೆಮಾರಿಗೆ ಶೇಕಡ ೨೩ರಷ್ಟು ಕಡಿಮೆಯಾಗಿದ್ದು, ಮೂರನೆ ತಲೆಮಾರಿನಲ್ಲಿ 'ಅಮ್ಮ'ದಿಂದ ಕೊನೆಗೊಳ್ಳುವ ಹೆಸರುಗಳು ಕಾಣಬರುವುದಿಲ್ಲ. 'ಅಕ್ಕ' ಎಂಬುದು ಒಂದನೆ ತಲೆಮಾರಿನಲ್ಲಿ ಶೇಕಡ ೬ರಷ್ಟಿದ್ದರೆ, ಎರಡನೆ ತಲೆಮಾರಿನಲ್ಲಿ ಶೇಕಡ ೩ರಷ್ಟಿದೆ. ಎರಡೂ ತಲೆಮಾರುಗಳ ನಡುವೆ ಶೇಕಡ ೩ರಷ್ಟು

ಕಡಿಮೆಯಾಗಿದೆ. ಮೂರನೆ ತಲೆಮಾರಿನಲ್ಲಿ ಇದರ ಬಳಕೆ ಕಾಣಬರುವುದಿಲ್ಲ. 'ಅವ್ವ' ಎಂಬುದು ಬ್ರಾಹ್ಮಣರಲ್ಲಿ ತೀರ ಕಡಿಮೆಯೆಂದೇ ಹೇಳಬಹುದು. ಮೊದಲ ತಲೆಮಾರಿನಲ್ಲಿ ಮಾತ್ರ ಶೇಕಡ ೭ರಷ್ಟು ಇದ್ದು, ನಂತರದ ಪೀಳಿಗೆಯಲ್ಲಿ ಅದರ ಬಳಕೆಯಲ್ಲಿ ಹಿನ್ನಡೆಯಾಗಿದೆ. 'ಬಾಯಿ' ಎಂಬುದು ಮೊದಲ ತಲೆಮಾರಿನಲ್ಲಿ ಶೇಕಡ ೧೯ರಷ್ಟು ಇದ್ದರೆ, ಎರಡನೆ ತಲೆಮಾರಿನಲ್ಲಿ ಶೇಕಡ ೭ರಷ್ಟು ಮಾತ್ರ ಇದೆ. ಒಂದನೆ ತಲೆಮಾರಿನಿಂದ ಎರಡನೆ ತಲೆಮಾರಿಗೆ ಶೇಕಡ ೧೨ರಷ್ಟು ಕಡಿಮೆಯಾಗಿದೆ. ಸ್ತ್ರೀಯರಲ್ಲಿ ವಾರ್ಗಿಕಗಳ ಬಳಕೆ ಕ್ರಮೇಣವಾಗಿ ಕಡಿಮೆಯಾಗುತ್ತಾ ಬಂದಿರುವುದು ಮೇಲಿನ ಕೋಷ್ಟಕದ ಅಂಕಿ-ಅಂಶಗಳಿಂದ ಸ್ಪಷ್ಟವಾಗುತ್ತದೆ.

### ೩.೫.೨ ಲಿಂಗಾಯತ

ಲಿಂಗಾಯತರು ಕರ್ನಾಟಕದ ಬಹುಸಂಖ್ಯಾತ ಸಮುದಾಯಗಳಲ್ಲಿ ಒಬ್ಬರಾಗಿದ್ದಾರೆ. ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಮತ್ತು ರಾಜಕೀಯವಾಗಿ ಸಬಲವಾಗಿದ್ದು, ಕರ್ನಾಟಕದ ಭೌಗೋಳಿಕ ವ್ಯಾಪ್ತಿಯಲ್ಲಿ ವ್ಯಾಪಕವಾಗಿ ನೆಲೆಸಿದ್ದಾರೆ. ಇವರು ಮೂಲತಃ ಲಿಂಗಾರಾಧಕರಾಗಿದ್ದು, ಏಕದೇವೋಪಾಸನೆಯನ್ನು ಒಪ್ಪಿಕೊಂಡವರಾಗಿದ್ದಾರೆ. ಲಿಂಗಾಯತ ಸಮುದಾಯವು ಮೂಲತಃ ಎರಡು ಪಂಗಡಗಳಿಂದ ಗುರುತಿಸಿಕೊಳ್ಳುತ್ತದೆ. ಒಂದು ಶೈವಧರ್ಮ (ಶಿವಾರಾಧಕರು) ನಂತರ ಹನ್ನೆರಡನೆ ಶತಮಾನದ ವಚನಕ್ರಾಂತಿಯ ಸಂದರ್ಭದಲ್ಲಿ ಬಸವಣ್ಣನಿಂದ ಸ್ಥಾಪಿಸಲ್ಪಟ್ಟ ವೀರಶೈವ ಧರ್ಮ, ಇಂದು ಲಿಂಗಾಯತರನ್ನು ವೀರಶೈವರೆಂಬ ಒಂದು ಸಾಮಾನ್ಯ ಕಕ್ಷೆಯಲ್ಲಿ ನೋಡಲಾಗುತ್ತದೆ. ಆದರೆ ಕರ್ನಾಟಕದಲ್ಲಿ ಬಸವಧರ್ಮ ಪಾಲಿಸುವ ವೀರಶೈವರು ಮತ್ತು ಪಂಚಪೀಠವನ್ನನುಸರಿಸುವ ಲಿಂಗಾಯತರು ಬೇರೆ ಬೇರೆಯಾಗಿದ್ದಾರೆ. ಮೂಲಶೈವರು ಸಕಲ ಪುರಾತನರನ್ನು ಹಾಗೂ ಶಿವ ಮತ್ತು ಪಂಚಗಣಾಧೀಶ್ವರರನ್ನು ಪೂಜಿಸುವ ಆರಾಧ್ಯ ಪರಂಪರೆಯವರು. ಬಸವೋತ್ತರ ಯುಗದಲ್ಲಿ ಹುಟ್ಟಿಕೊಂಡ ಮಠಮಾನ್ಯಗಳ ಪರಂಪರೆಗೆ ಒಗ್ಗಿಕೊಂಡವರು ವೀರಶೈವರು. ಈ ಭಿನ್ನತೆಗಳೇನೇ ಇದ್ದರು ಒಟ್ಟು ಇವರನ್ನು ವೀರಶೈವ ಲಿಂಗಾಯತರೆಂದು ಕರೆಯಲಾಗುತ್ತದೆ.

ಮುಖ್ಯವಾಗಿ ವೀರಶೈವರಲ್ಲಿ ಅನೇಕ ಉಪಪಂಗಡಗಳಿವೆ. ಪಂಚಾಚಾರ, ಸಾಧು, ಬಣಜಿಗ, ಗಾಣಿಗ, ಹೂಗಾರ, ಕುಂಬಾರ, ಮಡಿವಾಳ ಹೀಗೆ ಅನೇಕ ಉಪಪಂಗಡಗಳಿವೆ. ಇವರು ಒಂದೇ ಸಂಸ್ಕೃತಿಯನ್ನು ಅನುಸರಿಸುತ್ತಾರೆ. ಆದರೆ ಸಾಮಾಜಿಕವಾಗಿ ವೈವಾಹಿಕ ಸಂಬಂಧಗಳಂತಹ ಸಂಗತಿಗಳಲ್ಲಿ ಇವರ ಒಳಪಂಗಡಗಳಲ್ಲಿ ಭಿನ್ನತೆಯಿರುವುದನ್ನು ಕಾಣಬಹುದು. ಲಿಂಗಾಯತರಿಗೆ ವೀರಭದ್ರ, ಈಶ್ವರ, ಬಸವ ಮುಂತಾದ ದೇವರು ಮತ್ತು ಶರಣರು ಆರಾಧ್ಯದೈವಗಳಾಗಿದ್ದು, ಅವರ ಹೆಸರುಗಳು ಕೂಡ ಈ ದೈವಗಳ ಪ್ರೇರಣೆಯನ್ನು ಪಡೆದುಕೊಂಡಿವೆ. ಅಲ್ಲದೆ ಶ್ರೀಶೈಲ, ಉಜ್ಜಯಿನಿ, ಕಾಶಿ, ಕೇದಾರ, ಕಲ್ಯಾಣ ಈ ಕ್ಷೇತ್ರಗಳು ಇವರಿಗೆ ಪವಿತ್ರ ಸ್ಥಳಗಳಾಗಿವೆ. ಶಿವ, ಪಾರ್ವತಿ ಮತ್ತು ಶಿವನ ಗಣಂಗಳು ಮತ್ತು ಅವರ ವಿವಿಧ ನಾಮಗಳು ಲಿಂಗಾಯತರಿಗೆ ಹೆಸರುಗಳಾಗಿರುವುದೇ ಹೆಚ್ಚು. ಉತ್ತರ ಕರ್ನಾಟಕದಲ್ಲಿ ಈ ಜನಾಂಗ ಅತ್ಯಧಿಕ ಸಂಖ್ಯೆಯಲ್ಲಿ ವಾಸಿಸುತ್ತಿದ್ದು, ಬಸವಾದಿ ಶರಣರು ಅಲ್ಲದೆ ಮಠದ ಪರಂಪರೆಯ ಸಿದ್ಧಲಿಂಗಯತಿ, ಕೊಟ್ಟೂರೇಶ್ವರ, ಅನ್ನದಾನೇಶ್ವರ, ಶಿವಕುಮಾರ, ಕಲ್ಮಠೇಶ್ವರ ಹೀಗೆ ಅನೇಕ ಶರಣರ ಹೆಸರುಗಳನ್ನು ಈ ಭಾಗದಲ್ಲಿ ಇಟ್ಟುಕೊಂಡಿರುವುದು ತಿಳಿಯುತ್ತದೆ. ದಕ್ಷಿಣ ಕರ್ನಾಟಕದಲ್ಲಿಯೂ ಈ ಪ್ರಭಾವ ಕಂಡುಬರುತ್ತದೆ. ಚಿತ್ರದುರ್ಗ

ಪರಿಸರದಲ್ಲಿ ಮುರುಘರಾಜೇಂದ್ರ ಮಠದ ಗುರುಪರಂಪರೆಯ ಹೆಸರುಗಳು ಇಂದಿನ ಜನರ ವ್ಯಕ್ತಿನಾಮಗಳಿಗೆ ಪ್ರೇರಣೆಯನ್ನು ನೀಡಿವೆ. ಕರ್ನಾಟಕದ ಲಿಂಗಾಯತ ಮಹಿಳೆಯರಲ್ಲಿ ಪಾರ್ವತಿ, ಅಕ್ಕಮಹಾದೇವಿ, ನೀಲಾಂಬಿಕ, ಗಂಗಾಂಬಿಕ ಎಂಬ ಹೆಸರುಗಳು ಇರುವುದು ಕಂಡುಬರುತ್ತದೆ. ಅಲ್ಲದೆ ಆಯಾ ಪ್ರಾದೇಶಿಕ ಮಟ್ಟದಲ್ಲಿ ಪ್ರಖ್ಯಾತವಾದ ದೇವರು ಮತ್ತು ಕ್ಷೇತ್ರವನ್ನು ಅನುಸರಿಸಿ ಇಟ್ಟಿರುವ ಹೆಸರುಗಳೂ ಕಂಡುಬರುತ್ತವೆ. (ನಾಯ್ಕನಹಟ್ಟಿ ತಿಪ್ಪೇಸ್ವಾಮಿ, ಮೈಲಾರಲಿಂಗ ಮುಂತಾದವು)

ಲಿಂಗಾಯತರು ಆರ್ಥಿಕವಾಗಿ ಸಬಲರಾಗಿದ್ದರಿಂದ ಇವರು ಗ್ರಾಮಗಳ ಗೌಡಿಕೆಯನ್ನು ನಡೆಸಿರುವುದು ಶಾಸನಗಳಿಂದ ತಿಳಿಯುತ್ತದೆ. 'ಗೌಡ' ಎಂಬುದು ಒಂದು ವೃತ್ತಿ ಆದರೂ ಇದು ಹೆಚ್ಚು ಲಿಂಗಾಯತ ಸಮುದಾಯವನ್ನು ಪ್ರತಿನಿಧಿಸುವಂತಿದೆ. ಉತ್ತರ ಕರ್ನಾಟಕದಾದ್ಯಂತ ಹೆಚ್ಚಾಗಿ ಗೌಡರೆಂದರೆ ಲಿಂಗಾಯತರೇ ಆಗಿರುವುದನ್ನು ಗಮನಿಸಬಹುದು. ಅಲ್ಲದೇ ಅಲ್ಲಲ್ಲಿ ಕುರುಬ, ಗೊಲ್ಲ ಮುಂತಾದ ಗೌಡರು ಅತ್ಯಂತ ಕಡಿಮೆಸಂಖ್ಯೆಯಲ್ಲಿದ್ದಾರೆ. ಚಿತ್ರದುರ್ಗ ಪರಿಸರದಲ್ಲಿಯೂ ಈ ಬಗೆಯ ಧೋರಣೆಯಿದ್ದರೂ ನಾಯಕರು, ಗೊಲ್ಲರು ಮುಂತಾದವರು ಗೌಡರೆಂದು ಕರೆದುಕೊಳ್ಳುವುದು ಕಂಡುಬರುತ್ತದೆ. ಅದೇನೇಯಿದ್ದರೂ ಬ್ರಾಹ್ಮಣರಿಗೆ ಶಾನುಭೋಗಿಕೆ ಇದ್ದಂತೆ ಲಿಂಗಾಯತರಿಗೆ ಗೌಡಿಕೆ ಎಂಬುದು ಒಂದು ಪರಂಪರೆಯಾಗಿ ಮುಂದುವರೆದಿದೆ. ಕಾರಣ ಇವರ ವ್ಯಕ್ತಿನಾಮಗಳಲ್ಲಿ ವಾರ್ಗಿಕ ಭಾಗವಾಗಿ 'ಗೌಡ' ಎಂಬುದು ಮಹತ್ವದ ಸ್ಥಾನ ಪಡೆಯುತ್ತದೆ.

ಆಧುನಿಕವಾಗಿ ಲಿಂಗಾಯತರು ತಮ್ಮ ಹೆಸರುಗಳ ನಿರ್ದೇಶನದಲ್ಲಿ ಸ್ಥಿತ್ಯಂತರಕ್ಕೆ ಒಳಗಾಗಿರುವುದು ಕಂಡುಬರುತ್ತದೆ. ಹೆಚ್ಚಾಗಿ ಭಾವನಾಮಗಳು, ಸಂಸ್ಕೃತೀಕರಣ ಹೆಸರುಗಳು ಪ್ರಭಾವ ಬೀರಿರುವುದನ್ನು ಕಾಣಬಹುದು. ಆಧುನಿಕತೆಗೆ ಬಹುಬೇಗ ಒಗ್ಗಿಕೊಂಡ ಮಧ್ಯಮವರ್ಗದ ಲಿಂಗಾಯತ ಕುಟುಂಬಗಳು, ಮಾಧ್ಯಮಗಳು ಮತ್ತು ಮೂರನೆ ಜಗತ್ತಿನ ವೈಭವೀಕರಣವನ್ನು ತಮ್ಮ ಸಂಸ್ಕೃತಿಗೆ ಅಳವಡಿಸಿಕೊಂಡಂತೆ ಹೆಸರುಗಳ ಮೇಲೆ ವ್ಯಾಪಕವಾಗಿ ಸ್ವೀಕರಿಸಿದ್ದಾರೆ. ಹೀಗೆ ಒಂದು ಕಡೆ ಪಾರಂಪರಿಕವಾದ ದೈವ, ಚರಿತ್ರೆ ಮುಂತಾದವುಗಳನ್ನು ಹೆಸರಿನ ಮುಖೇನ ಬದಿಗೊತ್ತುತ್ತಿರುವುದು ಕಂಡುಬರುತ್ತದೆ. ಜೊತೆಗೆ ಮತ್ತೊಂದು ನೆಲೆಯಲ್ಲಿ ಅದು ವೈಯಕ್ತಿಕ ಅಭೀಪ್ಸೆ ಹಾಗೂ ಹಲವಾರು ಸಾಮಾಜಿಕ ಒತ್ತಡಗಳಿಂದ ಆವರ್ತನೆಯಾಗುತ್ತಿದೆ. ಈ ಬಗೆಯ ಧೋರಣೆಯು ಮುಂದುವರೆದಲ್ಲಿ ಪರಂಪರೆ ಮತ್ತು ಆಧುನಿಕತೆಗಳೆರಡೂ ವ್ಯಕ್ತಿನಾಮಗಳ ನೆಲೆಯಲ್ಲಿ ಪರಿಭಾವಿಸಿದರೆ ಅವು ಒಂದೇ ದಿಕ್ಕಿನಲ್ಲಿ ತಮ್ಮ ಅಸ್ತಿತ್ವವನ್ನು ಕಾಪಾಡಿಕೊಳ್ಳುತ್ತವೆ.

ಈ ಹಿನ್ನೆಲೆಯೊಂದಿಗೆ ಚಿತ್ರದುರ್ಗ ಪರಿಸರದ ಲಿಂಗಾಯತರ ವ್ಯಕ್ತಿನಾಮಗಳನ್ನು ಹೀಗೆ ಚರ್ಚೆಗೆ ಒಳಗು ಮಾಡಬಹುದು.

ಚಿತ್ರದುರ್ಗ ಪರಿಸರದ ಲಿಂಗಾಯತ ಸಮುದಾಯದಲ್ಲಿ ತಲೆಮಾರುಗಳಲ್ಲಿ ಬಳಕೆಯಾಗಿರುವ ಕೆಲವು ಹೆಸರುಗಳನ್ನು ಮಾದರಿಗಾಗಿ ಗಮನಿಸಬಹುದು.

ಪುರುಷರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
| --- | --- | --- |
| ಪರಮೇಶ್ವರಪ್ಪ | ತಿಪ್ಪಣ್ಣ | ಮೋಕ್ಷನಾಥ |
| ಮಹದೇವಪ್ಪ | ಚಂದ್ರಣ್ಣ | ಮೋಹನ್ ಕುಮಾರ್ |
| ಚನ್ನಪ್ಪಗೌಡ | ಓಂಕಾರಪ್ಪ | ಸಂದೇಶ್ ಗೌಡ |
| ತಿಪ್ಪಣ್ಣಗೌಡ | ಮುರಿಗೆಪ್ಪ | ನಿತೀಶ್ ಗೌಡ |
| ಸೋಮಶೇಖರಗೌಡ | ಈರಣ್ಣಗೌಡ | ಪ್ರಕಾಶ್ ಗೌಡ |
| ನುಂಕನಗೌಡ | ಶಿವಾನಂದಗೌಡ | ಕಾರ್ತಿಕ್ ಗೌಡ |
| ಶಿವಾರೆಡ್ಡಿ | ಹೇಮರೆಡ್ಡಿ | ನವೀನ್ |
| ಬಸವರೆಡ್ಡಿ | ಮಲ್ಲಿಕಾರ್ಜುನರೆಡ್ಡಿ | ಶ್ರೀಕಾಂತ |
| ಬಸವರಾಧ್ಯ | ರೇವಣಾರಾಧ್ಯ | ಅರುಣ್ ಕುಮಾರ್ |
| ಲಿಂಗಣಾರಾಧ್ಯ | ವೀರಣಾರಾಧ್ಯ | ಅನಿಲ್ ಕುಮಾರ್ |
| ಬಸಪ್ಪಪಾಟೀಲ | ಮಂಜುನಾಥ ಪಾಟೀಲ | ಆದರ್ಶ |
| ರುದ್ರಪ್ಪಪಟೇಲ | ನಾಗಭೂಷಣ ಪಟೇಲ | ಸುಂದರೇಶ್ |
| ಸಿದ್ದನಗೌಡಪಾಟೀಲ | ಜಂಬನಗೌಡ ಪಾಟೀಲ | ಸ್ವರೂಪನಂದ |
| ವೀರಯ್ಯಸ್ವಾಮಿ | ಮಲ್ಲಯ್ಯಸ್ವಾಮಿ | ಶಶಿಧರ |
| ರುದ್ರಯ್ಯ | ಮರುಳಯ್ಯ | ನಿರಂಜನ |

ಸ್ತ್ರೀಯರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
| --- | --- | --- |
| ಶಿವರುದ್ರಮ್ಮ | ಲಿಂಗಮ್ಮ | ಉಷಾರಾಣಿ |
| ಮುರಿಗೆಮ್ಮ | ನುಂಕಮ್ಮ | ವನಿತ |
| ಕರಿಬಸಮ್ಮ | ಶಿವಮ್ಮ | ದೀಪ |
| ತಿಪ್ಪಮ್ಮ | ಶರಣಮ್ಮ | ಸುಜಾತ |
| ಮಹದೇವಮ್ಮ | ಚನ್ನಮ್ಮ | ಕವಿತ |
| ಬಸಮ್ಮ | ಲಕ್ಷ್ಮಿದೇವಿ | ರೂಪಶ್ರೀ |
| ಕೊಟ್ರಮ್ಮ | ರಾಜೇಶ್ವರಿ | ಸಮಿತ್ರಾದೇವಿ |
| ವೀರಮ್ಮ | ಸರಸ್ವತಿ | ನಯನ |
| ಗಂಗಮ್ಮ | ಶಕುಂತಲ | ಶ್ವೇತ |
| ಪಾರ್ವತಮ್ಮ | ಸುನಂದ | ಪ್ರತಿಭಾ |

ಮೇಲಿನ ಪಟ್ಟಿಗಳ ಹೆಸರುಗಳಿಂದ ಕೆಲವು ಸಂಗತಿಗಳನ್ನು ಸ್ಪಷ್ಟಪಡಿಸಿಕೊಳ್ಳಬಹುದು. ಒಂದನೆ ತಲೆಮಾರಿನ ಪುರುಷ ಮತ್ತು ಸ್ತ್ರೀ ವ್ಯಕ್ತಿನಾಮಗಳಲ್ಲಿ ಸಾಮಾನ್ಯವಾಗಿ ದೈವಮೂಲದ ಹೆಸರುಗಳೇ ಹೆಚ್ಚು

ಬಳಕೆಯಾಗಿವೆ. ಈ ದೈವಮೂಲದ ವ್ಯಕ್ತಿನಾಮಗಳಲ್ಲಿ ಶಿವಸಂಬಂಧಿ ಹೆಸರುಗಳು ಅಧಿಕವಾಗಿದ್ದು, ಆ ಸಮುದಾಯದ ಸಾಂಸ್ಕೃತಿಕ ಪರಂಪರೆಯನ್ನು ಅನುಸರಿಸಿ ಬಂದಿರುವುದು ದೃಢಪಡುತ್ತದೆ. ಎರಡನೆ ತಲೆಮಾರಿನಲ್ಲಿಯೂ ಕೂಡ, ಹಿಂದಿನ ಪರಂಪರೆಯೇ ಮುಂದುವರೆದಿದ್ದರೂ, ನಿರ್ದಿಷ್ಟಗಳಲ್ಲಿ ಕೆಲವು ಬದಲಾವಣೆಗಳು ತಲೆದೋರಿವೆ. ಮೂರನೆ ತಲೆಮಾರಿನಲ್ಲಿ ಪರಂಪರಾಗತ ವ್ಯಕ್ತಿನಾಮಗಳು ಹಿಂದೆ ಸರಿಯುತ್ತಿದ್ದು, ಹೊಸ ಹೆಸರುಗಳು ಚಲಾವಣೆಗೆ ಬರುವುದು ಕಂಡುಬರುತ್ತದೆ. ಅಂದರೆ ಆ ಸಂಸ್ಕೃತಿಯನ್ನು ಪ್ರತಿನಿಧಿಸುವಂಥ ಧಾರ್ಮಿಕ ಮೂಲದ ಹೆಸರುಗಳು ಮರೆಯಾಗುತ್ತಿದ್ದು, ಅಮೂರ್ತವಾದ ಭಾವನಾಮಗಳು ಪ್ರವೇಶ ಪಡೆಯುತ್ತಿವೆ. ಪುರುಷರಲ್ಲಿ ದೈವಸಂಬಂಧಿ ಹೆಸರುಗಳು ಈಗಲೂ ಬಳಕೆಯಾಗುತ್ತಿದ್ದರೂ ಅವುಗಳ ರಚನೆ ಹಿಂದಿನ ತಲೆಮಾರುಗಳಿಗಿಂತ ಭಿನ್ನವಾಗಿವೆ. ಆಧುನೀಕರಣದ ಪ್ರಭಾವವೇ ಈ ಬದಲಾವಣೆಗೆ ಮುಖ್ಯ ಕಾರಣವಾಗಿದೆ. ನಿದರ್ಶನಕ್ಕೆ ಕೆಲವು ಉದಾಹರಣೆಗಳನ್ನು ಗಮನಿಸಬಹುದು.

ಬಸಪ್ಪ > ಬಸವರಾಜ > ಬಸವರಾಜ್

ವೀರಪ್ಪ > ವೀರೇಶ್ > ವೀರೇಶ್ ಕುಮಾರ್

ಮೊದಮೊದಲು ವಾರ್ಗಿಕಗಳ ಬಳಕೆ ಒಂದು ರೀತಿಯಲ್ಲಿ ಕಡ್ಡಾಯವಾಗಿದ್ದು, ಕಾಲಕ್ರಮೇಣ ಕಡಿಮೆಯಾಗಿದೆ. ಪ್ರಸ್ತುತ ಸಂದರ್ಭದಲ್ಲಿ ನಿರ್ದಿಷ್ಟ ನಾಮಗಳನ್ನೇ ವ್ಯಂಜನಾಂತವಾಗಿ ಇಟ್ಟುಕೊಳ್ಳಲಾಗುತ್ತಿದೆ. ಲಿಂಗಾಯತರಲ್ಲಿ ತಮ್ಮ ಸಮುದಾಯದ ಸಂಸ್ಕೃತಿಯನ್ನು ನಿರ್ದಿಷ್ಟಪಡಿಸುವ ದೈವಸಂಬಂಧಿ ಹೆಸರುಗಳ ಜೊತೆಗೆ, ಪ್ರಾದೇಶಿಕ ದೈವಗಳ ಪ್ರಭಾವ ಮತ್ತು ವೈದಿಕ ಸಂಸ್ಕೃತಿಯ ಪ್ರಭಾವ ಇವರ ವ್ಯಕ್ತಿನಾಮಗಳ ಮೇಲೆ ಆಗಿರುವುದು ತಿಳಿದುಬರುತ್ತದೆ.

ಪುರುಷರಲ್ಲಿ ಸಂಬಂಧವಾಚಿ ಹಾಗೂ ವೃತ್ತಿ/ಜಾತಿವಾಚಿ ವಾರ್ಗಿಕಗಳು ಬಳಕೆಯಾಗುತ್ತಿದ್ದು, ಸಂಬಂಧವಾಚಿ ವಾರ್ಗಿಕಗಳು ಒಂದು ಮತ್ತು ಎರಡನೆ ತಲೆಮಾರಿನವರಲ್ಲಿ ಬಳಕೆಯಾಗಿದ್ದು, ಮೂರನೆ ತಲೆಮಾರಿನವರಲ್ಲಿ ಬಳಕೆಯಾಗಿರುವುದಿಲ್ಲ. ಮೊದಲೆರಡು ತಲೆಮಾರುಗಳಲ್ಲಿ ಸಂಬಂಧವಾಚಿ ವಾರ್ಗಿಕಗಳು ಬಳಕೆಯಾಗಿದ್ದರೂ, ಹಳೆಯ ವ್ಯಕ್ತಿನಾಮ ನಿರ್ದಿಷ್ಟಗಳ ಜೊತೆಗೆ ಮಾತ್ರ ಎಂಬುದು ಗಮನಾರ್ಹ. ಮೂರನೆ ತಲೆಮಾರಿನವರಲ್ಲಿ ಪರಂಪರೆಗೆ ಭಿನ್ನವಾದ ಹೊಸ ನಿರ್ದಿಷ್ಟಗಳು ಬಳಕೆಯಾಗಿದ್ದು, ಸಂಬಂಧವಾಚಿ ವಾರ್ಗಿಕಗಳು ಇರುವುದಿಲ್ಲ. ಲಿಂಗಾಯತರು ಸಾಮಾಜಿಕವಾಗಿ ಮುಂದುವರೆದ ಜನಾಂಗವಾಗಿದ್ದು, ಸಂಸ್ಕೃತಾನುಕರಣಕ್ಕೆ ಒಳಗಾಗುತ್ತಿರುವುದು ಇದರಿಂದ ವೇದ್ಯವಾಗುತ್ತದೆ. ಈ ಕಾರಣಗಳಿಂದ ಇತ್ತೀಚಿನ ಹೆಸರುಗಳಲ್ಲಿ ಸಂಬಂಧವಾಚಿ ವಾರ್ಗಿಕಗಳು ಬಿಟ್ಟುಹೋಗುತ್ತಿರಬಹುದು. 'ಗೌಡ', 'ಎಂಬುದು' ಮೊದಲ ತಲೆಮಾರಿನವರಲ್ಲಿ ಹೆಚ್ಚು ಬಳಕೆಯಲ್ಲಿದ್ದು, ಎರಡನೆ ತಲೆಮಾರಿಗೆ ಕಡಿಮೆಯಾಗಿದೆ. ಮೂರನೆ ತಲೆಮಾರಿನಲ್ಲಿ ಪುನಃ ಇದರ ಬಳಕೆ ಅಲ್ಲಲ್ಲಿ ಆವರ್ತನೆಯಾಗುತ್ತಿರುವುದನ್ನು ಗಮನಿಸಬಹುದು. ಮೂರನೆ ತಲೆಮಾರಿನವರಲ್ಲಿ ಆಧುನಿಕ ಹೆಸರುಗಳನ್ನು ಸ್ವೀಕರಿಸಿದ್ದರೂ 'ಗೌಡ' ಎಂಬುದನ್ನು ಹಾಗೆಯೇ ಮುಂದುವರೆಸಿಕೊಂಡು ಬರಲಾಗುತ್ತಿದೆ. ಹಿಂದೆಗಿಂತ ಇಂದು ಜಾತಿ ಅಭಿಮಾನ, ಜಾತಿಸಂಘಟನೆಗಳು ಜಾಸ್ತಿ ಆಗುತ್ತಿದ್ದು, ವ್ಯಕ್ತಿ ವೈಯಕ್ತಿಕ ಅಂದರೆ ಕೌಟುಂಬಿಕ ಪದ ನಾಮಗಳ ಮೂಲಕ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳುವುದಕ್ಕೆ ಬದಲಾಗಿ ಸಮುದಾಯದ ಮೂಲಕ ಗುರುತಿಸಿಕೊಳ್ಳುವಂಥ ಪ್ರವೃತ್ತಿ ಬೆಳೆಯುತ್ತಿದೆ.

'ರೆಡ್ಡಿ', 'ಪಾಟೀಲ' ಎಂಬ ಪ್ರತ್ಯಯಗಳು ಲಿಂಗಾಯತರ ವ್ಯಕ್ತಿನಾಮಗಳಲ್ಲಿ ಉತ್ತರಾರ್ಧ ಪದಗಳಾಗಿ ಬಳಕೆಯಾಗುತ್ತವೆ. ಒಂದು ಮತ್ತು ಎರಡನೆ ತಲೆಮಾರಿನಲ್ಲಿ ಮಾತ್ರ ಇವು ಕಾಣಬರುತ್ತಿದ್ದು, ಮೂರನೆ ತಲೆಮಾರಿನವರಲ್ಲಿ ಹಿಂದೆ ಸರಿದಿವೆ. ಲಿಂಗಾಯತ ಸಮುದಾಯದ ಒಂದು ಅಂಗವೇ ಆಗಿರುವ ಜಂಗಮರ ವ್ಯಕ್ತಿನಾಮಗಳು ಕೂಡ ವೀರಶೈವರ ಹಾಗೆ ಶಿವಸಂಬಂಧಿ ಹೆಸರುಗಳನ್ನೇ ಹೆಚ್ಚು ಇಟ್ಟುಕೊಳ್ಳುತ್ತಾರೆ. ಜಂಗಮರು ಕೂಡ ಆಧುನೀಕರಣದ ಪ್ರಭಾವಕ್ಕೆ ಒಳಗಾಗಿರುವುದು ತಿಳಿದುಬರುತ್ತದೆ. ಮೊದಲೆರಡು ತಲೆಮಾರುಗಳಲ್ಲಿ ಮಾತ್ರ ಪಾರಂಪರಿಕ ವ್ಯಕ್ತಿನಾಮಗಳು ಬಳಕೆಯಲ್ಲಿದ್ದು, ಮೂರನೆ ತಲೆಮಾರಿನವರಲ್ಲಿ ಬೇರೆ ಹೆಸರುಗಳು ಬಳಕೆಗೆ ಬಂದಿವೆ. 'ಲಿಂಗಾಯತರ' ವ್ಯಕ್ತಿನಾಮಗಳನ್ನೇ ಜಂಗಮರ ಹೆಸರುಗಳು ಹೋಲುತ್ತಿದ್ದರೂ, ವಾರ್ಗಿಕಗಳಿಂದ ಪ್ರತ್ಯೇಕಿಸಿ ನೋಡಬಹುದು. ಜಂಗಮರ ಹೆಸರುಗಳು ವಿಶೇಷವಾಗಿ 'ಅಯ್ಯ', 'ಸ್ವಾಮಿ', 'ಆರಾಧ್ಯ' ಎಂಬ ಉತ್ತರಾರ್ಧಗಳಿಂದ ಕೊನೆಗೊಳ್ಳುತ್ತವೆ. ಜಂಗಮರಲ್ಲಿ ಮೇಲಿನ ಈ ವಾರ್ಗಿಕಗಳು ಹಳೆಯ ತಲೆಮಾರಿನ ವ್ಯಕ್ತಿನಾಮಗಳಲ್ಲಿ ಮಾತ್ರ ಕಾಣಬರುತ್ತಿದ್ದು, ಹೊಸ ಪೀಳಿಗೆಯವರಲ್ಲಿ ಬಿಟ್ಟು ಹೋಗಿವೆ. ಲಿಂಗಾಯತ ಸಮುದಾಯದ ವ್ಯಕ್ತಿನಾಮಗಳಲ್ಲಿ ಆಗಿರುವ ಈ ಬದಲಾವಣೆಗಳಿಗೆ, ಸಾಮಾಜಿಕ ಸಂರಚನೆಯಲ್ಲಾಗಿರುವ ಬದಲಾವಣೆ ಹಾಗೂ ಆಧುನೀಕರಣದ ಪ್ರಭಾವ ಮುಖ್ಯ ಕಾರಣವಾಗಿರಬಹುದು. ಸ್ತ್ರೀ ವ್ಯಕ್ತಿನಾಮಗಳಲ್ಲಿ ಸಂಬಂಧವಾಚಿ ವಾರ್ಗಿಕಗಳು ಮಾತ್ರ ಬಳಕೆಯಾಗುತ್ತಿವೆ. ಮೊದಲ ತಲೆಮಾರಿನಲ್ಲಿ ಸಂಬಂಧವಾಚಿ ವಾರ್ಗಿಕಗಳ ಬಳಕೆ ಸಾಮಾನ್ಯವಾಗಿದ್ದು, ಎರಡನೆ ತಲೆಮಾರಿನಲ್ಲಿ ಸ್ವಲ್ಪಮಟ್ಟಿಗೆ ಕಡಿಮೆಯಾಗಿವೆ. ಮೂರನೆ ತಲೆಮಾರಿನವರಲ್ಲಿ ಪರಂಪರಾಗತವಾದ ವ್ಯಕ್ತಿನಾಮ ನಿರ್ದಿಷ್ಟಗಳು ಹಾಗೂ ವಾರ್ಗಿಕಗಳು ಬಳಕೆಯಿಂದ ತಪ್ಪಿಹೋಗಿರುವುದು ತಿಳಿದುಬಂದಿದೆ. ಹೀಗೆ ಈ ಸಮುದಾಯ ಪಾರಂಪರಿಕ ಹೆಸರುಗಳಿಂದ ಕ್ರಮೇಣ ಸ್ಥಿತ್ಯಂತರಗೊಳ್ಳುತ್ತಾ, ಕಾಲಾಂತರದಲ್ಲಿ ಬದಲಾವಣೆಯ ಹಂತಗಳನ್ನು ವ್ಯಾಪಕವಾಗಿ ಸ್ವೀಕರಿಸುತ್ತಿದೆ.

ಪ್ರಸ್ತುತ ಅಧ್ಯಯನದಲ್ಲಿ ಲಿಂಗಾಯತ ಸಮುದಾಯದ ೧೩.೨೮ ವ್ಯಕ್ತಿನಾಮಗಳನ್ನು ವಿಶ್ಲೇಷಣೆಗೆ ಒಳಗು ಮಾಡಲಾಗಿದೆ. ಒಟ್ಟು ಈ ವ್ಯಕ್ತಿನಾಮಗಳಲ್ಲಿ ಯಾವ ಮೂಲದ ಹೆಸರುಗಳು, ತಲೆಮಾರುಗಳಲ್ಲಿ ಹೇಗೆ ಬಳಕೆಯಾಗಿವೆ ಎಂಬುದನ್ನು ಶೇಕಡವಾರು ಪ್ರಮಾಣದಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

## ಲಿಂಗಾಯತ ಸಮುದಾಯದ ವ್ಯಕ್ತಿನಾಮಗಳ ಮಾದರಿ ಸಮೀಕ್ಷೆ ಕೋಷ್ಟಕ ಪಟ್ಟಿ - ೨

| ತಲೆ ಮಾರು | ಧಾರ್ಮಿಕ ಪ್ರಭಾವ ಶೇಕಡವಾರು (%) | | | ಸಮಕಾಲೀನ ಪ್ರಸಿದ್ಧ ವ್ಯಕ್ತಿಗಳ ಪ್ರಭಾವ ಶೇಕಡವಾರು (%) | | | ಆಧುನೀಕರಣದ ಪ್ರಭಾವ ಶೇಕಡವಾರು (%) | | | ಚರಿತ್ರ ಪ್ರಭಾವ ಶೇಕಡವಾರು (%) | | | ಇತರ ಪ್ರಭಾವ ಶೇಕಡವಾರು (%) | | | ಒಟ್ಟು ಶೇಕಡವಾರು (%) | | |
|---|---|---|---|---|---|---|---|---|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೩ | ೭೨ | ೨೦ | ೫೦ | ೫ | ೩ | ೫ | ೧೮ | ೭೬ | ೪೩ | ೨ | ೧.೫ | ೧.೭ | ೩ | ೨ | ೨.೩ | ೫೮ | ೪೨ | ೨೨ |
| ೨ | ೯೨ | ೬೩ | ೭೮ | ೨ | ೨ | ೨ | ೦೫ | ೩೪ | ೨೦ | - | - | - | ೨ | ೧ | ೧.೫ | ೫೧ | ೪೯ | ೪೭ |
| ೧ | ೯೪ | ೮೭ | ೯೦ | - | - | - | - | - | - | ೧ | - | ೦.೫ | ೫ | ೫ | ೫ | ೫೧ | ೪೯ | ೩೦ |
| ಒಟ್ಟು | ೮೮ | ೭೨ | ೭೬ | ೩ | ೧.೫ | ೨.೫ | ೭ | ೩೨ | ೧೯ | ೦.೬ | ೦.೫ | ೦.೬ | ೩ | ೨ | ೨.೭ | ೫೨ | ೪೮ | - |

ಕೋಷ್ಟಕ - ೧.೪

ಮೇಲಿನ ಪಟ್ಟಿಯನ್ನು ಗಮನಿಸಿದರೆ, ಲಿಂಗಾಯತರಲ್ಲಿ ದೈವಸಂಬಂಧಿ ಹೆಸರುಗಳು ಉಳಿದ ವರ್ಗಗಳ ಪ್ರೇರಣೆ-ಪ್ರಭಾವಗಳಿಗಿಂತ ಅಧಿಕವಾಗಿದೆ. ಕ್ರಮೇಣ ತಲೆಮಾರುಗಳಲ್ಲಿ ಬಳಕೆಯ ಪ್ರಮಾಣ ಕಡಿಮೆಯಾಗುತ್ತಿದೆ. ಪುರುಷರಿಗಿಂತ ಸ್ತ್ರೀಯರಲ್ಲಿ ದೈವಸಂಬಂಧಿ ಹೆಸರುಗಳ ಬಳಕೆ ಹೆಚ್ಚು ಪ್ರಮಾಣದಲ್ಲಿ ಕಡಿಮೆಯಾಗುತ್ತಿರುವುದು ಕಾಣಬರುತ್ತದೆ. ಸಮಕಾಲೀನ ಪ್ರಸಿದ್ಧವ್ಯಕ್ತಿಗಳ ಪ್ರಭಾವ ಲಿಂಗಾಯತರಲ್ಲಿ ಕಡಿಮೆಯೆಂದೇ ಹೇಳಬಹುದು. ಒಂದನೆಯ ತಲೆಮಾರಿನವರಲ್ಲಿ ಆ ಬಗೆಯ ಹೆಸರುಗಳು ಕಾಣಬರದೆ, ಎರಡು ಮತ್ತು ಮೂರನೆ ತಲೆಮಾರಿನವರಲ್ಲಿ ಸ್ವಲ್ಪಮಟ್ಟಿಗೆ ಪ್ರಭಾವವಾಗಿರುವುದು ತಿಳಿದುಬರುತ್ತದೆ. ಆಧುನೀಕರಣದ ಪ್ರಭಾವ ಹಳೆಯ ತಲೆಮಾರಿನವರಲ್ಲಿ ಕಾಣಬರದೆ, ಇತ್ತೀಚಿನವರಲ್ಲಿ ಮಾತ್ರ ಕಂಡುಬರುತ್ತದೆ. ಚರಿತ್ರೆ ಮೂಲದ ಹೆಸರುಗಳು ಮೊದಲಿನವರ ಹೆಸರುಗಳಲ್ಲಿ ಬಳಕೆಯಲ್ಲಿದ್ದು, ನಂತರದ ಕೆಲ ವರ್ಷಗಳಲ್ಲಿ ಆ ಹೆಸರುಗಳ ಬಳಕೆ ಕಾಣಬರುವುದಿಲ್ಲ. ಇತ್ತೀಚಿನ ಹೊಸ ತಲೆಮಾರಿನವರಲ್ಲಿ ಬೆರಳೆಣಿಕೆಯ ಪ್ರಮಾಣದಲ್ಲಿ ಅಲ್ಲೊಂದು ಇಲ್ಲೊಂದು ಹೆಸರು ಬಳಕೆಯಲ್ಲಿರುವುದು ಕಾಣಬರುತ್ತವೆ. ಹೆಚ್ಚಾಗಿ ಚರಿತ್ರೆ ಮೂಲದ ಹೆಸರು 'ರೆಡ್ಡಿಲಿಂಗಾಯತ' (ಲಿಂಗಾಯತರಲ್ಲಿ ಒಂದು ಪಂಗಡ)ರಲ್ಲಿ ಕಾಣಬರುತ್ತದೆ. ಇವರು ತಮ್ಮ ಮೂಲವನ್ನು ಹೇಮರೆಡ್ಡಿ ಮಲ್ಲಮ್ಮನ ವಂಶಸ್ಥರು ಎಂದು ಹೇಳಿಕೊಳ್ಳುತ್ತಿದ್ದು, 'ಹೇಮರೆಡ್ಡಿ' ಮಲ್ಲಾರೆಡ್ಡಿ, 'ಮಲ್ಲಮ್ಮ' ಎಂಬ ಹೆಸರುಗಳನ್ನು ಪುರುಷ ಮತ್ತು ಸ್ತ್ರೀಯರು ಇಟ್ಟುಕೊಂಡಿರುವುದು ಕಾಣಬರುತ್ತದೆ. ಈ ನಾಲ್ಕೂ ವರ್ಗಗಳಿಗೆ ಸೇರದ ಚಂದ್ರಪ್ಪ, ಗುರುರಾಜ, ಲತಾ, ಕಮಲಮ್ಮ - ಇಂಥ ಹೆಸರುಗಳು ಮೂರೂ ತಲೆಮಾರಿನವರಲ್ಲಿ ಬಳಕೆಯಾಗಿರುವುದು ಗೋಚರವಾಗುತ್ತದೆ.

ಲಿಂಗಾಯತರ ವ್ಯಕ್ತಿನಾಮಗಳಲ್ಲಿ ಕಾಣಬರುವ ವಾರ್ಗಿಕಗಳನ್ನು ಹೀಗೆ ಹೇಳಬಹುದು.

ಪುರುಷರಲ್ಲಿ

| ೧. ಸಂಬಂಧವಾಚಿ ವಾರ್ಗಿಕ | ೨. ವೃತ್ತಿ/ಜಾತಿವಾಚಿ ವಾರ್ಗಿಕ |
|---|---|
| ಅಪ್ಪ | ಗೌಡ |
| ಅಣ್ಣ | ಪಟೇಲ/ಪಾಟೀಲ/ಲ್ |
| ಅಯ್ಯ | ರೆಡ್ಡಿ |
| ಆರಾಧ್ಯ | |

ಸ್ತ್ರೀಯರಲ್ಲಿ

ಸಂಬಂಧವಾಚಿ ವಾರ್ಗಿಕ

ಅಮ್ಮ ಅಕ್ಕ ಅವ್ವ

ಗವುಂಡಿ > ಗೌಡತಿ (ಶಾಸನಗಳಲ್ಲಿ ಮಾತ್ರ ಬಳಕೆಯಾಗಿದೆ)

ಸಂಬಂಧಸೂಚಕ ವಾರ್ಗಿಕಗಳ ಬಗೆಗೆ ಮುಂದಿನ ಭಾಗದಲ್ಲಿ ಚರ್ಚಿಸಲಾಗುವುದು. ಪ್ರಸ್ತುತ ವೃತ್ತಿ/ ಜಾತಿ ಸೂಚಕ ವಾರ್ಗಿಕಗಳ ಬಗೆಗೆ ವಿಶ್ಲೇಷಿಸಲಾಗುವುದು.

## ಗೌಡ

'ಗೌಡ' ಎಂಬುದು ಒಂದು ಹುದ್ದೆಯನ್ನು ಸೂಚಿಸುತ್ತದೆ. ಗ್ರಾಮದ ಮುಖಂಡನಿಗೆ ಹಿಂದೆ ಈ ಹೆಸರಿನಿಂದ ಕರೆಯಲಾಗುತ್ತಿತ್ತು. ಈ ಅಧಿಕಾರವನ್ನು ಹೊಂದಿರುವ ವ್ಯಕ್ತಿ ಇತರರಿಗಿಂತ ಭಿನ್ನವೆಂದು ಸೂಚಿಸಿಕೊಳ್ಳಲು, ತಮ್ಮ ಹೆಸರಿನ ಮುಂದೆ ತಮ್ಮ ಹುದ್ದೆಯ ಹೆಸರನ್ನು ಬರೆಯಿಸಿಕೊಳ್ಳುವಂಥದ್ದು ಒಂದು ಸಾಮಾನ್ಯ ಪ್ರಕ್ರಿಯೆಯಾಗಿತ್ತು. ಹೀಗೆ ಬಳಕೆಗೆ ಬಂದ ಹೆಸರು, ವ್ಯಕ್ತಿನಾಮದ ಭಾಗವಾಗಿ ಬಳಕೆಯಾಗಿರುವುದನ್ನು ಕಾಣುತ್ತೇವೆ. ಪ್ರಾಚೀನ ಕಾಲದಲ್ಲಿ 'ಗೌಡ' ಎಂಬುದು 'ಗಾವುಂಡ' ಎಂದು ಬಳಕೆಯಾಗಿದೆ. ಶಾಸನ, ಕಾವ್ಯಗಳಿಂದ ಅನೇಕ ಉದಾಹರಣೆಗಳನ್ನು ಕೊಡಬಹುದು. "ವಿಕ್ರಮಗಾವುಂಡ', 'ವಲ್ಲಭಗಾವುಂಡ"[೨] ಎಂಬ ಹೆಸರುಗಳನ್ನು ಗಮನಿಸಬಹುದು.

'ಗೌಡ' ಎಂಬುದು ಪುರುಷ ವ್ಯಕ್ತಿನಾಮಗಳಲ್ಲಿ 'ಗಾವುಂಡ' ಎಂದು ಬಳಕೆಯಾಗಿರುವಂತೆ ಸ್ತ್ರೀಯರಲ್ಲಿ 'ಗಾವುಂಡಿ' ಎಂದು ಬಳಸಲ್ಪಟ್ಟಿದೆ. ಪ್ರಾಯಶಃ ಸ್ವತಃ ಈ ವೃತ್ತಿ ಸ್ತ್ರೀಯರಿಗೆ ಇರದೆ, ಗಂಡನ ಇಲ್ಲವೆ ತಂದೆಯ ಕಡೆಯಿಂದ ಬಂದಿರುವ ಸಾಧ್ಯತೆಗಳು ಹೆಚ್ಚು. ಗ್ರಾಮದ ಮುಖಂಡನಾಗುವ ಅಧಿಕಾರ ಪುರುಷರಿಗೆ ಮಾತ್ರ ಸೀಮಿತವಾಗಿದ್ದು, ಸ್ತ್ರೀಯರು ಈ ಅಧಿಕಾರವನ್ನು ಪಡೆದಿದ್ದರ ಬಗೆಗೆ ಸ್ಪಷ್ಟ ಮಾಹಿತಿ ದೊರೆಯುವುದಿಲ್ಲ. "ಬಹಳಷ್ಟು ಸಲ ಬರುವ ಮಾಳಿಗೌಡ, ಮಾಚವೆ ನಾಯಕಿತಿ, ಸುಗ್ಗಿಯಬ್ಬರಸಿ ಇತ್ಯಾದಿ ಹೆಸರುಗಳು ಇವರ ಆಡಳಿತದ ಸೂಚನೆಗಳಾಗಿರದೆ, ಇವರ ತಂದೆ ಇಲ್ಲವೆ ಗಂಡನ ಆಡಳಿತವನ್ನು ಸೂಚಿಸುತ್ತವೆ. ಇಲ್ಲಿ ಪುರುಷವಾಚಿ ವೃತ್ತಿನಾಮವನ್ನು ಅಂತ್ಯ 'ಇ' ಕಾರಗೊಳಿಸುವುದು (ಗಾವುಂಡ > ಗಾವುಂಡಿ) ಕೊನೆಯಲ್ಲಿ ಇತಿ ಸೇರಿಸುವುದು (ಗಾವುಂಡಿ > ಗಾವುಂಡಿಚಿ) ಕಂಡುಬರುತ್ತದೆ. ಇದೇ ರೀತಿ ನಾಯಕ > ನಾಯಕಿ > ನಾಯಕಿತಿ, ಅರಸ > ಅರಸಿ - ಅರಸಿತಿ"[೩] ಎಂಬುದನ್ನು ಗಮನಿಸಿದರೆ, ವೃತ್ತಿವಾಚಿ ನಾಮಗಳು ಸ್ತ್ರೀಯರಿಗೆ ಸ್ವತಃ ಇರದೆ ಇತರ ನೆಲೆಗಳಿಂದ ಬಂದು ಸೇರಿದವುಗಳಾಗಿವೆ ಎಂಬುದು ತಿಳಿದುಬರುತ್ತದೆ. 'ಗೌಡ' ಎಂಬುದು ಪ್ರಾಚೀನ ಕಾಲದ ವ್ಯಕ್ತಿನಾಮಗಳಲ್ಲಿ ಹುದ್ದೆ, ಪದವಿ ಸೂಚಕವಾಗಿ ಬಳಕೆಯಾಗಿದ್ದರೆ, ಇಂದು ಜಾತಿಸೂಚಕ ಅರ್ಥದಲ್ಲಿ ಬಳಕೆಯಾಗುತ್ತಿದೆ. ಇದು ಸಾಮಾಜಿಕವಾಗಿ ಬೇರೆ ಬೇರೆ ಜನಾಂಗದ ವ್ಯಕ್ತಿನಾಮಗಳಲ್ಲಿ ಬಳಕೆಯಾಗುತ್ತಿದ್ದು, ಕೆಲವು ಸಮುದಾಯಗಳಲ್ಲಿ ಈಗಲೂ ಅಧಿಕಾರ ಸೂಚಕವಾಗಿಯೇ ಬಳಕೆಯಾಗುತ್ತಿರಬಹುದು. "ಹೆಸರುಗಳಿಂದುಂಟಾಗುವ ಸ್ಥಾನ ಮಾನಗಳಿಂದಾಗಿ ಕೆಳಮಧ್ಯಮ ಜಾತಿಯ ಜನರು ತಮ್ಮ ಹೆಸರುಗಳನ್ನು ಪ್ರಧಾನ ಜಾತಿಯ ಜನರ ಹೆಸರುಗಳಲ್ಲಿ ಬಳಕೆಯಾಗುವ ವಾರ್ಗಿಕಗಳನ್ನು ತಮ್ಮ ಹೆಸರಿನೊಂದಿಗೆ ಗುರುತಿಸಿಕೊಳ್ಳಲು ಇಷ್ಟ ಪಡುತ್ತಾರೆ. ಉದಾಹರಣೆಗೆ ಹಳೆ ಮೈಸೂರಿನ ಪ್ರಾಂತ್ಯಗಳಲ್ಲಿ 'ಗೌಡ' ಎಂಬ ವಾರ್ಗಿಕ ಸೂಚಿಸುವುದು ಪ್ರಧಾನವಾಗಿ ರಾಜಕೀಯವಾಗಿ ಸಾಮಾಜಿಕವಾಗಿ ಪ್ರಬಲರಾದ ಒಕ್ಕಲಿಗ ಜಾತಿಯ ಜನರನ್ನು ಆದರೆ -ಕುರುಬ, -ಈಡಿಗ, -ಉಪ್ಪಾರ ಜಾತಿಯ ಜನರೂ ಸಹ ತಮ್ಮನ್ನು -ಗೌಡ ಜಾತಿಯ ಜನರೆಂದೂ ತಮ್ಮ ಹೆಸರುಗಳ ಮುಂದೆಯೂ 'ಗೌಡ' ವಾರ್ಗಿಕವನ್ನು ಸೇರಿಸಿ ಬಳಸುವುದು ಕಾಣಸುತ್ತದೆ"[೪] ಎಂಬುದನ್ನು ಗಮನಿಸಿದರೆ, 'ಗೌಡ' ಎಂಬುದು ಅನೇಕ ಸಮುದಾಯಗಳಲ್ಲಿ ಬಳಕೆಯಾಗುತ್ತಿದ್ದು, ಈ ಹುದ್ದೆಯು ಯಾವುದೇ ಒಂದು ಸಮುದಾಯಕ್ಕೆ ನಿರ್ದಿಷ್ಟವಾಗಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಆದರೂ ಸಮಾಜದ ಪ್ರಧಾನ ಜನವರ್ಗಗಳೆನಿಸಿರುವ ಲಿಂಗಾಯತ ಮತ್ತು ಒಕ್ಕಲಿಗ ಸಮುದಾಯದಲ್ಲಿ ವ್ಯಾಪಕವಾಗಿ ಕಾಣಿಸಿಕೊಳ್ಳುತ್ತಿದ್ದು, ಇತರ ಸಮುದಾಯಗಳಲ್ಲಿ ಇದರ ಬಳಕೆ ಕಡಿಮೆಯೆಂದೇ ಹೇಳಬಹುದು.

'ಗೌಡ' ಎಂಬುದು ಚಿತ್ರದುರ್ಗ ಪರಿಸರದ ಬೇರೆ ಬೇರೆ ಜಾತಿ ಜನಾಂಗಗಳ ಹೆಸರುಗಳಲ್ಲಿ ವಾರ್ಗಿಕವಾಗಿ ಬಳಕೆಯಾಗುತ್ತಿದ್ದು, ಪ್ರಧಾನ ಜನ ವರ್ಗಗಳಾದ ಲಿಂಗಾಯತ ಮತ್ತು ಒಕ್ಕಲಿಗರಲ್ಲಿ ಜಾತಿಸೂಚಕವಾಗಿ ಬಳಕೆಯಾದರೆ, ಇತರ ಹಿಂದುಳಿದ ಸಮುದಾಯಗಳಲ್ಲಿ 'ಗೌಡ' ಎಂಬುದು 'ಅಧಿಕಾರ' ಸೂಚಕವಾಗಿ ಬಳಸಲ್ಪಡುತ್ತದೆ ಎಂಬುದು ಗಮನಾರ್ಹ. 'ಗೌಡ' ವಾರ್ಗಿಕವನ್ನು ಹೊಂದಿದ ಲಿಂಗಾಯತ ಸಮುದಾಯದ ಕೆಲವು ಹೆಸರುಗಳನ್ನು ಇಲ್ಲಿ ಗಮನಿಸಬಹುದು.

| | | |
|---|---|---|
| ಬಸವನಗೌಡ | ಲಿಂಗನಗೌಡ | |
| ಸಿದ್ಧನಗೌಡ | ನುಂಕನಗೌಡ | |
| ಕರಿಬಸವನಗೌಡ | ಗಂಗನಗೌಡ | - ಇತ್ಯಾದಿ |

ಇವೇ ಹೆಸರುಗಳು ಮೈಸೂರು, ಬೆಂಗಳೂರು ಪರಿಸರದ, ಲಿಂಗಾಯತ ಮತ್ತು ಒಕ್ಕಲಿಗರಲ್ಲಿ ಬಳಕೆಯಾದರೆ, ನಿರ್ದಿಷ್ಟದ ಉತ್ತರ ವರ್ಣ 'ಏ' ಕಾರಾಂತ (ಅಯ್ಯದ ಸವೆದ ರೂಪ)ವಾಗಿ ಕೊನೆಗೊಳ್ಳುತ್ತಿದ್ದು, ಅದೊಂದು ಪ್ರಾಬಲ್ಯದ ಸಂಕೇತವಾಗಿ ಕಾಣಬಂದಂತೆ ತೋರುತ್ತದೆ. ಉದಾಹರಣೆಗೆ

| | |
|---|---|
| ಬಸವೇಗೌಡ | ಲಿಂಗೇಗೌಡ |
| ಸಿದ್ಧೇಗೌಡ | ನುಂಕೇಗೌಡ |
| ಕರಿಬಸವೇಗೌಡ | ಗಂಗೇಗೌಡ |

ಲಿಂಗಾಯತರಲ್ಲಿ 'ಗೌಡ' ಎಂಬುದು ಹಳೆಯ ತಲೆಮಾರಿನವರ ವ್ಯಕ್ತಿನಾಮಗಳಲ್ಲಿ ದಟ್ಟವಾಗಿ ಬಳಕೆಯಾಗುತ್ತಿದ್ದು, ೧೯೬೦-೭೦ರ ದಶಕದ ವ್ಯಕ್ತಿನಾಮಗಳಲ್ಲಿ ಅದರ ಬಳಕೆ ಕಡಿಮೆಯಾಗಿರುವುದು ಕಾಣಬರುತ್ತದೆ. ಪುನಃ ಇತ್ತೀಚಿನವರಲ್ಲಿ 'ಗೌಡ' ಎಂಬುದು ವ್ಯಾಪಕವಾಗಿ ಬಳಕೆಗೆ ಬರುತ್ತಿದೆ. ಇತರ ಕೆಲ ಸಮುದಾಯಗಳಂತೆ ಲಿಂಗಾಯತರಲ್ಲಿಯೂ ಕೂಡ ಜಾತಿ ಸಂಘಟನೆಗಳು ಆಗುತ್ತಿರುವುದನ್ನು ಇದು ಸೂಚಿಸುತ್ತದೆ. ಶೈಕ್ಷಣಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಹಿಂದುಳಿದವರಿಗಿಂತ, ಮುಂದುವರೆದವರಲ್ಲಿ 'ಗೌಡ' ಎಂಬುದು ಹೆಚ್ಚು ಬಳಕೆಯಾಗುತ್ತಿರುವುದು ಕಾಣಬರುತ್ತದೆ. ಅಲ್ಲದೇ ಲಿಂಗಾಯತರಲ್ಲಿ ಒಂದು ಉಪಪಂಗಡವಾಗಿರುವ ಗೌಡ ಮತ್ತು ರೆಡ್ಡಿಲಿಂಗಾಯತರಲ್ಲಿ ಇದು ವಿಶೇಷವಾಗಿ ಬಳಕೆಗೊಂಡಿದೆ. ಅಂತೆಯೇ ಕೆಲವರು 'ಗೌಡ', 'ಗೌಡರ್' ಎಂದು ವ್ಯಂಜನಾಂತವಾಗಿ ಇಟ್ಟುಕೊಳ್ಳುತ್ತಾರೆ. ಇದು 'ಗೌಡ' ಎಂಬುದನ್ನು ಆಧುನೀಕರಿಸುವ ಒಂದು ಬಗೆಯೆಂದು ಕರೆಯಬಹುದು.

### ಪಟೇಲ

'ಪಟೇಲ' ಎಂಬುದು 'ಪಟ್ಟಾಯಿಲ' ಎಂಬುದರಿಂದ ನಿಷ್ಪನ್ನವಾಗಿದೆ. ಪಟ್ಟಾಯಿಲ ಅಥವಾ ಪಟೇಲ ಎಂದರೆ ಗ್ರಾಮದ ಮುಖ್ಯಾಧಿಕಾರಿ ಎಂದರ್ಥ. ಗ್ರಾಮದ ಮುಖಂಡನಿಗೆ 'ಗೌಡ' ಎಂದು ಕರೆಯುತ್ತಿದ್ದಂತೆ, ಗ್ರಾಮದ ಮುಖ್ಯಾಧಿಕಾರಿಗೆ ಪಟೇಲ ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು. 'ಗೌಡ' ಪದದ ಹಾಗೆ 'ಪಟೇಲ' ಎಂಬುದು ಕೂಡ ಅಧಿಕಾರ ಸೂಚಕ ಪದವಾಗಿದ್ದು, ವ್ಯಕ್ತಿನಾಮಗಳಲ್ಲಿ ವಾರ್ಗಿಕವಾಗಿ ಬಳಸಲ್ಪಡುತ್ತದೆ.

'ಪಟೇಲ' ಎಂಬುದು ಸಾಮಾಜಿಕವಾಗಿ ಬೇರೆ ಬೇರೆ ಜನಾಂಗದವರ ವ್ಯಕ್ತಿನಾಮಗಳಲ್ಲಿ ಕಂಡುಬರುವುದರಿಂದ, ಬೇರೆ ಬೇರೆ ಸಮುದಾಯದವರು ಪಟೇಲರಾಗಿ ಕಾರ್ಯ ನಿರ್ವಹಿಸಿದ್ದಾರೆಂಬುದು ಗೊತ್ತಾಗುತ್ತದೆ. ಆದರೂ ಕೆಳಜಾತಿಗಳಿಗಿಂತ, ಮೇಲ್ಜಾತಿಯವರು ಹೆಚ್ಚು ಈ ಪದವಿಯನ್ನು ಪಡೆದಿದ್ದರು ಎಂಬುದು ವ್ಯಕ್ತಿನಾಮಗಳ ಮೂಲಕ ತಿಳಿದುಬರುತ್ತದೆ. ಪ್ರಾಚೀನ ಕಾಲದ ವ್ಯಕ್ತಿನಾಮಗಳಲ್ಲಿ 'ಪಟೇಲ' ವಾರ್ಗಿಕವು ಹೆಚ್ಚು ಬಳಕೆಯಾಗಿರುವುದು ಶಾಸನ, ಕಾವ್ಯಗಳಲ್ಲಿನ ಉಲ್ಲೇಖಗಳಿಂದ ತಿಳಿದುಬರುತ್ತದೆ. ಇತ್ತೀಚಿನ ದಿನಮಾನಗಳಲ್ಲಿ ಅದರ ಬಳಕೆ ತುಂಬಾ ಕಡಿಮೆಯಾಗಿದೆ. ಚಿತ್ರದುರ್ಗ ಪರಿಸರದ ಅನೇಕ ಬೇರೆ ಬೇರೆ ಜನಾಂಗದ ವ್ಯಕ್ತಿನಾಮಗಳಲ್ಲಿ 'ಪಟೇಲ' ಎಂಬುದು ವ್ಯಕ್ತಿನಾಮದ ಉತ್ತರಾರ್ಧ ಘಟಕವಾಗಿ ಕಾಣಿಸಿಕೊಳ್ಳುತ್ತಿದ್ದು, ಬೇರೆ ಬೇರೆ ಸಮಾಜದವರು ಪಟೇಲರಾಗಿದ್ದುದರ ಬಗೆಗೆ ಸುಳಿವು ದೊರೆಯುತ್ತದೆ. ಹೆಚ್ಚಾಗಿ ಲಿಂಗಾಯತ ಸಮುದಾಯವು ಪಟೇಲ ಎಂಬ ವಾರ್ಗಿಕವನ್ನು ತಮ್ಮ ವ್ಯಕ್ತಿನಾಮಗಳಿಗೆ ನಿರ್ದೇಶಿಸಿಕೊಂಡಿರುವುದು ತಿಳಿಸುತ್ತದೆ. ಚಿತ್ರದುರ್ಗ ಪರಿಸರದ ಲಿಂಗಾಯತ ವ್ಯಕ್ತಿನಾಮಗಳಲ್ಲಿ ಮೊದಲು ಬಳಕೆಯಾದಷ್ಟು ದಟ್ಟವಾಗಿ ಇತ್ತೀಚಿಗೆ ಬಳಕೆಯಾಗುತ್ತಿಲ್ಲ. ಒಂದು ಮತ್ತು ಎರಡನೆ ತಲೆಮಾರಿನ ವ್ಯಕ್ತಿನಾಮಗಳಲ್ಲಿ ಮಾತ್ರ ಕಂಡುಬರುತ್ತಿದ್ದು, ಹೊಸ ತಲೆಮಾರಿನವರ ಹೆಸರುಗಳಲ್ಲಿ ಬಿಟ್ಟು ಹೋಗಿದೆ.

### ರೆಡ್ಡಿ

ಮುಖ್ಯವಾಗಿ ರೆಡ್ಡಿ ಸಮುದಾಯದ ವ್ಯಕ್ತಿನಾಮಗಳಲ್ಲಿ ಇದರ ಬಳಕೆ ಇದ್ದರೂ, ಬೇರೆ ಬೇರೆ ಸಮುದಾಯಗಳ ಹೆಸರುಗಳಿಗೂ ಪ್ರಸರಣಗೊಂಡಿದೆ. ಕರ್ನಾಟಕದ ಕೆಲವು ಲಿಂಗಾಯತರ ಹೆಸರುಗಳು 'ರೆಡ್ಡಿ' ವಾರ್ಗಿಕದಿಂದ ಕೂಡಿರುತ್ತವೆ. ಲಿಂಗಾಯತ ಸಮುದಾಯದಲ್ಲಿ 'ರೆಡ್ಡಿ'ಯೆಂದು ಇಟ್ಟುಕೊಳ್ಳುವವರು ಹೇಮರೆಡ್ಡಿ ಮಲ್ಲಮ್ಮನ ವಂಶಜರು ಎಂದು ಹೇಳಿಕೊಳ್ಳುವ ಒಂದು ವರ್ಗದವರು. ಇವರನ್ನು ರೆಡ್ಡಿ ಲಿಂಗಾಯತರು ಎಂದೇ ಕರೆಯುತ್ತಾರೆ. ಈ ವರ್ಗದ ಜನ ಸಾಮಾನ್ಯವಾಗಿ ಕರ್ನಾಟಕದ ಪೂರ್ವ ಜಿಲ್ಲೆಗಳಲ್ಲಿ (ಚಿತ್ರದುರ್ಗ, ಬಳ್ಳಾರಿ, ರಾಯಚೂರು... ಮುಂತಾದವು) ಕಾಣಿಸಿಕೊಳ್ಳುತ್ತಿದ್ದು, ಕರ್ನಾಟಕದ ಇತರ ಪ್ರದೇಶಗಳಲ್ಲಿ ಇವರ ನೆಲೆಗಳು ಕಾಣಬಂದಂತೆ ತೋರುವುದಿಲ್ಲ. ಆದಕಾರಣ 'ರೆಡ್ಡಿ ಲಿಂಗಾಯತರು' ಮೂಲತಃ ಆಂಧ್ರಪ್ರದೇಶದವರಾಗಿದ್ದು, ಕರ್ನಾಟಕಕ್ಕೆ ವಲಸೆ ಬಂದಿರುವ ಸಾಧ್ಯತೆಯೂ ಇದೆ. ರೆಡ್ಡಿ ಲಿಂಗಾಯತರಲ್ಲಿ 'ರೆಡ್ಡಿ' ವಾರ್ಗಿಕವು ಮೊದಲೆರಡು ತಲೆಮಾರುಗಳಲ್ಲಿ ಹೆಚ್ಚು ಬಳಕೆಯಲ್ಲಿದ್ದು, ಮೂರನೆ ತಲೆಮಾರಿನವರಲ್ಲಿ ಬಳಕೆಯಿಂದ ಮರೆಯಾಗಿದೆ.

ರೆಡ್ಡಿ ಲಿಂಗಾಯತರು ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಅಭಿವೃದ್ಧಿಗೊಂಡಂತೆ ತಮ್ಮ ಹೆಸರಿನಲ್ಲಿಯೂ ಬದಲಾವಣೆಯನ್ನು ಕಂಡುಕೊಂಡಿದ್ದಾರೆ. ಇವರಲ್ಲಿ ಶೈವಮೂಲದ ನಿರ್ದಿಷ್ಟ ನಾಮದೊಂದಿಗೆ -ರೆಡ್ಡಿ ವಾರ್ಗಿಕವನ್ನು ಸೇರಿಸಿಕೊಳ್ಳುವುದು ವಿಶೇಷವಾಗಿದೆ.

## ಆರಾಧ್ಯ

ಇದು ಶೈವ ಸಮುದಾಯದ ವ್ಯಕ್ತಿನಾಮಗಳಲ್ಲಿ ಬಳಕೆಯಾಗುವ ವಾರ್ಗಿಕ ಪದ. ಆರಾಧ್ಯ ಎಂಬುದು ಪೂಜ್ಯ, ಸೇವೆಗೆ ಅರ್ಹನಾದವನು ಎಂದು ಅರ್ಥೈಸುತ್ತದೆ. ಇದು ಶೈವ ಸಮುದಾಯದಲ್ಲಿ ಒಂದು ಪಂಗಡದ ಹೆಸರೂ ಆಗಿದೆ.

ಚಿತ್ರದುರ್ಗ ಪರಿಸರದಲ್ಲಿ ಪಂಚಗಣಾಧೀಶ್ವರರೆಂಬ ಜಗದ್ಗುರುಗಳು ಹಾಗೂ ಈ ಪರಂಪರೆಗೆ ಸೇರಿದ ಜಂಗಮ ಸಮುದಾಯದಲ್ಲಿ -ಆರಾಧ್ಯ ಎಂಬ ಪದ ಹೆಸರಿನ ಉತ್ತರ ಭಾಗದಲ್ಲಿ ನಿರ್ದೇಶಿಸಲ್ಪಡುತ್ತದೆ. ಆರಾಧ್ಯ' ಎಂಬುದು ಇಂದು ಅಷ್ಟಾಗಿ ಬಳಕೆಯಾಗುತ್ತಿಲ್ಲ. ಹಳೆಯ ತಲೆಮಾರಿನವರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಅಂತಹ ಕೆಲವು ಮಾದರಿ ಉದಾಹರಣೆಗಳು ಇಲ್ಲಿವೆ.

| ರೇವಣಾರಾಧ್ಯ | ಲಿಂಗಣಾರಾಧ್ಯ | |
|---|---|---|
| ಬಸವಾರಾಧ್ಯ | ಪಂಡಿತಾರಾಧ್ಯ | - ಇತ್ಯಾದಿ |

ಮೇಲಿನ ಹೆಸರುಗಳಲ್ಲಿ 'ಪಂಡಿತರಾಧ್ಯ' ಎಂಬುದು ಉಳಿದ ಹೆಸರುಗಳಿಗಿಂತ ವಿಶೇಷವಾಗಿದೆ. ಹಲವು ಶಾಸ್ತ್ರಗಳನ್ನು ತಿಳಿದವನಿಗೆ ಪಂಡಿತ ಎಂಬ ಅನ್ವರ್ಥಕ ನಾಮ ವಿಶೇಷಣದಿಂದ ಕರೆಯುತ್ತಾರೆ. ಆದರೆ ಮುಂದಿನ ತಲೆಮಾರಿಗೆ ಅದು ವ್ಯಕ್ತಿಯ ಹೆಸರಿನ ನಿರ್ದಿಷ್ಟ ಭಾಗವಾಗಿ ಬಳಕೆಯಾಗಿರುವುದು ಕುತೂಹಲಕರವಾಗಿದೆ.

## ಅಯ್ಯ

ಇದು ಕನ್ನಡ ಪರಿಸರದಲ್ಲಿ ಸಂಬಂಧಸೂಚಕ ಪದ. ವ್ಯಕ್ತಿನಾಮಗಳಲ್ಲಿ ಉತ್ತರಪದವಾಗಿಯೂ ಕೆಲವು ಬಾರಿ ನಿರ್ದಿಷ್ಟ ಪದವಾಗಿಯೂ ಬಳಕೆಯಾಗುತ್ತದೆ. -ಅಯ್ಯ' ಎಂಬ ಈ ಪದ ಎಲ್ಲ ಸಮುದಾಯದ ಹೆಸರುಗಳಲ್ಲಿ ಬಳಕೆಯಾಗುತ್ತದೆ. ಆದರೆ ಜಂಗಮ ಸಮುದಾಯದಲ್ಲಿ ನಿರ್ದಿಷ್ಟವಾಗಿ ಜಾತಿವಾಚಿ ಅರ್ಥದಲ್ಲಿ ಬಳಕೆಯಾಗುತ್ತದೆ. ಗ್ರಾಮೀಣ ಸಮಾಜದಲ್ಲಿ 'ಅಯ್ನೋರು' ಎಂಬ ಪದ ಜಂಗಮರಿಗೆ ಗೌರವವಾಚಿ ಯಾಗಿಯೂ, ಜಾತಿವಾಚಿಯಾಗಿಯೂ ಬಳಕೆಯಾಗುತ್ತಿರುವುದನ್ನು ಕಾಣಬಹುದಾಗಿದೆ.

ಜಂಗಮ ಸಮುದಾಯದಲ್ಲಿ ಅಯ್ಯ' ವಾರ್ಗಿಕವು ಮೊದಲ ತಲೆಮಾರಿನಲ್ಲಿ ಹೆಚ್ಚು ಅಸ್ತಿತ್ವ ಪಡೆದಿದೆ. ನಂತರದ ತಲೆಮಾರುಗಳಲ್ಲಿ ಇದರ ಪ್ರಮಾಣ ಇಳಿಮುಖಗೊಂಡಿದೆ. ಸಮಕಾಲೀನ ಸಂದರ್ಭದಲ್ಲಿಯೂ ಇದರ ನಿರ್ದೇಶನದಲ್ಲಿ ಸಾಕಷ್ಟು ಅಂತರಗಳಿವೆ. ಈ ಬಗೆಯ ಅಂತರಗಳನ್ನು ಕೆಳಗಿನ ವರ್ಗವಾರು ಪಟ್ಟಿಯಲ್ಲಿ ಗುರುತಿಸಲಾಗಿದೆ.

## ಲಿಂಗಾಯತ ಸಮುದಾಯದ ಹೆಸರುಗಳಲ್ಲಿ ಕಾಣಬರುವ ವಾರ್ಗಿಕಗಳು

[ಶೇಕಡವಾರು (%) ]

| ಪುರುಷ ವಾರ್ಗಿಕ | | | | | | | | ಸ್ತ್ರೀ ವಾರ್ಗಿಕ | | |
|---|---|---|---|---|---|---|---|---|---|---|
| ಸಂಬಂಧವಾಚಿ ವಾರ್ಗಿಕ | | | | ವೃತ್ತಿ/ಜಾತಿವಾಚಿ ವಾರ್ಗಿಕ | | | | | | |
| ತಲೆ ಮಾರು | ಅಪ್ಪ | ಅಣ್ಣ | ಅಯ್ಯ | ಗೌಡ | ರೆಡ್ಡಿ | ಪಟೇಲ | ಆರಾಧ್ಯ | ಅಮ್ಮ | ಅಕ್ಕ | ಅಜ್ಜಿ |
| ೩ | ೭ | ೨ | ೨ | ೧೬ | ೪ | - | - | ೯ | ೧ | - |
| ೨ | ೩೮ | ೧೦ | ೫ | ೮ | ೬ | ೩ | ೨ | ೭೧ | ೨ | - |
| ೧ | ೪೫ | ೨೭ | ೧೨ | ೧೨ | ೪ | ೬ | ೪ | ೮೦ | ೮ | ೨ |
| ಒಟ್ಟು | ೩೨ | ೧೨ | ೬ | ೧೨ | ೫ | ೩ | ೨ | ೬೨ | ೩ | ೫ |
| ಸರಾಸರಿ | ೫೦ | | | ೨೨ | | | | ೬೫ | | |

### ಕೋಷ್ಟಕ ೧.೫

ಲಿಂಗಾಯತರ ಪುರುಷ ವ್ಯಕ್ತಿನಾಮಗಳಲ್ಲಿ ವೃತ್ತಿ/ಜಾತಿವಾಚಿ ವಾರ್ಗಿಕಗಳಿಗಿಂತ ಸಂಬಂಧವಾಚಿ ವಾರ್ಗಿಕಗಳು ಹೆಚ್ಚು ಬಳಕೆಯಾಗಿರುವುದು ಕಂಡುಬರುತ್ತದೆ. ಸಂಬಂಧವಾಚಿ ವಾರ್ಗಿಕಗಳು ಹಿಂದಿನವರ ಹೆಸರುಗಳಲ್ಲಿ ಅಧಿಕವಾಗಿ ಬಳಕೆಯಾಗಿದ್ದು, ಕ್ರಮೇಣ ಕಡಿಮೆಯಾಗಿರುವುದು ಕೋಷ್ಟಕದ ಮೂಲಕ ತಿಳಿದುಬರುತ್ತದೆ. ವೃತ್ತಿ/ಜಾತಿವಾಚಿ ವಾರ್ಗಿಕಗಳು ಸಹ ಸಂಬಂಧವಾಚಿ ವಾರ್ಗಿಕಗಳಂತೆ ಹಿಂದಿನವರ ಹೆಸರುಗಳಲ್ಲಿ ಅಧಿಕವಾಗಿದ್ದು ಇತ್ತೀಚಿಗೆ ಕಡಿಮೆಯಾಗುತ್ತಿವೆ. ಆದರೆ 'ಗೌಡ' ವಾರ್ಗಿಕ ಮೊದಲಿಗಿಂತಲೂ ಇಂದು ಹೆಚ್ಚು ವ್ಯಾಪಕವಾಗಿ ಬಳಕೆಯಾಗುತ್ತಿದೆ. ಇಂದಿನ ಹೆಸರುಗಳಲ್ಲಿ -ಗೌಡ ಎಂಬ ಪದ ಮರು ನವೀಕರಣಗೊಂಡು ಬಳಕೆಯಾಗುತ್ತಿರುವುದರ ಹಿಂದೆ ಸಮಕಾಲೀನ ಸಮಾಜದ ರಾಜಕಾರಣ ಕಾರಣವಾಗಿದೆ ಎನ್ನಬಹುದು.

ಸ್ತ್ರೀಯರಲ್ಲಿ ಸಂಬಂಧವಾಚಿ ವಾರ್ಗಿಕಗಳು ಹಳೆಯ ಹೆಸರುಗಳಲ್ಲಿ ಹೆಚ್ಚು ಬಳಕೆಯಲ್ಲಿದ್ದು, ಇತ್ತೀಚಿನವರ ಹೆಸರುಗಳಲ್ಲಿ ಕಡಿಮೆಯಾಗಿವೆ. 'ಅಮ್ಮ' ಎಂಬುದು ಮಾತ್ರ ಕೆಲವರ ಹೆಸರುಗಳಲ್ಲಿ ಉಳಿದುಕೊಂಡಿದ್ದು, ಇತರ ವಾರ್ಗಿಕಗಳು ಕಾಣಬರುವುದಿಲ್ಲ. 'ಅಜ್ಜಿ' ವಾರ್ಗಿಕ ನಾಮ ನಿರ್ದೇಶನದ ಜತೆಯಲ್ಲಿ ಬಂದಿರದೆ ವಯಸ್ಸಾದ ನಂತರದಲ್ಲಿ ಗೌರವ ಸಂಬೋಧನೆಯಾಗಿ ಬಂದು ಸೇರಿರಬಹುದು.

ಈ ದೃಷ್ಟಿಯಿಂದ ಕ್ರಮೇಣ ಲಿಂಗಾಯತರಲ್ಲಿ ಪಾರಂಪರಿಕ ಹೆಸರುಗಳ ಸ್ವೀಕರಣೆ ಆಧುನಿಕತೆಯತ್ತ ಮುಖಾಮುಖಿಗೊಂಡು, ಸಹಜವಾಗಿಯೇ ಹೊಸತನವನ್ನು ಬಯಸಿ ಸಮಕಾಲೀನ ಸಮಾಜದ ಆಗು-ಹೋಗುಗಳಿಗೆ ಸ್ಪಂದಿಸಿರುವುದು ತಿಳಿಯುತ್ತದೆ.

### ೩.೫.೩ ರೆಡ್ಡಿ

ಆಂಧ್ರಪ್ರದೇಶದ ಬಹುಸಂಖ್ಯಾತ ಸಮುದಾಯಗಳಲ್ಲಿ ರೆಡ್ಡಿ ಸಮುದಾಯವೂ ಒಂದು. ಚಿತ್ರದುರ್ಗದ ಪೂರ್ವದ ಗಡಿಭಾಗದಲ್ಲಿ ಈ ಸಮುದಾಯವು ನೆಲೆಗೊಂಡಿದೆ. ಅಲ್ಲದೆ ಮೊಳಕಾಲ್ಮೂರು, ಚಿತ್ರದುರ್ಗ,

ಚಳ್ಳಕೆರೆಯಲ್ಲಿಯೂ ಈ ಸಮುದಾಯವಿದೆ. ಇವರು ವೈಷ್ಣವ ಮತಾವಲಂಬಿಗಳು. ಕರ್ನಾಟಕದಲ್ಲಿರುವ ರೆಡ್ಡಿಲಿಂಗಾಯತರಿಗಿಂತ ಇವರು ಭಿನ್ನವಾಗಿದ್ದಾರೆ. ಇವರು ತಿರುಪತಿ ವೆಂಕಟೇಶ್ವರ, ನಾರಾಯಣ, ವಿಷ್ಣು, ರಾಮ, ಲಕ್ಷ್ಮಿ, ಅಲಮೇಲು ಮಂಗಮ್ಮ ಮುಂತಾದ ದೈವಗಳನ್ನು ಆರಾಧಿಸುತ್ತಾರೆ. ಸಹಜವಾಗಿಯೇ ಆ ಬಗೆಯ ವ್ಯಕ್ತಿನಾಮಗಳು ಇವರಲ್ಲಿವೆ. ರೆಡ್ಡಿಗಳು ಚಿತ್ರದುರ್ಗ ಗಡಿಭಾಗದಲ್ಲಿ ದ್ವಿಭಾಷಿಕರು. ಹೀಗಾಗಿ ಹೆಸರುಗಳಲ್ಲಿ ಪರಸ್ಪರ ದ್ವಿಭಾಷಾ ಸಂಸ್ಕೃತಿಯ ಸೂಕ್ಷ್ಮ ಪ್ರೇರಣೆಯನ್ನು ಗುರುತಿಸಲು ಸಾಧ್ಯವಿದೆ. ರೆಡ್ಡಿ ಸಮುದಾಯದ ತಲೆಮಾರುಗಳಲ್ಲಿ ಕಾಣಬರುವ ವ್ಯಕ್ತಿನಾಮಗಳನ್ನು ಈ ರೀತಿ ತೋರಿಸಬಹುದು.

ಪುರುಷರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
|---|---|---|
| ಹೇಮರೆಡ್ಡಿ | ಲಕ್ಷ್ಮಣರೆಡ್ಡಿ | ಸೂರ್ಯಕಾಂತರೆಡ್ಡಿ |
| ಭೀಮರೆಡ್ಡಿ | ಸುಬ್ಬಾರೆಡ್ಡಿ | ಪ್ರಕಾಶ್ ರೆಡ್ಡಿ |
| ಸೀತಾರಾಮರೆಡ್ಡಿ | ಮುಕುಂದರೆಡ್ಡಿ | ಮಂಜುನಾಥರೆಡ್ಡಿ |
| ತಿಪ್ಪಾರೆಡ್ಡಿ | ಶ್ರೀನಿವಾಸರೆಡ್ಡಿ | ನವೀನ್ ರೆಡ್ಡಿ |
| ಮಲ್ಲಪ್ಪ | ಗೋವಿಂದರೆಡ್ಡಿ | ನಾಗಾರ್ಜುನ |
| ಬೋಸಣ್ಣರೆಡ್ಡಿ | ವೆಂಕಟೇಶ್ | ಪ್ರಶಾಂತ್ |
| ಮಲ್ಲಿಕಾರ್ಜುನರೆಡ್ಡಿ | ಪ್ರತಾಪ್ | ಶ್ರೀಕಾಂತ್ |
| ಭೂಪಾಲರೆಡ್ಡಿ | ಚಂದ್ರಶೇಖರ | ರಘುನಾಥ |
| ನರಸಿಂಹರೆಡ್ಡಿ | ರಮೇಶ್ ಬಾಬು | ಜಲಂಧರ |

ಸ್ತ್ರೀಯರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
|---|---|---|
| ಸುಬ್ಬಮ್ಮ | ಮಂದಮ್ಮ | ಅನುರಾಧ |
| ಅಜ್ಜಮ್ಮ | ತಿಪ್ಪಮ್ಮ | ಸರಳ |
| ಲಕ್ಷ್ಮಮ್ಮ | ಚಿತ್ರಮ್ಮ | ಸುಧಾ |
| ನಾರಾಯಣಮ್ಮ | ಶಶಿಯಮ್ಮ | ಮಾಧುರಿ ದೀಕ್ಷಿತ್ |
| ಗೋವಿಂದಮ್ಮ | ಕಮಲಮ್ಮ | ಲಕ್ಷ್ಮಿದೇವಿ |
| ವೆಂಕಟಲಕ್ಷ್ಮಮ್ಮ | ಜಾನಮ್ಮ | ಪವಿತ್ರ |
| ಹನುಮಕ್ಕ | ಬೊಮ್ಮಕ್ಕ | ಸುಮಿತ್ರ |
| ಕ್ಯಾಸಮ್ಮ | ಅನಂತಲಕ್ಷ್ಮಿ | ಲಲಿತ |
| ಭೀಮಕ್ಕ | ನಾಗರತ್ನ | ಶ್ರೀಲಕ್ಷ್ಮಿ |
| ಅಂಜಿನಮ್ಮ | ಹೇಮಲತ | ಮಮತ |

ಮೇಲಿನ ಪಟ್ಟಿಯಲ್ಲಿರುವ ಪುರುಷ ಮತ್ತು ಸ್ತ್ರೀ ಹೆಸರುಗಳಿಂದ ಕೆಲವು ಸಂಗತಿಗಳನ್ನು ಚರ್ಚಿಸಬಹುದು. ಎರಡೂ ಪಟ್ಟಿಯ ಮೊದಲೆರಡು ತಲೆಮಾರುಗಳ ಹೆಸರುಗಳಲ್ಲಿ ತುಂಬಾ ಸಾಮ್ಯತೆಯಿದ್ದು, ಎರಡೂ ವರ್ಗದ ಎರಡೂ ತಲೆಮಾರಿನ ಹೆಸರುಗಳು ದೈವಮೂಲದ ಹೆಸರುಗಳೇ ಆಗಿವೆ. ದೈವಮೂಲದ ಹೆಸರುಗಳಲ್ಲಿ ವೈಷ್ಣವ ಪರಂಪರೆಯ ಹೆಸರುಗಳು ಅಧಿಕವಾಗಿದ್ದು, ರೆಡ್ಡಿ ಜನಾಂಗ ವಿಷ್ಣುವಿನ ಆರಾಧಕರು ಎಂಬುದನ್ನು ಈ ಹೆಸರುಗಳಿಂದ ತಿಳಿಯಬಹುದು. ಮತ್ತು ಪ್ರಾದೇಶಿಕ ದೈವಗಳ ಪ್ರಭಾವ ಇವರ ವ್ಯಕ್ತಿನಾಮಗಳ ಮೇಲೆ ಆಗಿರುವುದೂ ಇದೆ. 'ತಿಪ್ಪಾರೆಡ್ಡಿ', ತಿಪ್ಪಮ್ಮ, ಬೋಸಣ್ಣರೆಡ್ಡಿ, ಚಿತ್ರಕ್ಕ, ಬೊಮ್ಮಕ್ಕ ಎಂಬ ಹೆಸರುಗಳು ಸ್ಥಳೀಯ ಪ್ರಭಾವದಿಂದ ಬಂದವುಗಳೆಂಬುದನ್ನು ಗಮನಿಸಬಹುದು. ಮೂರನೆ ತಲೆಮಾರಿನ ಹೆಸರುಗಳನ್ನು ಮೊದಲೆರಡು ತಲೆಮಾರುಗಳ ವ್ಯಕ್ತಿನಾಮಗಳ ಜತೆ ಹೋಲಿಸಿದಾಗ ಈ ಹೆಸರುಗಳು ತೀರ ಭಿನ್ನವಾಗಿವೆ. ಪರಂಪರಾಗತವಾಗಿ ಬಳಕೆಯಾಗುತ್ತಿದ್ದ ದೈವಮೂಲದ ಹೆಸರುಗಳಿಗೆ ಬದಲಾಗಿ ಹೊಸ ನಿರ್ದಿಷ್ಟಗಳು ಪ್ರವೇಶ ಪಡೆದಿವೆ. ಅಂದರೆ ರೆಡ್ಡಿ ಜನಾಂಗದಲ್ಲಿ ತಲೆಮಾರಿನಿಂದ ತಲೆಮಾರಿಗೆ ಹೆಸರುಗಳಲ್ಲಿ ವ್ಯತ್ಯಾಸವಾಗಿದ್ದು, ಸಮಾಜನಿಷ್ಠ ಪೆಸರುಗಳು ಬಳಕೆಯಿಂದ ದೂರಸರಿದಿರುವುದು ಗೋಚರಿಸುತ್ತದೆ.

ರೆಡ್ಡಿ ಸಮುದಾಯದ ಪುರುಷ ವ್ಯಕ್ತಿನಾಮಗಳಲ್ಲಿ ಸಂಬಂಧವಾಚಿ ವಾರ್ಗಿಕಗಳ ಪ್ರಯೋಗ ಕಡಿಮೆಯಿದ್ದು, ಜಾತಿವಾಚಿ ವಾರ್ಗಿಕ 'ರೆಡ್ಡಿ' ಬಳಕೆ ಅಧಿಕವಾಗಿದೆ. ಮೊದಲ ತಲೆಮಾರಿನಲ್ಲಿ ಇದರ ಪ್ರಭಾವ ಹೆಚ್ಚಾಗಿದ್ದು, ಎರಡನೆ ತಲೆಮಾರಿನ ಹೆಸರುಗಳಲ್ಲಿ ನಿಧಾನವಾಗಿ ಕಡಿಮೆಯಾಗಿದೆ. ಮೂರನೆ ತಲೆಮಾರಿನಲ್ಲಿ 'ರೆಡ್ಡಿ' ವಾರ್ಗಿಕದ ಬಳಕೆ ತುಂಬಾ ಕಡಿಮೆಯಾಗಿದೆ. ಅಂದರೆ ಈ ಸಮುದಾಯದಲ್ಲಿ ಶೈಕ್ಷಣಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಮುಂದುವರೆದ ಕೆಲವರು ಹೆಸರಿನ ಬಗೆಗೆ ಭಿನ್ನ ಮನೋಭಾವನೆಯನ್ನು ಬೆಳೆಸಿಕೊಂಡು ಮತ್ತು 'ಅಪ್ಪ', 'ಅಯ್ಯ', 'ರೆಡ್ಡಿ' ವಾರ್ಗಿಕಗಳನ್ನು ಹೆಸರಿನೊಂದಿಗೆ ಅಂಟಿಸುವುದು ಹಳೆಯಕಾಲದ ಪದ್ಧತಿ ಎಂದು ಭಾವಿಸಿ ಕೈಬಿಟ್ಟರೆ, ಮತ್ತೆ ಕೆಲವರು ಮತೀಯ ಅಭಿಮಾನದಿಂದ ಆಧುನಿಕ ಕಾಲದ ಹೆಸರುಗಳನ್ನು ಸ್ವೀಕರಿಸಿದ್ದರೂ, ಉದ್ದೇಶ ಸಹಿತವಾಗಿ ಆ ಹೆಸರುಗಳ ಜೊತೆ 'ರೆಡ್ಡಿ'ಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಏಕಕಾಲಕ್ಕೆ ಎರಡು ಪ್ರಕ್ರಿಯೆಗಳನ್ನು ಇಲ್ಲಿ ಗಮನಿಸಬಹುದು.

ಸ್ತ್ರೀ ವ್ಯಕ್ತಿನಾಮಗಳಲ್ಲಿ ಸಂಬಂಧವಾಚಿ ವಾರ್ಗಿಕಗಳು ಮಾತ್ರ ಬಳಕೆಯಲ್ಲಿದ್ದು, ಮೂರನೆ ತಲೆಮಾರಿನ ವ್ಯಕ್ತಿನಾಮಗಳಲ್ಲಿ ವಾರ್ಗಿಕಗಳ ಬಳಕೆ ಕಡಿಮೆಯಾಗುತ್ತಾ ಬಂದಿದೆ. ಪುರುಷರಲ್ಲಿ 'ರೆಡ್ಡಿ' ಎಂಬುದು ಸ್ವಲ್ಪಮಟ್ಟಿಗೆ ಬಳಕೆಯಲ್ಲಿದೆ. ಸ್ತ್ರೀಯರಲ್ಲಿ ಸಂಬಂಧವಾಚಿ ವಾರ್ಗಿಕಗಳು ಸಂಪೂರ್ಣವಾಗಿ ಮರೆಯಾಗಿವೆ.

ಅಧ್ಯಯನಕ್ಕೆ ಆಯ್ದುಕೊಂಡ ರೆಡ್ಡಿ ಜನಾಂಗದ ೨೫೩ ವ್ಯಕ್ತಿನಾಮಗಳಲ್ಲಿ ಪ್ರಮಾಣವಾರು ಬಳಕೆಯನ್ನು ಈ ಕೆಳಗಿನ ಪಟ್ಟಿಯಿಂದ ಗುರುತಿಸಬಹುದು.

## ರೆಡ್ಡಿ ಸಮುದಾಯದ ವ್ಯಕ್ತಿನಾಮಗಳ ಮಾದರಿ ಸಮೀಕ್ಷೆ ಕೋಷ್ಟಕ ಪಟ್ಟಿ - ೪

| ತಲೆಮಾರು | ಧಾರ್ಮಿಕ ಪ್ರಭಾವ ಶೇಕಡವಾರು (%) | | | ಸಮಕಾಲೀನ ಪ್ರಸಿದ್ಧ ವ್ಯಕ್ತಿಗಳ ಪ್ರಭಾವ ಶೇಕಡವಾರು (%) | | | ಆಧುನೀಕರಣದ ಪ್ರಭಾವ ಶೇಕಡವಾರು (%) | | | ಚರಿತ್ರೆ ಪ್ರಭಾವ ಶೇಕಡವಾರು (%) | | | ಇತರೆ ಪ್ರಭಾವ ಶೇಕಡವಾರು (%) | | | ಒಟ್ಟು ಶೇಕಡವಾರು (%) | | |
|---|---|---|---|---|---|---|---|---|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೩ | ೫೮ | ೪೨ | ೫೨ | ೪ | ೧೨ | ೬೫ | ೩೦ | ೪೦ | ೩೩ | - | - | - | ೮.೩ | ೬ | ೮ | ೬೪ | ೩೫ | ೩೬ |
| ೨ | ೮೭ | ೮೦ | ೮೩ | - | - | - | ೮ | ೧೫ | ೧೧ | - | - | - | ೫ | ೫ | ೫ | ೫೦ | ೫೦ | ೩೧ |
| ೧ | ೮೮ | ೮೨ | ೮೫ | - | - | - | ೩ | - | ೧.೫ | - | - | - | ೧೦ | ೧೮ | ೧೪ | ೫೦ | ೫೦ | ೩೨ |
| ಒಟ್ಟು | ೭೫ | ೭೦ | ೭೨ | ೧.೫ | ೩.೫ | ೨.೩ | ೧೬ | ೧೭ | ೧೬ | - | - | - | ೮ | ೧೦ | ೯ | ೫೫ | ೪೫ | - |

ಕೋಷ್ಟಕ ೧.೬

ಈ ಕೋಷ್ಟಕವನ್ನು ನೋಡಿದರೆ, ರೆಡ್ಡಿ ಸಮುದಾಯದಲ್ಲಿ ದೈವ ಮೂಲದ ಹೆಸರುಗಳು ಅಧಿಕವಾಗಿರುವುದು ಸ್ಪಷ್ಟವಾಗುತ್ತದೆ. ಮೊದಲೆರಡು ತಲೆಮಾರಿನವರ ಹೆಸರುಗಳಲ್ಲಿ ದೈವ ಸಂಬಂಧಿ ಹೆಸರುಗಳೇ ವ್ಯಾಪಕವಾಗಿದ್ದು, ಕ್ರಮೇಣ ಕಡಿಮೆಯಾಗಿರುವುದನ್ನು ಗಮನಿಸಬಹುದು. ಸ್ತ್ರೀಯರಿಗಿಂತ ಪುರುಷರಲ್ಲಿ ಈ ಪ್ರಕ್ರಿಯೆ ಕೊಂಚ ಜಾಸ್ತಿ ಇರುವುದು ತಿಳಿದುಬರುತ್ತದೆ. ಪುರುಷ ಪ್ರಧಾನ ಸಮಾಜದ ಧೋರಣೆಗಳು ಇದಕ್ಕೆ ಕಾರಣವಾಗಿವೆಯೆನ್ನಬಹುದು.

ಇತ್ತೀಚಿನವರು ಕ್ರೀಡೆ, ಸಿನಿಮಾಗಳ ಬಗೆಗೆ ಹೆಚ್ಚು ಒಲವು ತೋರುತ್ತಿದ್ದು ಆಯಾ ಕ್ಷೇತ್ರಗಳ ಪ್ರಸಿದ್ಧ ವ್ಯಕ್ತಿಗಳ ಹೆಸರನ್ನು ತಮ್ಮ ಅಭಿರುಚಿಗೆ ಅನುಗುಣವಾಗಿ ನಿರ್ದೇಶಿಸಿಕೊಳ್ಳುತ್ತಿದ್ದಾರೆ. ರೆಡ್ಡಿ ಸಮುದಾಯದಲ್ಲಿ ಸಿನಿಮಾತಾರೆ ಚಿರಂಜೀವಿ, ನಾಗಾರ್ಜುನ, ಕ್ರೀಡಾಪಟುಗಳಾದ ತೆಂಡೂಲ್ಕರ್, ದ್ರಾವಿಡ್, ಕುಂಬ್ಳೆ ಮೊದಲಾದವರ ಹೆಸರುಗಳು ಪ್ರಭಾವವಾಗಿರುವುದು ತಿಳಿದುಬರುತ್ತದೆ. ಆಧುನೀಕರಣ ಮತ್ತು ಜಾಗತೀಕರಣದ ಪ್ರಭಾವ-ಪ್ರೇರಣೆಗಳು ರೆಡ್ಡಿ ಸಮುದಾಯದ ವ್ಯಕ್ತಿನಾಮಗಳ ಮೇಲೆ ತೀವ್ರ ಪರಿಣಾಮವನ್ನುಂಟುಮಾಡಿದೆ. ಶಿಕ್ಷಣ, ರಾಜಕೀಯ, ಉದ್ಯೋಗ ಮತ್ತು ಆರ್ಥಿಕವಾಗಿ ಸುಧಾರಣೆಯಾದವರು ಪಾರಂಪರಿಕ ಹೆಸರುಗಳಿಗೆ ಹೊರತಾದ ಆಧುನೀಕರಣದ ವಿನೂತನ ಹೆಸರುಗಳ ಕಡೆಗೆ ಒಲವು ತೋರುತ್ತಿರುವುದು ಕಾಣಬರುತ್ತದೆ. ಆಧುನಿಕವಾದ ಹೆಸರುಗಳು ಪುರುಷರಿಗಿಂತ ಸ್ತ್ರೀಯರಲ್ಲಿ ಹೆಚ್ಚು ವ್ಯಾಪಕವಾಗಿ ಬಳಕೆಯಾಗುತ್ತಿವೆ. ಚರಿತ್ರೆ ಮೂಲದ ಹೆಸರುಗಳ ಪ್ರೇರಣೆ ಈ ಸಮುದಾಯದ ಹೆಸರುಗಳಲ್ಲಿ ಬಳಕೆಯಲ್ಲಿರುವುದಕ್ಕೆ ಯಾವುದೇ ನಿದರ್ಶನಗಳು ದೊರೆತಿಲ್ಲ.

### ವಾರ್ಗಿಕಗಳು

ರೆಡ್ಡಿ ಸಮುದಾಯದ ವ್ಯಕ್ತಿನಾಮಗಳಲ್ಲಿ ಸಂಬಂಧವಾಚಿ ಮತ್ತು ವೃತ್ತಿ/ಜಾತಿವಾಚಿ ವಾರ್ಗಿಕಗಳು ಬಳಕೆಯಾಗುತ್ತವೆ. ಪುರುಷ ವ್ಯಕ್ತಿನಾಮಗಳಲ್ಲಿ ವೃತ್ತಿ/ಜಾತಿವಾಚಿ ವಾರ್ಗಿಕಗಳು ಹೆಚ್ಚು ಕಾಣಿಸಿಕೊಂಡರೆ ಸ್ತ್ರೀ ವ್ಯಕ್ತಿನಾಮಗಳಲ್ಲಿ ಸಂಬಂಧವಾಚಿ ವಾರ್ಗಿಕಗಳು ಹೆಚ್ಚು ಕಾಣಿಸಿಕೊಳ್ಳುತ್ತವೆ. ರೆಡ್ಡಿ ಸಮುದಾಯ ಪುರುಷ ಮತ್ತು ಸ್ತ್ರೀ ವ್ಯಕ್ತಿನಾಮಗಳಲ್ಲಿ ಬಳಕೆಯಾಗುವ ವಾರ್ಗಿಕಗಳನ್ನು ಈ ರೀತಿ ನೋಡಬಹುದು.

**ಪುರುಷರಲ್ಲಿ**

| ಸಂಬಂಧವಾಚಿ ವಾರ್ಗಿಕ | ವೃತ್ತಿ/ಜಾತಿವಾಚಿ ವಾರ್ಗಿಕ |
|---|---|
| ಅಪ್ಪ | ರೆಡ್ಡಿ |
| ಅಣ್ಣ | |
| ಅಯ್ಯ | |

**ಸ್ತ್ರೀಯರಲ್ಲಿ**

| ಸಂಬಂಧವಾಚಿ ವಾರ್ಗಿಕ | ವೃತ್ತಿ/ಜಾತಿವಾಚಿ ವಾರ್ಗಿಕ |
|---|---|
| ಅಮ್ಮ | ರೆಡ್ಡಿ |
| ಅಕ್ಕ | |

ಸಂಬಂಧವಾಚಿ ವಾರ್ಗಿಕಗಳು ಪುರುಷ ಮತ್ತು ಸ್ತ್ರೀ ವ್ಯಕ್ತಿನಾಮಗಳಲ್ಲಿ ತಲೆಮಾರುಗಳ ಅಂತರದಲ್ಲಿ ಹೇಗೆ ಬಳಕೆಯಾಗಿವೆ ಎಂಬುದನ್ನು ಶೇಕಡವಾರು ಅಂಕಿ-ಸಂಖ್ಯೆಗಳ ಮೂಲಕ ಮುಂದಿನ ಭಾಗದಲ್ಲಿ ಚರ್ಚಿಸಲಾಗುವುದು. ಪ್ರಸ್ತುತ ವೃತ್ತಿ/ಜಾತಿವಾಚಿ ವಾರ್ಗಿಕಗಳ ಬಗೆಗೆ ಗಮನಿಸಬಹುದು.

ರೆಡ್ಡಿ

'ರೆಡ್ಡಿ' ಎಂಬುದು ಒಂದು ಜಾತಿವಾಚಿ ವಾರ್ಗಿಕ. ಕನ್ನಡ ಪರಿಸರದಲ್ಲಿ 'ಗೌಡ' ಎಂಬುದು ಪೂರ್ವದಲ್ಲಿ ಗೌರವವಾಚಿ ಪದವಿಯಾಗಿದ್ದು ಇಂದು ಜಾತಿವಾಚಿ ಅರ್ಥದಲ್ಲಿ ಬಳಸಲ್ಪಡುವಂತೆ, ಆಂಧ್ರ ಪರಿಸರದಲ್ಲಿ 'ರೆಡ್ಡಿ' ಎಂಬುದು ಸಹ ಮೊದಮೊದಲು ಗೌರವವಾಚಿ ಪದವಿಯಾಗಿದ್ದು ಇಂದು ಜಾತಿವಾಚಿ ಅರ್ಥದಲ್ಲಿ ಬಳಸಲ್ಪಡುತ್ತದೆ. ರೆಡ್ಡಿ ಸಮುದಾಯದಲ್ಲಿ ಈ ವಾರ್ಗಿಕ ಹಿಂದಿನ ವ್ಯಕ್ತಿನಾಮಗಳಲ್ಲಿ ಹೆಚ್ಚಾಗಿ ಬಳಕೆಯಾಗುತ್ತಿದ್ದು, ಇತ್ತೀಚಿಗೆ ಆ ಸಮುದಾಯದಲ್ಲಿ ಇದರ ಬಳಕೆ ಕಡಿಮೆಯಾಗುತ್ತಿದೆ. ಮುಂದಿನ ಭಾಗದಲ್ಲಿ ನೀಡಿರುವ ವಾರ್ಗಿಕ ಕೋಷ್ಟಕ ಪಟ್ಟಿಯ ಮೂಲಕ ಇದನ್ನು ಸ್ಪಷ್ಟಪಡಿಸಿಕೊಳ್ಳಬಹುದು. 'ರೆಡ್ಡಿ' ವಾರ್ಗಿಕ ಹಿಂದೆ ಪುರುಷ ವ್ಯಕ್ತಿನಾಮಗಳಲ್ಲಿ ಮಾತ್ರ ಬಳಕೆಯಲ್ಲಿದ್ದು ಇಂದು ಸ್ತ್ರೀ ವ್ಯಕ್ತಿನಾಮಗಳಲ್ಲಿಯೂ ಬಳಕೆಯಾಗುತ್ತಿದೆ. ಇದಕ್ಕೆ ಪ್ರಸ್ತುತ ಸಂದರ್ಭದ ಸಾಮಾಜಿಕ ಮತ್ತು ರಾಜಕೀಯ ಅಂಶಗಳು ಕಾರಣವಾಗಿಯೆನ್ನಬಹುದು.

ನಿದರ್ಶನಕ್ಕೆ ಕೆಲವು ಹೆಸರುಗಳನ್ನು ನೋಡಬಹುದು.

| | |
|---|---|
| ಕಲ್ಪನಾರೆಡ್ಡಿ | ಶ್ರೀನಿವಾಸರೆಡ್ಡಿ |
| ಮೀನಾಕ್ಷಿರೆಡ್ಡಿ | ಶಿವಾರೆಡ್ಡಿ |
| ಕಮಲಾರೆಡ್ಡಿ | ನಾರಾಯಣರೆಡ್ಡಿ |
| ಶಾರದಾರೆಡ್ಡಿ | ಗೋಪಾಲರೆಡ್ಡಿ |
| ಸುಶೀಲಾರೆಡ್ಡಿ | ತಿಮ್ಮಾರೆಡ್ಡಿ |

ಸ್ತ್ರೀ ವ್ಯಕ್ತಿನಾಮಗಳಲ್ಲಿ 'ರೆಡ್ಡಿ' ಎಂಬುದು ತಂದೆಯ ಹೆಸರಿನ ಕಡೆಯಿಂದ ಬಳಕೆಯಾಗುವಂತೆ, ಮದುವೆಯ ನಂತರ ಗಂಡನ ಹೆಸರಿನ ಕಡೆಯಿಂದಲೂ ಬಂದು ಸೇರುತ್ತದೆ.

'ರೆಡ್ಡಿ' ಎಂಬುದು ವಾರ್ಗಿಕವಾಗಿ ರೆಡ್ಡಿ ಸಮುದಾಯದ ವ್ಯಕ್ತಿನಾಮಗಳಲ್ಲಿ ಬಳಕೆಯಾಗುವಂತೆ, ಇತರ ಬೇರೆ ಬೇರೆ ಸಮುದಾಯಗಳಲ್ಲಿಯೂ ಬಳಕೆಯಾಗುತ್ತಿದೆ. ಲಿಂಗಾಯತ (ರೆಡ್ಡಿ ಲಿಂಗಾಯತ), ನಾಯಕ, ಮಾದಿಗ, ಭೋವಿ, ಲಂಬಾಣಿ ಸಮುದಾಯಗಳಲ್ಲಿ ಬಳಕೆಯಾಗುತ್ತಿರುವುದು ತಿಳಿದುಬರುತ್ತದೆ. ನಾಯಕ, ಮಾದಿಗ, ಭೋವಿ, ಲಂಬಾಣಿ ಮೊದಲಾದ ಸಮುದಾಯಗಳಲ್ಲಿ 'ರೆಡ್ಡಿ' ಎಂಬುದು ಜಾತಿವಾಚಿ ಅರ್ಥದಲ್ಲಿ ಬಳಕೆಯಾಗದೆ, ಜನರು ಅದನ್ನು ಪ್ರತಿಷ್ಠೆಯ ಸಂಕೇತವಾಗಿ ಇಟ್ಟುಕೊಳ್ಳುತ್ತಾರೆ. ಈ ಪ್ರಕ್ರಿಯೆ ಚಿತ್ರದುರ್ಗ ಪರಿಸರದ ಎಲ್ಲಾ ಪ್ರದೇಶಗಳಲ್ಲಿಯೂ ಕಾಣಬರುವುದಿಲ್ಲ. ಜಿಲ್ಲೆಯ ಪೂರ್ವದ ಗಡಿ ಅಂಚಿನ, ವಿಶೇಷವಾಗಿ ರೆಡ್ಡಿ ಸಮುದಾಯದ ಜನರ ಸಂಪರ್ಕ ಇರುವ ಪ್ರದೇಶಗಳಲ್ಲಿ ಮಾತ್ರ ಹೆಚ್ಚಾಗಿ ಕಾಣಬರುತ್ತದೆ. ರೆಡ್ಡಿ ಮತ್ತು ರೆಡ್ಡ್ಯೇತರ ಸಮುದಾಯಗಳ ಹೆಸರಿನ ನಿರ್ದಿಷ್ಟಗಳು ಸಾಮಾನ್ಯವಾಗಿ ಒಂದೇ ಆಗಿರುತ್ತವೆ. ಆ

ಕಾರಣದಿಂದ ನಿರ್ದಿಷ್ಟಗಳ ಮೂಲಕ ಸಾಮಾಜಿಕ ಭಿನ್ನತೆಗಳನ್ನು ಗುರುತಿಸುವುದು ಗೊಂದಲಕ್ಕೆ ಎಡೆಮಾಡಿಕೊಡುತ್ತದೆ. ರೆಡ್ಡಿ ಸಮುದಾಯದಲ್ಲಿ ಬಳಕೆಯಾಗುವ ವಾರ್ಗಿಕಗಳು ಮತ್ತು ಅವು ತಲೆಮಾರುಗಳಲ್ಲಿ ಯಾವ ಪ್ರಮಾಣದಲ್ಲಿ ಬಳಕೆಯಾಗಿವೆ ಎಂಬುದನ್ನು ಈ ಕೆಳಗಿನ ಕೋಷ್ಟಕದ ಮೂಲಕ ಸ್ಪಷ್ಟಪಡಿಸಿಕೊಳ್ಳಬಹುದು.

| | ಪುರುಷ ವಾರ್ಗಿಕ (ಶೇಕಡವಾರು % ) | | | | ಸ್ತ್ರೀ ವಾರ್ಗಿಕ (ಶೇಕಡವಾರು % ) | | |
|---|---|---|---|---|---|---|---|
| ತಲೆಮಾರು | ಅಪ್ಪ | ಅಯ್ಯ | ಅಣ್ಣ | ರೆಡ್ಡಿ | ಅಮ್ಮ | ಅಕ್ಕ | ರೆಡ್ಡಿ |
| ೩ | ೫ | - | - | ೨೯ | ೨೪ | - | ೩ |
| ೨ | ೧೦ | - | ೩ | ೫೦ | ೬೫ | ೧೦ | - |
| ೧ | ೨೮ | ೩ | ೬ | ೫೨ | ೮೩ | ೧೮ | - |
| ಒಟ್ಟು | ೧೩ | ೧ | ೩ | ೪೨ | ೬೩ | ೧೦ | ೦.೯ |

ಕೋಷ್ಟಕ ೧.೬

'ರೆಡ್ಡಿ' ಸಮುದಾಯದಲ್ಲಿ ಸಂಬಂಧವಾಚಿ ವಾರ್ಗಿಕಗಳು ಹಿಂದಿನವರ ವ್ಯಕ್ತಿನಾಮಗಳಲ್ಲಿ ಬಳಕೆಯಾಗಿವೆಯಾದರೂ ಕಡಿಮೆಯೆಂದೇ ಹೇಳಬಹುದು. ಕ್ರಮೇಣ ಅವುಗಳ ಬಳಕೆ ಕಡಿಮೆಯಾಗುತ್ತ ಬಂದಿದ್ದು, 'ಅಪ್ಪ' ಎಂಬುದು ಮಾತ್ರ ಕೆಲವರ ಹೆಸರುಗಳಲ್ಲಿ ಕಾಣಿಸಿಕೊಳ್ಳುತ್ತದೆ. 'ರೆಡ್ಡಿ' ಎಂಬುದು ಮೊದಲ ತಲೆಮಾರುಗಳಲ್ಲಿ ಅಧಿಕ ಪ್ರಮಾಣದಲ್ಲಿ ಬಳಕೆಯಾಗುತ್ತಿದ್ದು, ಹೊಸ ತಲೆಮಾರಿನವರ ಹೆಸರುಗಳಲ್ಲಿ ಅದರ ಬಳಕೆ ನಿಧಾನವಾಗಿ ಬಿಟ್ಟು ಹೋಗುತ್ತಿರುವುದನ್ನು ಮೇಲಿನ ಕೋಷ್ಟಕದಿಂದ ತಿಳಿಯಬಹುದು.

ಸ್ತ್ರೀಯರಲ್ಲಿಯೂ ಸಹ ಮೊದಲ ತಲೆಮಾರಿನವರ ಹೆಸರುಗಳಲ್ಲಿ ಸಂಬಂಧವಾಚಿ ವಾರ್ಗಿಕಗಳು ಹೆಚ್ಚಾಗಿ ಬಳಕೆಯಾಗುತ್ತಿದ್ದು ನಂತರದಲ್ಲಿ ಕಡಿಮೆಯಾಗುತ್ತಾ ಬಂದಿದೆ. 'ರೆಡ್ಡಿ' ಎಂಬುದು ಹಿಂದಿನ ಸ್ತ್ರೀ ವ್ಯಕ್ತಿನಾಮಗಳಲ್ಲಿ ಕಾಣಬರದೆ, ಇತ್ತೀಚಿನವರ ಹೆಸರುಗಳಲ್ಲಿ ಬಳಕೆಯಾಗುವುದು ಗಮನಾರ್ಹವಾದುದು.

### ೩.೫.೪ ಕುರುಬ

ಕುರುಬರು ಕರ್ನಾಟಕದಲ್ಲಿ ಬಹುಸಂಖ್ಯಾತ ಜನಾಂಗವಾಗಿದ್ದು, ಕಾಡುಕುರುಬರು, ಜೇನುಕುರುಬರು, ಊರುಕುರುಬರು ಎಂದು ಅವರ ನೆಲೆಸುವಿಕೆಯ ಮೇಲೆ ಗುರುತಿಸಲಾಗುತ್ತದೆ. ಕುರಿಸಾಕಾಣಿಕೆ ಇವರ ಮೂಲ ವೃತ್ತಿ. ಪ್ರಾಚೀನ ಕಾಲದಲ್ಲಿ ಬೆಟ್ಟಗುಡ್ಡಗಳ ಅಂಚಿನಲ್ಲಿ ಹಟ್ಟಿಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದರು. ಇವರೇ ಹಟ್ಟಿಕಾರರು, ಕುರುಂಬರು ಎಂದು ಶಂಬಾ ಚರ್ಚಿಸುತ್ತಾರೆ. ಈ ಹಟ್ಟಿಕಾರರೇ ಕಂನಾಡಿನ ಮೂಲ ನಿವಾಸಿಗಳೆಂದು ಶಂಬಾ ವಾದಿಸುತ್ತಾರೆ. ಆದರೆ ಕಂನಾಡಿನ ಮೂಲ ನಿವಾಸಿಗಳ ಬಗೆಗೆ ಅನೇಕ ಗೊಂದಲಗಳಿರುವುದರಿಂದ ಶಂಬಾ ವಾದಿಸುವ ಮೂಲ ನಿವಾಸಿಗಳ ಗುರುತು ಗೊಂದಲಮಯವಾಗುತ್ತಿದೆ. ಇವರು ಮೂಲತಃ ಶೈವಧರ್ಮದ ಆರಾಧಕರು. ಶಿವ ಇವರ ಆರಾಧ್ಯದೈವ. ಪ್ರಾಚೀನ ಕಾವ್ಯಗಳಲ್ಲಿ ಮೈಲಾರ, ಮಾಳಮ್ಮ, ಗೊರವ, ಮುಂತಾದ ಹೆಸರುಗಳು ಉಲ್ಲೇಖವಾಗಿವೆ. ಕರ್ನಾಟಕದಲ್ಲಿ ಮೈಲಾರ, ಮಾಳವಿ, ಬೀರ, ಕನಕ ಇವರು ಮುಖ್ಯ ದೈವಗಳಾಗಿ

ಈ ಸಮುದಾಯಕ್ಕೆ ನಿಂತಿದ್ದಾರೆ. ಈ ದೈವಗಳ ಪ್ರಭಾವವೂ ಇವರ ವ್ಯಕ್ತಿನಾಮಗಳಿಗೆ ಪ್ರೇರಣೆಯಾಗಿದೆ. ಇವರನ್ನು ಹಾಲುಮತದವರೆಂದು ಕರೆಯುತ್ತಾರೆ. ಇವರಲ್ಲಿ ಉಣ್ಣೆಕುರುಬರು, ಹತ್ತಿಕುರುಬರು ಎಂಬ ಒಳಪಂಗಡಗಳಿವೆ. ಅಲ್ಲದೆ ಈ ಸಮುದಾಯದ ಕೆಲವು ಜನ ಮೈಲಾರಲಿಂಗನಿಗೆ ಗೊರವರಾಗಿ ದೀಕ್ಷೆಯನ್ನು ಪಡೆಯುತ್ತಾರೆ. ಈ ಪ್ರಭಾವದಿಂದ ಇವರ ವ್ಯಕ್ತಿನಾಮಗಳಲ್ಲಿ 'ಗೊರವ' ಎಂಬ ಪದ ಕಾಣಿಸಿಕೊಳ್ಳುತ್ತದೆ. ಅಲ್ಲದೆ ಮೈಲಾರ ಸಂಪ್ರದಾಯದ 'ಕಪಿಲಮುನಿ' ಎಂಬ ಋಷಿಯಿಂದ ಆರಂಭವಾದ ಪರಂಪರೆಯ ಪೂಜಾರಿಗಳು ತಮ್ಮ ಹೆಸರಿನ ಕೊನೆಯಲ್ಲಿ ಹೆಗಡೆ, ಒಡೆಯರ್ ಎಂದು ಕರೆದುಕೊಂಡದ್ದು, ಮೈಲಾರ ಮತ್ತು ಆಂಧ್ರದ ಮೀನಗೊಂದಿ ಕ್ಷೇತ್ರದಲ್ಲಿ ಕುರುಬರ ಹೆಸರುಗಳಲ್ಲಿ ಕಂಡುಬರುತ್ತವೆ. ಮಹಾರಾಷ್ಟ್ರದಲ್ಲಿ 'ಖಂಡೋಬ' ಎಂದು ಕರೆಯಲ್ಪಡುವ ಮೈಲಾರದೇವರ ಭಕ್ತರಾದ ಕುರುಬರ ಹೆಸರುಗಳಲ್ಲಿ 'ಖಂಡೋಬ' ಎಂಬ ಪದ ಬೆಳಗಾವಿಯ ಅಂಚಿನಲ್ಲಿ ಕಂಡುಬರುತ್ತದೆ.

ಚಿತ್ರದುರ್ಗ ಪರಿಸರದಲ್ಲಿ ಈ ಬಗೆಯ ಹೆಸರುಗಳು ಕಂಡುಬರುವುದಿಲ್ಲ. ಆದರೂ ಇಲ್ಲಿನ ಪ್ರಾದೇಶಿಕ ದೈವಗಳಾದ 'ಜಾಲಾಟೇಶ್ವರ' ಚಿತ್ರಲಿಂಗ, ಬೀರಪ್ಪ ಮುಂತಾದ ದೇವರುಗಳಲ್ಲದೆ, ಈ ಪ್ರದೇಶದಲ್ಲಿ ಪ್ರಸಿದ್ಧಿಯಾದ ನಾಯ್ಕನಹಟ್ಟಿ ತಿಪ್ಪೇಸ್ವಾಮಿ, ಮುರುಘರಾಜೇಂದ್ರ, ಜಗಳೂರಜ್ಜ, ಚಳ್ಳೇರಮ್ಮ, ಕರಿಬಸವೇಶ, ಬೋರೇದೇವರು, ಕರಿಯಣ್ಣ ಮುಂತಾದ ದೈವಗಳ ಪ್ರಭಾವವೂ ಇವರ ಹೆಸರುಗಳ ಮೇಲೆ ಆಗಿದೆ. ಚಿತ್ರದುರ್ಗ ಜಿಲ್ಲೆಯ ಪಶ್ಚಿಮ ಭಾಗಕ್ಕೆ ಗೋಣಿಬಸವೇಶ್ವರ ಮತ್ತು ಕೆಂಚಪ್ಪ ಇವರ ಆರಾಧ್ಯದೈವವಾಗಿದ್ದು, ಇವು ಸಮುದಾಯದ ಮೇಲೆ ಪ್ರಭಾವ ಬೀರಿವೆ.

ಆಧುನಿಕವಾಗಿ ಕುರುಬ ಸಮುದಾಯದ ವ್ಯಕ್ತಿನಾಮಗಳಲ್ಲಿ ಸಾಕಷ್ಟು ಬದಲಾವಣೆಯಾಗಿರುವುದನ್ನು ಗುರುತಿಸಬಹುದು. ಇವರ ಸಾಂಸ್ಕೃತಿಕ ಮತ್ತು ಸಾಮಾಜಿಕ ಪ್ರಭಾವದೊಂದಿಗೆ ವ್ಯಕ್ತಿನಾಮಗಳು ರೂಪುಗೊಂಡಿರುವುದು ಗ್ರಾಮೀಣ ಪರಿಸರದಲ್ಲಿ ಇಂದಿಗೂ ಮುಂದುವರೆದಿದೆ. ಆರ್ಥಿಕವಾಗಿ ಈ ಸಮುದಾಯ ಅಭಿವೃದ್ಧಿ ಹಂತದಲ್ಲಿದ್ದರೂ ಸಾಂಸ್ಕೃತಿಕವಾಗಿ ಪರಂಪರೆಯನ್ನೇ ಸಂಗೋಪಿಸಿಕೊಂಡಿರುವುದರಿಂದ ಇವರ ಹೆಸರುಗಳು ವ್ಯಾಪಕ ಬದಲಾವಣೆಗೆ ಒಳಗಾಗದೆ ಕೊಂಚ ಬದಲಾವಣೆ ಹೊಂದಿರುವುದು ಈ ಪರಿಸರದಲ್ಲಿ ಕಂಡುಬರುತ್ತದೆ. ಈ ಹಿನ್ನಲೆಯೊಂದಿಗೆ ಚಿತ್ರದುರ್ಗ ಪರಿಸರದ ಕುರುಬ ಸಮುದಾಯದ ವ್ಯಕ್ತಿನಾಮಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಗು ಮಾಡಲಾಗಿದೆ.

ಕುರುಬ ಸಮುದಾಯದಲ್ಲಿ ತಲೆಮಾರುಗಳ ಅಂತರಗಳಲ್ಲಿ ಕಂಡುಬರುವ ಕೆಲ ವ್ಯಕ್ತಿನಾಮ ಮಾದರಿಗಳನ್ನು ಇಲ್ಲಿ ಗಮನಿಸಬಹುದು.

ಪುರುಷರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
| --- | --- | --- |
| ಜಾಲಾಟಪ್ಪ | ಹಿರ್ದಾಳಪ್ಪ | ತಿರುಮಲೇಶ |
| ಭೀರಲಿಂಗಪ್ಪ | ಭೀಮಣ್ಣ | ಸದಾಶಿವ |
| ಲಕ್ಕಪ್ಪ | ಚಿತ್ರಪ್ಪ | ಸತೀಶ್ ಕುಮಾರ್ |
| ಧವಳಪ್ಪ | ಕರಿಯಣ್ಣ | ಉಮಾಶಂಕರ |
| ಏಳುಕೋಟೆಪ್ಪ | ಮಹದೇವಪ್ಪ | ಮುಖೇಶ |
| ಗಟ್ಟೆಪ್ಪ | ಗಂಗಾಧರಪ್ಪ | ಬಸವರಾಜ |
| ಪರಸಪ್ಪ | ಪರಮೇಶ್ವರಪ್ಪ | ಮಾರುತಿ |
| ಕಾಡಪ್ಪ | ಬಸಣ್ಣ | ನಾಗರಾಜ |
| ಹುಚ್ಚಪ್ಪಗೌಡ | ಮಲ್ಲಿಕಾರ್ಜುನಗೌಡ | ಸಾಗರ್ |
| ಜಡೆಪ್ಪಗೌಡ | ಪ್ರಕಾಶ್ ಗೌಡ | ಪವನ್ |

ಸ್ತ್ರೀಯರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
| --- | --- | --- |
| ಭರಿಗೇರಮ್ಮ | ಚಳ್ಕೇರಮ್ಮ | ಯಶೋಧಮ್ಮ |
| ಕೆಂಚಲಿಂಗಮ್ಮ | ಚಿತ್ರಲಿಂಗಮ್ಮ | ಶಕುಂತಲಮ್ಮ |
| ಜೋಗಮ್ಮ | ಜಾಲಮ್ಮ | ರತ್ನಮ್ಮ |
| ಮಲಿಯಮ್ಮ | ಭೀಮಕ್ಕ | ಮಂಜಮ್ಮ |
| ಲಕ್ಕಮ್ಮ | ಈರಮ್ಮ | ಭುವನೇಶ್ವರಿ |
| ಹಾಲಮ್ಮ | ಕ್ಯಾತಮ್ಮ | ವರಲಕ್ಷ್ಮಿ |
| ಬಂದಮ್ಮ (< ಬನದಮ್ಮ) | ದ್ಯಾಮಕ್ಕ | ಮಹಾದೇವಿ |
| ಕರಿಯಮ್ಮ | ಮಾರೆಮ್ಮ | ಸೌಜನ್ಯ |
| ನರಸಮ್ಮ | ಪಾರ್ವತಮ್ಮ | ಪಲ್ಲವಿ |
| ಹನುಮಕ್ಕ | ಗೌರಮ್ಮ | ಸ್ನೇಹ |

ಈ ಪಟ್ಟಿಯ ಮುಖೇನ ಮೊದಲ ತಲೆಮಾರಿನ ಪುರುಷ ಮತ್ತು ಸ್ತ್ರೀಯರಲ್ಲಿನ ಹೆಸರುಗಳು ವಂಶಪಾರಂಪರ್ಯವಾಗಿ ಬಂದ ದೈವಸಂಬಂಧಿ ಹೆಸರುಗಳಾಗಿವೆ. ಮತ್ತು ಆ ಸಮುದಾಯದ ಸಂಸ್ಕೃತಿಯನ್ನು ಪ್ರತಿನಿಧಿಸುವಂಥ ನಿರ್ದಿಷ್ಟ ರಚನೆಗಳೂ ಆಗಿವೆ. ಎರಡನೆ ತಲೆಮಾರಿನ ಪುರುಷ ಮತ್ತು ಸ್ತ್ರೀ ಹೆಸರುಗಳಲ್ಲಿ ಮೊದಲ ತಲೆಮಾರಿನ ವ್ಯಕ್ತಿನಾಮಗಳಿಗಿಂತ ಸ್ವಲ್ಪಮಟ್ಟಿನ ಬದಲಾವಣೆಗಳು ನಡೆದಿವೆ. ಪರಂಪರಾಗತ ವ್ಯಕ್ತಿನಾಮಗಳಿಗೆ ಬದಲಾಗಿ ಪ್ರಾದೇಶಿಕ ಪ್ರಸಿದ್ಧ ದೈವಗಳ ಪ್ರಭಾವ ಆಗಿರುವಂತೆ, ಸಾಮಾಜಿಕವಾಗಿ ಮೇಲ್

ಸ್ತರದ ಸಮುದಾಯಗಳ ವ್ಯಕ್ತಿನಾಮಗಳನ್ನು ಸ್ವೀಕರಿಸಿರುವುದೂ ಗಮನಕ್ಕೆ ಬರುತ್ತದೆ. ಮೇಲ್ ಸಮುದಾಯದ ವ್ಯಕ್ತಿನಾಮಗಳನ್ನು ಸ್ವೀಕರಿಸಿದ್ದರೂ, ವಾರ್ಗಿಕಗಳನ್ನು ಹಾಗೆಯೇ ಉಳಿಸಿಕೊಂಡಿರುವುದನ್ನು ಗಮನಿಸಬಹುದು.

ಮೂರನೆ ತಲೆಮಾರಿನವರಲ್ಲಿ ಈ ಹಿಂದಿನ ತಲೆಮಾರುಗಳ ಹೆಸರುಗಳಿಗಿಂತ ತೀರ ಭಿನ್ನವಾಗಿದ್ದು, ಸಮುದಾಯನಿಷ್ಠ ಧಾರ್ಮಿಕ ಹೆಸರುಗಳು ಹಿಂದೆ ಸರಿದಿವೆ. ಬದಲಾಗಿ ಸಾಮಾಜಿಕವಾಗಿ ಮೇಲ್ ಸ್ತರದ ಸಮುದಾಯಗಳ ವ್ಯಕ್ತಿನಾಮಗಳನ್ನು ಪಡೆದಿದ್ದಾರೆ. ಮೂರನೆ ತಲೆಮಾರಿನಲ್ಲಿ ಬಳಕೆಯಾಗಿರುವ ಅನ್ಯಸಮಾಜದ ವ್ಯಕ್ತಿನಾಮಗಳು ಸಹದೈವಸಂಬಂಧಿ ಹೆಸರುಗಳೇ ಆಗಿರುವುದು ಗಮನಾರ್ಹ ಸಂಗತಿಯಾಗಿದೆ.

ಕುರುಬ ಸಮುದಾಯದವು ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕವಾಗಿ ಸುಧಾರಣೆಯಾದಂತೆಲ್ಲ, ತಮ್ಮ ವ್ಯಕ್ತಿನಾಮಗಳ ನಿರ್ದೇಶನದಲ್ಲೂ ಸುಧಾರಣೆ ಹಾಗೂ ಬದಲಾವಣೆಗಳನ್ನು ಮಾಡಿಕೊಳ್ಳುತ್ತಾ ಬಂದಿದೆ. ಒಂದು ಮತ್ತು ಎರಡನೆ ತಲೆಮಾರಿನ ಪುರುಷ ಮತ್ತು ಸ್ತ್ರೀಯರಲ್ಲಿ ಸಂಬಂಧವಾಚಿ ವಾರ್ಗಿಕಗಳು ಬಳಕೆಯಲ್ಲಿವೆ. ಪುರುಷರಲ್ಲಿ 'ಗೌಡ' ಎಂಬುದು ವಾರ್ಗಿಕವಾಗಿ ಬಳಕೆಯಾಗಿದೆ. ಎರಡನೆ ತಲೆಮಾರಿನಲ್ಲಿ ಹೊಸ ನಿರ್ದಿಷ್ಟಗಳನ್ನು ಸ್ವೀಕರಿಸಿದ್ದರೂ, ವಾರ್ಗಿಕಗಳು ಹಾಗೆಯೇ ಮುಂದುವರೆದಿವೆ. ಮೂರನೆ ತಲೆಮಾರಿನವರಲ್ಲಿ ಈ ಸಮುದಾಯಕ್ಕೆ ಭಿನ್ನವಾದ ಹೆಸರುಗಳನ್ನು ಪಡೆದಿರುವುದಲ್ಲದೆ ವಾರ್ಗಿಕಗಳು ಬಳಕೆಯಿಂದ ಮರೆಯಾಗಿರುವುದು ಕಾಣಬರುತ್ತದೆ. ಸ್ತ್ರೀಯರಲ್ಲಿ ಪಾರಂಪರಿಕ ವ್ಯಕ್ತಿನಾಮದ ಕುರುಹುಗಳು ಇವೆಯಾದರೂ ಇದು ಗ್ರಾಮೀಣ ಪರಿಸರದ ಹಿಂದುಳಿದ ವರ್ಗದವರಲ್ಲಿ ಮಾತ್ರ ಎಂಬುದು ಗಮನಾರ್ಹ. ಕುರುಬ ಸಮುದಾಯದಲ್ಲೆ ಶೈಕ್ಷಣಿಕವಾಗಿ, ಆರ್ಥಿಕವಾಗಿ ಸುಧಾರಿಸಲ್ಪಟ್ಟವರು ಮೇಲ್ ಸಮುದಾಯಗಳ ಹೆಸರುಗಳನ್ನು ಇಟ್ಟುಕೊಂಡರೆ, ಇದೇ ಸಮುದಾಯದಲ್ಲಿ ಎಲ್ಲಾ ರಂಗಗಳಲ್ಲಿಯೂ ಮುಂದುವರೆದವರು ಆಧುನಿಕ ಹೆಸರುಗಳನ್ನು ಇಟ್ಟುಕೊಂಡಿರುವುದು ಗಮನಕ್ಕೆ ಬರುತ್ತದೆ. ಮೇಲ್ ಸಮುದಾಯಗಳು ಅನುಸರಿಸುವ ಹೆಸರುಗಳನ್ನೇ ಈ ವರ್ಗದವರೂ ಇಟ್ಟುಕೊಂಡಿದ್ದಾರೆ. ಇದರ ಸ್ಪಷ್ಟನೆಗಾಗಿ, ಈ ಹಿಂದಿನ ಪಟ್ಟಿಯ ಪುರುಷ ಮತ್ತು ಸ್ತ್ರೀ ಹೆಸರುಗಳ ಮೂರು ತಲೆಮಾರಿನ ಕೊನೆಯ ಎರಡು ಉದಾಹರಣೆಗಳನ್ನು ಗಮನಿಸಬಹುದು.

ಕುರುಬ ಸಮುದಾಯವು ತಮ್ಮ ಅಭಿರುಚಿ ಮತ್ತು ಆಸಕ್ತಿಗಳಲ್ಲಿ ಬದಲಾವಣೆಗಳಾದಂತೆ, ಆಧುನೀಕರಣದ ಪ್ರಭಾವಕ್ಕೆ ಒಳಗಾಗಿ ತಮ್ಮ ಪರಂಪರೆಯ ಮೂಲ ಹೆಸರುಗಳನ್ನು ಬಿಟ್ಟುಕೊಟ್ಟು, ಹೊಸ ಬಗೆಯ ಹೆಸರುಗಳನ್ನು ನಿರ್ದೇಶಿಸಿಕೊಳ್ಳುವುದು ಮೂರು ತಲೆಮಾರುಗಳಲ್ಲಿ ಬಳಕೆಯಾಗಿರುವ ವ್ಯಕ್ತಿನಾಮ ಮಾದರಿಗಳಿಂದ ಸ್ಪಷ್ಟಪಡುತ್ತದೆ.

ಚಿತ್ರದುರ್ಗ ಪರಿಸರದ ಕುರುಬ ಸಮುದಾಯದ ೩೧೫ ವ್ಯಕ್ತಿನಾಮಗಳನ್ನು ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಭಿನ್ನ ನೆಲೆಯ ಪ್ರೇರಣೆ-ಪ್ರಭಾವಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

## ಕುರುಬ ಸಮುದಾಯದ ವ್ಯಕ್ತಿನಾಮಗಳ ಮಾದರಿ ಸಮೀಕ್ಷೆ ಕೋಷ್ಟಕ ಪಟ್ಟಿ - ೫

| ತಲೆಮಾರು | ಧಾರ್ಮಿಕ ಪ್ರಭಾವ ಶೇಕಡವಾರು (%) | | | ಸಮಕಾಲೀನ ಪ್ರಸಿದ್ಧ ವ್ಯಕ್ತಿಗಳ ಪ್ರಭಾವ ಶೇಕಡವಾರು (%) | | | ಆಧುನೀಕರಣದ ಪ್ರಭಾವ ಶೇಕಡವಾರು (%) | | | ಚರಿತ್ರೆ ಪ್ರಭಾವ ಶೇಕಡವಾರು (%) | | | ಇತರೆ ಪ್ರಭಾವ ಶೇಕಡವಾರು (%) | | | ಒಟ್ಟು ಶೇಕಡವಾರು (%) | | |
|---|---|---|---|---|---|---|---|---|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು . | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೩ | ೭೫ | ೪೩ | ೬೪ | ೭ | - | ೪.೭ | ೧೬ | ೫೭ | ೨೯ | - | - | - | ೨ | - | ೧.೫ | ೬೭ | ೩.೨ | ೨೦ |
| ೨ | ೭೮ | ೭೭ | ೭೭ | - | - | - | ೧೪ | ೨೨ | ೧೮ | - | - | - | ೬ | ೧.೫ | ೪ | ೫೦ | ೫೦ | ೪೧ |
| ೧ | ೮೭ | ೮೬ | ೮೭ | - | - | - | ೪ | ೧೦ | ೭ | - | - | - | ೮ | ೩ | ೫ | ೫೧ | ೪೮ | ೩೮ |
| ಒಟ್ಟು | ೮೧ | ೭೬ | ೭೮ | ೨ | - | ೧ | ೧೧ | ೨೨ | ೧೬ | - | - | - | ೫ | ೨ | ೪ | ೫೪ | ೪೬ | - |

ಕೋಷ್ಟಕ ೧.೮

ಈ ಪಟ್ಟಿಯ ದತ್ತಾಂಶಗಳನ್ನು ನೋಡಿದರೆ, ಕುರುಬರಲ್ಲಿ ದೈವನಾಮಗಳ ಪ್ರೇರಣೆ-ಪ್ರಭಾವ ಅಧಿಕವಾಗಿರುವುದು ಸ್ಪಷ್ಟವಾಗುತ್ತದೆ. ಒಂದು ಮತ್ತು ಎರಡನೆ ತಲೆಮಾರಿನ ಪುರುಷ ಮತ್ತು ಸ್ತ್ರೀಯರಲ್ಲಿ ದೈವಸಂಬಂಧಿ ಹೆಸರುಗಳ ಬಳಕೆ ಹೆಚ್ಚೂ ಕಡಿಮೆ ಒಂದೇ ಪ್ರಮಾಣದಲ್ಲಿದ್ದು, ಇತ್ತೀಚಿನವರಲ್ಲಿ ಅದರ ಪ್ರಭಾವ ಕಡಿಮೆಯಾಗಿದೆ. ಆಧುನೀಕರಣದ ಪ್ರಭಾವ ಮೂರು ತಲೆಮಾರಿನವರ ಹೆಸರುಗಳ ಮೇಲೆ ಆಗಿದೆಯಾದರೂ, ತಲೆಮಾರಿನಿಂದ ತಲೆಮಾರಿಗೆ ಅಧಿಕವಾಗುತ್ತಾ ಬಂದಿದ್ದು ಇದರ ಪ್ರಮಾಣ ಪುರುಷರಿಗಿಂತ ಸ್ತ್ರೀಯರಲ್ಲಿ ಅಧಿಕವಾಗಿರುವುದು ಕಾಣಬರುತ್ತದೆ. ಹೀಗೆ ಪರಂಪರೆಯನ್ನು ಹೆಸರಿನ ಮೂಲಕ ಸಂಗೋಪಿಸಿಕೊಂಡು ಬಂದ ಕುರುಬರಂತಹ ಹಿಂದುಳಿದ ಸಮುದಾಯವೂ ಆಧುನೀಕರಣದತ್ತ ನಿಧಾನಗತಿಯಲ್ಲಿ ಮುಖಾಮುಖಿಯಾಗುತ್ತಿರುವುದು ಗಮನಾರ್ಹ ಸಂಗತಿಯಾಗಿದೆ. ಈ ನಿಟ್ಟಿನಲ್ಲಿ ಸಮುದಾಯಗಳು ಆಧುನಿಕ ವಿದ್ಯಮಾನವನ್ನು ಹೆಸರಿನ ಕಕ್ಷೆಯಲ್ಲಿಯೂ ಸ್ಥಿತ್ಯಂತರಗೊಳಿಸಿಕೊಳ್ಳುತ್ತಿವೆ.

ಕುರುಬ ಸಮುದಾಯದ ವ್ಯಕ್ತಿನಾಮಗಳಲ್ಲಿ ಬಳಕೆಯಾಗಿರುವ ವಾರ್ಗಿಕಗಳನ್ನು ಈ ಕೆಳಗಿನಂತೆ ಗಮನಿಸಬಹುದು.

ಪುರುಷರಲ್ಲಿ

| ಸಂಬಂಧವಾಚಿ ವಾರ್ಗಿಕ | ವೃತ್ತಿ/ಜಾತಿವಾಚಿ ವಾರ್ಗಿಕ |
|---|---|
| ಅಪ್ಪ | ಗೌಡ |
| ಅಯ್ಯ | |
| ಅಣ್ಣ | |

ಸ್ತ್ರೀಯರಲ್ಲಿ

| ಸಂಬಂಧವಾಚಿ ವಾರ್ಗಿಕ |
|---|
| ಅಮ್ಮ |
| ಅಕ್ಕ |
| ಅವ್ವ |

ಸಂಬಂಧವಾಚಿ ವಾರ್ಗಿಕಗಳ ಬಳಕೆ ಸಾಮಾನ್ಯವಾಗಿದ್ದು ಮೂರು ತಲೆಮಾರುಗಳಲ್ಲಿ ಅವುಗಳ ಬಳಕೆಯನ್ನು ಕುರಿತು ಮುಂದಿನ ಭಾಗದಲ್ಲಿ ಚರ್ಚಿಸಲಾಗುವುದು. ಕುರುಬ ಸಮುದಾಯದಲ್ಲಿ ಕಂಡುಬರುವ ವೃತ್ತಿ/ಜಾತಿಸೂಚಕ ವಾರ್ಗಿಕಗಳನ್ನು ಇಲ್ಲಿ ಗಮನಿಸಬಹುದು. ಈ ಸಮುದಾಯದ ವ್ಯಕ್ತಿನಾಮಗಳಲ್ಲಿ 'ಗೌಡ' ಎಂಬ ವಾರ್ಗಿಕ ಮಾತ್ರ ಬಳಕೆಯಾಗಿದ್ದು, ಬೇರೆ ವಾರ್ಗಿಕಗಳು ಈ ಭಾಗದ ಈ ಸಮುದಾಯದ ವ್ಯಕ್ತಿನಾಮಗಳಲ್ಲಿ ಬಳಕೆಯಾಗಿರುವುದಿಲ್ಲ.

### ಗೌಡ

'ಗೌಡ' ಎಂಬುದು ಕೆಲ ಸಮುದಾಯದ ವ್ಯಕ್ತಿನಾಮಗಳಲ್ಲಿ ಜಾತಿಸೂಚಕವಾಗಿಯೂ, ಕೆಲ ಸಮುದಾಯದ ವ್ಯಕ್ತಿನಾಮಗಳಲ್ಲಿ ವೃತ್ತಿ ಸೂಚಕವಾಗಿಯೂ ಬಳಕೆಯಾಗಿರುವುದು ತಿಳಿದುಬಂದಿದೆ. ಚಿತ್ರದುರ್ಗ ಪರಿಸರದ ಕುರುಬರ ಎಲ್ಲಾ ವ್ಯಕ್ತಿನಾಮಗಳಲ್ಲಿ ಇದರ ಬಳಕೆ ಕಂಡುಬರದೆ, ಕೆಲವರಲ್ಲಿ ಮಾತ್ರ ಕಂಡುಬರುತ್ತಿದೆ. ಕುರುಬ ಸಮುದಾಯದಲ್ಲಿ 'ಕುರುಬ ಗೌಡರು' ಎಂಬ ಒಂದು ಉಪಪಂಗಡವಿದೆ. ಅವರ ಹೆಸರುಗಳಲ್ಲಿ ಮಾತ್ರ 'ಗೌಡ' ಬಳಕೆಯಾಗುವುದನ್ನು ಗಮನಿಸಬಹುದು. ಈ ವ್ಯಕ್ತಿನಾಮಗಳಲ್ಲಿ 'ಗೌಡ' ಎಂಬುದು ಜಾತಿವಾಚಿ ಅರ್ಥದಲ್ಲಿ ಬಳಕೆಯಾಗುತ್ತಿದೆಯೇ ಹೊರತು ವೃತ್ತಿವಾಚಿ ಅರ್ಥದಲ್ಲಲ್ಲ. ಚಿತ್ರದುರ್ಗ ಪರಿಸರದ ಕುರುಬರ ವ್ಯಕ್ತಿನಾಮಗಳಲ್ಲಿ 'ಗೌಡ' ಪದದ ಬಳಕೆ ಬಹಳ ಕಡಿಮೆಯೆಂದೇ ಹೇಳಬಹುದು. ಅದು ವಿಶೇಷವಾಗಿ ಹಳೆಯ ತಲೆಮಾರಿನ ವ್ಯಕ್ತಿನಾಮಗಳಲ್ಲಿ ಮಾತ್ರ ಬಳಕೆಯಲ್ಲಿದ್ದು, ಇತ್ತೀಚಿಗೆ ಇದರ ಬಳಕೆ ಗೌಣವಾಗುತ್ತಿರುವುದು ಕಂಡುಬರುತ್ತದೆ. ಪ್ರಸ್ತುತ ಅಧ್ಯಯನಕ್ಕೆ ಆಯ್ಕೆಮಾಡಿಕೊಂಡಿರುವ ವ್ಯಕ್ತಿನಾಮಗಳಲ್ಲಿ 'ಗೌಡ' ಎಂಬುದು ತಲೆಮಾರುಗಳಲ್ಲಿ ಹೇಗೆ ಬಳಕೆಯಾಗಿದೆ ಎಂಬುದನ್ನು ಮುಂದೆ ಚರ್ಚಿಸಲಾಗಿದೆ.

| | ಪುರುಷ ವಾರ್ಗಿಕ (ಶೇಕಡವಾರು % ) | | | | ಸ್ತ್ರೀ ವಾರ್ಗಿಕ (ಶೇಕಡವಾರು % ) | | |
|---|---|---|---|---|---|---|---|
| ತಲೆಮಾರು | ಅಪ್ಪ | ಅಣ್ಣ | ಅಯ್ಯ | ಗೌಡ | ಅಮ್ಮ | ಅಕ್ಕ | ಅವ್ವ |
| ೩ | ೨೫ | - | - | - | ೨೪ | - | - |
| ೨ | ೫೧ | ೨೫ | - | ೨ | ೫೫ | ೨೦ | - |
| ೧ | ೮೪ | ೧೨ | ೫ | ೩ | ೮೬ | ೧೪ | ೨ |
| ಒಟ್ಟು | ೫೬ | ೧೩ | ೧.೭ | ೧.೬ | ೬೩ | ೧೫ | ೦.೮ |
| ಸರಾಸರಿ ಒಟ್ಟು | ೭೧ | | | ೨ | ೭೮ | | |

**ಕೋಷ್ಟಕ ೧.೯**

ಕುರುಬ ಸಮುದಾಯದ ವ್ಯಕ್ತಿನಾಮಗಳಲ್ಲಿ ಸಂಬಂಧವಾಚಿ ವಾರ್ಗಿಕಗಳ ಬಳಕೆ ಮೊದಲೆರಡು ತಲೆಮಾರುಗಳಲ್ಲಿ ವ್ಯಾಪಕವಾಗಿದೆ. 'ಅಯ್ಯ', 'ಅಣ್ಣ'ಗಳಿಗಿಂತ 'ಅಪ್ಪ' ಎಂಬುದು ಹೆಚ್ಚು ಬಳಕೆಯಾಗಿದೆ. ತಲೆಮಾರಿನಿಂದ ತಲೆಮಾರಿಗೆ, ಸಂಬಂಧವಾಚಿ ವಾರ್ಗಿಕಗಳ ಬಳಕೆ ಕಡಿಮೆಯಾಗುತ್ತಾ ಬಂದಿದೆ. 'ಅಪ್ಪ' ಎಂಬುದು ಈಗಲೂ ಬಳಕೆಯಲ್ಲಿರುವುದು ಮೇಲಿನ ಪಟ್ಟಿಯಿಂದ ಸ್ಪಷ್ಟವಾಗುತ್ತದೆ. ಸ್ತ್ರೀ ವ್ಯಕ್ತಿನಾಮಗಳಲ್ಲಿಯೂ ಇದೇ ಸ್ವರೂಪವನ್ನು ಕಾಣಬಹುದು. 'ಅಕ್ಕ', 'ಅವ್ವ'ಗಳಿಗಿಂತ ಅಮ್ಮ ಎಂಬುದು ಹಿಂದಿನ ವ್ಯಕ್ತಿನಾಮಗಳಲ್ಲಿ ದಟ್ಟವಾಗಿ ಬಳಕೆಯಾಗಿದ್ದು, ಪ್ರಸ್ತುತ ಸಂದರ್ಭದಲ್ಲಿಯೂ ಕೊಂಚ ಮಟ್ಟಿಗೆ ಬಳಕೆಯಲ್ಲಿದೆ. 'ಗೌಡ' ಎಂಬುದು ಮೊದಲ ತಲೆಮಾರಿನವರ ವ್ಯಕ್ತಿನಾಮಗಳಲ್ಲಿ ಮಾತ್ರ ಬಳಕೆಯಾಗಿದ್ದು, ಇತ್ತೀಚಿನವರ ಹೆಸರುಗಳಲ್ಲಿ ಬಳಕೆಯಲ್ಲಿರುವುದು ಕಾಣುವುದಿಲ್ಲ. ಕುರುಬರು ಆಧುನೀಕರಣದ ಪ್ರಭಾವಕ್ಕೆ ಒಳಗಾಗಿ ವಾರ್ಗಿಕಗಳಿಲ್ಲದ ಕೇವಲ ನಿರ್ದಿಷ್ಟ ನಾಮಗಳನ್ನು ಇಟ್ಟುಕೊಳ್ಳುವುದರ ಕಡೆಗೆ ಒಲವು ತೋರುತ್ತಿರುವುದು ಇದರಿಂದ ವೇದ್ಯವಾಗುತ್ತದೆ.

### ೩.೫.೫ ಗೊಲ್ಲ

ಗೊಲ್ಲ ಸಮುದಾಯವು ಕರ್ನಾಟಕದ ಬುಡಕಟ್ಟು ಸಮುದಾಯಗಳಲ್ಲಿ ಒಂದಾಗಿದೆ. ಇವರು ಕಾಡು ಮತ್ತು ಊರುಗಳಲ್ಲಿ ಇಂದು ವಾಸಿಸುತ್ತಿದ್ದಾರೆ. ಆರಂಭ ಕಾಲದಲ್ಲಿ ಕಾಡಿನಲ್ಲಿ ವಾಸಿಸುತ್ತಿದ್ದ ಈ ಸಮುದಾಯಕ್ಕೆ ಕಾಡುಗೊಲ್ಲರೆಂದು ಕರೆಯುತ್ತಾರೆ. ಪುರಾಣ ಮತ್ತು ಪ್ರಾಚೀನ ಕಾವ್ಯಗಳಲ್ಲಿ ಇವರ ಉಲ್ಲೇಖ ಕಂಡುಬರುತ್ತದೆ. ಈ ಸಮುದಾಯದ ಮುಖ್ಯ ವೃತ್ತಿ ಪಶುಪಾಲನೆ ಎಂಬುದು ತಿಳಿಯುತ್ತದೆ. ಉತ್ತರ ಭಾರತದಲ್ಲಿ ಇವರನ್ನು 'ಯಾದವ'ರೆಂದು ಗುರುತಿಸುತ್ತಾರೆ. ಮಹಾಭಾರತ ಕಾವ್ಯದಲ್ಲಿ ಶ್ರೀಕೃಷ್ಣನು ಗೋವುಗಳನ್ನು ಕಾಯುವವನಾಗಿ ಗೋಪಾಲಕನೆಂದು ಹೆಸರು ಪಡೆದಿದ್ದಾನೆ. ಇಂದಿಗೂ ಭಾರತದಲ್ಲಿ ವಾಸಿಸುವ ಗೊಲ್ಲ ಸಮುದಾಯವು ಶ್ರೀಕೃಷ್ಣನನ್ನು ತಮ್ಮ ಮೂಲ ಪುರುಷನೆಂದು ಗುರುತಿಸಿಕೊಳ್ಳುತ್ತಾರೆ. ಇವರು ವೈಷ್ಣವ ಮತಾವಲಂಬಿಗಳು. ಪ್ರಾಚೀನ ಕಾಲದಲ್ಲಿ ಗುಡ್ಡಗಾಡು ಪ್ರದೇಶದಲ್ಲಿ ತಮ್ಮ ನೆಲೆಗಳನ್ನು ಕಟ್ಟಿಕೊಂಡು ಪಶುಪಾಲನೆಯನ್ನು ಮಾಡಿ ಜೀವಿಸುತ್ತಿದ್ದ ಈ ಜನರೇ ಗೋವಳಿಗರು, ಗೌಡರು ಮತ್ತು ಇವರು ಅಲ್ಲಲ್ಲಿ ಹಟ್ಟಿಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದರು. ಇವರನ್ನು ಹಟ್ಟಿಕಾರರೆಂದು ಕರೆಯಲಾಗುತ್ತದೆ. ಈ ಗೋವಳಿಗರೇ ಕಂನಾಡಿನ ಮೂಲನಿವಾಸಿಗಳೆಂದು ಶಂಬಾಜೋಶಿಯವರು ತಮ್ಮ ಸಂಸ್ಕೃತಿ ಶೋಧನೆಯಲ್ಲಿ ಗುರುತಿಸುತ್ತಾರೆ. ಹಟ್ಟಿಗಳನ್ನು ಕಟ್ಟಿಕೊಂಡು ವಾಸಿಸುವಲ್ಲಿ ಇವರು ನಾಡನ್ನು ಕಟ್ಟಿಕೊಂಡರು. ಆ ಮೂಲಕ ಕಾಡಿನಿಂದ ನಾಡಿಗೆ ಬಂದರೆಂದು ಶಂಬಾ ವಾದಿಸುತ್ತಾರೆ.

ಚಿತ್ರದುರ್ಗ ಜಿಲ್ಲೆಯ ಗಡಿಗುಂಟ ಗೊಲ್ಲ ಸಮುದಾಯವು ವಾಸಿಸುತ್ತಿದೆ. ಇವರು ಕೃಷ್ಣ, ಆಂಜನೇಯ, ತಿರುಪತಿ ವೆಂಕಟೇಶ್ವರ, ಮೈಲಾರ ಮುಂತಾದ ದೇವರು ಮತ್ತು ಕ್ಷೇತ್ರಗಳನ್ನು ಪೂಜಿಸುತ್ತಿದ್ದು ತತ್ಸಂಬಂಧಿ ಹೆಸರುಗಳನ್ನು ತಮ್ಮ ವ್ಯಕ್ತಿನಾಮಗಳಾಗಿ ಇಟ್ಟುಕೊಂಡಿರುವುದು ತಿಳಿಯುತ್ತದೆ. ಅಲ್ಲದೆ ಪ್ರಾದೇಶಿಕ ಪ್ರಸಿದ್ಧಿಯನ್ನು ಪಡೆದ ಎಲ್ಲ ಸಮುದಾಯದ ದೈವಗಳ ಪ್ರಭಾವವನ್ನು ಇವರ ವ್ಯಕ್ತಿನಾಮಗಳಲ್ಲಿ ಗುರುತಿಸಬಹುದು. ಗೊಲ್ಲ ಸಮುದಾಯದ ಸ್ತ್ರೀಯರ ಹೆಸರುಗಳು ಹೆಚ್ಚಾಗಿ ಮಹಾಭಾರತದ ರುಕ್ಮಿಣಿ, ಸತ್ಯಭಾಮ, ಯಶೋಧ ಮುಂತಾದ ಹೆಸರುಗಳಲ್ಲದೆ ಆಯಾ ಪ್ರಾದೇಶಿಕ ಸಮುದಾಯಗಳ ಹೆಸರುಗಳಂತೆ ಇವರ ಹೆಸರುಗಳು ಕಂಡುಬರುತ್ತವೆ. ಇತ್ತೀಚಿಗೆ 'ಯಾದವ' ಎಂಬ ವಾರ್ಗಿಕವು ಇವರ ವ್ಯಕ್ತಿನಾಮಗಳಲ್ಲಿ ನಿರ್ದೇಶನಗೊಳ್ಳುತ್ತಿರುವುದು ಕಂಡುಬರುತ್ತದೆ. ಇದು ಆರ್ಥಿಕ ಮತ್ತು ರಾಜಕೀಯ ಕಾರಣಗಳಿಂದಾಗಿ ಪ್ರಭಾವ ಪಡೆದಿರುವುದೆಂಬುದನ್ನು ಗುರುತಿಸಬಹುದು. ಕನ್ನಡ ನಾಡಿನ ಮೂಲನಿವಾಸಿಗಳೆಂದು ಇವರನ್ನು ಗುರುತಿಸುವ ಶಂಬಾ ಇವರ ಹೆಸರುಗಳ ಬಗೆಗೆ ವಿವರಿಸುವುದಿಲ್ಲ. ಬದಲಾಗಿ ಗೋವಳಿಗರು, ಗೊಲ್ಲರು, ಪಶುಪಾಲಕರು, ಗೋಪಾಲಕರು, ಹಟ್ಟಿಕಾರರು, ಗೌಡರು ಎಂದು ವೃತ್ತಿಯ ಮೇಲೆ ಗುರುತಿಸುತ್ತಾರೆ. ಅದೇನೇಯಿದ್ದರೂ ಇಂದು ಗೊಲ್ಲ ಸಮುದಾಯವು ಬದಲಾಗುತ್ತಿರುವ ಸಮಾಜದಲ್ಲಿ ತಮ್ಮನ್ನು ಮುಖಾಮುಖಿಯಾಗಿಸಿಕೊಂಡಿದೆ. ಒಟ್ಟು, ಈ ಹಿನ್ನೆಲೆಯಲ್ಲಿ ಚಿತ್ರದುರ್ಗ ಪರಿಸರದ ಗೊಲ್ಲ ಸಮುದಾಯದಲ್ಲಿ ಕಂಡುಬರುವ ವ್ಯಕ್ತಿನಾಮಗಳನ್ನು ಈ ರೀತಿ ವಿಶ್ಲೇಷಿಸಿಕೊಳ್ಳಬಹುದು.

'ಗೊಲ್ಲ' ಸಮುದಾಯದಲ್ಲಿ ಮೂರು ತಲೆಮಾರುಗಳಲ್ಲಿ ಬಳಕೆಯಾಗಿರುವ ಕೆಲವು ವ್ಯಕ್ತಿನಾಮ ಮಾದರಿಗಳನ್ನು ಇಲ್ಲಿ ಗಮನಿಸಬಹುದು.

ಪುರುಷರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
|---|---|---|
| ಮುರಿಡಪ್ಪ | ತಿಮ್ಮಯ್ಯ | ನಾಗರಾಜಯಾದವ್ |
| ಸಿರಿಯಣ್ಣ | ಬಗರಯ್ಯ | ಕೀರ್ತಿಯಾದವ್ |
| ಕೃಷ್ಣಪ್ಪ | ನಿಂಗಣ್ಣ | ರಾಮಕೃಷ್ಣಯಾದವ್ |
| ಚಿತ್ರಪ್ಪ | ಬಸವರಾಜ | ಸುದರ್ಶನ |
| ಚಿಕ್ಕಣ್ಣ | ಗೋವಿಂದರಾಜ | ಪ್ರಕಾಶ್ |
| ವಡಕಪ್ಪ | ಗೋವರ್ಧನ್ | ರವಿ |
| ಕರಿಯಪ್ಪ | ಕೃಷ್ಣಮೂರ್ತಿ | ಕೇಶವಮೂರ್ತಿ |
| ತಿಪ್ಪಯ್ಯ | ಆನಂದಪ್ಪ | ವೆಂಕಟೇಶ |
| ಮೈಲಾರಪ್ಪ | ಆಂಜಿನಪ್ಪ | ಜಗದೀಶ |
| ಮಲ್ಲಯ್ಯ | ಮೂಗಪ್ಪ | ಮಾರುತಿ |

ಸ್ತ್ರೀಯರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
|---|---|---|
| ಕದರಮ್ಮ | ತಾಯಮ್ಮ | ಲಲಿತಮ್ಮ |
| ಚಿತ್ರಕ್ಕ | ಕರಿಯಮ್ಮ | ಸುವರ್ಣಮ್ಮ |
| ತಿಪ್ಪಮ್ಮ | ಯಮುನಮ್ಮ | ರತ್ನಮ್ಮ |
| ಯಲ್ಲಮ್ಮ | ಬಡಮ್ಮ | ಮಂಜುಳ |
| ಚನ್ನಮ್ಮ | ಕೆಂಚಮ್ಮ | ಯಶೋಧ |
| ಭೀಮಕ್ಕ | ತಿಮ್ಮಕ್ಕ | ಗಾಯಿತ್ರಿ |
| ಪೆನ್ನಕ್ಕ | ನುಂಕಮ್ಮ | ಮಂಗಳ |
| ಮಾರಮ್ಮ | ರಾಜೇಶ್ವರಿ | ಮಹಾದೇವಿ |
| ಹನುಮಕ್ಕ | ಕಮಲಮ್ಮ | ವರಲಕ್ಷ್ಮಿ |
| ಲಸಮಕ್ಕ | ಸಿದ್ದಮ್ಮ | ಭಾಗ್ಯ |

ಮೇಲಿನ ವರ್ಗೀಕರಣವನ್ನು ಗಮನಿಸಿದರೆ ಪುರುಷ ಮತ್ತು ಸ್ತ್ರೀಯರಲ್ಲಿ ಒಂದನೆ ತಲೆಮಾರಿನಲ್ಲಿ ದೈವಮೂಲದ ವ್ಯಕ್ತಿನಾಮಗಳು ಅಧಿಕ ಪ್ರಮಾಣದಲ್ಲಿದ್ದು, ಹೆಚ್ಚಾಗಿ ಪ್ರಾದೇಶಿಕ ದೈವಗಳ ಪ್ರಭಾವದಿಂದ ಬಂದಿವೆ. ಗೊಲ್ಲ ಸಮುದಾಯ ವಿಷ್ಣುವಿನ ಮೂಲದವರು, ವಿಷ್ಣುವಿನ ಆರಾಧಕರೂ ಆಗಿದ್ದಾರೆ. ವಿಷ್ಣು ಸಂಬಂಧಿತ ಹೆಸರುಗಳನ್ನು ಈ ಸಮುದಾಯ ನಿರ್ದೇಶಿಸಿಕೊಂಡರೂ ಭೌಗೋಳಿಕವಾಗಿ ಗೊಲ್ಲ ಸಮುದಾಯ ಭಿನ್ನ ನೆಲೆಯಲ್ಲಿ ಭಾರತದಾದ್ಯಂತ ವಾಸಿಸುತ್ತಿದೆ. ಆಯಾ ಪ್ರಾದೇಶಿಕ ಅಂಶಗಳ ಪ್ರಭಾವದಿಂದ ತಮ್ಮದೇ

ಆದ ವ್ಯಕ್ತಿನಾಮಗಳನ್ನು ಹೊಂದಿದ್ದಾರೆ. ಅಂತೆಯೇ ಪ್ರಸ್ತುತ ಚಿತ್ರದುರ್ಗ ಪರಿಸರದ ಗೊಲ್ಲ ಸಮುದಾಯದ ವ್ಯಕ್ತಿನಾಮಗಳಲ್ಲೂ ಈ ವೈಶಿಷ್ಟ್ಯವನ್ನು ಗುರುತಿಸಬಹುದು. ಉದಾಹರಣೆಗೆ

| ಪುರುಷರಲ್ಲಿ | ಸ್ತ್ರೀಯರಲ್ಲಿ |
| --- | --- |
| ಚಿತ್ರಲಿಂಗ | ಚಿತ್ರಮ್ಮ |
| ಸಿರಿಯಣ್ಣ | ಮಲ್ಲಮ್ಮ |
| ಚಿತ್ರಪ್ಪ | ಕರಿಯಮ್ಮ |
| ಚಿಕ್ಕಣ್ಣ | |
| ಮೈಲಾರಪ್ಪ | |
| ಕರಿಯಪ್ಪ - ಇತ್ಯಾದಿ | |

ಮೇಲಿನ ಈ ಹೆಸರುಗಳು ಚಿತ್ರದುರ್ಗ ಪರಿಸರದ ಗೊಲ್ಲ ಸಮುದಾಯ ಆರಾಧನೆ ಮಾಡುವ ದೈವಗಳ ಪ್ರಭಾವದಿಂದ ಬಂದಿವೆ. ಒಂದೇ ದೈವಮೂಲದ ಹೆಸರನ್ನು ಪುರುಷ ಮತ್ತು ಸ್ತ್ರೀಯರಿಬ್ಬರೂ ಇಟ್ಟುಕೊಂಡಿರುವುದು ಮೇಲಿನ ಉದಾಹರಣೆಗಳಿಂದ ತಿಳಿದುಬರುತ್ತದೆ. ಮೊದಲ ತಲೆಮಾರಿನ ವ್ಯಕ್ತಿನಾಮಗಳಲ್ಲಿ ಈ ಮಾದರಿಗಳ ಬಳಕೆಯನ್ನು ಗಮನಿಸಬಹುದು. ಅಲ್ಲದೆ ಪ್ರಾದೇಶಿಕ ಇತರ ಪ್ರಸಿದ್ಧ ದೈವಗಳ ಪ್ರಭಾವವನ್ನು ಕಾಣಬಹುದು.

ಎರಡನೆ ತಲೆಮಾರಿನ ವ್ಯಕ್ತಿನಾಮಗಳು ಮೊದಲ ತಲೆಮಾರಿನ ವ್ಯಕ್ತಿನಾಮಗಳಿಗಿಂತ ಕೊಂಚ ಭಿನ್ನವಾಗಿವೆ. ವಂಶಪಾರಂಪರ್ಯವಾಗಿ ಬಂದ ಹೆಸರುಗಳಿಗೆ ಬದಲಾಗಿ, ಮುಖ್ಯ ಸಾಂಸ್ಕೃತಿಕ ಧಾರೆಗಳ ಪ್ರಭಾವಕ್ಕೆ ಒಳಗಾಗಿರುವುದು ತಿಳಿದುಬರುತ್ತದೆ. ಪುರುಷ ವ್ಯಕ್ತಿನಾಮಗಳಲ್ಲಿ ಮಾತ್ರ ಈ ಸಾಧ್ಯತೆಗಳು ಆಗಿದ್ದು, ಸ್ತ್ರೀಯರಲ್ಲಿ ಮೊದಲ ತಲೆಮಾರಿನ ಪ್ರಕ್ರಿಯೆಯೇ ಮುಂದುವರೆದಿದ್ದು, ಯಾವುದೇ ಪ್ರಭಾವ ಕಾಣಬರುವುದಿಲ್ಲ. ಮೂರನೆ ತಲೆಮಾರಿನವರಲ್ಲಿ ಮೊದಲೆರಡು ತಲೆಮಾರುಗಳ ಹೆಸರುಗಳಿಗಿಂತ ತೀರ ಭಿನ್ನವಾಗಿವೆ. ಪರಂಪರಾಗತವಾಗಿ ಬಂದ ದೈವಮೂಲದ ವ್ಯಕ್ತಿನಾಮಗಳು, ಮೂರನೆ ತಲೆಮಾರಿನಲ್ಲಿ ಮರೆಯಾಗಿದ್ದು, ಸಾಮಾಜಿಕವಾಗಿ ಮೇಲ್ಜಾತಿಯವರ ಹೆಸರುಗಳನ್ನು ಅನುಕರಣೆ ಮಾಡಿರುವುದು ಗೋಚರಿಸುತ್ತದೆ. ಆದರೂ ಆ ಹೆಸರುಗಳು ಮೂಲತಃದೈವಮೂಲದವುಗಳೇ ಆಗಿವೆ ಎಂಬುದು ಗಮನಾರ್ಹ. ಮತ್ತು ಕೊಂಚಮಟ್ಟಿಗೆ ಆಧುನಿಕ ಭಾವನಾಮಗಳೂ ಈ ಸಮುದಾಯದ ವ್ಯಕ್ತಿನಾಮಗಳಲ್ಲಿ ಎಡೆಪಡೆಯುತ್ತಿವೆ. ಗೊಲ್ಲ ಸಮುದಾಯದ ವ್ಯಕ್ತಿನಾಮಗಳು ತಲೆಮಾರಿನಿಂದ ತಲೆಮಾರಿಗೆ ಬದಲಾವಣೆ ಪ್ರಕ್ರಿಯೆಗೆ ಒಳಗೊಂಡಿದ್ದು, ಸಂಸ್ಕೃತಿನಿಷ್ಠ ಮಾದರಿಗಳಿಗಿಂತ, ಹೊಸ ಪ್ರಕ್ರಿಯೆಯನ್ನು ರೂಪಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡು ವ್ಯಕ್ತಿನಾಮಗಳಲ್ಲಿ ವಿವಿಧ ಆಕರಗಳ ಪ್ರೇರಣೆ-ಪ್ರಭಾವಗಳನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗುವುದು.

ಗೊಲ್ಲ ಸಮುದಾಯದಲ್ಲಿ ಸಂಬಂಧವಾಚಿ ಮತ್ತು ವೃತ್ತಿ/ಜಾತಿವಾಚಿ ವಾರ್ಗಿಕಗಳು ಬಳಕೆಯಾಗಿವೆ. ಪುರುಷರಲ್ಲಿ ಸಂಬಂಧವಾಚಿ ಮತ್ತು ವೃತ್ತಿ/ಜಾತಿವಾಚಿ ವಾರ್ಗಿಕಗಳು ಬಳಕೆಯಾದರೆ, ಸ್ತ್ರೀಯರಲ್ಲಿ ಸಂಬಂಧವಾಚಿ ವಾರ್ಗಿಕಗಳು ಮಾತ್ರ ಕಂಡುಬರುತ್ತವೆ. ಪುರುಷರ ಆರಂಭದ ಮೊದಲೆರಡು ತಲೆಮಾರುಗಳಲ್ಲಿ ಸಂಬಂಧವಾಚಿ ವಾರ್ಗಿಕಗಳು ಮಾತ್ರ ಬಳಕೆಯಲ್ಲಿದ್ದು, ಮೂರನೆ ತಲೆಮಾರಿನಲ್ಲಿ 'ಯಾದವ್' ಎಂಬುದು ವಾರ್ಗಿಕವಾಗಿ ಬಳಕೆಯಾಗಿದೆ. ಆಧುನಿಕತೆಯ ಪ್ರಭಾವದಿಂದ ಈ ಸಮುದಾಯದ ವ್ಯಕ್ತಿನಾಮ ನಿರ್ದಿಷ್ಟಗಳಲ್ಲಿ ಬದಲಾವಣೆಗಳಾಗಿರುವಂತೆ, ವಾರ್ಗಿಕಗಳ ಬಳಕೆಯಲ್ಲಿಯೂ ಕೂಡ ತಲೆಮಾರಿನಿಂದ ತಲೆಮಾರಿಗೆ ಬದಲಾವಣೆಗಳು ಸಂಭವಿಸಿವೆ. ಪುರುಷ ವ್ಯಕ್ತಿನಾಮಗಳಲ್ಲಿ ಈಗಲೂ ಬಹಳ ತೆಳುವಾಗಿ ವಾರ್ಗಿಕಗಳ ಬಳಕೆ ಉಳಿದುಕೊಂಡಿದ್ದರೂ, ಸ್ತ್ರೀ ವ್ಯಕ್ತಿನಾಮಗಳಲ್ಲಿ ವಾರ್ಗಿಕಗಳ ಬಳಕೆ ಸಂಪೂರ್ಣವಾಗಿ ಮರೆಯಾಗಿರುವುದು ತಿಳಿದುಬರುತ್ತದೆ. ಪ್ರಸ್ತುತ ಅಧ್ಯಯನದ ವಿಶ್ಲೇಷಣೆಗೆ ಎತ್ತಿಕೊಂಡ ವ್ಯಕ್ತಿನಾಮಗಳಲ್ಲಿ ವಾರ್ಗಿಕಗಳು ಯಾವ ತಲೆಮಾರಿನ ಹೆಸರುಗಳಲ್ಲಿ ಎಷ್ಟು ಪ್ರಮಾಣದಲ್ಲಿ ಬಳಕೆಯಾಗಿವೆ ಎಂಬುದನ್ನು ಮುಂದಿನ ಭಾಗದಲ್ಲಿ ವಿಶ್ಲೇಷಿಸಲಾಗುವುದು. ಗೊಲ್ಲ ಸಮುದಾಯಕ್ಕೆ ಸಂಬಂಧಪಟ್ಟ '೩೪೨' ವ್ಯಕ್ತಿನಾಮಗಳನ್ನು ಪ್ರಸ್ತುತ ಅಧ್ಯಯನದ ವಿಶ್ಲೇಷಣೆಗೆ ಬಳಸಿಕೊಂಡಿದೆ. ಅವುಗಳ ವಿಶ್ಲೇಷಣೆಯನ್ನು ಇಲ್ಲಿ ಮಾಡಲಾಗಿದೆ.

## ಗೊಲ್ಲ ಸಮುದಾಯದ ವ್ಯಕ್ತಿನಾಮಗಳ ಮಾದರಿ ಸಮೀಕ್ಷೆ ಕೋಷ್ಟಕ ಪಟ್ಟಿ - ೬

| ತಲೆ ಮಾರು | ಧಾರ್ಮಿಕ ಪ್ರಭಾವ ಶೇಕಡವಾರು (%) | | | ಸಮಕಾಲೀನ ಪ್ರಸಿದ್ಧ ವ್ಯಕ್ತಿಗಳ ಪ್ರಭಾವ ಶೇಕಡವಾರು (%) | | | ಆಧುನೀಕರಣದ ಪ್ರಭಾವ ಶೇಕಡವಾರು (%) | | | ಚರಿತ್ರೆ ಪ್ರಭಾವ ಶೇಕಡವಾರು (%) | | | ಇತರ ಪ್ರಭಾವ ಶೇಕಡವಾರು (%) | | | ಒಟ್ಟು ಶೇಕಡವಾರು (%) | | |
|---|---|---|---|---|---|---|---|---|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೩ | ೮೦ | ೫೦ | ೭೧ | - | - | - | ೧೧ | ೫೦ | ೨೨ | - | - | - | ೯ | - | ೬ | ೭೧ | ೨೯ | ೨೩ |
| ೨ | ೮೬ | ೭೧ | ೮೧ | - | - | - | ೩ | ೧೫ | ೯ | - | - | - | ೧೦ | ೧೨ | ೧೦ | ೫೦ | ೫೦ | ೪೬ |
| ೧ | ೯೦ | ೧೦೦ | ೯೨ | - | - | - | - | - | - | - | - | - | ೧೨ | - | ೬ | ೫೩ | ೪೭ | ೩೨ |
| ಒಟ್ಟು | ೮೬ | ೭೮ | ೮೨ | - | - | - | ೪ | ೧೫ | ೦೯ | - | - | - | ೧೦ | ೬ | ೮ | ೫೬ | ೪೪ | - |

ಕೋಷ್ಟಕ ೧.೧೦

ಇತರ ಸಮುದಾಯಗಳಂತೆ ಗೊಲ್ಲ ಸಮುದಾಯದಲ್ಲಿಯೂ ದೈವಸಂಬಂಧಿ ವ್ಯಕ್ತಿನಾಮಗಳೇ ಹೆಚ್ಚಾಗಿವೆ. ಕ್ರಮೇಣವಾಗಿ ಈ ಪ್ರಕ್ರಿಯೆ ಕಡಿಮೆಯಾಗುತ್ತಾ ಬಂದಿದೆ. ದೈವಸಂಬಂಧಿ ಹೆಸರುಗಳು ಪುರುಷರಲ್ಲಿ ಈಗಲೂ ಅಧಿಕ ಪ್ರಮಾಣದಲ್ಲಿ ಮುಂದುವರೆದಿದ್ದರೆ, ಸ್ತ್ರೀಯರಲ್ಲಿ ತೀವ್ರವಾಗಿ ಕಡಿಮೆಯಾಗಿವೆ. ಗೊಲ್ಲರು ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದ ಸಮುದಾಯವಾಗಿದ್ದು, ಪಾರಂಪರಿಕ ವ್ಯಕ್ತಿನಾಮಗಳು, ಈಗಲೂ ಬಳಕೆಯಲ್ಲಿವೆ. ಇತ್ತೀಚಿನವರು ಆಧುನಿಕ ಹೆಸರುಗಳೆಂದು ಭಾವಿಸಲಾಗಿರುವ ಹೆಸರುಗಳನ್ನು ನಿರ್ದೇಶಿಸಿಕೊಂಡಿರುವುದು ಕಾಣಬರುತ್ತದೆ. ಇದೂ ಅಲ್ಲದೆ, ಬೇರೆ ಪ್ರೇರಣೆಗಳೂ ಈ ಸಮುದಾಯದ ಮೇಲೆ ಆಗಿರುವುದು ಕಾಣಬರುತ್ತದೆ.

### ವಾರ್ಗಿಕಗಳು

ಗೊಲ್ಲ ಸಮುದಾಯದ ವ್ಯಕ್ತಿನಾಮಗಳಲ್ಲಿ ಬಳಕೆಯಾಗಿರುವ ವಾರ್ಗಿಕಗಳನ್ನು ಹೀಗೆ ಪಟ್ಟಿ ಮಾಡಲಾಗಿದೆ.

ಪುರುಷರಲ್ಲಿ

| ಸಂಬಂಧವಾಚಿ ವಾರ್ಗಿಕ | ವೃತ್ತಿ/ಜಾತಿವಾಚಿ ವಾರ್ಗಿಕ |
|---|---|
| ಅಪ್ಪ | ಯಾದವ್ |
| ಅಯ್ಯ | ಗೌಡ |
| ಅಣ್ಣ | |

ಸ್ತ್ರೀಯರಲ್ಲಿ

| ಸಂಬಂಧವಾಚಿ ವಾರ್ಗಿಕ |
|---|
| ಅಮ್ಮ |
| ಅಕ್ಕ |

ಮೊದಲು ವೃತ್ತಿ/ಜಾತಿವಾಚಿ ವಾರ್ಗಿಕಗಳ ಬಗೆಗೆ ಚರ್ಚಿಸಬಹುದು. ಒಂದೊಂದು ಸಮುದಾಯದಲ್ಲಿ, ಆಯಾ ಸಮುದಾಯಕ್ಕೆ ನಿರ್ದಿಷ್ಟವಾದ ವಾರ್ಗಿಕಗಳು ಬಳಕೆಯಾಗುವಂತೆ, ಗೊಲ್ಲ ಸಮುದಾಯದಲ್ಲಿ 'ಯಾದವ' ಮತ್ತು 'ಗೌಡ' ಎಂಬ ವಾರ್ಗಿಕಗಳು ಬಳಕೆಯಾಗಿವೆ. ಆ ಕುರಿತು ಇಲ್ಲಿ ಚರ್ಚಿಸಲಾಗುವುದು.

### ಯಾದವ/ವ್

'ಯಾದವ' ಎಂಬುದು ಒಂದು ಜಾತಿವಾಚಿ ಪದವಾಗಿದ್ದು, ಯದುಕುಲಕ್ಕೆ ಸೇರಿದವನು, 'ಯಾದವ ವಂಶಕ್ಕೆ ಸೇರಿದವನು' ಎಂಬ ಅರ್ಥವನ್ನು ನೀಡುತ್ತದೆ. 'ಯಾದವ' ಎಂಬುದು ಗೊಲ್ಲ ಸಮುದಾಯದ ಪುರುಷ ವ್ಯಕ್ತಿನಾಮಗಳಲ್ಲಿ ಜಾತಿವಾಚಿಯಾಗಿ ಬಳಕೆಯಾಗುತ್ತದೆ. ಪ್ರಾರಂಭದಲ್ಲಿ ಇದರ ಬಳಕೆ ಕಾಣುವುದಿಲ್ಲ.

ಇತ್ತೀಚಿನ ಕೆಲವು ದಶಕಗಳಿಂದ ಮಾತ್ರ 'ಯಾದವ' ಎಂಬುದು ವ್ಯಕ್ತಿನಾಮಗಳಲ್ಲಿ ವಾರ್ಗಿಕವಾಗಿ ಬಳಕೆಯಾಗಿದೆ.

ಬಿಹಾರ ರಾಜ್ಯದ ರಾಜಕೀಯ ಕ್ಷೇತ್ರದಲ್ಲಿ ಗೊಲ್ಲ ಅಥವಾ ಯಾದವ ಸಮುದಾಯ ತುಂಬಾ ಪ್ರಬಲವಾಗಿ ಬೆಳೆಯಿತು. ರಾಜಕೀಯ ರಂಗದಲ್ಲಿ ಉನ್ನತ ಸ್ಥಾನ ಪಡೆದ ಈ ಸಮುದಾಯದ ಮುಖಂಡರಾದ 'ಲಾಲೂಪ್ರಸಾದ್ ಯಾದವ್' ಮತ್ತು 'ಮುಲಾಯಂ ಸಿಂಗ್ ಯಾದವ್' ಅವರು, ತಮ್ಮ ಜಾತಿಯನ್ನು ಸಂಘಟನೆಗೊಳಿಸುವ ಮತ್ತು ಅನನ್ಯಗೊಳಿಸುವ ಉದ್ದೇಶದಿಂದ, ಗೌರವ, ಅಭಿಮಾನ, ಪ್ರತಿಷ್ಠೆಗಳಿಂದ ತಮ್ಮ ಜಾತಿಯನ್ನು ತಮ್ಮ ಹೆಸರಿನ ಮುಂದೆ ನಮೂದನೆ ಮಾಡಿಕೊಂಡರು. ಇದೊಂದು ರಾಜಕೀಯ ಸಂಗತಿಯಾಗಿ ಹೊರಹೊಮ್ಮಿ, ಬೇರೆ ಬೇರೆ ರಾಜ್ಯಗಳಲ್ಲಿ ನೆಲೆಸಿರುವ ಈ ಸಮುದಾಯದವರ ಮೇಲೆ ಪ್ರಭಾವ ಬೀರಿದೆ. ಚಿತ್ರದುರ್ಗ ಪರಿಸರದ ಗೊಲ್ಲ ಸಮುದಾಯದ ಮೇಲೂ ಇದರ ಪ್ರಭಾವವನ್ನು ಕಾಣಬಹುದು. ೧೯೭೦ರ ದಶಕದಲ್ಲಿ ಚಿತ್ರದುರ್ಗದಲ್ಲಿ ಗೊಲ್ಲ ಸಮುದಾಯದ ಒಂದು ಸಮಾವೇಶ ಜರುಗಿತು. ಈ ಸಮಾವೇಶದಲ್ಲಿ ಜಾತಿಯ ಐಡೆಂಟಿಟಿಯ ಮೂಲಕ ರಾಜ್ಯ, ರಾಷ್ಟ್ರಮಟ್ಟದಲ್ಲಿ ಸಂಘಟನೆಗಳಾಗಿ ಒಂದಾಗುವ ಪ್ರಯತ್ನಗಳು ನಡೆದವು. ಜಾತಿಯನ್ನು ಅನನ್ಯಗೊಳಿಸುವ (Identity) ಸಲುವಾಗಿ, ಹೆಸರಿನ ಮುಂದೆ 'ಯಾದವ' ಎಂದು ಸೇರಿಸಬೇಕೆಂಬುದು ಈ ಸಮಾವೇಶದ ಮುಖ್ಯ ಅಜೆಂಡಾಗಳಲ್ಲಿ ಒಂದಾಗಿತ್ತು. ಇದರ ಪ್ರಭಾವ ಪ್ರೇರಣೆಗೆ ಒಳಗಾದ ಕೆಲವರು ತಮ್ಮ ಹೆಸರಿನ ಮುಂದೆ 'ಯಾದವ್' ಎಂದು ಸೇರಿಸಿಕೊಂಡಿರುವುದು ಕಂಡುಬರುತ್ತದೆ. ನಿದರ್ಶನಕ್ಕೆ ಕೆಲವು ಹೆಸರುಗಳನ್ನು ಗಮನಿಸಬಹುದು.

| | |
|---|---|
| ಶಿವೂ ಯಾದವ್ | ರಾಮಕೃಷ್ಣ ಯಾದವ್ |
| ಮೈಲಾರಪ್ಪ ಯಾದವ್ | ನಾಗೂ ಯಾದವ್ |
| ಮೋಹನ್ ಯಾದವ್ | ನಿಂಗಪ್ಪ ಯಾದವ್ |
| ಮುರುಳಿ ಯಾದವ್ | |

'ಯಾದವ್' ಎಂಬುದು ಹೆಚ್ಚಾಗಿ ಇತ್ತೀಚಿನವರ ವ್ಯಕ್ತಿನಾಮಗಳಲ್ಲಿ ಕಂಡುಬರುತ್ತದೆಯಾದರೂ ವಿಶೇಷವಾಗಿ ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಮುಂದುವರೆದ ವರ್ಗದ ಕೆಲವರಲ್ಲಿ ಮಾತ್ರ ಬಳಕೆಯಾಗಿದ್ದು, ನಗರ ಪರಿಸರಕ್ಕಿಂತ ಗ್ರಾಮೀಣ ಪರಿಸರದಲ್ಲಿ ಇದರ ಬಳಕೆ ಕಡಿಮೆಯೆಂದೇ ಹೇಳಬಹುದು.

## ಗೌಡ

'ಗೌಡ' ಎಂಬುದು ಗೊಲ್ಲ ಸಮುದಾಯದಲ್ಲಿ ಬಳಕೆಯಾಗಿದೆ. ಇದು ಇಲ್ಲಿ ಜಾತಿವಾಚಿಯಾಗಿ ಬಳಕೆಯಾಗಿದೆ. ವೃತ್ತಿವಾಚಿ ಅರ್ಥದಲ್ಲಿ ಬಳಕೆಯಾಗುತ್ತದೆ. ಈ ಮೂಲಕ 'ಗೊಲ್ಲರು' ಒಂದು ಕಾಲಕ್ಕೆ ಗ್ರಾಮದ ಅಧಿಕಾರಿಗಳು, ಮುಖಂಡರು ಆಗಿದ್ದರೆಂಬುದು ಇದರಿಂದ ವೇದ್ಯವಾಗುತ್ತದೆ.

ಮೇಲೆ ವಿಶ್ಲೇಷಿಸಿದ ವಾರ್ಗಿಕಗಳು ತಲೆಮಾರುಗಳಲ್ಲಿ ಹೇಗೆ ಬಳಕೆಯಾಗಿವೆ ಎಂಬುದನ್ನು ಇಲ್ಲಿ ಗಮನಿಸಬಹುದು.

| ಪುರುಷ ವಾರ್ಗಿಕ<br>ಸಂಬಂಧವಾಚಿ ವಾರ್ಗಿಕ | | | | | ವೃತ್ತಿ/ಜಾತಿವಾಚಿ ವಾರ್ಗಿಕ | | ಸ್ತ್ರೀ ವಾರ್ಗಿಕ | |
|---|---|---|---|---|---|---|---|---|
| ತಲೆಮಾರು | ಅಪ್ಪ | ಅಣ್ಣ | ಅಯ್ಯ | ಅಜ್ಜ | ಯಾದವ್ | ಗೌಡ | ಅಮ್ಮ | ಅಕ್ಕ |
| ೩ | ೯ | ೧೧ | ೪ | - | ೮ | - | ೫ | ೨೬ |
| ೨ | ೪೬ | ೨೯ | ೬ | ೧ | ೩ | ೧ | ೧೯ | ೬೦ |
| ೧ | ೫೬ | ೧೪ | ೨೩ | ೨ | - | ೨ | ೩೫ | ೬೮ |
| ಒಟ್ಟು | ೩೯ | ೧೯ | ೧೧ | ೧ | ೩.೫ | ೧ | ೨೩ | ೬೦ |
| ಸರಾಸರಿ ಶೇಕಡ | ೬೦ | | | | ೫ | | ೮೨ | |

ಕೋಷ್ಟಕ ೧.೧೧

ಗೊಲ್ಲ ಸಮುದಾಯದಲ್ಲಿ ಪುರುಷರಲ್ಲಿ ಸಂಬಂಧವಾಚಿ ಮತ್ತು ವೃತ್ತಿ/ಜಾತಿವಾಚಿ ವಾರ್ಗಿಕಗಳು ಬಳಕೆಯಾದರೆ, ಸ್ತ್ರೀಯರಲ್ಲಿ ಸಂಬಂಧವಾಚಿ ವಾರ್ಗಿಕಗಳು ಮಾತ್ರ ಬಳಕೆಯಾಗಿವೆ. ಸಂಬಂಧವಾಚಿ ವಾರ್ಗಿಕಗಳು ಹಿಂದಿನವರ ವ್ಯಕ್ತಿನಾಮಗಳಲ್ಲಿ ಹೆಚ್ಚಾಗಿ ಬಳಕೆಯಲ್ಲಿದ್ದು, ಕಾಲಾಂತರದಲ್ಲಿ ಕಡಿಮೆಯಾಗುತ್ತಾ ಬಂದಿದ್ದು ಈಗಲೂ ಕೊಂಚಮಟ್ಟಿಗೆ ಬಳಕೆಯಲ್ಲಿರುವುದು ಮೇಲಿನ ಕೋಷ್ಟಕದಿಂದ ಸ್ಪಷ್ಟವಾಗುತ್ತದೆ. 'ಗೌಡ' ಎಂಬುದು ಹಳೆಯ ತಲೆಮಾರಿನವರಲ್ಲಿ ಬಳಕೆಯಾಗಿದ್ದು ಇತ್ತೀಚಿನವರಲ್ಲಿ ಬಳಕೆಯಾಗುತ್ತಿಲ್ಲ. 'ಯಾದವ್' ಎಂಬುದು ಹಳೆಯ ತಲೆಮಾರಿನವರ ವ್ಯಕ್ತಿನಾಮಗಳಲ್ಲಿ ಕಾಣಬರದೆ, ಇತ್ತೀಚಿನವರಲ್ಲಷ್ಟೇ ಬಳಕೆಯಾಗಿದೆ.

### ೩.೫.೬ ವೈಶ್ಯ

ಚಿತ್ರದುರ್ಗ ಪರಿಸರದಲ್ಲಿ 'ವೈಶ್ಯ'ರು ತುಂಬಾ ಕಡಿಮೆ ಪ್ರಮಾಣದಲ್ಲಿ ನೆಲೆಸಿದ್ದಾರೆ. ಗ್ರಾಮೀಣ ಪರಿಸರದಲ್ಲಿ ಕೆಲವೇ ಕೆಲವು ನೆಲೆಗಳು ಮಾತ್ರ ಇದ್ದು, ನಗರ ಪ್ರದೇಶಗಳಲ್ಲಿ ಈ ಸಮುದಾಯದ ವಾಸ್ತವ್ಯ ಜಾಸ್ತಿ ಇದೆ. 'ವ್ಯಾಪಾರ' ಈ ಜನಾಂಗದ ಮುಖ್ಯ ಕಸಬು. ನಗರಗಳಲ್ಲಿ ಈ ಜನಾಂಗವನ್ನು 'ವೈಶ್ಯ'ರು ಎಂದು ಕರೆದರೆ, ಗ್ರಾಮೀಣ ಪರಿಸರದಲ್ಲಿ 'ಶೆಟ್ಟಿ/ಶೆಟ್ರು', 'ಕೋಮಟಿ' ಎಂದು ಕರೆಯಲಾಗುತ್ತದೆ.

ವೈಶ್ಯರು ವಿಷ್ಣು ಆರಾಧಕರಾಗಿದ್ದು, ಆ ಮೂಲದ ಹೆಸರುಗಳನ್ನೇ ವ್ಯಕ್ತಿನಾಮಗಳನ್ನಾಗಿ ನಿರ್ದೇಶಿಸಿಕೊಳ್ಳುವುದು ತಿಳಿಯುತ್ತದೆ. ಪ್ರಸ್ತುತ ಸಂದರ್ಭದಲ್ಲಿ, ಕ್ಷೇತ್ರ ಮಾಹಿತಿಯ ಪ್ರಕಾರ ವೈಶ್ಯ ಸಮುದಾಯದವರ ಹೆಸರುಗಳನ್ನು ಹೀಗೆ ತೋರಿಸಬಹುದು.

ಮೂರು ತಲೆಮಾರುಗಳಲ್ಲಿ ಬಳಕೆಯಾಗಿರುವ ಕೆಲವು ಹೆಸರುಗಳನ್ನು ಉದಾಹರಣೆಗೆ ನೋಡಬಹುದು.

ಪುರುಷರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
|---|---|---|
| ಶೇಷಯ್ಯಶೆಟ್ಟಿ | ಲಕ್ಷ್ಮಣಶೆಟ್ಟಿ | ಪವನ್‌ಶೆಟ್ಟಿ |
| ತಿಮ್ಮಯ್ಯಶೆಟ್ಟಿ | ರಾಮಯ್ಯಶೆಟ್ಟಿ | ಕಲ್ಯಾಣಕುಮಾರ್ |
| ವೆಂಕಟಶೆಟ್ಟಿ | ತಿರುಮಲ | ಸುದರ್ಶನ್ |
| ಕೃಷ್ಣಪ್ಪ | ಮುರುಳೀಧರ | ಸಂತೋಷ |
| ಶ್ರೀನಿವಾಸ ಶ್ರೇಷ್ಠಿ | ಭೀಮರಾಯ ಶ್ರೇಷ್ಠಿ | ಆದರ್ಶ |
| ನಾರಾಯಣ ಶ್ರೇಷ್ಠಿ | ವಾಸುದೇವ ಶ್ರೇಷ್ಠಿ | ಹರೀಶ್ |
| ಗೋಪಾಲಗುಪ್ತ | ಜಗನ್ನಾಥ | ಗೋವರ್ಧನ್ |
| ವಾಸಣ್ಣಗುಪ್ತ | ಮಾರುತಿಗುಪ್ತ | ತಿಮ್ಮರಾಜ್ |

ಸ್ತ್ರೀಯರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
|---|---|---|
| ವರಲಮ್ಮ | ಲಕ್ಷ್ಮಿದೇವಿ | ಶೃತಿ |
| ವೆಂಕಟಮ್ಮ | ಹನುಮಕ್ಕ | ಚೇತನ |
| ಸುಬ್ಬುಲಕ್ಷ್ಮಿ | ಜಾನಕಿ | ಸುಶೀಲ |
| ಪದ್ಮಾವತಿ | ಶೈಲಜಾ | ಪಲ್ಲವಿ |
| ರಾಧಮ್ಮ | ನಾರಾಯಣಮ್ಮ | ವೀಣಾ |
| ತಿಪ್ಪಮ್ಮ | ಈರಮ್ಮ | ರಂಜಿತ |

ಈ ಪಟ್ಟಿಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕೆಲವು ಸಂಗತಿಗಳು ಸ್ಪಷ್ಟಪಡುತ್ತವೆ.

ಮೊದಲ ತಲೆಮಾರಿನ ವ್ಯಕ್ತಿನಾಮಗಳು ಪರಂಪರಾಗತವಾಗಿ ಬಂದ ಹೆಸರುಗಳಾಗಿದ್ದು ಬಹುತೇಕ ಹೆಸರುಗಳು ದೈವಮೂಲದ ಹೆಸರುಗಳೇ ಆಗಿವೆ. ಈಗಾಗಲೇ ಹೇಳಿರುವಂತೆ ಇವರ ಹೆಸರುಗಳು ಹೆಚ್ಚಾಗಿ ವೈಷ್ಣವ ಪರಂಪರೆಯಿಂದ ಬಂದಂತಹ ಹೆಸರುಗಳಾಗಿದ್ದು, ವೈಶ್ಯರು ವಿಷ್ಣು ಆರಾಧಕರೆಂಬುದನ್ನು ಈ ಹೆಸರುಗಳ ಮೂಲಕ ತಿಳಿಯಬಹುದು.

ತಲೆಮಾರಿನಿಂದ ತಲೆಮಾರಿಗೆ ಈ ಹೆಸರುಗಳ ಬಳಕೆಯಲ್ಲಿ ವ್ಯತ್ಯಾಸವಾಗಿದ್ದು, ಒಂದು ಮತ್ತು ಎರಡನೆ ತಲೆಮಾರಿನ ವ್ಯಕ್ತಿನಾಮಗಳಲ್ಲಿ ಗಮನಾರ್ಹವಾದ ವ್ಯತ್ಯಾಸಗಳೇನು ಕಂಡುಬರುವುದಿಲ್ಲ. ಮೊದಲ ತಲೆಮಾರಿನಲ್ಲಿ ಬಳಕೆಯಾಗಿರುವ ದೈವಮೂಲದ ನಿರ್ದಿಷ್ಟಗಳು, ಎರಡನೆ ತಲೆಮಾರಿನಲ್ಲೂ ಮುಂದುವರೆದಿದೆ. ಆದರೆ ವಾರ್ಗಿಕಗಳ ದೃಷ್ಟಿಯಿಂದ ಕೆಲವು ಭಿನ್ನತೆಗಳು ಉಂಟಾಗಿವೆ.

ಮೂರನೆ ತಲೆಮಾರಿನ ವ್ಯಕ್ತಿನಾಮಗಳು ಉಳಿದೆರಡು ತಲೆಮಾರುಗಳ ವ್ಯಕ್ತಿನಾಮಗಳಿಗಿಂತ ವಿಶಿಷ್ಟವಾಗಿವೆ. ಒಂದು ಮತ್ತು ಎರಡನೆ ತಲೆಮಾರಿನ ಹೆಸರುಗಳು ಹೆಚ್ಚು ಕಡಿಮೆ ದೈವಮೂಲದ ಹೆಸರುಗಳೇ ಆಗಿದ್ದರೆ, ಮೂರನೆ ತಲೆಮಾರಿನಲ್ಲಿ ಈ ಪ್ರಕ್ರಿಯೆ ಬದಲಾಗಿದೆ. ಮೂರನೆ ತಲೆಮಾರಿನ ಪುರುಷ ವ್ಯಕ್ತಿನಾಮಗಳಲ್ಲಿ, ಆಧುನಿಕ ಹೆಸರುಗಳ ಸ್ವೀಕರಣೆಯ ಜತೆಗೆ, ಪರಂಪರಾಗತ ವ್ಯಕ್ತಿನಾಮಗಳನ್ನು ಸಮಕಾಲೀನ ಸಂದರ್ಭಕ್ಕೆ ಹೊಂದುವಂತೆ ಆಧುನೀಕರಣ ಮಾಡಿಕೊಂಡಿರುವುದನ್ನು ಗಮನಿಸಬಹುದು. ತಿಮ್ಮಯ್ಯಶೆಟ್ಟಿ, ಗೋವರ್ಧನಶೆಟ್ಟಿ ಎಂಬ (ಹಳೆಯ ತಲೆಮಾರಿನ) ಹೆಸರುಗಳು, ತಿಮ್ಮರಾಜ್, ಗೋವರ್ಧನ್ ಎಂಬುದಾಗಿ ನವೀಕರಿಸಲ್ಪಟ್ಟಿವೆ.

ಸ್ತ್ರೀಯರಲ್ಲಿ ದೈವಮೂಲದ ಹೆಸರುಗಳು ತುಂಬಾ ಕಡಿಮೆ ಇದ್ದು, ಆಧುನಿಕ ಹೆಸರುಗಳೇ ಅಧಿಕವಾಗಿವೆ. ವೈಶ್ಯರಲ್ಲಿ ದೈವಮೂಲದ ಹೆಸರುಗಳು ತಲೆಮಾರು ಮತ್ತು ಲಿಂಗವಾರುಗಳಲ್ಲಿ ಹೇಗೆ ಬಳಕೆಯಾಗಿವೆ ಎಂಬುದನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗುವುದು.

ತಲೆಮಾರುಗಳಲ್ಲಿ ನಿರ್ದಿಷ್ಟದ ಬಳಕೆಯನ್ನು ಚರ್ಚಿಸಿದ ಹಾಗೆ, ವಾರ್ಗಿಕದ ಬಳಕೆಯನ್ನು ಗಮನಿಸಬಹುದು. ಮೊದಲ ತಲೆಮಾರಿನ ಹೆಸರುಗಳಲ್ಲಿ ಬಹುಪಾಲು ಹೆಸರುಗಳು (ನಿರ್ದಿಷ್ಟ) ವಾರ್ಗಿಕಗಳನ್ನು ಹೊಂದಿವೆ. ಪುರುಷರ ಮೊದಲ ತಲೆಮಾರಿನಲ್ಲಿ ವಾರ್ಗಿಕಗಳು ವ್ಯಾಪಕವಾಗಿವೆ. ಎರಡನೆ ತಲೆಮಾರಿನಲ್ಲಿ ಇವೇ ವಾರ್ಗಿಕಗಳು ಮುಂದುವರೆದಿದ್ದರೂ, ಬಳಕೆಯ ಪ್ರಮಾಣದ ದೃಷ್ಟಿಯಿಂದ ಇದ್ದರೂ, ಮೊದಲ ತಲೆಮಾರಿಗಿಂತ ಕಡಿಮೆಯಾಗಿವೆ. ಹಾಗೂ ವಾರ್ಗಿಕ ರಹಿತ ಬರೀ ನಿರ್ದಿಷ್ಟ ಹೆಸರುಗಳೂ ಬಳಕೆಯಲ್ಲಿವೆ. ಮೂರನೆ ತಲೆಮಾರಿನ ವ್ಯಕ್ತಿನಾಮಗಳಲ್ಲಿ ವಾರ್ಗಿಕಗಳ ಬಳಕೆ ಹಿಂದೆ ಸರಿದಿದ್ದು, ಬರೀ ನಿರ್ದಿಷ್ಟನಾಮಗಳು ಬಳಕೆಗೆ ಬಂದಿರುವುದು ಕಂಡುಬರುತ್ತದೆ. ಅಂದರೆ ಪುರುಷರಲ್ಲಿ ವಾರ್ಗಿಕಗಳ ಬಳಕೆ ತಲೆಮಾರಿನಿಂದ ತಲೆಮಾರಿಗೆ ಕಡಿಮೆಯಾಗುತ್ತಾ ಬಂದಿದೆ. ಶೈಕ್ಷಣಿಕವಾಗಿ, ಆರ್ಥಿಕವಾಗಿ ಸುಧಾರಣೆಯಾದಂತೆಲ್ಲಾ, ವೈಶ್ಯರಲ್ಲಿ ಪರಂಪರಾಗತ ವಾರ್ಗಿಕಗಳ ಬಳಕೆ ಗೌಣವಾಗಿರುವುದು ತಿಳಿದುಬರುತ್ತದೆ.

ಸ್ತ್ರೀ ವ್ಯಕ್ತಿನಾಮಗಳಲ್ಲಿ ಮೊದಲೆರಡು ತಲೆಮಾರುಗಳಲ್ಲಿ ಸಂಬಂಧವಾಚಿ ವಾರ್ಗಿಕಗಳು ಬಳಕೆಯಾಗಿದ್ದು, ಮೂರನೆ ತಲೆಮಾರಿನ ಹೆಸರುಗಳಲ್ಲಿ ವಾರ್ಗಿಕಗಳ ಬಳಕೆ ಸಂಪೂರ್ಣವಾಗಿ ಮರೆಯಾಗಿದೆ. ತಲೆಮಾರುಗಳಲ್ಲಿ ಇವುಗಳ ಬಳಕೆಯ ಸಾಧ್ಯತೆಗಳನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗುವುದು.

ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡಿರುವ ವೈಶ್ಯರ ೪೫ ವ್ಯಕ್ತಿನಾಮಗಳಲ್ಲಿ ಯಾವ ಪ್ರಕಾರದ ಹೆಸರುಗಳು ಯಾರಲ್ಲಿ ಹೇಗೆ ಬಳಕೆಯಾಗಿವೆ ಎಂಬುದನ್ನು ಇಲ್ಲಿ ಗಮನಿಸಬಹುದು.

## ವೈಶ್ಯ ಸಮುದಾಯದ ವ್ಯಕ್ತಿನಾಮಗಳ ಮಾದರಿ ಸಮೀಕ್ಷೆ ಕೋಷ್ಟಕ ಪಟ್ಟಿ - ೭

| ತಲೆಮಾರು | ಧಾರ್ಮಿಕ ಪ್ರಭಾವ ಶೇಕಡವಾರು (%) | | | ಸಮಕಾಲೀನ ಪ್ರಸಿದ್ಧ ವ್ಯಕ್ತಿಗಳ ಪ್ರಭಾವ ಶೇಕಡವಾರು (%) | | | ಆಧುನೀಕರಣದ ಪ್ರಭಾವ ಶೇಕಡವಾರು (%) | | | ಚರಿತ್ರೆ ಪ್ರಭಾವ ಶೇಕಡವಾರು (%) | | | ಇತರ ಪ್ರಭಾವ ಶೇಕಡವಾರು (%) | | | ಒಟ್ಟು ಶೇಕಡವಾರು (%) | | |
|---|---|---|---|---|---|---|---|---|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೩ | ೫೦ | ೨೯ | ೩೬ | - | - | - | ೫೦ | ೭೧ | ೬೪ | - | - | - | - | - | - | ೩೬ | ೬೩ | ೨೪ |
| ೨ | ೮೨ | ೫೦ | ೬೭ | - | - | - | ೧೮ | ೫೦ | ೩೩ | - | - | - | - | - | - | ೫೨ | ೪೮ | ೪೬ |
| ೧ | ೧೦೦ | ೧೦೦ | ೧೦೦ | - | - | - | - | - | - | - | - | - | - | - | - | ೧೦೦ | ೧೦೦ | ೧೦೦ |
| ಒಟ್ಟು | ೮೨ | ೫೭ | ೬೮ | - | - | - | ೧೮ | ೪೩ | ೩೧ | - | - | - | - | - | - | ೪೯ | ೫೨ | - |

ಕೋಷ್ಟಕ ೧.೧೨

ಮೇಲಿನ ಕೋಷ್ಟಕವನ್ನು ವೀಕ್ಷಿಸಿದರೆ, ವೈಶ್ಯ ಸಮುದಾಯದ ಮೇಲೆ ದೈವ ಹಾಗೂ ಆಧುನೀಕರಣದ ಪ್ರಭಾವ-ಪ್ರೇರಣೆಗಳು ಮಾತ್ರ ಆಗಿರುವುದು ವಿಶೇಷವಾಗಿದೆ. ಮೊದಲ ತಲೆಮಾರಿನವರಲ್ಲಿ ಬರೀ ದೈವಸಂಬಂಧಿ ಹೆಸರುಗಳೇ ಬಳಕೆಯಲ್ಲಿದ್ದು, ನಂತರದಲ್ಲಿ ಇತರ ಪ್ರಭಾವಗಳು ಆಗಿವೆ. ಈ ಪರಿಣಾಮವಾಗಿ ಮುಂದಿನ ತಲೆಮಾರುಗಳಲ್ಲಿ ದೈವಸಂಬಂಧಿ ಹೆಸರುಗಳ ಬಳಕೆ ಕ್ರಮೇಣ ಕಡಿಮೆಯಾಗಿರುವುದು ತಿಳಿದುಬರುತ್ತದೆ. ಇತರ ಸಮುದಾಯಗಳಂತೆ ವೈಶ್ಯರಲ್ಲಿಯೂ ಸಹ ಈ ಪ್ರಕ್ರಿಯೆ ಪುರುಷರಲ್ಲಿ ಅಧಿಕವಾಗಿದ್ದು, ಸ್ತ್ರೀಯರಲ್ಲಿ ಕಡಿಮೆಯಿದೆ. ಆಧುನೀಕರಣದ ಪ್ರಭಾವ ಮೊದಲ ತಲೆಮಾರಿನವರಲ್ಲಿ ಯಾವುದೇ ಪರಿಣಾಮ ಉಂಟುಮಾಡಿರುವುದಿಲ್ಲ. ಕ್ರಮೇಣವಾಗಿ, ಪ್ರಭಾವವಾಗಿದ್ದು ಇತ್ತೀಚಿನವರಲ್ಲಿ ಆಧುನೀಕರಣದ ಹೆಸರುಗಳೇ ಹೆಚ್ಚು ಬಳಕೆಯಲ್ಲಿವೆ. ಇದರ ಪ್ರಭಾವ ಪುರುಷರಿಗಿಂತ ಸ್ತ್ರೀಯರಲ್ಲಿ ಅಧಿಕವಾಗಿದೆ.

### ವಾರ್ಗಿಕಗಳು

ವೈಶ್ಯ ಸಮುದಾಯದ ವ್ಯಕ್ತಿನಾಮಗಳಲ್ಲಿ ಸಂಬಂಧವಾಚಿ ಮತ್ತು ವೃತ್ತಿ/ಜಾತಿವಾಚಿ ವಾರ್ಗಿಕಗಳು ಬಳಕೆಯಾಗಿವೆ. ಪುರುಷ ಮತ್ತು ಸ್ತ್ರೀಯರಲ್ಲಿ ಬಳಕೆಯಾಗುವ ವಾರ್ಗಿಕಗಳನ್ನು ಈ ರೀತಿ ಪಟ್ಟಿ ಮಾಡಬಹುದು.

ಪುರುಷರಲ್ಲಿ

| ಸಂಬಂಧವಾಚಿ ವಾರ್ಗಿಕ | ವೃತ್ತಿ/ಜಾತಿವಾಚಿ ವಾರ್ಗಿಕ |
|---|---|
| ಅಪ್ಪ | ಶೆಟ್ಟಿ/ಶ್ರೇಷ್ಠಿ |
| ಅಯ್ಯ | |
| ಅಣ್ಣ | |

ಸ್ತ್ರೀ ಹೆಸರುಗಳಲ್ಲಿ

| ಸಂಬಂಧವಾಚಿ ವಾರ್ಗಿಕ |
|---|
| ಅಮ್ಮ |
| ಅಕ್ಕ |

ವೈಶ್ಯರಲ್ಲಿ ಸಂಬಂಧವಾಚಿ ವಾರ್ಗಿಕಗಳು ಪುರುಷ ಮತ್ತು ಸ್ತ್ರೀ ಇಬ್ಬರಲ್ಲೂ ಬಳಕೆಯಾಗಿದ್ದು, ತಲೆಮಾರುಗಳಲ್ಲಿ ಅವುಗಳ ಬಳಕೆಯ ಸಾಧ್ಯತೆಗಳನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗುವುದು.

ವೈಶ್ಯರಲ್ಲಿ 'ಶೆಟ್ಟಿ' ವಾರ್ಗಿಕ ಮಾತ್ರ ಬಳಕೆಯಲ್ಲಿದ್ದು ಬೇರಾವ ವಾರ್ಗಿಕಗಳೂ ಕಂಡುಬಂದಿಲ್ಲ.

### ಶೆಟ್ಟಿ

'ಶೆಟ್ಟಿ' ಎಂಬುದು ವ್ಯಾಪಾರ ವೃತ್ತಿಯನ್ನು ಸೂಚಿಸುವ ಪದವಾಗಿದ್ದು, ಇಂದು ಜಾತಿವಾಚಿಯಾಗಿ ಬಳಕೆಯಾಗುತ್ತದೆ. ಶೆಟ್ಟಿ ಎಂಬುದು ಕೆಲವು ಕಡೆ 'ಶ್ರೇಷ್ಠಿ' ಎಂಬುದಾಗಿಯೂ ಬಳಕೆಯಾಗುವುದುಂಟು.

'ಶ್ರೇಷ್ಠಿ' ಎಂಬುದು ಸಾಮಾನ್ಯವಾಗಿ ಹಳೆತಲೆಮಾರಿನವರಲ್ಲಿ ಮಾತ್ರ ಕಾಣಬರುತ್ತಿದ್ದು, ಇತ್ತೀಚೆಗೆ ಈ 'ರೂಪ' ಬಳಕೆಯಲ್ಲಿ ಬಿಟ್ಟುಹೋಗಿರುವಂತೆ ತೋರುತ್ತದೆ. ಶೆಟ್ಟಿ ಅಥವಾ 'ಶ್ರೇಷ್ಠಿ' ಎಂಬುದು ಚಿತ್ರದುರ್ಗ ಪರಿಸರದಲ್ಲಿ ಈ ಸಮುದಾಯದಲ್ಲಿ ಮಾತ್ರ ಬಳಕೆಯಲ್ಲಿದ್ದು ಬೇರಾವ ಸಮುದಾಯದಲ್ಲೂ ಕಾಣಬರುವುದಿಲ್ಲ.

ವೈಶ್ಯ ಸಮುದಾಯದಲ್ಲಿ ವಾರ್ಗಿಕಗಳು ತಲೆಮಾರಿನಿಂದ ತಲೆಮಾರಿಗೆ ಹೇಗೆ ಬಳಕೆಯಾಗಿವೆ ಎಂಬುದನ್ನು ಇಲ್ಲಿ ನೋಡಬಹುದು.

| ಪುರುಷ ವಾರ್ಗಿಕ ಸಂಬಂಧವಾಚಿ ವಾರ್ಗಿಕ | | | ವೃತ್ತಿ/ಜಾತಿವಾಚಿ ವಾರ್ಗಿಕ | ಸ್ತ್ರೀ ವಾರ್ಗಿಕ | |
|---|---|---|---|---|---|
| ತಲೆಮಾರು | ಅಪ್ಪ | ಅಯ್ಯ | ಶೆಟ್ಟಿ | ಅಮ್ಮ | ಅಕ್ಕ |
| ೩ | - | - | ೬ | - | - |
| ೨ | ೪ | ೨ | ೨೭ | ೧೩ | ೫೦ |
| ೧ | ೭ | ೧೫ | ೩೪ | ೩೩ | ೭೭ |
| ಒಟ್ಟು | - | - | - | - | - - |

ಕೋಷ್ಟಕ ೧.೧೩

ವೈಶ್ಯ ಸಮುದಾಯದ ಪುರುಷರಲ್ಲಿ ಅಪ್ಪ, ಅಯ್ಯ ಮತ್ತು ಶೆಟ್ಟಿ ಹಾಗೂ ಸ್ತ್ರೀಯರಲ್ಲಿ 'ಅಮ್ಮ', ಅಕ್ಕ ಮತ್ತು 'ಶೆಟ್ಟಿ' ವಾರ್ಗಿಕಗಳು ಬಳಕೆಯಾಗಿವೆ. ಸಂಬಂಧವಾಚಿ ವಾರ್ಗಿಕಗಳ ಬಳಕೆ ವೈಶ್ಯರಲ್ಲಿ ಕಡಿಮೆಯೆಂದೇ ಹೇಳಬಹುದು. ಪುರುಷರಿಗಿಂತ ಸ್ತ್ರೀಯರಲ್ಲಿ ಇದು ಅಧಿಕವಾಗಿದ್ದು, ಮೊದಲ ತಲೆಮಾರಿನವರಲ್ಲಿ ಮಾತ್ರ ಇವುಗಳ ಬಳಕೆ ಕಾಣಬರುತ್ತಿದೆ. ಹೊಸ ತಲೆಮಾರಿನವರಲ್ಲಿ ಕಾಣಬರುವುದಿಲ್ಲ. 'ಶೆಟ್ಟಿ' ಎಂಬುದು ಮೊದಲು ವ್ಯಾಪಕವಾಗಿ ಬಳಕೆಯಾಗಿದ್ದು, ತಲೆಮಾರಿನಿಂದ ತಲೆಮಾರಿಗೆ ಕಡಿಮೆಯಾಗುತ್ತಾ ಬಂದಿರುವುದನ್ನು ಕೋಷ್ಟಕದ ಮೂಲಕ ತಿಳಿಯಬಹುದು.

### ೩.೫.೭ ಮರಾಠ

ಮರಾಠಿ ಸಮುದಾಯವು ಮೂಲತಃ ಮಹಾರಾಷ್ಟ್ರದವರು. ಪ್ರಾಚೀನ ಕರ್ನಾಟಕದಲ್ಲಿ ಮಹಾರಾಷ್ಟ್ರದ ಕೆಲವು ಭಾಗಗಳು ಒಳಗಾಗಿದ್ದರಿಂದ ಮರಾಠಿ ಮತ್ತು ಕನ್ನಡಿಗರ ನಡುವಿನ ಸಾಮಾಜಿಕ ಸಂಬಂಧ ಗಾಢವಾಗಿದೆ. ಮಹಾರಾಷ್ಟ್ರದ ಅನೇಕ ಮರಾಠಿಗರು ಕನ್ನಡ ನಾಡಿನ ಉದ್ದಕ್ಕೂ ಕಂಡುಬರುತ್ತಾರೆ. ಇವರ ಮೂಲ ವೃತ್ತಿ ವ್ಯಾಪಾರ. ಮಹಾರಾಷ್ಟ್ರದ ಖಂಡೋಬ, ಫಂಡರಾಪುರದ ಪಾಂಡುರಂಗ, ವಿಠೋಬ, ಕೊಲ್ಲಾಪುರದ ಲಕ್ಷ್ಮಿದೇವಿ, ಸೊನ್ನಲಿಗಿ ಸಿದ್ಧರಾಮ ಮುಂತಾದ ಕ್ಷೇತ್ರ ಮತ್ತು ದೈವಗಳನ್ನು ಈ ಸಮುದಾಯ ಪೂಜಿಸುತ್ತದೆ. ಅಲ್ಲದೆ ಇವರು ವಿಶೇಷವಾಗಿ ಶಕ್ತಿ ದೇವತೆಯನ್ನು ಪೂಜಿಸುತ್ತಾರೆ. ಗಣೇಶನು ಇವರಿಗೆ ಪ್ರಮುಖ ದೈವ. ಈ ಎಲ್ಲಾ ದೈವಗಳ ಪ್ರಭಾವ ಇವರ ವ್ಯಕ್ತಿನಾಮಗಳ ಮೇಲೆ ಕಂಡುಬರುತ್ತದೆ. ಅಲ್ಲದೆ ಭಕ್ತಿಪಂಥದ ಕಬೀರ, ತುಕಾರಾಂ, ಆತ್ಮಾರಾಂ, ಮೀರಾಬಾಯಿ ಮುಂತಾದವರ ಪ್ರಭಾವದಿಂದಲೂ ಇವರ ಹೆಸರುಗಳು ಪ್ರೇರಣೆಗೊಂಡಿವೆ. ಅರ್ವಾಚೀನ ಭಾರತದ ಇತಿಹಾಸದಲ್ಲಿ ಮಹತ್ತರ ಪಾತ್ರವನ್ನು ವಹಿಸಿದ ಪೇಶ್ವೆಗಳು ಮತ್ತು ಶಿವಾಜಿ, ಜೀಜಾಬಾಯಿ ಮುಂತಾದ ಚಾರಿತ್ರಿಕ ವ್ಯಕ್ತಿಗಳ ಪ್ರೇರಣೆಯೂ ಈ ಸಮುದಾಯದ ಮೇಲಾಗಿದೆ.

ಇವರ ವ್ಯಕ್ತಿನಾಮಗಳ ವಾರ್ಗಿಕದಲ್ಲಿ ವೈದಿಕರಂತೆ ರಾವ್, ಬಾಯಿ ಇರುವುದು ಕಂಡುಬರುತ್ತದೆ. ಈ ಕುರಿತ ವಿಶ್ಲೇಷಣೆ ಈ ಅಧ್ಯಾಯದಲ್ಲಿದೆ. ಮರಾಠಿಗರು ಕನ್ನಡನಾಡಿಗೆ ವಲಸೆ ಬಂದ ಮೇಲೆ ಇಲ್ಲಿನ ಪ್ರಾದೇಶಿಕ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ ವಲಯಗಳಲ್ಲಿ ಸಮ್ಮಿಳನಗೊಂಡು ಸ್ಥಳೀಯ ಸಂಸ್ಕೃತಿಗೆ ಒಗ್ಗಿಕೊಂಡಿದ್ದಾರೆ. ಇದರಿಂದ ಅವರ ವ್ಯಕ್ತಿನಾಮಗಳಲ್ಲಿ ಪ್ರಾದೇಶಿಕ ಪ್ರಭಾವವನ್ನೂ ಎರಡನೇ ತಲೆಮಾರಿನಲ್ಲಿ ಗುರುತಿಸಲಾಗಿದೆ. ಅಲ್ಲದೆ, ಮರಾಠಿಗರ ಮೂಲಸಂಸ್ಕೃತಿ ಮತ್ತು ಅಲ್ಲಿನ ಹೆಸರುಗಳು ವಲಸೆ ಸಂಸ್ಕೃತಿ ಮತ್ತು ಇಲ್ಲಿನ ಹೆಸರುಗಳು ಈ ಬಗ್ಗೆ ಕೂಲಂಕುಷವಾಗಿ ಅಧ್ಯಯನ ಮಾಡಲಾಗಿದೆ. ಮರಾಠಿಗರು ಮೂಲತಃ ಕನ್ನಡಿಗರೆಂದು ಇವರು ಹಟ್ಟಿಯನ್ನು ಕಟ್ಟಿಕೊಂಡು ಮರಹಟ್ಟಿಗರಾದರೆಂದು ಶಂಬಾ ಅಭಿಪ್ರಾಯಪಡುತ್ತಾರೆ. ಪ್ರಕೃತ ಅಧ್ಯಯನದಲ್ಲಿ ಇಂಥ ಸುಳಿವುಗಳ ಅಧ್ಯಯನವನ್ನು ವೈದಿಕಮೂಲದ ಹೆಸರುಗಳ ಮುಖೇನ ಗುರುತಿಸಲು ಪ್ರಯತ್ನಿಸಲಾಗಿದೆ. ಈ ಪ್ರವೇಶಿಕೆಯೊಂದಿಗೆ ಮರಾಠಿಗರ ವ್ಯಕ್ತಿನಾಮಗಳನ್ನು ಹೀಗೆ ವಿವರಿಸಿಕೊಳ್ಳಬಹುದು.

ಚಿತ್ರದುರ್ಗ ಪರಿಸರದ ಮರಾಠಿ ಸಮುದಾಯದಲ್ಲಿ ತಲೆಮಾರುಗಳಲ್ಲಿ ಬಳಕೆಯಾಗಿರುವ ಕೆಲವು ವ್ಯಕ್ತಿನಾಮ ಮಾದರಿಗಳನ್ನು ಇಲ್ಲಿ ನೋಡಬಹುದು.

ಪುರುಷರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
|---|---|---|
| ವಿಠೋಬರಾವ್ | ಗೋಪಾಲರಾವ್ | ಮನೋಹರ |
| ದಗ್ಡೋಜಿರಾವ್ | ಲಕ್ಷ್ಮಣರಾವ್ | ರವಿಕಾಂತ |
| ರಂಗೋಜಿರಾವ್ | ತಿಪ್ಪೇಸ್ವಾಮಿ | ಜಯರಾಜ |
| ವೆಂಕೋಬರಾವ್ | ತಿಮ್ಮಣ್ಣ | ಸಂದೀಪ್ |
| ಕೃಷ್ಣೋಜಿರಾವ್ | ತಿಮ್ಮಣ್ಣ | ಸಂದೀಪ್ |
| ಕೃಷ್ಣೋಜಿರಾವ್ | ಶರಣಪ್ಪ | ವಿನಯ್ |
| ಅಶೋಕರಾವ್ | ಸತ್ಯನಾರಾಯಣ | ರಾಮಕೃಷ್ಣ |
| ತಾನಾಜಿರಾವ್ | ವಿಶ್ವನಾಥ | ಶ್ರೀನಿವಾಸ |
| ಶಿವಾಜಿರಾವ್ | ಸಿದ್ದಪ್ಪ | ಕೇಶವಮೂರ್ತಿ |
| ಆತ್ಮರಾಂ | ಗಂಗಪ್ಪ | ಮುರಳೀಧರ |
| ತುಕಾರಾಂ | ಈಶ್ವರಪ್ಪ | ಶಂಕರ |

ಸ್ತ್ರೀಯರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
|---|---|---|
| ಪಂಡರೀಬಾಯಿ | ಮಲ್ಲೇಶ್ವರಿಬಾಯಿ | ಪಲ್ಲವಿ |
| ಸಕ್ಕೂಬಾಯಿ | ಸೀತಾಬಾಯಿ | ರೇಖ |
| ತುಳಜಾಬಾಯಿ | ಮಹಾದೇವಿ | ಮಮತ |
| ಜೀಜಾಬಾಯಿ | ಹೊನ್ನಮ್ಮ | ಆಶಾಲತ |
| ಕೌಸಲ್ಯಾಬಾಯಿ | ತಿಪ್ಪಮ್ಮ | ಕಮಲ |
| ಸಾವಿತ್ರಿಬಾಯಿ | ನರಸಮ್ಮ | ಶಕುಂತಲ |
| ಯಶೋಧಬಾಯಿ | ತಾಯಮ್ಮ | ಅನುರಾಧ |
| ಲಕ್ಷ್ಮೀಬಾಯಿ | ಸಿದ್ದಮ್ಮ | ಪಾರ್ವತಿ |
| ಅನಸೂಯಬಾಯಿ | ಗಂಗಮ್ಮ | ಮೀನಾಕ್ಷಿ |
| ಗೋವಿಂದಬಾಯಿ | ಕಾಮಾಕ್ಷಿ | ಶಾರದ |

ಮೇಲಿನ ಪಟ್ಟಿಯ ಹೆಸರುಗಳನ್ನು ಗಮನಿಸಿದರೆ ಮೊದಲ ತಲೆಮಾರಿನ ಪುರುಷ ಮತ್ತು ಸ್ತ್ರೀ ವ್ಯಕ್ತಿನಾಮಗಳು ಮರಾಠಿ ಸಮುದಾಯದ ಧಾರ್ಮಿಕ ಹಿನ್ನೆಲೆಯಿಂದ ಪ್ರೇರಣೆಗೊಂಡ ಹೆಸರುಗಳಾಗಿವೆ. ಅಂದರೆ ಈ ಹೆಸರುಗಳು ಮಹಾರಾಷ್ಟ್ರದ ಮರಾಠಿ ಸಮುದಾಯದ ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಹಿನ್ನಲೆಯಿಂದ ಬಂದವುಗಳಾಗಿವೆ. ಎರಡನೆ ತಲೆಮಾರಿನವರ ಹೆಸರುಗಳು ಮೊದಲ ತಲೆಮಾರಿನವರ ವ್ಯಕ್ತಿನಾಮಗಳಿಗಿಂತ ಭಿನ್ನವಾಗಿದ್ದು, ಕುತೂಹಲಕರವಾಗಿದೆ. ಮಹಾರಾಷ್ಟ್ರ ಮೂಲನಿವಾಸಿಗಳಾದ ಮರಾಠರು ವ್ಯಾಪಾರ, ವಾಣಿಜ್ಯ, ಉದ್ಯೋಗ ಮುಂತಾದ ಕಸಬುಗಳನ್ನು ಅರಸಿ ಕರ್ನಾಟಕಕ್ಕೆ ವಲಸೆ ಬಂದಿದ್ದಾರೆ. ಕರ್ನಾಟಕದಲ್ಲಿಯೇ ತಮ್ಮ ನೆಲೆಯನ್ನು ಭದ್ರಪಡಿಸಿಕೊಂಡ ಈ ಸಮುದಾಯ ತಮ್ಮ ಮೂಲ ಪರಂಪರೆ, ಸಂಸ್ಕೃತಿಯ ಸಂಪರ್ಕದಿಂದ ಕೊಂಚ ಸ್ಥಿತ್ಯಂತರಗೊಂಡಿದ್ದಾರೆ. ಪರಿಣಾಮವಾಗಿ ಕನ್ನಡದ ಸಂಸ್ಕೃತಿಗೆ ನಿಧಾನವಾಗಿ ಒಳಗಾಗಿದ್ದಾರೆ. ಅಥವಾ ಕನ್ನಡ ಸಂಸ್ಕೃತಿ ಈ ಸಮುದಾಯದ ಮೇಲೆ ಪ್ರಭಾವ ಬೀರಿದೆ. ಪರಂಪರಾಗತ ವ್ಯಕ್ತಿನಾಮಗಳಿಗೆ ಬದಲಾಗಿ ಕನ್ನಡ ಪರಿಸರದ ಸಾಮಾಜಿಕವಾಗಿ ಮೇಲಂತಸ್ತಿನ ಸಮುದಾಯಗಳ ವ್ಯಕ್ತಿನಾಮಗಳನ್ನು ನಿರ್ದೇಶಿಸಿಕೊಂಡಿದ್ದಾರೆ. ನಿದರ್ಶನಕ್ಕೆ ಎರಡನೆ ತಲೆಮಾರಿನ ಹೆಸರುಗಳನ್ನು ಗಮನಿಸಬಹುದು. ಕೆಲವೇ ಕೆಲವರಲ್ಲಿ ತಮ್ಮ ಮೂಲ ಸಂಸ್ಕೃತಿಗೆ ಸಂಬಂಧಿಸಿದ ವ್ಯಕ್ತಿನಾಮಗಳು ಬಳಕೆಯಲ್ಲಿ ಇವೆಯಾದರೂ, ಬಹುತೇಕವಾಗಿ ಕನ್ನಡ ಪರಿಸರದ ಸಂಸ್ಕೃತಿಗೆ ಒಳಗಾಗಿರುವುದು ಸ್ಪಷ್ಟವಾಗುತ್ತದೆ.

ಚಿತ್ರದುರ್ಗ ಪರಿಸರದ ಪ್ರಾದೇಶಿಕ ದೈವಗಳ ಪ್ರಭಾವ ಮರಾಠಿ ಸಮುದಾಯದ ವ್ಯಕ್ತಿನಾಮಗಳ ಮೇಲೆ ಪ್ರಭಾವ ಬೀರಿದೆ. ನಿದರ್ಶನಕ್ಕೆ ಕೆಲವು ಉದಾಹರಣೆಗಳನ್ನು ನೋಡಬಹುದು.

| ಪುರುಷರಲ್ಲಿ | ಸ್ತ್ರೀಯರಲ್ಲಿ |
|---|---|
| ತಿಪ್ಪೇಸ್ವಾಮಿ | ತಿಪ್ಪಮ್ಮ |
| ಚಿತ್ರಲಿಂಗಪ್ಪ | ಮಾಳಮ್ಮ |
| ಮರಳುಸಿದ್ದಪ್ಪ - ಇತ್ಯಾದಿ | |

ಚಿತ್ರದುರ್ಗ ಪರಿಸರದ ಪ್ರಾದೇಶಿಕ ದೈವಗಳ ಪ್ರಭಾವ ಈ ಸಮುದಾಯದ ವ್ಯಕ್ತಿನಾಮಗಳ ಮೇಲೆ ಆಗಿರುವಂತೆ, ಬೇರೆ ಬೇರೆ ಪರಿಸರದಲ್ಲಿ ಇತರೆ ಪ್ರಭಾವಗಳೂ ಆಗಿರಬಹುದು. ಇದಕ್ಕೆ ಪ್ರತ್ಯೇಕ ಅಧ್ಯಯನದ ಅಗತ್ಯವಿದೆ.

ಮೂರನೆ ತಲೆಮಾರಿನವರ ವ್ಯಕ್ತಿನಾಮಗಳು ಮೊದಲೆರಡು ತಲೆಮಾರಿನವರ ವ್ಯಕ್ತಿನಾಮಗಳಿಗಿಂತ ಭಿನ್ನವಾಗಿವೆ. ಕನ್ನಡ ಪರಿಸರದ ಸಾಂಸ್ಕೃತಿಕ ವ್ಯವಸ್ಥೆಯನ್ನು ಮೈಗೂಡಿಸಿಕೊಂಡಿರುವ ಮರಾಠಿ ಸಮುದಾಯ ಸಾಮಾಜಿಕವಾಗಿ ಮೇಲ್ಜಾತಿಯವರ ವ್ಯಕ್ತಿನಾಮಗಳನ್ನು ಸ್ವೀಕರಿಸಿರುವುದಲ್ಲದೆ, ಆಧುನೀಕರಣದ ಪ್ರಕ್ರಿಯೆಗೆ ಒಳಗಾಗಿ ವಿನೂತನವಾದ ಹೆಸರುಗಳನ್ನು ನಿರ್ದೇಶನ ಮಾಡಿಕೊಂಡಿರುವುದು ತಿಳಿದುಬರುತ್ತದೆ. ಮೂರನೆ ತಲೆಮಾರಿನ ಪುರುಷ ಮತ್ತು ಸ್ತ್ರೀಯರ ಮೊದಲ ಐದು ಹೆಸರುಗಳು ಆಧುನೀಕರಣದ ಪ್ರಭಾವವನ್ನು ಸೂಚಿಸಿದರೆ ಕೊನೆಯ ಐದು ಹೆಸರುಗಳು ಮೇಲ್ಜಾತಿಯವರ ಪ್ರಭಾವವನ್ನು ಸೂಚಿಸುತ್ತವೆ.

ಮೊದಲ ತಲೆಮಾರಿನ ಪುರುಷರಲ್ಲಿ 'ರಾವ್' ಎಂಬುದು ಹೆಚ್ಚಾಗಿ ಬಳಕೆಯಾಗಿದ್ದು, ಎರಡನೆ ತಲೆಮಾರಿಗೆ ಅದರ ಬಳಕೆ ಕಡಿಮೆಯಾಗಿದೆ. ಏಕೆಂದರೆ ತಮ್ಮ ಮೂಲ ಪರಂಪರೆಗೆ ಬದಲಾಗಿ ಕನ್ನಡ ಪರಿಸರದ ವ್ಯಕ್ತಿನಾಮಗಳನ್ನು ಸ್ವೀಕರಿಸಿರುವುದು ಇದಕ್ಕೆ ಕಾರಣವಾಗಿರಬಹುದು. 'ರಾವ್'ಗೆ ಬದಲು, 'ಅಪ್ಪ', 'ಅಣ್ಣ' ಎಂಬ ವಾರ್ಗಿಕಗಳು ಇವರಲ್ಲಿ ಸ್ಥಾನಪಡೆದಿವೆ. ಮೂರನೆ ತಲೆಮಾರಿನವರಲ್ಲಿ ವಾರ್ಗಿಕಗಳ ಬಳಕೆ ಸಂಪೂರ್ಣವಾಗಿ ಹಿಂದೆ ಸರಿದಿದ್ದು, ಬರೀ ನಿರ್ದಿಷ್ಟ ನಾಮಗಳನ್ನು ನಿರ್ದೇಶನ ಮಾಡುವ ಪ್ರಕ್ರಿಯೆಯನ್ನು ಕಾಣಬಹುದು. ಮಹಾರಾಷ್ಟ್ರ ಪರಿಸರದಲ್ಲಿ ಈ ಸಮುದಾಯದ ವ್ಯಕ್ತಿನಾಮಗಳಲ್ಲಿ 'ವಾಡ್' (ಲಕ್ಷ್ಮಣ ಗಾಯಕ್‌ವಾಡ್, ವಿಠಲರಾವ್ ಗಾಯಕವಾಡ್) 'ಕರ್/ಕರ' (ಧಾರವಾಡಕರ) 'ಪಂತ್' (ರಂಗೋಜಿಪಂತ್) ಸಿಂಧೆ (ಆತ್ಮರಾಂ ಸಿಂಧೆ) ಈ ಮೊದಲಾದವುಗಳು ವಾರ್ಗಿಕಗಳಾಗಿ, ಕುಲನಾಮ ಅಥವಾ ಅಡ್ಡಹೆಸರುಗಳಾಗಿ ಬಳಕೆಯಾಗಿರುವುದು ತಿಳಿದುಬರುತ್ತದೆ. ಆದರೆ ಆ ಸಮುದಾಯದ ಪರಂಪರೆಗೆ ಸಂಬಂಧಿಸಿದ ಚಿತ್ರದುರ್ಗ ಪರಿಸರದಲ್ಲಿ ವ್ಯಕ್ತಿನಾಮಗಳಲ್ಲಿ 'ರಾವ್' ಒಂದನ್ನು ಬಿಟ್ಟು ಇತರೆ ವಾರ್ಗಿಕಗಳು ಬಳಕೆಯಲ್ಲಿರುವುದು ಗಮನಕ್ಕೆ ಬಂದಿರುವುದಿಲ್ಲ.

ಸ್ತ್ರೀಯರಲ್ಲಿ 'ಬಾಯಿ' ವಾರ್ಗಿಕ ಬಳಕೆಯಲ್ಲಿದೆ. ಮೊದಲ ತಲೆಮಾರಿನ ಸ್ತ್ರೀಯರಲ್ಲಿ ಇದರ ಬಳಕೆ ಗಾಢವಾಗಿದ್ದು, ಎರಡನೆ ತಲೆಮಾರಿನವರಲ್ಲಿ ಕಡಿಮೆಯಾಗಿದೆ. ಬದಲಿಗೆ ಕನ್ನಡ ವ್ಯಕ್ತಿನಾಮಗಳಲ್ಲಿ ಬಳಕೆಯಾಗುವ 'ಸ್ತ್ರೀ' ಸಂಬಂಧವಾಚಿ ವಾರ್ಗಿಕಗಳು ಇವರ ವ್ಯಕ್ತಿನಾಮಗಳಲ್ಲಿ ಕಾಣಿಸಿಕೊಂಡಿರುವುದು ಮೇಲಿನ ಉದಾಹರಣೆಗಳಿಂದ ತಿಳಿದುಬರುತ್ತದೆ. ಮೂರನೆ ತಲೆಮಾರಿನಲ್ಲಿ ವಾರ್ಗಿಕಗಳ ಬಳಕೆ ಗೌಣವಾಗಿದ್ದು ನಿರ್ದಿಷ್ಟ ಹೆಸರುಗಳನ್ನು ಮಾತ್ರ ನಿರ್ದೇಶಿಸಿಕೊಂಡಿರುವುದು ಕಾಣಬರುತ್ತದೆ.

ಪ್ರಸ್ತುತ ಅಧ್ಯಯನದಲ್ಲಿ ಮರಾಠಿ ಸಮುದಾಯದ '೧೬೮' ವ್ಯಕ್ತಿನಾಮಗಳನ್ನು ವಿಶ್ಲೇಷಣೆಗೆ ಬಳಸಿಕೊಂಡಿದೆ. ತಲೆಮಾರುಗಳ ಅಂತರಗಳಲ್ಲಿ ಈ ವ್ಯಕ್ತಿನಾಮಗಳ ಬಳಕೆಯ ಸಾಧ್ಯತೆಗಳನ್ನು ಇಲ್ಲಿ ವಿಶ್ಲೇಷಿಸಲಾಗುವುದು.

## ಮರಾಠಿ ಸಮುದಾಯದ ವ್ಯಕ್ತಿನಾಮಗಳ ಮಾದರಿ ಸಮೀಕ್ಷೆ ಕೋಷ್ಟಕ ಪಟ್ಟಿ - ೮

| ತಲೆಮಾರು | ಧಾರ್ಮಿಕ ಪ್ರಭಾವ ಶೇಕಡವಾರು (%) | | | ಸಮಕಾಲೀನ ಪ್ರಸಿದ್ಧ ವ್ಯಕ್ತಿಗಳ ಪ್ರಭಾವ ಶೇಕಡವಾರು (%) | | | ಆಧುನೀಕರಣದ ಪ್ರಭಾವ ಶೇಕಡವಾರು (%) | | | ಚರಿತ್ರೆ ಪ್ರಭಾವ ಶೇಕಡವಾರು (%) | | | ಇತರೆ ಪ್ರಭಾವ ಶೇಕಡವಾರು (%) | | | ಒಟ್ಟು ಶೇಕಡವಾರು (%) | | |
|---|---|---|---|---|---|---|---|---|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೩ | ೩೩ | ೨೫ | ೨೯ | ೫ | ೧೦ | ೭ | ೬೧ | ೬೪ | ೬೨ | - | - | - | - | - | - | ೫೬ | ೪೪ | ೩೮ |
| ೨ | ೮೪ | ೮೯ | ೭೬ | - | - | - | ೧೨ | ೫ | ೯ | ೩ | ೫ | ೩ | ೩ | ೫ | ೩ | ೬೩ | ೩೬ | ೩೧ |
| ೧ | ೭೫ | ೮೦ | ೭೬ | - | - | - | - | - | - | ೧೮ | ೧೦ | ೧೫ | ೬ | ೧೦ | ೭ | ೬೧ | ೩೮ | ೩೧ |
| ಒಟ್ಟು | ೬೩ | ೫೨ | ೬೨ | ೧ | ೪ | ೩ | ೨೫ | ೨೪ | ೨೬ | ೬ | ೪ | ೫ | ೨ | ೪ | ೩ | ೬೦ | ೪೬ | - |

ಕೋಷ್ಟಕ ೧.೧೪

'ಮರಾಠ' ಸಮುದಾಯದ ವ್ಯಕ್ತಿನಾಮಗಳ ಬಳಕೆಯ ಸ್ವರೂಪವನ್ನು ಗಮನಿಸಿದರೆ, ಇತರ ಸಮುದಾಯಗಳಿಗಿಂತ ಭಿನ್ನವಾಗೇನೂ ಇರುವುದಿಲ್ಲ. ಸಹಜವಾಗಿಯೇ ದೈವಸಂಬಂಧಿ ಹೆಸರುಗಳು ಇವರಲ್ಲಿ ಅಧಿಕವಾಗಿವೆ. ಕೆಲವು ದಶಕಗಳವರೆಗೆ ತಮ್ಮ ಸಂಸ್ಕೃತಿಗೆ ಅನುಗುಣವಾದ ಹೆಸರುಗಳನ್ನೇ ನಿರ್ದೇಶಿಸಿಕೊಂಡು ಬಂದಿದ್ದು, ಇತ್ತೀಚಿನ ದಶಕಗಳಲ್ಲಿ ಅದರ ಪ್ರಭಾವ ಕಡಿಮೆಯಾಗಿದೆ. ದೈವಸಂಬಂಧಿ ಹೆಸರುಗಳು ಪುರುಷ ಮತ್ತು ಸ್ತ್ರೀಯರಲ್ಲಿ ಹೆಚ್ಚೂ ಕಡಿಮೆ ಒಂದೇ ಪ್ರಮಾಣದಲ್ಲಿ ಕಡಿಮೆಯಾಗುತ್ತಾ ಬರುವುದನ್ನು ಮೇಲಿನ ಕೋಷ್ಟಕದಿಂದ ತಿಳಿಯಬಹುದಾಗಿದೆ. ಸಮಕಾಲೀನ ಪ್ರಸಿದ್ಧ ವ್ಯಕ್ತಿಗಳ ಪ್ರಭಾವ ಮೊದಲೆರಡು ತಲೆಮಾರುಗಳಲ್ಲಿ ಕಾಣಬರುವುದಿಲ್ಲ. ಇತ್ತೀಚಿನವರು ಅದರ ಪ್ರೇರಣೆಗೆ ಒಳಗಾಗಿರುವುದು ತಿಳಿಯುತ್ತದೆ. ಅದೇ ರೀತಿಯಾಗಿ ಆಧುನೀಕರಣದ ಪ್ರಭಾವವೂ ಸಹ ಹಳೆಯ ವ್ಯಕ್ತಿನಾಮಗಳಲ್ಲಿ ಗೋಚರವಾಗದೆ, ನಂತರದ ತಲೆಮಾರುಗಳಲ್ಲಿ ಕಾಣಬರುತ್ತದೆ. ಇತಿಹಾಸದ ಪ್ರೇರಣೆ-ಪ್ರಭಾವ (ಶಿವಾಜಿರಾವ್, ಜೀಜಾ ಬಾಯಿ, ಇತ್ಯಾದಿ) ಗಳಿಂದ ಇಟ್ಟಂತಹ ಹೆಸರುಗಳು ಮೊದಲೆರಡು ತಲೆಮಾರುಗಳಲ್ಲಿ ಬಳಕೆಯಲ್ಲಿದ್ದು, ಹೊಸ ಪೀಳಿಗೆಯವರಲ್ಲಿ ಆ ಬಗೆಯ ಹೆಸರುಗಳು ಹಿಂದೆ ಸರಿದಿರುವುದನ್ನು ಕಾಣಬಹುದು.

ಚಿತ್ರದುರ್ಗ ಪರಿಸರದ ಮರಾಠ ಸಮುದಾಯದ ವ್ಯಕ್ತಿನಾಮಗಳಲ್ಲಿ ಕಂಡುಬರುವ ವಾರ್ಗಿಕಗಳು ಮತ್ತು ಅವುಗಳ ಬಳಕೆಯ ಸಾಧ್ಯತೆಗಳನ್ನು ಇಲ್ಲಿ ಗಮನಿಸಲಾಗುವುದು.

**ಪುರುಷರಲ್ಲಿ**

| ಸಂಬಂಧವಾಚಿ ವಾರ್ಗಿಕ | ವೃತ್ತಿ/ಜಾತಿವಾಚಿ ವಾರ್ಗಿಕ |
|---|---|
| ಅಪ್ಪ | ರಾವ್ |
| ಅಣ್ಣ | |

**ಸ್ತ್ರೀಯರಲ್ಲಿ**

| ಸಂಬಂಧವಾಚಿ ವಾರ್ಗಿಕ |
|---|
| ಅಮ್ಮ |
| ಬಾಯಿ |

ಈ ಸಮುದಾಯದ ವ್ಯಕ್ತಿನಾಮಗಳಲ್ಲಿ ಸಂಬಂಧವಾಚಿ ವಾರ್ಗಿಕಗಳು ತಲೆಮಾರುಗಳಲ್ಲಿ ಹೇಗೆ ವರ್ತಿಸಿವೆ ಎಂಬುದನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗುವುದು. ವೃತ್ತಿ/ಜಾತಿವಾಚಿ ವಾರ್ಗಿಕಗಳ ಕುರಿತು ಇಲ್ಲಿ ವಿಶ್ಲೇಷಿಸಲಾಗುವುದು.

**ರಾವ್**

'ರಾವ್' ಎಂಬುದು ಬ್ರಾಹ್ಮಣ ಸಮುದಾಯದ ವ್ಯಕ್ತಿನಾಮಗಳಲ್ಲಿ ವಾರ್ಗಿಕವಾಗಿ ಬಳಕೆಯಾಗುವಂತೆ, ಮರಾಠಿ ಸಮುದಾಯದ ವ್ಯಕ್ತಿನಾಮಗಳಲ್ಲಿಯೂ ಬಳಕೆಯಾಗುತ್ತದೆ. ಬ್ರಾಹ್ಮಣರಲ್ಲಿ 'ರಾವ್' ಬಳಕೆಗೆ ಚಾರಿತ್ರಿಕವಾದ ಹಿನ್ನೆಲೆ, ಮಹತ್ವಗಳಿರುವಂತೆ ಮರಾಠರಿಗೂ ಇದೆ. ಮರಾಠರು ಸ್ವತಃ ಅರಸರುಗಳಾಗಿ ರಾಜ್ಯಭಾರ

ಮಾಡಿರುವುದು ಇತಿಹಾಸದಿಂದ ತಿಳಿದುಬರುತ್ತದೆ. ಆ ಅರಸರುಗಳ ಹೆಸರಿನ ಮುಂದೆ 'ರಾಯ' ಎಂಬುದು 'ರಾಜ' ಎನ್ನುವ ಅರ್ಥದಲ್ಲಿ ಬಳಕೆಯಾಗಿರುವುದನ್ನು ಗಮನಿಸಬಹುದು. ಮರಾಠ ಸಂಸ್ಥಾನದಲ್ಲಿ ಪೇಶ್ವೆಗಳಾಗಿದ್ದ 'ಬಾಜಿರಾಯ' 'ಬಾಲಾಜಿ ಬಾಜಿರಾಯ' ಎಂಬ ಹೆಸರುಗಳನ್ನು ಇಲ್ಲಿ ಗಮನಿಸಬಹುದು. ಇಲ್ಲಿ ಉಲ್ಲೇಖಿಸಿರುವ 'ಬಾಜಿರಾಯ' ಮತ್ತು 'ಬಾಲಾಜಿ ಬಾಜಿರಾಯ' ಎಂಬ ಹೆಸರುಗಳು ವೈದಿಕ ಸಂಸ್ಕೃತಿಯನ್ನು ಪ್ರತಿಪಾದಿಸುತ್ತಿದ್ದು, ಮರಾಠ ಸಂಸ್ಥಾನದಲ್ಲಿ ಪೇಶ್ವೆಗಳಾಗಿದ್ದವರು ಮೂಲತಃ ಬ್ರಾಹ್ಮಣರಾಗಿರಬಹುದು. ರಾಯ/ರಾವ್ ಎಂಬುದು ಮೂಲತಃ ಮರಾಠರಲ್ಲಿ ಇರದೆ, ಬ್ರಾಹ್ಮಣರ ಪ್ರಭಾವ (ಪೇಶ್ವೆಗಳ ಪ್ರಭಾವ) ದಿಂದ ಬಂದಿರಬಹುದು.

'ರಾವ್' ಎಂಬುದು ಮರಾಠರಲ್ಲಿ ವಸಾಹತೋತ್ತರ ಕಾಲಘಟ್ಟದಲ್ಲಿ ಕಂಡುಬರುತ್ತಿದ್ದು, ವಸಾಹತುಶಾಹಿ ಸಂದರ್ಭದಲ್ಲಿ 'ರಾಯ' ಎಂದೇ ಬಳಸಲ್ಪಟ್ಟಿದೆ. ನಿದರ್ಶನಕ್ಕೆ 'ಬಾಜಿರಾಯ', 'ಬಾಲಾಜಿ ಬಾಜಿರಾಯ' ಎಂಬ ಹೆಸರುಗಳನ್ನೇ ಗಮನಿಸಬಹುದು. 'ರಾಯ' ಎನ್ನುವುದು ಪ್ರಸ್ತುತ ಸಂದರ್ಭದಲ್ಲಿ ಚಲಾವಣೆಯಲ್ಲಿರದೆ ಇದಕ್ಕೆ ಬದಲಾಗಿ 'ರಾವ್' ಎಂಬುದು ರೂಢಿಗೆ ಬಂದಿದೆ.

ಚಿತ್ರದುರ್ಗ ಪರಿಸರದ ಮರಾಠಿ ಸಮುದಾಯದಲ್ಲಿ 'ರಾವ್' ಎಂಬುದು ಮೊದಲ ತಲೆಮಾರಿನವರಲ್ಲಿ ದಟ್ಟವಾಗಿದ್ದು, ಎರಡನೆ ತಲೆಮಾರಿನವರಲ್ಲಿ ಕಡಿಮೆಯಾಗಿದೆ. ಮೂರನೆ ತಲೆಮಾರಿನವರಲ್ಲಿ ಇದರ ಬಳಕೆ ಪೂರ್ಣವಾಗಿ ಮರೆಯಾಗಿರುವುದು ಕಂಡುಬರುತ್ತದೆ. ಭಿನ್ನ ಸಮಾಜೋ-ಭೌಗೋಳಿಕ ಪರಿಸರಗಳಲ್ಲಿ, ಮರಾಠ ಸಮುದಾಯದ ವ್ಯಕ್ತಿನಾಮಗಳಲ್ಲಿ 'ರಾವ್'ನ ಬಳಕೆ ಈಗಲೂ ಉಳಿದಿರಬಹುದಾದರೂ ಪ್ರಸ್ತುತ ಅಧ್ಯಯನದ ವ್ಯಾಪ್ತಿಯೊಳಗೆ 'ರಾವ್ 'ನ ಬಳಕೆ ಹಿಂದೆ ಸರಿದಿರುವುದು ಕ್ಷೇತ್ರ ಮಾಹಿತಿಯಿಂದ ಸ್ಪಷ್ಟಪಡುತ್ತದೆ. ಸಂಸ್ಕೃತಾನುಕರಣ ಮತ್ತು ಆಧುನೀಕರಣಗಳು ಇದಕ್ಕೆ ಕಾರಣಗಳಾಗಿರಬಹುದು.

'ರಾವ್' ಎಂಬುದು ಬ್ರಾಹ್ಮಣ ಮತ್ತು ಮರಾಠಿ ಈ ಎರಡೂ ಸಮುದಾಯದವರಲ್ಲಿ ಬಳಕೆಯಾಗುತ್ತಿದ್ದು, ಈ 'ರಾವ್'ನ ಮೂಲಕ ಆ ಎರಡೂ ಸಮುದಾಯಗಳನ್ನು ಪ್ರತ್ಯೇಕವಾಗಿ ಗುರುತಿಸಲು ಸಾಧ್ಯವಾಗುವುದಿಲ್ಲ. ಆದರೆ 'ರಾವ್'ನ ಜತೆಗಿರುವ ನಿರ್ದಿಷ್ಟಗಳಿಂದ ಬ್ರಾಹ್ಮಣ ಮತ್ತು ಮರಾಠಿ ಸಮುದಾಯಗಳನ್ನು ನಿರ್ದಿಷ್ಟವಾಗಿ ಗುರುತಿಸಬಹುದು. ಈ ಬಗೆಯ ತೀರ್ಮಾನಗಳಿಗೆ ಆಯಾ ಸಮುದಾಯಗಳ ಸಾಂಸ್ಕೃತಿಕ, ಭಾಷಿಕ ಮತ್ತು ಪ್ರಾದೇಶಿಕ ಅಂಶಗಳು ಮುಖ್ಯ ಕಾರಣಗಳಾಗಿವೆ. ಮಾದರಿಗೆ ಕೆಲವು ಹೆಸರುಗಳನ್ನು ಇಲ್ಲಿ ಗಮನಿಸಬಹುದು.

| 'ಅ' ಪಟ್ಟಿ | 'ಬ' ಪಟ್ಟಿ |
|---|---|
| ನರಸಿಂಹರಾವ್ | ವಿಠೋಬರಾವ್ |
| ರಾಘವೇಂದ್ರರಾವ್ | ರಂಗೋಜಿರಾವ್ |
| ಮಾಧವರಾವ್ | ಕೃಷ್ಣೋಜಿರಾವ್ |
| ನಾರಾಯಣರಾವ್ | ತಾನಾಜಿರಾವ್ |
| ಶ್ರೀನಿವಾಸರಾವ್ | ಅಶೋಕರಾವ್ |
| ರಾಮಚಂದ್ರರಾವ್ | ದುರ್ಗೋಜಿರಾವ್ |
| ಕೃಷ್ಣಮೂರ್ತಿರಾವ್ | ರಾಮರಾವ್ |

ಮೇಲಿನ ಎರಡೂ ಪಟ್ಟಿಯ ಹೆಸರುಗಳಲ್ಲಿ 'ರಾವ್ ' ಎಂಬುದು ಬಳಕೆಯಾಗಿದ್ದು, 'ಅ' ಪಟ್ಟಿಯ ಹೆಸರುಗಳು ಬ್ರಾಹ್ಮಣರನ್ನು ಸೂಚಿಸಿದರೆ, 'ಬ' ಪಟ್ಟಿಯ ಹೆಸರುಗಳು ಮರಾಠರನ್ನು ಸೂಚಿಸುತ್ತವೆ. 'ರಾವ್'ನ ಸಹಾಯದಿಂದ ಈ ಎರಡೂ ಸಮುದಾಯದ ವ್ಯಕ್ತಿನಾಮಗಳನ್ನು ಪ್ರತ್ಯೇಕಪಡಿಸಲು ಸಾಧ್ಯವಿಲ್ಲವಾದರೂ, ಎರಡೂ ವರ್ಗದ ವ್ಯಕ್ತಿನಾಮ ನಿರ್ದಿಷ್ಟಗಳಿಂದ ಸ್ಪಷ್ಟವಾಗಿ ಗುರುತಿಸಬಹುದು. ಎರಡೂ ಪಟ್ಟಿಯಲ್ಲಿನ ಹೆಸರುಗಳು ವೈದಿಕ ಪರಂಪರೆಯಿಂದ ಬಂದವುಗಳಾಗಿದ್ದರೂ, 'ಅ' ಪಟ್ಟಿಯಲ್ಲಿನ ಹೆಸರುಗಳು ಕನ್ನಡ ಪರಿಸರದ ಬ್ರಾಹ್ಮಣರಲ್ಲಿ ಕಂಡುಬಂದರೆ, 'ಬ' ಪಟ್ಟಿಯಲ್ಲಿನ ಹೆಸರುಗಳು ಮಹಾರಾಷ್ಟ್ರ ಪರಿಸರದ ಮರಾಠರಲ್ಲಿ ಕಂಡುಬರುತ್ತವೆ.

ಬ್ರಾಹ್ಮಣ ವ್ಯಕ್ತಿನಾಮಗಳು ಕನ್ನಡ ಭಾಷಿಕ ರಚನೆ ಹಾಗೂ ಆ ಸಮುದಾಯದ ಸಾಂಸ್ಕೃತಿಕ ಹಿನ್ನೆಲೆಯನ್ನು ಆಧರಿಸಿ ಬಂದಿದ್ದರೆ, ಮರಾಠಿ ವ್ಯಕ್ತಿನಾಮಗಳು ಮರಾಠಿ ಭಾಷಿಕ ರಚನೆ ಹಾಗೂ ಆ ಸಮುದಾಯದ ಸಾಂಸ್ಕೃತಿಕ ಹಿನ್ನೆಲೆಯನ್ನು ಆಧರಿಸಿ ಬಂದಿವೆ. 'ವಿಠೋಬ' ಎಂಬುದು ಮಹಾರಾಷ್ಟ್ರದ ಪಂಡರೀಪುರದ 'ವಿಠೋಬನ' ಪ್ರಭಾವದಿಂದ ಬಂದ ಹೆಸರಾಗಿದ್ದು ಬ್ರಾಹ್ಮಣರಲ್ಲಿ ಈ ಹೆಸರು ಕಾಣುವುದಿಲ್ಲ.

ಒಂದೇ 'ನಿರ್ದಿಷ್ಟ' ಎರಡೂ ಸಮುದಾಯದ ವ್ಯಕ್ತಿನಾಮಗಳಲ್ಲಿ ಬಳಕೆಯಾದರೂ, ಅವುಗಳ ರಾಚನಿಕ ಸ್ವರೂಪ ಬೇರೆಬೇರೆಯಾಗಿದೆ. ಈ ಸ್ವರೂಪದ ಆಧಾರದ ಮೇಲೆ ಎರಡೂ ಸಮುದಾಯಗಳನ್ನು ಪ್ರತ್ಯೇಕವಾಗಿ ಗುರುತಿಸಬಹುದು.

| 'ಅ' ಪಟ್ಟಿ | 'ಬ' ಪಟ್ಟಿ |
|---|---|
| ಕೃಷ್ಣರಾವ್ | ಕೃಷ್ಣೋಜಿರಾವ್ |
| ರಂಗರಾವ್ | ರಂಗೋಜಿರಾವ್ |
| ಗಂಗಾಧರರಾವ್ | ಗಂಗೋಜಿರಾವ್ |

'ಅ' ಪಟ್ಟಿಯ ಹೆಸರುಗಳು ಬ್ರಾಹ್ಮಣರಲ್ಲೂ, 'ಬ' ಪಟ್ಟಿಯ ಹೆಸರುಗಳು ಮರಾಠರಲ್ಲೂ ಕಂಡುಬರುತ್ತವೆ. ಒಂದೇ ನಿರ್ದಿಷ್ಟ ಎರಡೂ ವರ್ಗದವರಲ್ಲಿ ಬಳಕೆಯಾದರೂ ಅದರ ರಾಚನಿಕ ಸ್ವರೂಪ ಬೇರೆ ಬೇರೆಯಾಗಿದೆ. ಬ್ರಾಹ್ಮಣರಲ್ಲಿ 'ಕೃಷ್ಣ', 'ರಂಗ', 'ಗಂಗಾಧರ' ಎಂಬ ರೂಪಗಳು ಮರಾಠರಲ್ಲಿ 'ಕೃಷ್ಣೋಜಿ', 'ರಂಗೋಜಿ', 'ಗಂಗೋಜಿ' ಎಂದಾಗಿವೆ. ಈ ಭಿನ್ನತೆಗಳಿಗೆ ಆಯಾ ಸಮುದಾಯದ ಭಾಷಿಕ ಮತ್ತು ಸಾಮಾಜಿಕ ಅಂಶಗಳು ಕಾರಣವಾಗಿವೆ ಎನ್ನಬಹುದು.

ಇಂಥ ಕೆಲವು ಸೂಕ್ಷ್ಮ ವ್ಯತ್ಯಾಸಗಳಿಂದ ಎರಡೂ ಸಮುದಾಯಗಳ ವ್ಯಕ್ತಿನಾಮಗಳನ್ನು ಪ್ರತ್ಯೇಕವಾಗಿ ಗುರುತಿಸಬಹುದಾದರೂ, 'ಗೋಪಾಲರಾವ್', 'ಲಕ್ಷ್ಮಣರಾವ್', 'ಭೀಮ್ ರಾವ್' ಎಂಬ ಹೆಸರುಗಳು ಬ್ರಾಹ್ಮಣ ಮತ್ತು ಮರಾಠಿ ಎರಡೂ ಸಮುದಾಯಗಳಲ್ಲಿ ಇರುವುದು ಗೋಚರಿಸುತ್ತದೆ. ಕನ್ನಡ ನಾಮರಚನಾ ಮಾದರಿಯನ್ನೇ ಮರಾಠರೂ ಅನುಸರಿಸಿರುವುದು ಈ ಉದಾಹರಣೆಗಳಿಂದ ತಿಳಿದುಬರುತ್ತದೆ. ಇಂಥ ಸಂದರ್ಭಗಳಲ್ಲಿ ಹೆಸರುಗಳ ಮೂಲಕ ಆಯಾ ಸಮುದಾಯಗಳನ್ನು ಸ್ಪಷ್ಟಪಡಿಸುವುದು ಕಷ್ಟಕರ. ಈ ಬಗೆಯ ಹೆಸರುಗಳು ಎರಡೂ ಸಮುದಾಯಗಳ ಮಧ್ಯೆ ತುಂಬಾ ಮಿತವಾಗಿದ್ದು, ವಿಪುಲವಾದ ಉದಾಹರಣೆಗಳೇನೂ ದೊರೆಯಲಾರವು.

## ಬಾಯಿ

'ಬಾಯಿ' ಎಂಬುದು ಮರಾಠ ಸಮುದಾಯದ ಸ್ತ್ರೀ ವ್ಯಕ್ತಿನಾಮಗಳಲ್ಲಿ ವಾರ್ಗಿಕವಾಗಿ ಬಳಕೆಯಾಗುತ್ತದೆ. ಮರಾಠ ಸಮುದಾಯಕ್ಕೆ ರಾಜಮನೆತನದ ಇತಿಹಾಸವಿದೆ. ರಾಜಮನೆತನದ ಸ್ತ್ರೀಯರಿಗೆ ಪ್ರಾಚೀನ ಕಾಲದಲ್ಲಿ ವಿಶೇಷ ಮರ್ಯಾದೆ ಸಿಗುತಿತ್ತು. ಜನ ಅವರನ್ನು ಗೌರವದಿಂದ ಕಾಣುತ್ತಿದ್ದರು. ಅಂಥ ಗೌರವಸ್ಥ ಮನೆತನದ ಸ್ತ್ರೀಯರನ್ನು ಸಂಬೋಧಿಸುವಾಗ ಗೌರವವಾಚಿ ಪದಗಳನ್ನು ಬಳಸಲಾಗುತ್ತಿತ್ತು. 'ಬಾಯಿ' ಎಂಬುದು ಹೆಚ್ಚು ಗೌರವವನ್ನು ಸೂಚಿಸುವ ಪದವಾಗಿದ್ದು, ಮರಾಠಿ ಸಮುದಾಯಕ್ಕೆ ಇದ್ದ ರಾಜಮನೆತನದ ಹಿನ್ನಲೆಯನ್ನೇ ಈ 'ಬಾಯಿ' ಎಂಬುದು ಸೂಚಿಸುತ್ತಿರಬಹುದು. ಆ ಪರಂಪರೆಯ ಮುಂದುವರಿಕೆಯಾಗಿ ಈಗಲೂ ಆ ಸಮುದಾಯದಲ್ಲಿ 'ಬಾಯಿ' ಎಂಬುದು ಬಳಕೆಯಲ್ಲಿದೆ.

ಧಾರವಾಡ, ಬೆಳಗಾಂ, ಗುಲ್ಬರ್ಗಾ ಪರಿಸರದ ಕೆಲವು ವಲಯಗಳಲ್ಲಿ ಸ್ತ್ರೀಯರನ್ನು ಸಂಬೋಧಿಸುವಾಗ ಬಾಯಿ! ಬಾಯೋರಾ !! ಎಂದು ಹೇಳಲಾಗುತ್ತದೆ. ಇಂಗ್ಲೀಷಿನಲ್ಲಿ ಮೇಡಂ, ಕನ್ನಡದಲ್ಲಿ ಅಮ್ಮ, ಅಕ್ಕ ಎಂದು ಕರೆಯುವ ಹಾಗೆ. ಪ್ರಾಚೀನ ಕಾಲದಲ್ಲಿ ಸ್ತ್ರೀಯರಿಗೆ ನಮ್ಮ ಸಮಾಜದಲ್ಲಿ ಇದ್ದ ಗೌರವ, ಸ್ಥಾನಮಾನಗಳನ್ನು ಇದು ಸೂಚಿಸುತ್ತದೆ. 'ಬಳ್ಳಾರಿ', 'ಚಿತ್ರದುರ್ಗ' ಪರಿಸರದಲ್ಲಿ 'ಬಾಯಿ' ಎಂಬುದನ್ನು ವ್ಯಂಗ್ಯವಾಗಿ ಬಳಸಲಾಗುತ್ತದೆ. ಸುಂದರವಾದ ಪೋಷಾಕನ್ನು ಧರಿಸಿದ ಸ್ತ್ರೀಯರಿಗೆ 'ಏನ್ರಿ ಬಾಯೋರು' ಇದ್ದಂಗೆ ಇದ್ದೀರಾ' ಎಂದು ಟೀಕೆ ಮಾಡಲಾಗುವುದು. ಈ ವ್ಯಂಗ್ಯದ ಹಿಂದೆ ವಾಸ್ತವದ ಸೂಚನೆಯಿರುವುದನ್ನು ಸೂಕ್ಷ್ಮವಾಗಿ ತಿಳಿಯಬಹುದು. ಅದೇನೆಂದರೆ, ಪ್ರಾಚೀನ ಕಾಲದಲ್ಲಿ 'ಬಾಯಿ' ಎಂಬುದು ಸಾಮಾನ್ಯ ಸ್ತ್ರೀಯರಿಗೆ ಬಳಸದೆ, ಉನ್ನತವರ್ಗ, ಉತ್ತಮಕುಲ, ರಾಜಮನೆತನದ ಸ್ತ್ರೀಯರಿಗೆ ಮಾತ್ರ 'ಬಾಯಿ' ಎಂದು ಕರೆಯಲಾಗುತ್ತಿತ್ತು ಎಂಬ ಸಂಗತಿಯನ್ನು ಮೇಲಿನ ಸಂದರ್ಭ ಸ್ಪಷ್ಟಪಡಿಸುತ್ತದೆ.

ಚಿತ್ರದುರ್ಗ ಪರಿಸರದ ಮರಾಠ ಸಮುದಾಯದ ಸ್ತ್ರೀಯರಲ್ಲಿ 'ಬಾಯಿ' ಎಂಬುದು ಮೊದಲ ತಲೆಮಾರಿನವರಲ್ಲಿ ಹೆಚ್ಚು ಬಳಕೆಯಾಗಿದ್ದು, ಎರಡನೆ ತಲೆಮಾರಿಗೆ ಕಡಿಮೆಯಾಗಿದೆ. ಮೂರನೆ ತಲೆಮಾರಿನವರಲ್ಲಿ 'ಬಾಯಿ' ಎಂಬುದು ಕೆಲವರಲ್ಲಿ ಮಾತ್ರ ಬಳಕೆಯಾಗುತ್ತಿದೆ. ತಲೆಮಾರಿನಿಂದ ತಲೆಮಾರಿಗೆ 'ಬಾಯಿ' ಎಂಬುದರ ಬಳಕೆ ನಿಧಾನವಾಗಿ ಕಡಿಮೆಯಾಗುತ್ತಾ ಬಂದಿದ್ದು, ಈ ಪ್ರಕ್ರಿಯೆಯೇ ಮುಂದುವರೆದರೆ ಮುಂದಿನ ತಲೆಮಾರುಗಳಲ್ಲಿ ಸಂಪೂರ್ಣವಾಗಿ ಇದರ ಬಳಕೆ ನಿಂತುಹೋಗಬಹುದು.

ಅಧ್ಯಯನಕ್ಕೆ ಆಯ್ಕೆಮಾಡಿಕೊಂಡಿರುವ ವ್ಯಕ್ತಿನಾಮಗಳಲ್ಲಿ ವಾರ್ಗಿಕಗಳು ತಲೆಮಾರುಗಳ ಅಂತರಗಳಲ್ಲಿ ಹೇಗೆ ಬಳಕೆಯಾಗಿವೆ ಎಂಬುದನ್ನು ಇಲ್ಲಿ ಚರ್ಚಿಸಬಹುದು.

| | ಪುರುಷ ವಾರ್ಗಿಕ<br>ಸಂಬಂಧವಾಚಿ ವಾರ್ಗಿಕ | | ವೃತ್ತಿ/ಜಾತಿವಾಚಿ ವಾರ್ಗಿಕ | ಸ್ತ್ರೀ ವಾರ್ಗಿಕ | |
|---|---|---|---|---|---|
| ತಲೆಮಾರು | ಅಪ್ಪ | ಅಣ್ಣ | ರಾವ್ | ಬಾಯಿ | ಅಮ್ಮ |
| ೩ | ೦೫ | - | ೦೫ | ೦೩ | ೦೩ |
| ೨ | ೬೦ | ೨೦ | ೧೫ | ೨೦ | ೫೦ |
| ೧ | ೦೮ | ೦೫ | ೩೫ | ೩೦ | ೧೦ |
| ಒಟ್ಟು | ೩೧ | ೧೨ | ೧೭ | ೧೫ | ೧೩ |
| ಸರಾಸರಿ | | ೪೩ | ೧೮ | ೨೭ | |

ಕೋಷ್ಟಕ ೧.೧೫

ಮರಾಠ ಸಮುದಾಯದ ಪುರುಷರಲ್ಲಿ, ಅಪ್ಪ, ಅಣ್ಣ ಹಾಗೂ ಸ್ತ್ರೀಯರಲ್ಲಿ ಬಾಯಿ, ಅಮ್ಮ, ಸಂಬಂಧವಾಚಿ ವಾರ್ಗಿಕಗಳು ಮತ್ತು ಪುರುಷರಲ್ಲಿ 'ರಾವ್' ಎಂಬ ವೃತ್ತಿವಾಚಿ ವಾರ್ಗಿಕವೂ ಬಳಕೆಗೊಂಡಿವೆ. 'ಅಪ್ಪ', 'ಅಣ್ಣ' ಮತ್ತು 'ಅಮ್ಮ' ವಾರ್ಗಿಕಗಳು ಮೊದಲ ತಲೆಮಾರಿನವರಿಗಿಂತ, ಎರಡನೆ ತಲೆಮಾರಿನವರಲ್ಲಿ ಅಧಿಕವಾಗಿವೆ. ಪುನಃ ಅದರ ಪ್ರಭಾವ ವಾರ್ಗಿಕಗಳ ಮಟ್ಟದಲ್ಲಿ ಕಡಿಮೆಯಾಗಿರುವುದು ಮೇಲಿನ ಕೋಷ್ಟಕದ ಅಂಕಿ-ಸಂಖ್ಯೆಗಳಿಂದ ಸ್ಪಷ್ಟವಾಗುತ್ತದೆ. 'ರಾವ್' ಮತ್ತು 'ಬಾಯಿ' ವಾರ್ಗಿಕ ಹಿಂದಿನ ವ್ಯಕ್ತಿನಾಮಗಳಲ್ಲಿ ಹೆಚ್ಚು ಬಳಕೆಯಲ್ಲಿದ್ದು, ಕ್ರಮೇಣ ಕಡಿಮೆಯಾಗುತ್ತಾ ಬಂದಿರುವುದಕ್ಕೆ ಆಧುನೀಕರಣದ ಪ್ರಭಾವವೇ ಮುಖ್ಯ ಕಾರಣವಾಗಿರಬಹುದು.

### ೩.೫.೮ ವಿಶ್ವಕರ್ಮ

ವಿಶ್ವಕರ್ಮ ಸಮುದಾಯ ಕನ್ನಡನಾಡಿನಲ್ಲಿ ಅಲ್ಪಸಂಖ್ಯಾತರೆಂದು ಹೇಳಬಹುದು. ಈ ಸಮುದಾಯವನ್ನು ಶಿಲ್ಪಿಗಳು, ಆಚಾರ್ಯರು, ಕಲ್ಲುಕುಟಿಗರು ಎಂದು ಪ್ರಾಚೀನ ಕಾಲದಿಂದ ಕರೆಯಲಾಗುತ್ತಿದೆ. ಶಾಸನಗಳು ಇವರನ್ನು ಶಿಲ್ಪಿಗಳು, ಕಲ್ಲು ಕುಟಿಗರೆಂದು ಉಲ್ಲೇಖಿಸುತ್ತಾ ಇವರಿಗೆ ಉಂಬಳಿಯಾಗಿ ನೀಡಿದ ಭೂಮಿಯ ವಿವರವನ್ನೂ ಉಲ್ಲೇಖಿಸುತ್ತವೆ. ಕೆಲವು ಕಾವ್ಯಗಳಲ್ಲಿಯೂ ಇವರ ಪ್ರಸ್ತಾಪವಿದೆ. ಇವರ ವೃತ್ತಿ ಶಿಲ್ಪಗಳನ್ನು ತಯಾರಿಸುವುದು ಮತ್ತು ಲೋಹ, ಕಟ್ಟಿಗೆಯಿಂದ ಸೂಕ್ಷ್ಮ ಕೆತ್ತನೆಯನ್ನು ಮಾಡುವುದು, ವೈದಿಕ ಧರ್ಮದ ಆಚರಣೆಗಳನ್ನು ಹೆಚ್ಚಾಗಿ ಅನುಸರಿಸುವ ಇವರ ಮೂಲದೈವ ಬ್ರಹ್ಮನೆಂದು ನಂಬಲಾಗುತ್ತಿದೆ. ಇಂದು ತಿಂತಿಸಿಯ ಮೌನೇಶ್ವರನನ್ನು ತಮ್ಮ ಆರಾಧ್ಯ ದೈವವೆಂದು ಪೂಜಿಸುತ್ತಾರೆ. ಹೆಚ್ಚಾಗಿ ಇವರ ವ್ಯಕ್ತಿನಾಮಗಳು ವೈದಿಕಮೂಲದ ಮತ್ತು ಶೈವಮೂಲದ ದೈವಗಳನ್ನೇ ಹೋಲುತ್ತವೆ. ಅಲ್ಲದೇ ಇವರ ಹೆಸರಿನ ಉತ್ತರ ಭಾಗದಲ್ಲಿ ಆಚಾರಿ, ಶಿಲ್ಪಿ, ಅಯ್ಯ ಮುಂತಾದ ವಾರ್ಗಿಕಗಳು ಕಂಡುಬರುತ್ತವೆ.

ಚಿತ್ರದುರ್ಗ ಪರಿಸರದಲ್ಲಿ ಈ ಸಮುದಾಯವು ಕಡಿಮೆ ಸಂಖ್ಯೆಯಲ್ಲಿದೆ. ಈ ಪರಿಸರದ ವಿಶ್ವಕರ್ಮ ಸಮುದಾಯದ ವ್ಯಕ್ತಿನಾಮಗಳ ಅಧ್ಯಯನ ಹೀಗಿದೆ.

'ವಿಶ್ವಕರ್ಮ' ಸಮುದಾಯದಲ್ಲಿ ತಲೆಮಾರುಗಳ ಅಂತರದಲ್ಲಿ ಬಳಕೆಯಾಗಿರುವ ಕೆಲವು ವ್ಯಕ್ತಿನಾಮ ಮಾದರಿಗಳನ್ನು ಇಲ್ಲಿ ಗಮನಿಸಬಹುದು.

ಪುರುಷರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
| --- | --- | --- |
| ಶಿಲ್ಪಾಚಾರಿ | ತಿಪ್ಪೇಶಾಚಾರಿ | ಪ್ರವೀಣಾಚಾರಿ |
| ಕಾಳಾಚಾರಿ | ವೀರಾಚಾರಿ | ಸುಧಾಕರಾಚಾರಿ |
| ಏಕಾಂತಾಚಾರಿ | ಮಲ್ಲಾಚಾರಿ | ಚಿದಾನಂದ |
| ಯಲ್ಲಾಚಾರಿ | ಗುರುನಾಥಾಚಾರಿ | ವಾಗೇಶ್ |
| ಹನುಮಂತಪ್ಪ | ಮೌನೇಶಾಚಾರಿ | ಸಂದೇಶ್ |
| ವೀರಭದ್ರಪ್ಪ | ನಾಗಭೂಷಣಾಚಾರಿ | ವಿಜಯೇಂದ್ರ |
| ಚಂದ್ರಪ್ಪ | ಸಿದ್ಧಪ್ಪ | ಜಯವರ್ಧನ |
| ಮಲ್ಲಪ್ಪ | ಮಹದೇವಪ್ಪ | ಮಹೇಶ್ |

ಸ್ತ್ರೀಯರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
| --- | --- | --- |
| ಕಾಳಮ್ಮ | ತಿಪ್ಪಮ್ಮ | ಲಕ್ಷ್ಮಿ |
| ಗುರಮ್ಮ | ಯರಿಯಮ್ಮ | ಪವಿತ್ರ |
| ವೀರಮ್ಮ | ಶಂಕ್ರಮ್ಮ | ದಿವ್ಯ |
| ಲಚ್ಚಮ್ಮ | ನಾಗಮ್ಮ | ದೀಪ |
| ಗಂಗಮ್ಮ | ರೇಣುಕಮ್ಮ | ರೂಪ |
| ನರಸಮ್ಮ | ವೆಂಕಟಲಕ್ಷ್ಮಿ | ವಿಮಲ |
| ಮುರಿಗೆಮ್ಮ | ಅನ್ನಪೂರ್ಣಮ್ಮ | ಅನುಸೂಯ |
| ಹನುಮಕ್ಕ | ದೇವಿಕ | ಮಂಗಳ |

ಈ ಪಟ್ಟಿಗಳಲ್ಲಿ ಕಾಣಬರುವ ಹೆಸರುಗಳು, ತಲೆಮಾರುಗಳ ಅಂತರಗಳಲ್ಲಿ ಕೆಲವು ಸೂಕ್ಷ್ಮ ವ್ಯತ್ಯಾಸಗಳನ್ನು ಹೊಂದಿರುವುದು ಸ್ಪಷ್ಟಪಡುತ್ತದೆ. ಮೊದಲೆರಡು ತಲೆಮಾರುಗಳಲ್ಲಿ ದೈವಮೂಲದ ಹೆಸರುಗಳು ಅಧಿಕವಾಗಿದ್ದು, ಇವು ಹೆಚ್ಚಾಗಿ ಶೈವಮೂಲದವುಗಳಾಗಿವೆ. ಈ ಹೆಸರುಗಳಲ್ಲಿ ಬಳಕೆಯಾಗಿರುವ ಕೆಲವು ನಿರ್ದಿಷ್ಟಗಳು ಬೇರೆ ಸಮುದಾಯಗಳ ವ್ಯಕ್ತಿನಾಮಗಳಲ್ಲಿ ಕಂಡುಬಂದರೆ, ಶಿಲ್ಪಾಚಾರಿ, ಕಾಳಾಚಾರಿ, ಏಕಾಂತಾಚಾರಿ, ಯಲ್ಲಾಚಾರಿ, 'ಕಾಳಮ್ಮ' ಎಂಬ ಹೆಸರುಗಳು, ಅಧಿಕೃತವಾಗಿ ಆ ಸಮುದಾಯವನ್ನು, ಆ ಸಮುದಾಯದ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ. ಅಲ್ಲದೆ ಇವರ ವ್ಯಕ್ತಿನಾಮಗಳ ಮೇಲೆ ಪ್ರಾದೇಶಿಕ ದೈವಗಳ ಪ್ರಭಾವವಾಗಿರುವುದಕ್ಕೆ ಮುರಿಗೆಮ್ಮ, ತಿಪ್ಪೇಶಾಚಾರಿ ಎಂಬ ಹೆಸರುಗಳನ್ನು ಇಲ್ಲಿ ಹೆಸರಿಸಬಹುದು.

ಮೂರನೆ ತಲೆಮಾರಿನವರಲ್ಲಿ ಈ ಹಿಂದೆ ಬಳಕೆಯಲ್ಲಿದ್ದ ಹೆಸರುಗಳಿಗಿಂತ ಭಿನ್ನವಾಗಿವೆ. ಪರಂಪರಾಗತವಾಗಿ ಬಳಕೆಯಾಗುತ್ತಿದ್ದ ಹೆಸರುಗಳು ಮೂರನೆ ತಲೆಮಾರಿನವರಲ್ಲಿ ಹಿಂದೆ ಸರಿದಿದ್ದು, ಆಧುನಿಕವಾದ ಹೆಸರುಗಳು ಎಡೆಪಡೆದಿರುವುದನ್ನು ಗಮನಿಸಬಹುದು. ಅಂದರೆ ತಲೆತಲಾಂತರದಿಂದ ಹರಿದುಬಂದ ಸಂಸ್ಕೃತಿಗೆ ಬದಲಾಗಿ, ಹೊಸ ಸಂಸ್ಕೃತಿಯೊಂದನ್ನು ಪುನರ್ ಕಟ್ಟಿಕೊಳ್ಳುವಲ್ಲಿ ನಿರತವಾಗಿರುವುದನ್ನು ವ್ಯಕ್ತಿನಾಮಗಳಲ್ಲಾಗಿರುವ ಸ್ಥಿತ್ಯಂತರಗಳಿಂದ ತಿಳಿಯಬಹುದು. ಧಾರ್ಮಿಕ ಸಂಸ್ಕೃತಿಯ ಮೇಲಿನ ಮನಸ್ಥಿತಿಗಳು ಹಿಂದೆಗಿಂತ ಇಂದು ಬದಲಾಗಿದ್ದು, ದೈವಮೂಲದ ಹೆಸರುಗಳಿಗೆ ಬದಲಾಗಿ ಸುಂದರವಾದ, ಭಾವನಾಮಗಳನ್ನು ಪಡೆಯುವಲ್ಲಿ ಮುಂದಾಗಿದ್ದಾರೆ. ಮೂರನೆ ತಲೆಮಾರಿನಲ್ಲಿ ದೈವಮೂಲದ ಹೆಸರುಗಳು ಬಳಕೆಯಾದರೂ, ಆಧುನಿಕ ಸಂದರ್ಭಕ್ಕೆ ಒಗ್ಗುವ ರೀತಿಯಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಂಡು ಉಳಿಸಿಕೊಂಡಿರುವುದನ್ನು ಗಮನಿಸಬಹುದು. ಈ ಪ್ರಕ್ರಿಯೆ ಪುರುಷ ವ್ಯಕ್ತಿನಾಮಗಳಲ್ಲಿ ಕಾಣುವಂತೆ ಸ್ತ್ರೀ ವ್ಯಕ್ತಿನಾಮಗಳಲ್ಲಿ ಕಾಣುವುದಿಲ್ಲ. ನಿದರ್ಶನಕ್ಕೆ ಕೆಲವು ಉದಾಹರಣೆಗಳನ್ನು ಗಮನಿಸಬಹುದು.

**ಪುರುಷರಲ್ಲಿ**

| ಹಳೆಯರೂಪ | ಹೊಸರೂಪ |
|---|---|
| ಮಲ್ಲಾಚಾರಿ | ಮಲ್ಲೇಶ್ |
| ಯಲ್ಲಾಚಾರಿ | ಯಲ್ಲೇಶ್ |
| ವೀರಾಚಾರಿ | ವೀರೇಶ್ |
| ಸಿದ್ದೇಶಾಚಾರಿ | ಸಿದ್ದೇಶ್ |

ವಿಶ್ವಕರ್ಮ ಸಮುದಾಯದಲ್ಲಿ ತಲೆಮಾರಿನಿಂದ ತಲೆಮಾರಿಗೆ ವ್ಯಕ್ತಿನಾಮ ನಿರ್ದಿಷ್ಟಗಳು ಬದಲಾಗುತ್ತಾ ಬಂದಿವೆ. ಪುರುಷರಲ್ಲಿ ಸಂಬಂಧವಾಚಿ ಹಾಗೂ ವೃತ್ತಿ/ಜಾತಿವಾಚಿ ವಾರ್ಗಿಕಗಳು ಬಳಕೆಯಲ್ಲಿರುವುದು ಕಂಡುಬಂದರೆ, ಸ್ತ್ರೀಯರಲ್ಲಿ ಸಂಬಂಧವಾಚಿ ವಾರ್ಗಿಕಗಳು ಮಾತ್ರ ಕಂಡುಬರುತ್ತವೆ. ವಾರ್ಗಿಕಗಳ ಬಳಕೆಯೂ ಸಹ ತಲೆಮಾರಿನಿಂದ ತಲೆಮಾರಿಗೆ ವ್ಯತ್ಯಾಸಗಳನ್ನು ಪಡೆದಿರುವುದು ಗೋಚರಿಸುತ್ತದೆ.

ಪ್ರಸ್ತುತ ಅಧ್ಯಾಯದಲ್ಲಿ ವಿಶ್ವಕರ್ಮ ಸಮುದಾಯದ ೧೦೦ ಹೆಸರುಗಳನ್ನು ವಿಶ್ಲೇಷಣೆಗೆ ಒಳಗು ಮಾಡಲಾಗಿದ್ದು, ತಲೆಮಾರುಗಳಲ್ಲಿ ವ್ಯಕ್ತಿನಾಮಗಳ ಬಳಕೆಯಲ್ಲಾಗಿರುವ ಬದಲಾವಣೆಯನ್ನು ಅಂಕಿ-ಅಂಶಗಳ ಮೂಲಕ ತಿಳಿಯುವ ಪ್ರಯತ್ನ ಮಾಡಲಾಗಿದೆ.

## ವಿಶ್ವಕರ್ಮ ಸಮುದಾಯದ ವ್ಯಕ್ತಿನಾಮಗಳ ಮಾದರಿ ಸಮೀಕ್ಷೆ ಕೋಷ್ಟಕ ಪಟ್ಟಿ - ೯

| ತಲೆಮಾರು | ಧಾರ್ಮಿಕ ಪ್ರಭಾವ ಶೇಕಡವಾರು (%) | | | ಸಮಕಾಲೀನ ಪ್ರಸಿದ್ಧ ವ್ಯಕ್ತಿಗಳ ಪ್ರಭಾವ ಶೇಕಡವಾರು (%) | | | ಆಧುನೀಕರಣದ ಪ್ರಭಾವ ಶೇಕಡವಾರು (%) | | | ಚರಿತ್ರೆ ಪ್ರಭಾವ ಶೇಕಡವಾರು (%) | | | ಇತರೆ ಪ್ರಭಾವ ಶೇಕಡವಾರು (%) | | | ಒಟ್ಟು ಶೇಕಡವಾರು (%) | | |
|---|---|---|---|---|---|---|---|---|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೩ | ೬೧ | ೩೩ | ೫೪ | ೦೬ | - | ೦೪ | ೩೧ | ೬೬ | ೨೫ | - | - | - | ೦೨ | - | ೧೭ | ೭೫ | ೨೫ | ೨೪ |
| ೨ | ೮೫ | ೫೨ | ೬೮ | - | - | - | ೧೪ | ೪೭ | ೩೧ | - | - | - | - | - | - | ೪೮ | ೫೨ | ೪೪ |
| ೧ | ೮೮ | ೯೨ | ೯೦ | - | - | - | ೧೧ | ೦೭ | ೦೯ | - | - | - | - | - | - | ೫೬ | ೪೪ | ೩೨ |
| ಒಟ್ಟು | ೭೯ | ೬೨ | ೬೨ | ೦೨ | - | ೧೧ | ೧೮ | ೩೭ | ೨೩ | - | - | - | ೦.೬ | - | ೪ | ೫೭ | ೪೩ | - |

ಕೋಷ್ಟಕ ೧.೧೬

ಮೇಲಿನ ಕೋಷ್ಟಕವನ್ನು ಗಮನಿಸಿದರೆ, ವಿಶ್ವಕರ್ಮ ಸಮುದಾಯದಲ್ಲಿ ದೈವಸಂಬಂಧಿ ಹೆಸರುಗಳು ಬಳಕೆ ಅಧಿಕವಾಗಿರುವುದು ತಿಳಿಯುತ್ತದೆ. ಮೊದಮೊದಲು ಹೆಚ್ಚಾಗಿ ದೈವಸಂಬಂಧಿ ಹೆಸರುಗಳೇ ಅಧಿಕವಾಗಿ ಬಳಕೆಯಲ್ಲಿದ್ದು ಮುಂದಿನವರ ಹೆಸರುಗಳಲ್ಲಿ ಸ್ವಲ್ಪ ಪ್ರಮಾಣದಲ್ಲಿ ಕಡಿಮೆಯಾಗುತ್ತಾ ಬಂದಿವೆ. ಆಧುನಿಕ ವ್ಯಕ್ತಿನಾಮಗಳೆಂದು ಗುರುತಿಸಲ್ಪಡುವ ಹೆಸರುಗಳು ಮೂರು ತಲೆಮಾರಿನವರಲ್ಲಿ ಕಾಣಬರುತ್ತಿದ್ದು, ತಲೆಮಾರಿನಿಂದ ತಲೆಮಾರಿಗೆ ಅಧಿಕವಾಗಿವೆ. ದೈವಸಂಬಂಧಿ ಹೆಸರುಗಳು ಪುರುಷರಲ್ಲಿ ಹಾಗೂ ಆಧುನಿಕರಣದ ಪ್ರಭಾವ ಸ್ತ್ರೀಯರಲ್ಲಿ ಅಧಿಕವಾಗಿರುವುದು ಕೋಷ್ಟಕದಿಂದ ಸ್ಪಷ್ಟವಾಗುತ್ತದೆ. ಇತರ ಪ್ರಭಾವ-ಪ್ರೇರಣೆಗಳು ಈ ಸಮುದಾಯದ ಮೇಲೆ ಆಗಿರುವುದು ಕಾಣಬಂದಿಲ್ಲ.

ವಿಶ್ವಕರ್ಮ ಸಮುದಾಯದ ವ್ಯಕ್ತಿನಾಮಗಳಲ್ಲಿ ಬಳಕೆಯಲ್ಲಿರುವ ವಾರ್ಗಿಕಗಳನ್ನು ಈ ರೀತಿಯಾಗಿ ಗುರುತಿಸಬಹುದು.

**ಪುರುಷರಲ್ಲಿ**

| ಸಂಬಂಧವಾಚಿ ವಾರ್ಗಿಕ | ವೃತ್ತಿ/ಜಾತಿವಾಚಿ ವಾರ್ಗಿಕ |
|---|---|
| ಅಪ್ಪ | ಆಚಾರಿ |
| ಅಣ್ಣ | ಬಡಿಗೇರ |

**ಸ್ತ್ರೀಯರಲ್ಲಿ**

| ಸಂಬಂಧವಾಚಿ ವಾರ್ಗಿಕ |
|---|
| ಅಮ್ಮ |

**ಆಚಾರಿ**

'ಆಚಾರಿ' ಎಂಬ ಪದಕ್ಕೆ 'ಆಚಾರವುಳ್ಳವನು' ಎಂಬ ಅರ್ಥವಿದ್ದರೂ, 'ಕಮ್ಮಾರ', 'ಬಡಗಿ', 'ಅಕ್ಕಸಾಲಿಗ' ಮತ್ತು 'ಶಿಲ್ಪಿ' ಮುಂತಾದ ಕೆಲಸಗಾರರ ಕುಲಕ್ಕೆ ಸೇರಿದವನು ಎಂಬುದನ್ನು ಸೂಚಿಸುತ್ತದೆ. 'ಆಚಾರಿ' ಎಂಬುದು ಮೂಲತಃ ವೃತ್ತಿಸೂಚಕ ಪದವಾಗಿದ್ದು, ಇಂದು ಮೇಲೆ ಸೂಚಿಸಿರುವ ಸಮುದಾಯಗಳ ಹೆಸರುಗಳಲ್ಲಿ 'ಜಾತಿವಾಚಿ' ವಾರ್ಗಿಕವಾಗಿ ಬಳಕೆಯಾಗಿದೆ. ಚಿತ್ರದುರ್ಗ ಪರಿಸರದ 'ಬಡಿಗ' (ವಿಶ್ವಕರ್ಮ) ಸಮುದಾಯದವರಲ್ಲಿ 'ಆಚಾರಿ' ಪದದ ಬಳಕೆ ಮೊದಲ ತಲೆಮಾರಿನವರಿಗಿಂತ, ಎರಡನೆ ತಲೆಮಾರಿನವರಲ್ಲಿ ವ್ಯಾಪಕವಾಗಿದೆ. ಹೊಸ ತಲೆಮಾರಿನವರಲ್ಲಿ ಇದರ ಬಳಕೆ ಮತ್ತೆ ಕಡಿಮೆಯಾಗಿದೆ. ೧೯೫೦-೬೦ರ ದಶಕಗಳಲ್ಲಿ ದೇಶೀಯ ಮಟ್ಟದಲ್ಲಿ ಜಾತಿಸಂಘಟನೆಗಳು ಹೆಚ್ಚು ಆಗ ತೊಡಗಿದವು. ಜಾತಿ ಸಂಘಟನೆಗಳು ನಡೆದದ್ದು ಕೂಡ ಸಾಮಾಜಿಕವಾಗಿ ಶೋಷಣೆಗೊಳಗಾದ ಸಮುದಾಯಗಳಲ್ಲಿ ಮಾತ್ರ. ಇದರ ಪ್ರಭಾವ ಆ ಪ್ರದೇಶದ ಇತರ ಮತ-ಧರ್ಮಗಳ ಮೇಲೆ ಪ್ರಭಾವ ಬೀರಿರುವಂತೆ, ವಿಶ್ವಕರ್ಮ ಸಮುದಾಯದ ಮೇಲೂ ಆಗಿದೆ. 'ಜಾತಿ' ಪ್ರಜ್ಞೆ ಜಾಗೃತವಾದ ಕಾರಣ, ತಮ್ಮ ಜಾತಿಯ ಅಧಿಕೃತತೆಯನ್ನು ಗುರುತಿಸಲು ವ್ಯಕ್ತಿನಾಮಗಳಲ್ಲಿ

ಜಾತಿನಾಮವನ್ನು ಅಂಟಿಸುವ ಪ್ರಕ್ರಿಯೆ ಅಧಿಕವಾಯಿತು. ಈ ಕಾರಣದಿಂದ ಎರಡನೆ ತಲೆಮಾರಿನವರಲ್ಲಿ 'ಆಚಾರಿ' ಎಂಬುದು ಹೆಚ್ಚು ಬಳಕೆಯಾಗಿರಬಹುದು. ಮೂರನೆ ತಲೆಮಾರಿಗೆ ಇದರ ಬಳಕೆ ಕಡಿಮೆಯಾಗಲು ಆಧುನೀಕರಣದ ಪ್ರಭಾವ ಕಾರಣವಾಗಿದೆ ಎಂದೆನ್ನಬಹುದು. 'ಆಚಾರಿ' ಎಂಬುದು ನಗರ ಪರಿಸರಕ್ಕಿಂತ ಗ್ರಾಮೀಣ ಪರಿಸರದಲ್ಲಿ ಹಾಗೂ ಅಕ್ಷರಸ್ಥರಿಗಿಂತ, ಅನಕ್ಷರಸ್ಥರ ವ್ಯಕ್ತಿನಾಮಗಳಲ್ಲಿ ಕೊಂಚ ಜಾಸ್ತಿಯಾಗಿ ಬಳಕೆಯಲ್ಲಿರುವುದು ತಿಳಿದುಬರುತ್ತದೆ.

### ಬಡಿಗೇರ

ಬಡಿಗೇರ ಎಂಬುದು ಮೂಲತಃ ವೃತ್ತಿವಾಚಿ ಪದವಾಗಿದ್ದು, ಇಂದು ಜಾತಿ ಸೂಚಕ ಅರ್ಥದಲ್ಲಿ ಬಳಸಲ್ಪಡುತ್ತದೆ. ಸಿದ್ದೇಶ್ ಬಡಿಗೇರ, ವೀರಣ್ಣ ಬಡಿಗೇರ, ವೀರೇಶ ಬಡಿಗೇರ, ಬಡಿಗೇರ ಭೀಮಣ್ಣ, ಬಡಿಗೇರ ಪ್ರಕಾಶ್ ಇತ್ಯಾದಿ. 'ಬಡಿಗೇರ' ಎಂಬುದು ಇತ್ತೀಚಿನ ಅಕ್ಷರಸ್ಥ ಪುರುಷರಲ್ಲಿ ಕಾಣಬರುತ್ತಿದ್ದು, ಹಿಂದಿನವರಲ್ಲಿ ಬಳಕೆಯಾದಂತೆ ತೋರುವುದಿಲ್ಲ. ಈ ಬೆಳವಣಿಗೆಗೆ ಆಧುನಿಕ ಸಂದರ್ಭದಲ್ಲಿ ಬಲಗೊಳ್ಳುತ್ತಿರುವ ಜಾತಿಸಂಘಟನೆಗಳ ಪ್ರಭಾವವೇ ಕಾರಣವಾಗಿರಬಹುದು. ಅಧ್ಯಯನಕ್ಕೆ ಬಳಸಿಕೊಂಡಿರುವ ವ್ಯಕ್ತಿನಾಮಗಳಲ್ಲಿ ಕಾಣಬರುವ ವಾರ್ಗಿಕಗಳು ತಲೆಮಾರುಗಳ ಅಂತರದಲ್ಲಿ ಯಾವ ರೀತಿ ಪ್ರಯೋಗವಾಗಿವೆ ಎಂಬುದನ್ನು ಶೇಕಡವಾರು ಪ್ರಮಾಣದಲ್ಲಿ ಹೀಗೆ ಗುರುತಿಸಬಹುದು.

| ಪುರುಷ ವಾರ್ಗಿಕ<br>ಸಂಬಂಧವಾಚಿ ವಾರ್ಗಿಕ | | | ವೃತ್ತಿ/ಜಾತಿವಾಚಿ ವಾರ್ಗಿಕ | | ಸ್ತ್ರೀ ವಾರ್ಗಿಕ |
|---|---|---|---|---|---|
| ತಲೆಮಾರು | ಅಪ್ಪ | ಅಣ್ಣ | ಆಚಾರಿ | ಬಡಿಗೇರ | ಅಮ್ಮ |
| ೩ | - | ೫ | ೫೦ | ೩ | - |
| ೨ | ೧೪ | - | ೫೭ | ೨ | ೫೨ |
| ೧ | ೪೪ | - | ೩೮ | - | ೬೨ |
| ಒಟ್ಟು | ೧೯ | ೧.೮ | ೪೯ | ೧.೫ | ೫೮ |
| ಸರಾಸರಿ | ೨೧ | | ೫೦ | ೫೮ | |

ಕೋಷ್ಟಕ ೧.೧೭

ಮೇಲಿನ ಪಟ್ಟಿಯ ವ್ಯಕ್ತಿನಾಮಗಳ ಆಯಾಮಗಳನ್ನು ಗಮನಿಸಿದರೆ, ದೈವಮೂಲದ ಹೆಸರುಗಳು ಬೇರೆ ಬಗೆಯ ವ್ಯಕ್ತಿನಾಮಗಳಿಗಿಂತ ಅಧಿಕವಾಗಿ ಬಳಕೆಯಾಗಿರುವುದು ತಿಳಿಯುತ್ತದೆ. ವಿಶ್ವಕರ್ಮ ಸಮುದಾಯವರಲ್ಲಿ ಸಂಬಂಧವಾಚಿ ವಾರ್ಗಿಕಗಳ ಬಳಕೆ ಕಡಿಮೆಯೆಂದೇ ಹೇಳಬಹುದು. 'ಅಪ್ಪ' ಎಂಬುದು ಹಳೆಯ ತಲೆಮಾರಿನವರ ಹೆಸರುಗಳಲ್ಲಿ ಸ್ವಲ್ಪಮಟ್ಟಿಗೆ ವ್ಯಾಪಕವಾಗಿ ಕಂಡುಬಂದರೂ, ನಂತರದವರಲ್ಲಿ ಬಿಟ್ಟುಹೋಗಿದೆ. 'ಅಣ್ಣ' ಎಂಬುದು ಮೊದಲೆರಡು ತಲೆಮಾರುಗಳಲ್ಲಿ ಕಾಣಬರುವುದಿಲ್ಲ. ಇತ್ತೀಚಿಗೆ ಕೆಲವರ ಹೆಸರುಗಳಲ್ಲಿ ಮಾತ್ರ ಎಡೆಪಡೆದಿದೆ. ಸ್ತ್ರೀಯರಲ್ಲಿ 'ಅಮ್ಮ' ಎಂಬುದು ಮಾತ್ರ ಬಳಕೆಯಾಗುತ್ತಿರುವುದು ಕಾಣಬರುತ್ತಿದೆ. ಮೊದಲ ತಲೆಮಾರಿನವರಲ್ಲಿ ಹೆಚ್ಚು ಬಳಕೆಯಲ್ಲಿದ್ದು, ಎರಡನೆ ತಲೆಮಾರಿಗೆ ಕಡಿಮೆಯಾಗುತ್ತಾ ಬಂದಿದೆ. ಅಲ್ಲದೆ ಮೂರನೆ ತಲೆಮಾರಿನವರಲ್ಲಿ ಹಿಂದೆಸರಿದಿದೆ. 'ಆಚಾರಿ' ಎಂಬುದು

ಮೊದಲ ತಲೆಮಾರಿನವರಲ್ಲಿ ಕಡಿಮೆಯಿದ್ದು, ಎರಡನೆ ತಲೆಮಾರಿಗೆ ಅಧಿಕವಾಗಿದೆ. ಪುನಃ ಇತ್ತೀಚಿನವರ ಹೆಸರುಗಳಲ್ಲಿ ಅದರ ಬಳಕೆ ಕಡಿಮೆಯಾಗಿರುವುದು ತಿಳಿದುಬರುತ್ತದೆ. 'ಬಡಿಗೇರ' ಎಂಬುದು ಇತ್ತೀಚಿನವರ ಹೆಸರುಗಳಲ್ಲಿ ಬಳಕೆಯಾಗುತ್ತಿದೆ ಎಂಬುದು ಕೋಷ್ಟಕದಿಂದ ಸ್ಪಷ್ಟವಾಗುತ್ತದೆ.

### ೩.೫.೯ ನಾಯಕ

ಕರ್ನಾಟಕದ ಹಲವು ಬುಡಕಟ್ಟು ಸಮುದಾಯಗಳಲ್ಲಿ ನಾಯಕ ಸಮುದಾಯವೂ ಒಂದು. ಈ ಸಮುದಾಯವನ್ನು 'ವಾಲ್ಮೀಕಿ', 'ಬೇಡ', 'ಕಿರಾತ', 'ತಳವಾರ' ಎಂಬಿತ್ಯಾದಿ ಬೇರೆ ಬೇರೆ ಹೆಸರುಗಳಿಂದಲೂ ಕರೆಯುತ್ತಾರೆ. ಕರ್ನಾಟಕದ ಹಲವು ಜಿಲ್ಲೆಗಳಲ್ಲಿ ಈ ಸಮುದಾಯ ನೆಲೆಸಿರುವುದು ಕಂಡುಬಂದರೂ, ಚಿತ್ರದುರ್ಗ ಪರಿಸರದಲ್ಲಿ ಹೆಚ್ಚು ನೆಲೆಸಿದ್ದಾರೆ. ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಹಿಂದುಳಿದ ಜನಾಂಗವಾಗಿದೆ. ಪಶುಸಂಗೋಪನೆಯಂತಹ ಮೂಲ ವೃತ್ತಿಗಳಿಂದ, ಕೃಷಿ ಮತ್ತಿತರ ವೃತ್ತಿಗಳಿಗೆ ಇತ್ತೀಚಿಗಷ್ಟೆ ಪಲ್ಲಟವಾಗುತ್ತಿರುವುದು ಕಾಣಬರುತ್ತದೆ.

ಬುಡಕಟ್ಟು ಸಂಸ್ಕೃತಿಯ ಜೀವನ ವಿಧಾನ, ಆರಾಧನಾ ಪದ್ಧತಿಗಳನ್ನೂ ಈಗಲೂ ಉಳಿಸಿಕೊಂಡಿರುವ ಈ ಸಮುದಾಯ, ಸಮಕಾಲೀನ ಸವಾಲುಗಳಿಗೆ ಹೇಗೆ ಪ್ರತಿಕ್ರಿಯಿಸಿದೆ ಎಂಬುದನ್ನು ಒಂದು ಮುಖ್ಯ ಪ್ರಶ್ನೆಯನ್ನಾಗಿ ಮಾಡಿಕೊಂಡು, ಆ ದಿಸೆಯಲ್ಲಿ ವ್ಯಕ್ತಿನಾಮ ನಿರ್ದೇಶನದಲ್ಲಿ ಆಗಿರುವ ಬದಲಾವಣೆ ಮತ್ತು ಅವುಗಳ ಸಾಮಾಜಿಕ ಆಯಾಮಗಳನ್ನು ಕುರಿತು ಇಲ್ಲಿ ಚರ್ಚಿಸಲಾಗುವುದು.

ತಲೆಮಾರುಗಳಲ್ಲಿ ಕಂಡುಬರುವ ಕೆಲವು ವ್ಯಕ್ತಿನಾಮ ಮಾದರಿಗಳನ್ನು ಈ ಕೆಳಗಿನಂತೆ ಸೂಚಿಸಬಹುದು.

ಪುರುಷರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
|---|---|---|
| ಪಾಲಯ್ಯ | ಅಜ್ಜಯ್ಯ | ಉಮೇಶ್ ನಾಯಕ |
| ಬೋರಯ್ಯ | ತಿಪ್ಪಯ್ಯ | ಬಸವರಾಜನಾಯಕ |
| ಪಾಪನಾಯಕ | ಮಾರನಾಯಕ | ಪ್ರವೀಣ್ ನಾಯಕ |
| ಬೋಸಯ್ಯ | ಮದಕರಿನಾಯಕ | ಶಿವಪ್ರಕಾಶ್ ನಾಯಕ |
| ಓಬನಾಯಕ | ನಾಗರಾಜ | ಗಜೇಂದ್ರಕುಮಾರ |
| ಜಗಳೂರಯ್ಯ | ಮಹದೇವಪ್ಪ | ಪ್ರಭಾಕರ |
| ಕಾಮಯ್ಯ | ನುಂಕಪ್ಪ | ಮಂಜುನಾಥ |
| ಮುತ್ತಯ್ಯ | ಸೂರಯ್ಯ | ಶಶಿಧರ |
| ಕಾಟಪ್ಪನಾಯಕ | ಬೊಮ್ಮನಾಯಕ | ಅರುಣ್ ನಾಯಕ |
| ಪಾಲನಾಯಕ | ಬೋರನಾಯಕ | ಶಿವಪ್ರಕಾಶ್ ನಾಯಕ |
| ರಂಗನಾಯಕ | ಚಿತ್ರನಾಯಕ | ಮಾರುತಿನಾಯಕ |

ಸ್ತ್ರೀ ಹೆಸರುಗಳಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
| --- | --- | --- |
| ಬೋಸಮ್ಮ | ತಿಪ್ಪಮ್ಮ | ಸರಸ್ವತಿ |
| ಪಾಪಮ್ಮ | ಚಿತ್ರಕ್ಕ | ರಾಧ |
| ಮಾರಕ್ಕ | ಪಾರ್ವತಮ್ಮ | ಶಕುಂತಲ |
| ಮಲ್ಲಮ್ಮ | ಶಿವಮ್ಮ | ಮಹದೇವಿ |
| ಪಾಪಮ್ಮ | ಲಕ್ಷ್ಮಕ್ಕ | ಶ್ವೇತಾನಾಯಕ |
| ಸೂರಮ್ಮ | ಚನ್ನಮ್ಮ | ಕಮಲ |
| ಬೊಮ್ಮಕ್ಕ | ಲೀಲಾವತಿ | ಜ್ಯೋತಿ |
| ಓಬಮ್ಮ | ಮಂಜುಳಮ್ಮ | ಸ್ವಪ್ನ |

ಪುರುಷ ಮತ್ತು ಸ್ತ್ರೀಯರ ಒಂದು ಮತ್ತು ಎರಡನೆ ತಲೆಮಾರಿನವರಲ್ಲಿ ಬಹುತೇಕ ವ್ಯಕ್ತಿನಾಮಗಳು, ಧಾರ್ಮಿಕ ಪರಂಪರೆಯಿಂದ ಪ್ರೇರಣೆ ಪಡೆದವುಗಳಾಗಿವೆ. ಜೊತೆಗೆ ಅವು ಆ ಸಮುದಾಯಕ್ಕೆ ಸಂಬಂಧಿಸಿದ ದೈವಗಳ ಪ್ರಭಾವದಿಂದ ಬಂದಿವೆ. ಮೊದಲೆರೆಡು ತಲೆಮಾರಿನ ಎರಡೂ ವರ್ಗದ ವ್ಯಕ್ತಿನಾಮ ನಿರ್ದಿಷ್ಟಗಳಲ್ಲಿ ವ್ಯಾಪಕ ಬದಲಾವಣೆಗಳೇನು ಕಾಣಬರುವುದಿಲ್ಲ. ಮೂರನೆ ತಲೆಮಾರಿನ ವ್ಯಕ್ತಿನಾಮಗಳು ಪರಂಪರಾಗತ ವ್ಯಕ್ತಿನಾಮಗಳಿಗಿಂತ ಭಿನ್ನವಾಗಿದ್ದು, ಈ ಸಮುದಾಯಕ್ಕೆ ಈ ಹೆಸರುಗಳು ಇತ್ತೀಚಿಗೆ ಪ್ರವೇಶ ಪಡೆದಿವೆ. ಮೊದಲೆರೆಡು ತಲೆಮಾರುಗಳು ಧರ್ಮ, ದೈವದೊಂದಿಗೆ ಅವಿನಾಭಾವ ಸಂಬಂಧವನ್ನು ಇಟ್ಟುಕೊಂಡು, ಹೆಚ್ಚು ಪ್ರತಿಕ್ರಿಯಿಸಿದರೆ, ಹೊಸ ತಲೆಮಾರಿನವರು ಹಿಂದಿನ ಜನರ ಧೋರಣೆಗಳಿಗೆ ಬದಲಾಗಿ, ಹೊಸ ಸಮಾಜದೊಂದಿಗೆ ಹೆಚ್ಚು ಮುಖಾಮುಖಿಯಾಗುತ್ತಿರುವುದು ವ್ಯಕ್ತಿನಾಮಗಳಿಂದ ತಿಳಿದುಬರುತ್ತದೆ. ಸಾಮಾಜಿಕವಾಗಿ ಕೆಳಸ್ತರದ ಸಮುದಾಯವೆಂದು ಪರಿಗಣಿಸಿರುವ 'ನಾಯಕ' ಜನಾಂಗದವರು ತಮ್ಮ ಸಂಸ್ಕೃತಿಗೆ ಹೊರತಾದ, ಬೇರೆ ಮೂಲದಿಂದ ವ್ಯಕ್ತಿನಾಮಗಳನ್ನು ಸ್ವೀಕರಿಸಿದ್ದಾರೆ. ವೈಷ್ಣವ ಮತ್ತು ಶೈವಮೂಲದ ಹೆಸರುಗಳೂ ಈ ಜನಾಂಗದ ಪುರುಷ ಮತ್ತು ಸ್ತ್ರೀಯರಲ್ಲಿ ಕಂಡುಬರುತ್ತವೆ. ಹೀಗೆ ಅನ್ಯ ಮೂಲದಿಂದ ಸ್ವೀಕರಿಸಿದಾಗಲೂ ತಮ್ಮ ಸಮುದಾಯದ ನಾಮರಚನಾ ವಿನ್ಯಾಸಕ್ಕೆ ಅನುಗುಣವಾಗಿ ಮಾರ್ಪಾಟು ಮಾಡಿಕೊಂಡಿರುವುದನ್ನು ಗಮನಿಸಬಹುದು. ವೈಷ್ಣವ ಮೂಲದ 'ಕೃಷ್ಣ', 'ರಾಮ', 'ಲಕ್ಷ್ಮಿ' ಎಂಬ ಹೆಸರುಗಳನ್ನು ಈ ಸಮುದಾಯ ಕೃಷ್ಣಯ್ಯ, ಕೃಷ್ಣಪ್ಪ, ಕೃಷ್ಣಾನಾಯಕ ಎಂದು ಮಾಡಿಕೊಂಡರೆ 'ರಾಮ'ನ ಹೆಸರನ್ನು, ರಾಮಯ್ಯ, ರಾಮಪ್ಪ, ರಾಮಣ್ಣ, ರಾಮಾನಾಯಕ ಎಂದೂ ಸ್ತ್ರೀ ಹೆಸರುಗಳಲ್ಲಿ ಇದೇ ಪುರುಷ ನಿರ್ದಿಷ್ಟಗಳಿಗೆ ಸ್ತ್ರೀ ಸೂಚಕ ವಾರ್ಗಿಕಗಳನ್ನು ಅಂಟಿಸಿಯೂ ನಿರ್ದೇಶಿಸಿಕೊಂಡಿರುವುದಿದೆ. 'ಲಕ್ಷ್ಮಿ' ಎಂಬ ಹೆಸರನ್ನು 'ಲಕ್ಷ್ಮಮ್ಮ', 'ಲಕ್ಷ್ಮಪ್ಪ', 'ಲಕ್ಷ್ಮಕ್ಕ' ಎಂದು ಸಂಬಂಧಸೂಚಕ ವಾರ್ಗಿಕಗಳನ್ನು ಅಂಟಿಸಿಯೇ ಇಟ್ಟುಕೊಳ್ಳುತ್ತಾರೆ. ಆದರೆ ಹೊಸ ತಲೆಮಾರಿನವರಲ್ಲಿ ಈ ಪ್ರಕ್ರಿಯೆ ಬದಲಾಗಿರಲೂಬಹುದು.

( ನಾಯಕರಲ್ಲಿ ತಲೆತಲಾಂತರವಾಗಿ ಬಂದ ಹೆಸರುಗಳು ಆಧುನಿಕ ಸಂದರ್ಭದಲ್ಲಿ ಕಡಿಮೆಯಾಗುತ್ತಿವೆ ಎಂಬುದು ದತ್ತಾಂಶಗಳಿಂದ ತಿಳಿದುಬರುತ್ತದೆ. ಈ ಸಮುದಾಯ ಆಧುನಿಕ ಹೆಸರುಗಳೆಂದು ಭಾವಿಸಿ

ನಿರ್ದೇಶಿಸಿಕೊಳ್ಳುತ್ತಿರುವ ಹೆಸರುಗಳು ಭಾವನಾಮಗಳಿಗಿಂತ, ವೈಷ್ಣವ ಮತ್ತು ಶೈವ ಮೂಲದ ಹೆಸರುಗಳೇ ಅಧಿಕವಾಗಿವೆ. ಧಾರ್ಮಿಕ ಮೂಲದ ಈ ಹೆಸರುಗಳನ್ನು ಕೆಳ ಸಮುದಾಯಗಳ ಆಧುನಿಕ ಹೆಸರುಗಳೆಂದು ಭಾವಿಸಿವೆ. ಮೇಲ್ಜಾತಿಗಳಲ್ಲಿ ಈ ಹೆಸರುಗಳು ಈ ಮುಂಚೆ ಬಳಕೆಯಾಗಿದ್ದು, ಮೇಲ್ ಸಮುದಾಯಗಳಿಗೆ ಈ ಹೆಸರುಗಳು ಹಳೆಯ ಹೆಸರುಗಳಾಗಿರುತ್ತವೆ.

ವೈಷ್ಣವ ಮತ್ತು ಶೈವಮೂಲದ ಹೆಸರುಗಳನ್ನು ಈ ಸಮುದಾಯ ಇಟ್ಟುಕೊಳ್ಳುವಾಗ ತನ್ನ ಸಮುದಾಯದ ನಾಮರಚನಾ ಕ್ರಮಕ್ಕೆ ಮಾರ್ಪಾಟು ಮಾಡಿಕೊಳ್ಳುತ್ತದೆ ಎಂಬ ಮಾತನ್ನು ಈ ಹಿಂದೆ ಹೇಳಲಾಗಿದೆ. ಈ ನಿಯಮಕ್ಕೆ ಕೆಲವು ಮಿತಿಗಳಿವೆ. ಹಳೆಯ ತಲೆಮಾರಿನ ವ್ಯಕ್ತಿನಾಮಗಳಿಗೆ ಮಾತ್ರ ಈ ನಿಯಮ ಹೊಂದುತ್ತಿದ್ದು, ಹೊಸ ತಲೆಮಾರಿನ ವ್ಯಕ್ತಿನಾಮಗಳಿಗೆ ಈ ನಿಯಮ ಅನ್ವಯಿಸುವುದಿಲ್ಲ. 'ಬಸವರಾಜ', 'ಮುರಳೀಧರ' ಎಂಬ ಹೆಸರುಗಳು ಆಧುನಿಕರಲ್ಲಿ ಯಾವುದೇ ಸಂಬಂಧ ಸೂಚಕವನ್ನು ಅಂಟಿಸಿಕೊಳ್ಳದೆ ಹಾಗೆಯೇ ಬಳಕೆಯಾಗುತ್ತವೆ. ಏಕೆಂದರೆ ಹೆಸರಿನ ಕೊನೆಗೆ ಸಂಬಂಧವಾಚಿ ವಾರ್ಗಿಕಗಳನ್ನು ಅಂಟಿಸಿಕೊಳ್ಳುವುದು ಹಳೆಯ ಕ್ರಮ ಎಂಬ ಭಾವನೆ ಹೊಸ ತಲೆಮಾರಿನವರ ಭಾವನೆಯಾಗಿರಬಹುದು.

'ನಾಯಕ' ಜನಾಂಗಕ್ಕೆ ಸಂಬಂಧಪಟ್ಟ ದೈವ, ಚರಿತ್ರೆ, ಸಾಂಸ್ಕೃತಿಕ ವೀರರ (ಹೆಸರುಗಳು) ಪ್ರಭಾವ ಈ ಸಮುದಾಯದ ಮೇಲಾಗಿದೆ. ಪಾಪಯ್ಯ, ಮಲ್ಲಯ್ಯ, ಮುತ್ತಯ್ಯ, ಓಬಯ್ಯ ಇತ್ಯಾದಿ ಈ ಹೆಸರುಗಳು ಸಾಮಾಜಿಕವಾಗಿ ಕೆಳಸ್ತರದ ಸಮುದಾಯಗಳ ವ್ಯಕ್ತಿನಾಮಗಳ ಮೇಲೂ ಪ್ರಭಾವಬೀರಿವೆ. ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ದಕ್ಷಿಣಭಾಗದ ಕೆಲವು ಪ್ರದೇಶಗಳಲ್ಲಿ ಇದರ ಪ್ರಸರಣವನ್ನು ಗುರುತಿಸಬಹುದು.

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ನಾಯಕ ಸಮುದಾಯದ ೧೧೨೮ ವ್ಯಕ್ತಿನಾಮಗಳಲ್ಲಿ ಯಾವ ಯಾವ ಮೂಲದ ಹೆಸರು, ಯಾವ ತಲೆಮಾರಿನವರಲ್ಲಿ ಎಷ್ಟೆಷ್ಟು ಪ್ರಮಾಣದಲ್ಲಿ ಬಳಕೆಯಾಗಿವೆ, ಕಾಲಾಂತರದಲ್ಲಿ ಅವುಗಳ ಬಳಕೆಯಲ್ಲಾಗಿರುವ ಬದಲಾವಣೆಗಳನ್ನು ಶೇಕಡವಾರು ಅಂಕಿ-ಸಂಖ್ಯೆಗಳ ಮೂಲಕ ಚರ್ಚಿಸಬಹುದು.

## ನಾಯಕ ಸಮುದಾಯದ ವ್ಯಕ್ತಿನಾಮಗಳ ಮಾದರಿ ಸಮೀಕ್ಷೆ ಕೋಷ್ಟಕ ಪಟ್ಟಿ - ೧೦

| ತಲೆ ಮಾರು | ಧಾರ್ಮಿಕ ಪ್ರಭಾವ ಶೇಕಡವಾರು (%) | | | ಸಮಕಾಲೀನ ಪ್ರಸಿದ್ಧ ವ್ಯಕ್ತಿಗಳ ಪ್ರಭಾವ ಶೇಕಡವಾರು (%) | | | ಆಧುನೀಕರಣದ ಪ್ರಭಾವ ಶೇಕಡವಾರು (%) | | | ಚರಿತ್ರೆ ಪ್ರಭಾವ ಶೇಕಡವಾರು (%) | | | ಇತರೆ ಪ್ರಭಾವ ಶೇಕಡವಾರು (%) | | | ಒಟ್ಟು ಶೇಕಡವಾರು (%) | | |
|---|---|---|---|---|---|---|---|---|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೩ | ೮೨ | ೫೨ | ೭೫ | ೦.೫ | - | ೦.೪ | ೧೩ | ೪೮ | ೨೦ | ೧ | - | ೦.೫ | ೪ | - | ೩ | ೭೮ | ೨೨ | ೨೬ |
| ೨ | ೯೩ | ೮೨ | ೮೭ | - | - | - | ೩ | ೧೩ | ೮ | ೨ | ೦.೪ | ೧ | ೩ | ೪ | ೩ | ೪೩ | ೫೭ | ೪೮ |
| ೧ | ೧೦೦ | ೧೦೦ | ೧೦೦ | - | - | - | - | - | - | - | - | - | - | - | - | ೫೦ | ೫೦ | ೨೫ |
| ಒಟ್ಟು | ೯೦ | ೮೩ | ೮೭ | ೦.೨ | - | ೦.೦೮ | ೭ | ೧೪ | ೧೦ | ೧ | ೦.೨ | - | ೨.೭ | ೨ | ೨.೫ | ೫೪ | ೪೫ | - |

ಕೋಷ್ಟಕ ೧.೧೮

ನಾಯಕ ಸಮುದಾಯದಲ್ಲಿ ಮೊದಲ ತಲೆಮಾರಿನ ಪುರುಷ ಮತ್ತು ಸ್ತ್ರೀಯರಲ್ಲಿ ಧಾರ್ಮಿಕ ಪ್ರೇರಣೆ-ಪ್ರಭಾವ ದಟ್ಟವಾಗಿದ್ದು, ಇದು ದೈವ ಮತ್ತು ಸಮಾಜದ ನಡುವೆ ಇರುವ ಗಾಢ ಸಂಬಂಧವನ್ನು ಸೂಚಿಸುತ್ತದೆ. ಮುಂದಿನ ತಲೆಮಾರುಗಳಲ್ಲಿ ನಿಧಾನವಾಗಿ ದೈವಸಂಬಂಧಿ ಹೆಸರುಗಳ ಬಳಕೆ ಕಡಿಮೆಯಾಗುತ್ತಿದ್ದು, ಪುರುಷರಿಗಿಂತ ಸ್ತ್ರೀಯರಲ್ಲಿ ತೀವ್ರವಾಗಿ ಕಡಿಮೆಯಾಗುತ್ತಿರುವುದು ಮೇಲಿನ ದತ್ತಾಂಶಗಳಿಂದ ಸ್ಪಷ್ಟವಾಗುತ್ತದೆ. ಆಧುನೀಕರಣದ ಪ್ರಭಾವ ಮೊದಲ ತಲೆಮಾರಿನವರಲ್ಲಿ ಆಗಿರದೆ, ನಂತರದವರಲ್ಲಿ ಕಾಣಬರುತ್ತದೆ. ಈ ಪ್ರಕ್ರಿಯೆ ಸ್ತ್ರೀ ವ್ಯಕ್ತಿನಾಮಗಳಲ್ಲಿ ಅಧಿಕವಾಗಿರುವುದು ಗಮನಾರ್ಹ. ಇತಿಹಾಸ ವ್ಯಕ್ತಿಗಳ ಪ್ರಭಾವ ಎರಡನೆಯ ತಲೆಮಾರಿನಲ್ಲಿ ಸ್ವಲ್ಪಮಟ್ಟಿಗೆ ಕಾಣಬರುತ್ತಿದ್ದು, ಇತ್ತೀಚಿನವರ ಹೆಸರುಗಳಲ್ಲಿ ಅದರ ಪ್ರಭಾವ ಮರೆಯಾಗಿದೆ. ಇತರೆ ಪ್ರಭಾವಗಳು ಇತ್ತೀಚಿನ ವ್ಯಕ್ತಿನಾಮಗಳ ಮೇಲೆ ಬಹಳ ಕಡಿಮೆ ಪ್ರಮಾಣದಲ್ಲಿ ಪ್ರೇರಣೆಯನ್ನುಂಟುಮಾಡಿವೆ.

## ವಾರ್ಗಿಕ

ನಾಯಕ ಸಮುದಾಯದ ವ್ಯಕ್ತಿನಾಮಗಳಲ್ಲಿ ಬಳಕೆಯಾಗುವ ವಾರ್ಗಿಕಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಲಾಗಿದೆ.

**ಪುರುಷರಲ್ಲಿ**

| ಸಂಬಂಧವಾಚಿ ವಾರ್ಗಿಕ | ವೃತ್ತಿ/ಜಾತಿವಾಚಿ ವಾರ್ಗಿಕ |
|---|---|
| ಅಪ್ಪ | ನಾಯಕ |
| ಅಯ್ಯ | ಗೌಡ |
| ಅಣ್ಣ | ಪಟೇಲ |
| ಅಜ್ಜ | ಅರಸ |
| | ರಾಜ |
| | ದೊರೆ |
| | ದಳವಾಯಿ |
| | ರೆಡ್ಡಿ |

**ಸ್ತ್ರೀಯರಲ್ಲಿ**

| ಸಂಬಂಧವಾಚಿ ವಾರ್ಗಿಕ | ವೃತ್ತಿ/ಜಾತಿವಾಚಿ ವಾರ್ಗಿಕ |
|---|---|
| ಅಮ್ಮ | ನಾಗತಿ |
| ಅವ್ವ | ನಾಯಕ |
| ಅಕ್ಕ | |
| ಅಜ್ಜಿ | |

ಸಂಬಂಧವಾಚಿ ವಾರ್ಗಿಕಗಳು ಎಲ್ಲಾ ಸಮುದಾಯದ ವ್ಯಕ್ತಿನಾಮಗಳಲ್ಲಿ ಬಳಕೆಯಾಗುವುದರಿಂದ, ವ್ಯಕ್ತಿನಾಮಗಳಲ್ಲಿ ಅದೊಂದು ಸಾಮಾನ್ಯ ಪ್ರಕ್ರಿಯೆಯಾಗಿದೆ. ನಾಯಕ ಜನಾಂಗದ ವ್ಯಕ್ತಿನಾಮಗಳಲ್ಲಿ ಲಿಂಗ, ತಲೆಮಾರುಗಳ ನಡುವೆ ಸಂಬಂಧವಾಚಿ ವಾರ್ಗಿಕಗಳ ಆಯಾಮಗಳನ್ನು ಕುರಿತು ಮುಂದಿನ ಭಾಗದಲ್ಲಿ ಚರ್ಚಿಸಲಾಗುವುದು.

ನಾಯಕ ಸಮುದಾಯಕ್ಕೆ ಐತಿಹಾಸಿಕ ಹಿನ್ನಲೆಯಿರುವಂತೆ ಮಹತ್ವವೂ ಇದೆ. ಅನೇಕ ರಾಜಮನೆತನಗಳ ಸೈನ್ಯ ವ್ಯವಸ್ಥೆಯಲ್ಲಿ ಬೇಡರು/ನಾಯಕರು ಇದ್ದರು ಎಂಬುದು ಚರಿತ್ರೆಯಿಂದ ತಿಳಿದುಬರುತ್ತದೆ. 'ರಣಕಲಿ'ಗಳೆಂದೇ ಹೆಸರಾಗಿದ್ದ ಈ ಜನಾಂಗ, ಸೈನ್ಯದಲ್ಲಿ ಪಾಲ್ಗೊಳ್ಳುವುದು ಮಾತ್ರವಲ್ಲ ಸೈನ್ಯದ 'ನಾಯಕತ್ವ'ವನ್ನು ವಹಿಸುತ್ತಿದ್ದರು. ಇದರಿಂದಾಗಿ ಆ ವೃತ್ತಿ ಸಮುದಾಯದೊಂದಿಗೆ ನಿರ್ದೇಶಿಸಲ್ಪಟ್ಟಿದೆ. ಬರಬರುತ್ತ ಈ ವೃತ್ತಿವಾಚಿ ಪದವಿ ಜಾತಿವಾಚಿ ಅರ್ಥದಲ್ಲಿ ಬಳಕೆಯಾಗುತ್ತಿದೆ. ಅಂದರೆ ಮೂಲತಃ 'ನಾಯಕ' ಎಂಬುದು ವೃತ್ತಿವಾಚಿಯಾಗಿದ್ದು ಇಂದು ಜಾತಿವಾಚಿಯಾಗಿ ಬಳಕೆಯಾಗುತ್ತಿದೆ.

ಸೈನಿಕ ವೃತ್ತಿಯಲ್ಲಿದ್ದ ಈ ಸಮುದಾಯ ಮುಂದಿನ ಬೇರೆ ಬೇರೆ ಕಾಲಘಟ್ಟಗಳಲ್ಲಿ ಪಾಳೆಯಗಾರರಾಗಿ, ಅಧೀನ ಅರಸರಾಗಿ, ಸ್ವತಂತ್ರರಾಜರಾಗಿ ಆಡಳಿತ ನಡೆಸಿದ್ದಾರೆ. ಇದರ ಪಳೆಯುಳಿಕೆಗಳಾಗಿ ರಾಜ, ದೊರೆ, ಅರಸ (ಮೂರು ಒಂದೇ ಅರ್ಥವನ್ನು ಸೂಚಿಸುವ ಬೇರೆ ಬೇರೆ ಪದಗಳು) 'ದಳವಾಯಿ' ಎಂಬ ವೃತ್ತಿವಾಚಿ ವಾರ್ಗಿಕಗಳು ಇಂದಿಗೂ ನಾಯಕ ಜನಾಂಗದ ವ್ಯಕ್ತಿನಾಮಗಳಲ್ಲಿ ಬಳಕೆಯಾಗುತ್ತಿವೆ. ಆ ಸಮುದಾಯಕ್ಕೆ ಸಂಬಂಧಿಸಿದವರು. ರಾಜಮನೆತನದ ಪರಂಪರೆಯ ಮುಂದುವರಿಕೆಯಾಗಿ, ಪ್ರತಿಷ್ಠೆ, ಅಭಿಮಾನದಿಂದ ಉಳಿಸಿಕೊಂಡು ಬಂದಿದ್ದಾರೆ. ಇದರ ವ್ಯಾಪ್ತಿ ಕರ್ನಾಟಕದಾದ್ಯಂತ ಇದ್ದು, ಉತ್ತರ ಕರ್ನಾಟಕದಲ್ಲಿ ಗಮನಾರ್ಹವಾಗಿದೆ. ಕನ್ನಡ ಪರಿಸರದಲ್ಲಿ ಈ ವಾರ್ಗಿಕಗಳು ನಾಯಕ ಸಮುದಾಯದಲ್ಲಿ ಮಾತ್ರ ಕಾಣಬರುತ್ತಿವೆ.

### ನಾಯಕ (ವಾರ್ಗಿಕ)

ಚಿತ್ರದುರ್ಗ ಪರಿಸರದ ನಾಯಕ ಸಮುದಾಯದ ಇತ್ತೀಚಿನವರಲ್ಲಿ 'ರಾಜ', 'ದೊರೆ', 'ಅರಸ', 'ದಳವಾಯಿ' ಎಂಬ ಪದಗಳು ವ್ಯಕ್ತಿನಾಮಗಳಲ್ಲಿ ವಾರ್ಗಿಕಗಳಾಗಿ ಬಳಕೆಯಾಗಿರುವುದು ತಿಳಿದುಬಂದಿಲ್ಲ. ಈ ವೃತ್ತಿವಾಚಿಗಳಿಗೆ ಬದಲಾಗಿ 'ನಾಯಕ' ಎಂಬುದು ಇವರ ವ್ಯಕ್ತಿನಾಮಗಳಲ್ಲಿ ಜಾತಿವಾಚಿ ಅರ್ಥದಲ್ಲಿ ಬಳಕೆಯಾಗುತ್ತಿದೆ. ನಿದರ್ಶನಕ್ಕೆ ಕೆಲವು ಮಾದರಿಗಳನ್ನು ಗಮನಿಸಬಹುದು.

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
|---|---|---|
| ಸೂರಯ್ಯ | ಮಾರನಾಯಕ | ರಮೇಶ್ ನಾಯಕ |
| ಬೋಸಯ್ಯ | ತಿಪ್ಪೇಸ್ವಾಮಿ | ಪ್ರವೀಣ್ ನಾಯಕ |
| ಸಿದ್ದಪ್ಪನಾಯಕ | ಕರಿಯಪ್ಪ | ಶಶಿಧರ |
| ರಂಗಪ್ಪನಾಯಕ | ಬೊಮ್ಮನಾಯಕ | ಮಂಜುನಾಥನಾಯಕ |
| ನಾಗರಾಜಪ್ಪ | ಕಾಮೇಶ್ | ಗಜೇಂದ್ರಕುಮಾರ |
| ಪಾಪನಾಯಕ | ಬಸವರಾಜನಾಯಕ | ಉಮೇಶ್ ನಾಯಕ |

ಮೂರು ತಲೆಮಾರಿನವರಲ್ಲಿ 'ನಾಯಕ' ವಾರ್ಗಿಕದ ಬಳಕೆಯನ್ನು ಗಮನಿಸಿದರೆ ಮೂರನೆ ತಲೆಮಾರಿನಲ್ಲಿ ಮೊದಲೆರಡು ತಲೆಮಾರುಗಳಿಗಿಂತ ಅಧಿಕವಾಗಿ ಬಳಕೆಯಾಗಿರುವುದು ತಿಳಿದುಬರುತ್ತದೆ. ಇತ್ತೀಚಿಗೆ ಸ್ತ್ರೀ ವ್ಯಕ್ತಿನಾಮಗಳಲ್ಲಿಯೂ 'ನಾಯಕ' ವಾರ್ಗಿಕವಾಗಿ ಬಳಕೆಯಾಗುತ್ತಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ವ್ಯಕ್ತಿನಾಮಗಳಲ್ಲಿ 'ನಾಯಕ' ಎಂಬುದು ಯಾವ ಕಾಲಘಟ್ಟದಲ್ಲಿ ಹೇಗೆ ಬಳಕೆಯಾಗಿದೆ ಎಂಬುವನ್ನು ಮುಂದೆ ವಿವರವಾಗಿ ಚರ್ಚಿಸಲಾಗುವುದು.

ಚಿತ್ರದುರ್ಗದ ನಾಯಕ ಪಾಳೆಯಗಾರರ ವಂಶಿಕರ ವ್ಯಕ್ತಿನಾಮಗಳಲ್ಲಿ ಕೆಲವು ಕುತೂಹಲಕರವಾದ ಸಂಗತಿಗಳು ಇರುವುದು ತಿಳಿದುಬರುತ್ತವೆ. ಆ ಬಗ್ಗೆ ಇಲ್ಲಿ ಗಮನಿಸಿದೆ.

'ಅ' ಪಟ್ಟಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
|---|---|---|
| ೧. ರಂಗಪ್ಪನಾಯಕ | ಗೋಪಾಲಸ್ವಾಮಿನಾಯಕ | ನರಸಿಂಹನಾಯಕ |
| ೨. ಅಹೋಬಳನಾಯಕ | ಮದಕರಿನಾಯಕ | ತಿಮ್ಮಣ್ಣನಾಯಕ |
| ೧. ಚನ್ನಪ್ಪನಾಗತಿ | ರಂಗಪ್ಪನಾಗತಿ | ಪ್ರೇಮಾನಾಗತಿ |
| ೨. ಲಕ್ಷ್ಮಮ್ಮನಾಗತಿ | ತಿಮ್ಮಪ್ಪನಾಗತಿ | ರೂಪಾನಾಗತಿ |

'ಬ' ಪಟ್ಟಿ

| | | |
|---|---|---|
| ೧. ವೆಂಕಟಪ್ಪನಾಯಕ | ಸೂರನಾಯಕ | ಮುರಳೀಧರ |
| ೨. ಭರಮಣ್ಣನಾಯಕ | ಓಬಣ್ಣನಾಯಕ | ಅಶ್ವಥ್ |
| ೧. ವೀರಪ್ಪನಾಗತಿ | ಓಬಪ್ಪನಾಗತಿ | ಕಲ್ಪನ |
| ೨. ನರಸಪ್ಪನಾಗತಿ | ವೆಂಕಪ್ಪನಾಗತಿ | ಸುಶೀಲ |

'ಅ' ಮತ್ತು 'ಬ' ಪಟ್ಟಿಯಲ್ಲಿ ಮೂರು ತಲೆಮಾರುಗಳಲ್ಲಿ ಬಳಕೆಯಾಗಿರುವ ವ್ಯಕ್ತಿನಾಮಗಳನ್ನು ಗಮನಿಸಬಹುದು. 'ಅ' ಪಟ್ಟಿಯಲ್ಲಿ ಬಳಕೆಯಾಗಿರುವ ಪುರುಷ ವ್ಯಕ್ತಿನಾಮಗಳಿಗೆ ಮೂರು ತಲೆಮಾರುಗಳಲ್ಲೂ 'ನಾಯಕ' ವಾರ್ಗಿಕ ಸೇರಿದ್ದರೆ, ಸ್ತ್ರೀ ವ್ಯಕ್ತಿನಾಮಗಳಿಗೆ 'ನಾಗತಿ' ಎಂಬ ವಾರ್ಗಿಕ ಸೇರಿದೆ. 'ಬ' ಪಟ್ಟಿಯಲ್ಲಿನ ಹೆಸರುಗಳಲ್ಲಿ, ಮೊದಲೆರಡು ತಲೆಮಾರಿನ ವ್ಯಕ್ತಿನಾಮಗಳಲ್ಲಿ ವಾರ್ಗಿಕಗಳು ಬಳಕೆಯಾಗಿದ್ದು, ಮೂರನೆ ತಲೆಮಾರಿನವರ ಹೆಸರುಗಳಲ್ಲಿ ವಾರ್ಗಿಕಗಳು ಇರುವುದಿಲ್ಲ.

ಮೇಲಿನ ಈ ಎರಡೂ ಪ್ರಕಾರದ ನಾಮ ವ್ಯತ್ಯಾಸಗಳಿಗೆ ಕಾರಣಗಳನ್ನು ಹೀಗೆ ಗುರುತಿಸಲಾಗಿದೆ.

"ಚಿತ್ರದುರ್ಗ ಜಿಲ್ಲೆಯನ್ನು ನಾಯಕ ಪಾಳೆಯಗಾರರು ಆಳಿಹೋಗಿದ್ದಾರೆ. ನಾಯಕ ಪಾಳೆಯಗಾರರ ವಂಶಸ್ಥರು ಈಗಲೂ ಚಿತ್ರದುರ್ಗ ಪರಿಸರದ ಅನೇಕ ಪ್ರದೇಶಗಳಲ್ಲಿ ಇದ್ದಾರೆ. ಸರಕಾರವು ಈ ವಂಶಸ್ಥರಿಗೆ ಮೊದಲಿನಿಂದಲೂ ಸಂಭಾವನೆಯನ್ನು ಕೊಡುತ್ತಾ ಬಂದಿದೆ. ಈ ಸೌಲಭ್ಯ ಆ ವಂಶಸ್ಥರೆಂದು ಸಾಬೀತಾದವರೆಲ್ಲರಿಗೂ ನೀಡುತ್ತಿದ್ದು, ಇತ್ತೀಚಿನ ಕೆಲವು ವರ್ಷಗಳಿಂದ ಕೆಲವೇ ಕುಟುಂಬಗಳಿಗೆ ಮಾತ್ರ

ಈ ಸೌಲಭ್ಯ ದೊರೆಯುತ್ತಿದೆ. (ಸರಕಾರ ಕೆಲವು ಕುಟುಂಬಗಳಿಗೆ ಮಾತ್ರ ಏಕೆ ನಿಗದಿಮಾಡಿತು ಎನ್ನುವುದಕ್ಕೆ ಕಾರಣಗಳು ತಿಳಿದುಬಂದಿರುವುದಿಲ್ಲ) ಈ ಸೌಲಭ್ಯವನ್ನು ಪಡೆಯುತ್ತಿರುವ ಕುಟುಂಬಗಳು ತಾವು ಪಾಳೆಯಗಾರರ ವಂಶಸ್ಥರು ಎಂಬುದನ್ನು ದೃಢಪಡಿಸುವ ಮತ್ತು ತಮ್ಮ ಪರಂಪರೆಯ ಮುಂದುವರಿಕೆಯಾಗಿ ಪುರುಷ ಹೆಸರಿನಲ್ಲಿ 'ನಾಯಕ' ಎಂದೂ, ಸ್ತ್ರೀ ಹೆಸರಿನಲ್ಲಿ 'ನಾಗತಿ' ಎಂದೂ ಕಡ್ಡಾಯವಾಗಿ ಇಟ್ಟುಕೊಳ್ಳುತ್ತಾರೆ.''[*] ಈ ಸೌಲಭ್ಯವನ್ನು ಕಳೆದುಕೊಂಡವರು ಇತ್ತೀಚಿನ ದಿನಗಳಲ್ಲಿ ಈ ವಾರ್ಗಿಕಗಳನ್ನು ನಿರ್ದೇಶಿಸಿಕೊಳ್ಳುವುದಿಲ್ಲ. ಈ ಮೇಲಿನ ಮೊದಲ ಪಟ್ಟಿಯ ಹೆಸರುಗಳು ಸರಕಾರದಿಂದ ಸಂಭಾವನೆಯನ್ನು ಪಡೆಯುತ್ತಿರುವ ಕುಟುಂಬಗಳಲ್ಲಿ ಕಾಣಬರುವ ವ್ಯಕ್ತಿನಾಮಗಳಾದರೆ, ಎರಡನೆಯ ಪಟ್ಟಿಯ ಹೆಸರುಗಳು ಇತ್ತೀಚಿಗೆ ಈ ಸೌಲಭ್ಯದಿಂದ ವಂಚಿತರಾದವರಲ್ಲಿ ಕಾಣಬರುತ್ತದೆ. ಮೂರನೆ ತಲೆಮಾರಿನವರಲ್ಲಿ 'ನಾಯಕ' ಮತ್ತು 'ನಾಗತಿ' ಎಂಬ ಜಾತಿವಾಚಿ ವಾರ್ಗಿಕಗಳು ಬಿಟ್ಟುಹೋಗಿದ್ದು, ಸರಕಾರದ ಸೌಲಭ್ಯವನ್ನು ಪಡೆಯದ ಕುಟುಂಬಗಳನ್ನು ಸೂಚಿಸುತ್ತದೆ. ಇತರರು ಯಾರೂ ಕೂಡ ಇತ್ತೀಚಿಗೆ 'ನಾಯಕ' ಮತ್ತು 'ನಾಗತಿ' ಎಂದು ಇಟ್ಟುಕೊಳ್ಳುವುದಿಲ್ಲವೆಂದಲ್ಲ. ಕೆಲವರಲ್ಲಿ ಬಿಟ್ಟುಹೋಗಿದ್ದರೆ, ಕೆಲವರಲ್ಲಿ ಬಳಕೆಯಾಗುತ್ತಿದೆ. ಆದರೆ ಈ ನಾಮಗಳ ನಿರ್ದೇಶನದ ಹಿಂದೆ ಸಮುದಾಯಗಳ ಒತ್ತಾಸೆ ಇರುವುದನ್ನು ಕಾಣಬಹುದು.

'ನಾಯಕ' ಎಂಬುದು ಚಿತ್ರದುರ್ಗ ಪರಿಸರದಲ್ಲಿ 'ನಾಯಕ' ಜನಾಂಗದಲ್ಲಿ ಮಾತ್ರ ಬಳಕೆಯಾಗುತ್ತಿದ್ದು, ಇತರ ಪರಿಸರಗಳಲ್ಲಿ ಬೇರೆ ಬೇರೆ ಸಮಾಜಗಳಲ್ಲಿ ಬಳಕೆಯಲ್ಲಿದೆ. ಹದಿನೈದನೇ ಶತಮಾನದ ಪ್ರಸಿದ್ಧ ಕೀರ್ತನೆಕಾರ ಪುರಂದರದಾಸರ ಮೂಲಹೆಸರು - ಶ್ರೀನಿವಾಸನಾಯಕ. ಮೊದಲು ಈ ಜನಾಂಗದ ವ್ಯಕ್ತಿನಾಮಗಳಲ್ಲಿ 'ನಾಯಕ' ಬಳಕೆಯಾಗಿರುವುದು ತಿಳಿದುಬರುತ್ತದೆಯಾದರೂ, ಅಂದು ಅದಕ್ಕೆ ಇರುವ ಆಯಾಮಗಳು ಇಂದಿಗಿಂತ ಭಿನ್ನವಾಗಿರಬಹುದು. ಉಳಿದಂತೆ ದಕ್ಷಿಣ ಕರ್ನಾಟಕದಲ್ಲಿ ಸಾಮಾಜಿಕವಾಗಿ ಮೇಲ್ ಜಾತಿಯವರ ವ್ಯಕ್ತಿನಾಮಗಳಲ್ಲಿ 'ನಾಯಕ' ವಾರ್ಗಿಕ ಬಳಕೆಯಾಗುತ್ತಿದ್ದು, ಇದರ ಪ್ರಸರಣ ಕರ್ನಾಟಕದಾದ್ಯಂತ ಬೇರೆ ಬೇರೆ ಸಮುದಾಯದವರಲ್ಲಿ ಇರುವುದನ್ನು ಗಮನಿಸಬಹುದಾಗಿದೆ.

## ಗೌಡ ಮತ್ತು ಪಟೇಲ

'ಗೌಡ' ಮತ್ತು 'ಪಟೇಲ' ಎಂಬಿವು ವೃತ್ತಿವಾಚಿ ವಾರ್ಗಿಕಗಳಾಗಿ ಬಳಕೆಯಾಗುತ್ತವೆ. ಕೆಳಜಾತಿಯವರಿಗಿಂತ ಮೇಲ್ಜಾತಿಯವರಲ್ಲಿ ವ್ಯಾಪಕವಾಗಿ ಬಳಕೆಯಾಗುತ್ತಿದ್ದು, ಪ್ರಸ್ತುತ ನಾಯಕ ಸಮುದಾಯದಲ್ಲಿಯೂ ಬಳಕೆಯಾಗಿವೆ. ನಾಯಕ ಸಮುದಾಯದಲ್ಲಿ ಇವುಗಳ ಬಳಕೆಗೆ ಒಂದು ದೊಡ್ಡ ಪರಂಪರೆ ಏನೂ ಇರುವುದಿಲ್ಲ. 'ಗೌಡ' ಮತ್ತು 'ಪಟೇಲ' ವೃತ್ತಿಯನ್ನು ಹೊಂದಿದ್ದ ಕುಟುಂಬಗಳಲ್ಲಿ ಮಾತ್ರ ಇವು ಕಾಣಬರುತ್ತವೆಯೇ ಹೊರತು ಈ ಸಮುದಾಯದ ಇತರರಲ್ಲಿ ಇವು ಬಳಕೆಯಾಗುವುದಿಲ್ಲ. ನಾಯಕ ಸಮುದಾಯದಲ್ಲಿ ಈ ವೃತ್ತಿಯನ್ನು ಪಡೆದವರು ತಲೆಮಾರಿನಿಂದ ತಲೆಮಾರಿಗೆ ಅದನ್ನು ಹಾಗೆಯೇ ಮುಂದುವರೆಸಿಕೊಂಡು ಬಂದಿದ್ದಾರೆ. ಇಂದು 'ನಾಯಕ' ಎಂಬುದು ಒಂದು ಸಮುದಾಯದ ಹೆಸರಾಗಿದ್ದು, ಆ ಸಮುದಾಯದವರ ಹೆಸರುಗಳಲ್ಲಿ ವಾರ್ಗಿಕವಾಗಿ ಬಳಸಲ್ಪಡುತ್ತಿದೆ.

ಗೌಡರ ಪಾಲಯ್ಯ

ಗೌಡರ ಮಲ್ಲಯ್ಯ

ಗೌಡರ ಪಾಪಮ್ಮ

ಪಟೇಲ್ ಪಾಪನಾಯಕ

ಪಟೇಲ್ ಹನುಮಂತಪ್ಪ

**ರೆಡ್ಡಿ**

'ರೆಡ್ಡಿ' ವಾರ್ಗಿಕ ನಾಯಕ ಸಮುದಾಯದ ಕೆಲವು ವ್ಯಕ್ತಿನಾಮಗಳಲ್ಲಿ ಬಳಕೆಯಾಗಿರುವುದು ಕಂಡುಬಂದಿದೆ. ನಾಯಕ ಸಮುದಾಯದವರಲ್ಲಿ ಈ ವಾರ್ಗಿಕ ಕಾಣಿಸಿಕೊಳ್ಳುವುದು ಮೊಳಕಾಲ್ಮೂರು ತಾಲೂಕಿನ ಕೆಲವು ಪ್ರದೇಶಗಳಲ್ಲಿ ಮಾತ್ರ. ಅದರಲ್ಲೂ ವಿಶೇಷವಾಗಿ ಆಂಧ್ರಪ್ರದೇಶದ ಗಡಿಗೆ ಸಮೀಪವಿರುವ ಕನ್ನಡ ಪರಿಸರದ ನಾಯಕರ ಕೆಲವು ಕುಟುಂಬದವರ ವ್ಯಕ್ತಿನಾಮಗಳ ಮೇಲೆ ಪ್ರಭಾವ ಬೀರಿದೆ. 'ರೆಡ್ಡಿ'ಯಿಂದ ಕೊನೆಗೊಳ್ಳುವ ನಾಯಕರ ಕೆಲವು ಹೆಸರುಗಳನ್ನು ಇಲ್ಲಿ ಉದಾಹರಣೆಗೆ ನೋಡಬಹುದು.

ಲಿಂಗಾರೆಡ್ಡಿ ಹನುಮಂತರೆಡ್ಡಿ ಲಕ್ಷ್ಮಣರೆಡ್ಡಿ - ಇತ್ಯಾದಿ

ಕನ್ನಡ ಪರಿಸರದಲ್ಲಿ ಗೌಡಿಕೆಯು ಇತರೆ ಸಮುದಾಯಕ್ಕೆ ಇರುವಂತೆ, ಆಂಧ್ರದಲ್ಲಿಯೂ ರೆಡ್ಡಿಕೆಯು ಬೇರೆ ಸಮುದಾಯಕ್ಕಿದೆ. ಇವರು ಅಲ್ಲಲ್ಲಿ ಊರಿನ ಉಸ್ತುವಾರಿಕೆ ವಹಿಸಿದ್ದಾರೆ. ಇದರಿಂದಾಗಿ ಈ ಬಗೆಯ ವಾರ್ಗಿಕ ಬಂದಿದೆಯೆನ್ನಬಹುದು.

**ನಾಗತಿ**

'ನಾಗತಿ' ಎಂಬ ಪದಕ್ಕೆ ನಿಘಂಟುವಿನಲ್ಲಿ ಬೇರೆ ಬೇರೆ ಅರ್ಥಗಳಿವೆ. "ದುಗ್ಗತಿಗವುಣ್ಡೆಯ ಮಗಂ 'ನಾಗತಿ' ಸಾಲವತ್ತಿಯ ತುರುಗಳೊಳ ಸತ್ತಂ"[೭]

" 'ನಾಗತಿ' ಎಂಬುದಕ್ಕೆ 'ಅಮ್ಮ' ಎಂಬ ಸಂಬಂಧವಾಚಿ ವಾರ್ಗಿಕ ಸೇರಿ 'ನಾಗತಿಯಮ್ಮ' ಎಂಬ ಪುರುಷ ಹೆಸರಾಗಿ ಬಳಕೆಯಾಗಿದೆ."[೮]

ಮೇಲಿನ ಈ ಎರಡು ಸಂದರ್ಭಗಳನ್ನು ನೋಡಿದರೆ ಪ್ರಾಚೀನ ಕಾಲದಲ್ಲಿ 'ನಾಗತಿ' ಎಂಬುದು ಪುರುಷ ವ್ಯಕ್ತಿನಾಮವಾಗಿ ಬಳಕೆಯಾಗಿರುವುದು ಇದರಿಂದ ಸ್ಪಷ್ಟವಾಗುತ್ತದೆ. ಮಧ್ಯಯುಗೀನ ಕಾಲದ ಚಿತ್ರದುರ್ಗ ಪಾಳೆಯಗಾರರ ಹೆಂಡತಿಯರಿಗೆ 'ನಾಗತಿ' ಎಂದು ಕರೆಯಲಾಗುತ್ತಿತ್ತು. ಮತ್ತು ಅವರ ಹೆಸರಿನ ಕೊನೆಯಲ್ಲಿ 'ನಾಗತಿ' ಎಂದು ಇರುವುದನ್ನು ಗಮನಿಸಬಹುದು. ಉದಾಹರಣೆಗೆ

ಚೆದುರೆ ತಿಮ್ಮಪ್ಪನಾಗತಿ (ಮತ್ತಿ ತಿಮ್ಮಣ್ಣ ನಾಯಕರ ಪಟ್ಟದ ನಾಗತಿ)

'ಓಬವ್ವ' ನಾಗತಿ (ಕಸ್ತೂರಿ ರಂಗಪ್ಪನಾಯಕನ ಮಗಳು)

ಪೆದ್ದಕ್ಕನಾಗತಿ (ರಾಜಾವೀರ ಮದಕರಿನಾಯಕನ ನಾಗತಿಯರು)

ಬಂಗಾರವ್ವ ನಾಗತಿ

ವೆಂಕಟಮ್ಮನಾಗತಿ (ಚಂಪಣ್ಣನಾಯಕನ ನಾಗತಿ)

ಇಲ್ಲಿನ ಉದಾಹರಣೆಗಳಲ್ಲಿ 'ನಾಗತಿ' ಎಂಬುದು, 'ರಾಜ', 'ಗೌಡ', 'ಅರಸ' ಎಂಬ ಪುಲ್ಲಿಂಗ ಸೂಚಕ, ವೃತ್ತಿವಾಚಿ ಪದಗಳಿಗೆ ಸಂವಾದಿಯಾಗಿ ಅವರ ಹೆಂಡತಿಯರಿಗೆ 'ರಾಣಿ', 'ಗೌಡತಿ', 'ಅರಸಿ' ಎಂಬ ಪದಗಳು ಅಂಟುವುದು ಸಹಜ ಪ್ರಕ್ರಿಯೆ. ಅದೇ ರೀತಿ 'ನಾಗತಿ' ಎಂಬುದು 'ನಾಯಕ' ಎಂಬುದರ ಸ್ತ್ರೀಲಿಂಗ ರೂಪವಾಗಿ ಪಾಳೆಯಗಾರರ ಹೆಂಡತಿಯರ ಹೆಸರುಗಳಿಗೆ ಅಂಟಿರುವ ಸಂಭವವಿದೆ. ಹಿಂದೆ 'ನಾಗತಿ ಎಂಬುದು ನಾಯಂಕಿತಿ, ನಾಯಕಿತಿನಿ, ನಾಯಕಿತಿ, ನಾಗತಿ ಎಂಬ ರೂಪಗಳಲ್ಲಿ ಬಳಕೆಯಾಗಿರುವುದು ಶಾಸನಗಳಿಂದ ತಿಳಿದುಬರುತ್ತದೆ.

ಚಿತ್ರದುರ್ಗದ ಪಾಳೆಯಗಾರರ ಹೆಂಡತಿಯರ ವ್ಯಕ್ತಿನಾಮಗಳಲ್ಲಿ ಬಳಕೆಯಾಗುತ್ತಿದ್ದ ಈ ವೃತ್ತಿವಾಚಿ ವಾರ್ಗಿಕ, ಆ ವಂಶಸ್ಥರ ಸ್ತ್ರೀಯರ ವ್ಯಕ್ತಿನಾಮಗಳಲ್ಲಿ ಈಗಲೂ ಈ ಭಾಗದಲ್ಲಿ ಬಳಕೆಯಲ್ಲಿದೆ. ಪ್ರಸ್ತುತ ಸಂದರ್ಭದಲ್ಲಿ ಚಿತ್ರದುರ್ಗ ಪರಿಸರದ ನಾಯಕರ ಸ್ತ್ರೀ ವ್ಯಕ್ತಿನಾಮಗಳಲ್ಲಿ ಮಾತ್ರ ಇದರ ಬಳಕೆ ಕಾಣಬರುತ್ತಿದ್ದು ಉಳಿದಂತೆ ಇದರ ಬಳಕೆ ಅನ್ಯಪ್ರದೇಶಗಳಲ್ಲಿ ಇರುವುದು ತಿಳಿದು ಬಂದಿರುವುದಿಲ್ಲ. ಸಮಕಾಲೀನ ಜನರ ವ್ಯಕ್ತಿನಾಮಗಳಲ್ಲಿ ಇದರ ಬಳಕೆಯ ಆಯಾಮಗಳನ್ನು ಮುಂದಿನ ಭಾಗದಲ್ಲಿ ವಿವರವಾಗಿ ಚರ್ಚಿಸಲಾಗುವುದು.

ಅಧ್ಯಯನಕ್ಕೆ ಬಳಸಿಕೊಂಡಿರುವ ನಾಯಕ ಜನಾಂಗದ ವ್ಯಕ್ತಿನಾಮಗಳಲ್ಲಿ ಕಂಡುಬರುವ ವಾರ್ಗಿಕಗಳು ಮತ್ತು ಬಳಕೆಯ ಪ್ರಮಾಣವನ್ನು ಶೇಕಡವಾರು ಅಂಕಿ-ಅಂಶಗಳ ಮೂಲಕ ಈ ಕೆಳಗಿನಂತೆ ಗುರುತಿಸಬಹುದು.

| ಪುರುಷ ವಾರ್ಗಿಕ | | | | | | | | | ಸ್ತ್ರೀ ವಾರ್ಗಿಕ | | | | | |
|---|---|---|---|---|---|---|---|---|---|---|---|---|---|---|
| ಸಂಬಂಧವಾಚಿ ವಾರ್ಗಿಕ | | | | | ವೃತ್ತಿ/ಜಾತಿವಾಚಿ ವಾರ್ಗಿಕ | | | | | | | | | |
| ತಲೆ ಮಾರು | ಅಪ್ಪ | ಅಣ್ಣ | ಅಜ್ಜ | ಅಯ್ಯ | ಪಟೇಲ | ನಾಯಕ | ಗೌಡ | ರೆಡ್ಡಿ | ಅಮ್ಮ | ಅವ್ವ | ಅಕ್ಕ | ಅಜ್ಜಿ | ನಾಗತಿ | ನಾಯಕ |
| ೩ | ೫ | ೧೦ | - | ೧೭ | ೦.೫ | ೧೮ | ೦.೫ | ೨ | ೩೪ | ೩ | ೪ | ೧.೫ | ೨ | ೨ |
| ೨ | ೧೪ | ೧೩ | ೦.೫ | ೩೪ | - | ೧೫ | ೪ | - | ೭೬ | ೧ | ೧೩ | - | ೫ | - |
| ೧ | ೯ | ೬ | - | ೫೫ | ೨ | ೧೧ | ೨ | ೦.೭ | ೮೨ | - | ೧೦ | ೧.೪ | ೬ | - |
| ಒಟ್ಟು | ೯.೪ | ೧೦ | ೦.೨ | ೩೩ | ೦.೭ | ೧೪ | ೨ | ೧.೩ | ೩೩ | ೦.೫ | ೫ | ೦.೪ | ೩ | ೦.೯ |
| ಸರಾಸರಿ | ೫೨ | | | | ೧೯ | | | | ೮೫ | | | | | |

ಕೋಷ್ಟಕ ೧.೧೯

ನಾಯಕ ಸಮುದಾಯದ ವ್ಯಕ್ತಿನಾಮಗಳಲ್ಲಿ ಸಂಬಂಧವಾಚಿ ಹಾಗೂ ವೃತ್ತಿ/ಜಾತಿವಾಚಿ ವಾರ್ಗಿಕಗಳು ಬಳಕೆಯಾಗುತ್ತಿವೆ. ಹಳೆಯ ತಲೆಮಾರಿನ ವ್ಯಕ್ತಿನಾಮಗಳಲ್ಲಿ ಸಂಬಂಧವಾಚಿ ವಾರ್ಗಿಕಗಳ ಬಳಕೆ ಅಧಿಕವಾಗಿದ್ದು, ಕಾಲಕ್ರಮೇಣ ಕಡಿಮೆಯಾಗಿದೆ. ಅದೇ ರೀತಿಯಾಗಿ ಪುರುಷರಲ್ಲಿ ಪಟೇಲ, ಗೌಡ, ರೆಡ್ಡಿ, ಹಿಂದೆ ಬಳಕೆಯಲ್ಲಿದ್ದು ಇಂದು ಅವುಗಳ ಬಳಕೆ ಮರೆಯಾಗಿದೆ. ಸ್ತ್ರೀಯರಲ್ಲಿ 'ನಾಗತಿ' ಎಂಬುದು ಬಳಕೆಯಿಂದ ದೂರಸರಿದಿದೆ. 'ನಾಯಕ' ಎಂಬುದು ಹಿಂದೆ ಪುರುಷರಲ್ಲಿ ಮಾತ್ರ ಬಳಕೆಯಲ್ಲಿದ್ದು, ಇತ್ತೀಚಿಗೆ ಸ್ತ್ರೀಯರಲ್ಲಿ ಬಳಕೆಯಾಗುತ್ತಿದೆ. ಅಲ್ಲದೆ 'ನಾಯಕ' ಎಂಬುದು, ಹಿಂದೆಗಿಂತ ಇಂದು ವ್ಯಾಪಕವಾಗಿ ಬಳಕೆಯಾಗುತ್ತಿರುವುದು ಮೇಲಿನ ಕೋಷ್ಟಕದಿಂದ ಸ್ಪಷ್ಟವಾಗುತ್ತದೆ. ಈ ಬಗೆಯ ಬೆಳವಣಿಗೆಗೆ ಸಾಮಾಜಿಕ ಮತ್ತು ರಾಜಕೀಯ ಅಂಶಗಳು ಕಾರಣವಾಗಿವೆಯೆನ್ನಬಹುದು.

### ೩.೫.೧೦ ಮಾದಿಗ

ಮಾದಿಗ ಸಮುದಾಯ ಕರ್ನಾಟಕದಲ್ಲಿ ವಾಸಿಸುವ ಒಂದು ಪಂಗಡ. ಈ ಸಮುದಾಯವನ್ನು ಭಾರತದಲ್ಲಿ ವಿವಿಧ ಹೆಸರುಗಳಿಂದ ಗುರುತಿಸಲಾಗುತ್ತದೆ. ಕರ್ನಾಟಕದಲ್ಲಿ ಈ ಸಮುದಾಯವನ್ನು ಮಾದಿಗ, ಹರಿಜನ, ಆದಿಕರ್ನಾಟಕ ಎಂಬ ಹೆಸರುಗಳಿಂದ ಕರೆಯಲಾಗುತ್ತಿದೆ. 'ಮಹಾ + ಆದಿಗ' ಎಂಬುದರಿಂದ ಈ ನಾಡಿನ ಮೂಲನಿವಾಸಿಗಳೆಂದು ಅನೇಕರು ಗುರುತಿಸಿದ್ದಾರೆ. ಈ ಸಮುದಾಯಕ್ಕೆ ತನ್ನದೇ ಆದ ಸಾಂಸ್ಕೃತಿಕ ವೈಶಿಷ್ಟ್ಯತೆಯಿದೆ. ಇವರು ಹೆಚ್ಚಾಗಿ ಶಕ್ತಿದೇವತೆಯ ಆರಾಧಕರಾಗಿದ್ದಾರೆ. ಬಲಿ ಮುಂತಾದ ಪದ್ಧತಿಯಲ್ಲಿ ಮಾರಿ, ಚೌಡಿ, ದುರುಗಿ, ಸುಂಕ್ಲಿ ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ. ಇವರ ಹೆಸರುಗಳು ಈ ದೇವತೆಗಳಿಂದಲೇ ನಿರ್ದೇಶನಗೊಂಡಿರುವುದು ತಿಳಿಯುತ್ತದೆ. ಪುರುಷರ ಹೆಸರುಗಳು ಕೂಡ ಈ ದೇವತೆಗಳ ಹೆಸರಿಗೆ 'ಅಯ್ಯ', 'ಅಪ್ಪ', 'ಅಣ್ಣ' ಮುಂತಾದ ವಾರ್ಗಿಕಗಳನ್ನು ಸೇರಿಸಿ ಹೆಸರಿಟ್ಟುಕೊಂಡಿರುವುದು ತಿಳಿಯುತ್ತದೆ. ಆಯಾ ಭೌಗೋಳಿಕ ನೆಲೆಯಲ್ಲಿ ಪ್ರಸಿದ್ಧಿ ಪಡೆದ ಹುಲಿಗೆಮ್ಮ, ರೇಣುಕ ಎಲ್ಲಮ್ಮ, ದುರುಗಮ್ಮ, ಚಳ್ಳೇರಮ್ಮ ಮುಂತಾದ ದೈವಗಳೂ ಮಾದಿಗ ಸಮುದಾಯಕ್ಕೆ ಹೆಸರುಗಳಾಗಿ ನಿಂತಿವೆ. ಬಹುಮುಖ್ಯವಾಗಿ ಶೈವ ಮತ್ತು ವೈಷ್ಣವರ ಹೆಸರುಗಳನ್ನು ಸ್ವೀಕರಿಸಿರುವುದು ಬಹಳ ಕಡಿಮೆ. ಆಧುನಿಕ ಸಂದರ್ಭದಲ್ಲಿ ವೈಷ್ಣವ-ಶೈವಸಂಬಂಧಿ ಹೆಸರುಗಳು ಎಡೆಪಡೆದಿರುತ್ತವೆ. ಈ ಜನಾಂಗಕ್ಕೆ ತಮ್ಮದೇ ಆದ ವಿಶಿಷ್ಟ ಆಚರಣೆ ವಿಧಿ-ನಿಷೇಧಗಳು ಇವೆ. ಇವು ಕೂಡ ಇವರ ಹೆಸರಿನ ಸ್ವರೂಪಕ್ಕೆ ಕಾರಣವಾಗುತ್ತವೆ. ಇವರಿಗೆ ಊರುಗಳಲ್ಲಿ ಪ್ರತ್ಯೇಕವಾದ ಕೇರಿಗಳಿದ್ದು ಅದೊಂದು ರೀತಿಯಲ್ಲಿ ಹೆಚ್ಚಾಗಿ ಪ್ರಾಚೀನತೆಯನ್ನು ಉಳಿಸಿಕೊಂಡು ಬಂದಿವೆ. ಇಂದಿಗೂ ಗ್ರಾಮೀಣ ಪರಿಸರದಲ್ಲಿ ಈ ಸಮುದಾಯಕ್ಕೆ ಪ್ರತ್ಯೇಕ ಕೇರಿಗಳಿರುವುದರಿಂದ ಅಲ್ಲಿನ ಹೆಸರುಗಳು ಅಷ್ಟಾಗಿ ಆಧುನಿಕತೆಯನ್ನು ಮೈಗೂಡಿಸಿಕೊಂಡಿಲ್ಲ ಎಂಬುದನ್ನು ಗಮನಿಸಬಹುದು.

ಇತ್ತೀಚೆಗೆ ರಾಜಕೀಯ, ಆರ್ಥಿಕ, ಸಾಮಾಜಿಕ ರಂಗಗಳಲ್ಲಿ ಮೀಸಲಾತಿಯ ಮೂಲಕ ಸಮತೋಲನದತ್ತ ಸಾಗುತ್ತಿರುವ ಈ ಸಮುದಾಯ ಜಾಗತೀಕರಣದ ಸಂದರ್ಭದಲ್ಲೂ ತನ್ನ ಮಟ್ಟಿನ ಸವಾಲುಗಳನ್ನು ಒಡ್ಡಿ, ಹೆಸರುಗಳಲ್ಲಿ ಸ್ಥಿತ್ಯಂತರವನ್ನು ಕಂಡುಕೊಳ್ಳುತ್ತಲಿದೆ. ಇಲ್ಲಿ ಜಾಗತೀಕರಣದ ಪ್ರಸ್ತಾಪಕ್ಕೆ ಕಾರಣವೆಂದರೆ, ಪಾಶ್ಚಾತ್ಯರ ಕ್ರೈಸ್ತಧರ್ಮ ದೇಸೀ ನೆಲದಲ್ಲಿ ಮಾರುಕಟ್ಟೆಯ ಸರಕುಗಳಂತೆ ನೆಲೆಯೂರತ್ತಲಿದೆ. ಕಾರಣ ದೇಶಿ ನೆಲದಲ್ಲಿ ಶೋಷಣೆಗೊಳಪಟ್ಟ ಅನೇಕ ಸಮುದಾಯಗಳು ಮತಾಂತರ ಆಗುತ್ತಿರುವುದು ಕಂಡುಬರುತ್ತದೆ.

ಇತ್ತೀಚಿನ ದಶಕಗಳಲ್ಲಿ ಈ ಮತಾಂತರ ಸಂದರ್ಭ ಹೆಚ್ಚಾಗಿ ಘಟಿಸಿರುವುದು ಕೇವಲ ಮಾದಿಗ ಸಮುದಾಯದಲ್ಲಿ ಮಾತ್ರ ಎಂಬುದನ್ನು ಗಮನಿಸಿದರೆ ಜಾಗತೀಕರಣದ ಮೂಲಕ ನಮ್ಮ ದೇಶಕ್ಕೆ ಪ್ರವೇಶ ಪಡೆದ ಕ್ರೈಸ್ತಧರ್ಮ, ಅವರ ಸಂಸ್ಕೃತಿ, ಅವರ ಹೆಸರುಗಳು ನಮ್ಮ ಸಮುದಾಯಗಳ ಮೇಲೆ ಅಪ್ರತ್ಯಕ್ಷವಾಗಿಯಾದರೂ, ಅತ್ಯಂತ ಪರಿಣಾಮಕಾರಿಯಾಗಿ ಬರುತ್ತಿರುವುದನ್ನು ನೋಡಿದರೆ, ಈ ಸಮುದಾಯ ಎದುರಿಸುತ್ತಿರುವ ಶೋಷಣೆ ಕೇಂದ್ರಿತ ನೆಲೆಯು ಧರ್ಮ ಮತ್ತು ಹೆಸರಿನ ಮೂಲಕ ಅದನ್ನು ತಪ್ಪಿಸಿಕೊಳ್ಳುವ ಹಂತದಲ್ಲಿ ಅನಿವಾರ್ಯವಾಗಿಸಿಕೊಂಡಿದೆ. ಈ ಒಟ್ಟು ಸಂದರ್ಭ ಜಾಗತಿಕ ಮಟ್ಟದಲ್ಲಿ ವಿವಿಧ ರೀತಿಯಲ್ಲಿ ವ್ಯಾಪಿಸಿದೆ. ಅದರಂತೆ ಕರ್ನಾಟಕದ ಚಿತ್ರದುರ್ಗ ಪರಿಸರದಲ್ಲಿಯೂ ವ್ಯಾಪಿಸಿರುವುದನ್ನೂ ಕಾಣಬಹುದು.

ಒಂದು ಕಡೆ ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿ ಹೆಸರಿನಲ್ಲಿ ಸಂಪೂರ್ಣ ಬದಲಾವಣೆ ಹಾಗೂ ಭಾಗಶಃ ಬದಲಾವಣೆಯನ್ನು ಹೊಂದುತ್ತಿದ್ದರೆ, ಅದೇ ಸಮಯದಲ್ಲಿ ದೇಶಿ ಹೋರಾಟಗಳ ಮೂಲಕ 'ಮಾದಿಗ' ಸಮುದಾಯ ತನ್ನ ಹೆಸರನ್ನು ಪುನರ್ ಸ್ಥಾಪಿಸಿಕೊಳ್ಳುವ ಮೂಲಕ ಪರಂಪರೆಯನ್ನು ಉಳಿಸಿಕೊಳ್ಳುವ, ಆಂದೋಲನಕಾರಿ ಪ್ರಯತ್ನದಲ್ಲಿದೆ. ಇಲ್ಲಿ ಪರಂಪರೆಯ ಉಳಿಸುವಿಕೆಯೆಂದರೆ ಶೋಷಣೆ ಇತ್ಯಾದಿ ನೆಲೆಯಲ್ಲ. ಜಾತ್ಯಾತೀತತೆಯ ಮೂಲಕ ಹೆಸರಿನಲ್ಲಿ ಈ ಬಗೆಯ ಪರಂಪರೆಯ ಉಳಿಸುವಿಕೆಯನ್ನು ಅರ್ಥೈಸಬೇಕಾಗುತ್ತದೆ. ಈ ಎಲ್ಲಾ ದೃಷ್ಟಿಯಿಂದ ಮಾದಿಗ ಸಮುದಾಯದ ಸಂಸ್ಕೃತಿಯನ್ನು ಅಧ್ಯಯನ ಮಾಡಲು ಚಿತ್ರದುರ್ಗ ಪರಿಸರದ ಹೆಸರುಗಳ ಮೂಲಕ ಆ ಭೌಗೋಳಿಕ ಪರಿಸರದಲ್ಲಿ ಹರಡಿಕೊಂಡ ಕೆಲವು ವ್ಯಕ್ತಿನಾಮ ಮಾದರಿಗಳನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಮಾದಿಗ ಸಮುದಾಯದಲ್ಲಿ ಮೂರು ತಲೆಮಾರುಗಳಲ್ಲಿ ಕಂಡುಬರುವ ವ್ಯಕ್ತಿನಾಮಗಳನ್ನು ಈ ರೀತಿ ಗುರುತಿಸಬಹುದು.

ಪುರುಷರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
|---|---|---|
| ದುರುಗಪ್ಪ | ಯಲ್ಲಪ್ಪ | ತಿಪ್ಪೇಸ್ವಾಮಿ |
| ಹೊಂದ್ರಪ್ಪ (< ಹೊನ್ನೂರಪ್ಪ) | ಪರಮೇಶಿ | ಗಂಗಾಧರ |
| ಪೆನ್ನಪ್ಪ | ಕರಿಯಪ್ಪ | ನಾಗರಾಜ ಮಾದಿಗ |
| ಭರಮಪ್ಪ | ಒಡಕಪ್ಪ | ಮಂಜುನಾಥ ಮಾದಿಗ |
| ಕೊಲ್ಲಪ್ಪ | ಪೋತಪ್ಪ | ಕಾಂತರಾಜ |
| ಮಲಿಯಪ್ಪ | ಮಾರಪ್ಪ | ಅನಿಲ್ ಕುಮಾರ |
| ಹನುಮಪ್ಪ | ಯನ್ನಪ್ಪ | ಶಶಿಧರ |
| ಕ್ಯಾತಪ್ಪ | ನರಸಪ್ಪ | ನುಂಕೇಶಿ |
| ದ್ಯಾಮಪ್ಪ | ರಂಗಪ್ಪ | ಭೀಮೇಶಿ |

ಸ್ತ್ರೀಯರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
|---|---|---|
| ಮಾರೆವ್ವ | ಕೆಂಚಮ್ಮ | ಉಮಾದೇವಿ |
| ಮಲಿಯಮ್ಮ | ಸೊಂದ್ರಮ್ಮ | ಗೌರಮ್ಮ |
| ಯಲ್ಲಮ್ಮ | ಹೂಲೆಮ್ಮ | ಗಿರಿಜಮ್ಮ |
| ಭೀಮಕ್ಕ | ಚೌಡಮ್ಮ | ಸರಸ್ವತಿ |
| ಚಳ್ಳೀರಮ್ಮ | ಪೆನ್ನಮ್ಮ | ಲಕ್ಷ್ಮಿ |
| ಭೀಮಕ್ಕ | ತಿಪ್ಪಮ್ಮ | ಮಹದೇವಿ |
| ಬಂಗಾರಮ್ಮ | ದ್ಯಾಮಕ್ಕ | ನಂದಿನಿ |

| | | |
|---|---|---|
| ಬೋರಮ್ಮ | ನಿಂಗಮ್ಮ | ಸುನಂದ |
| ಮಲ್ಲಕ್ಕ | ತಿಪ್ಪೀರಮ್ಮ | ಭಾಗ್ಯಮ್ಮ |
| ದುರುಗಮ್ಮ | ಚಿತ್ರಕ್ಕ | ದಾಕ್ಷಾಯಿಣಿ |

ಮೇಲಿನ ಪಟ್ಟಿಯ ಹೆಸರುಗಳನ್ನು ನೋಡಿದಾಗ, ತಲೆಮಾರುಗಳಲ್ಲಿ ಆಗಿರುವ ಕೆಲವು ಬದಲಾವಣೆಗಳನ್ನು ತಿಳಿಯಬಹುದು. ಮೊದಲ ತಲೆಮಾರಿನ ಹೆಸರುಗಳು ಮಾದಿಗ ಸಮುದಾಯದ ಧಾರ್ಮಿಕ ಸಂಸ್ಕೃತಿಯ ಪ್ರಭಾವದಿಂದ ಬಂದ ಹೆಸರುಗಳು ಜಾಸ್ತಿ ಇದ್ದು, ಪ್ರಾದೇಶಿಕ ದೈವಗಳ ಪ್ರಭಾವಕ್ಕೊಳಗಾಗಿ ಕೆಲವು ಹೆಸರುಗಳು ಬಂದಿರುವುದನ್ನು ಗಮನಿಸಬಹುದು. ಕ್ಯಾತಪ್ಪ, ನುಂಕಪ್ಪ, ತಿಪ್ಪಣ್ಣ, ಬೋರಯ್ಯ, ತಿಪ್ಪಮ್ಮ, ಚಿತ್ರಮ್ಮ, ಕರಿಯಮ್ಮ ಎಂಬ ಹೆಸರುಗಳು ಈ ಸಮುದಾಯಕ್ಕೆ ಹೊರತಾದ ಪ್ರಾದೇಶಿಕ ದೈವಗಳ ಪ್ರಭಾವದಿಂದ ಬಂದಿರುವ ಹೆಸರುಗಳಾಗಿವೆ. ಎರಡನೆ ತಲೆಮಾರಿನಲ್ಲಿ ಮೊದಲ ತಲೆಮಾರಿನ ಪ್ರಕ್ರಿಯೆಯೇ ಮುಂದುವರೆದಿದ್ದು, ತೀರ ವ್ಯತ್ಯಾಸಗಳು ಕಂಡುಬರುವುದಿಲ್ಲ. ಕೊಂಚ ಪ್ರಮಾಣದಲ್ಲಿ ಮೇಲ್ಜಾತಿಯವರಲ್ಲಿ ಕಂಡುಬರುವ ಬಸವರಾಜ, 'ಪರಮೇಶಿ' ಎಂಬ ಹೆಸರುಗಳು ಕಾಣಿಸಿಕೊಳ್ಳುತ್ತವೆ. ಮೂರನೆ ತಲೆಮಾರಿನ ಸ್ತ್ರೀ ಮತ್ತು ಪುರುಷ ಇಬ್ಬರ ಹೆಸರುಗಳಲ್ಲೂ ವ್ಯಾಪಕ ಬದಲಾವಣೆಗಳು ಸಂಭವಿಸಿವೆ. ತಲೆತಲಾಂತರಗಳಿಂದ ಉಳಿದುಬಂದ ಹೆಸರುಗಳಿಗೆ ಬದಲಾಗಿ, ಮೇಲ್ಜಾತಿಯವರು ಅನುಸರಿಸುವ ಹೆಸರುಗಳನ್ನು ಈ ಸಮುದಾಯ ಸ್ವೀಕರಿಸಿರುವುದು ಕಂಡುಬರುತ್ತದೆ. ಜೊತೆಗೆ ಹೊಸ ತಲೆಮಾರಿನವರು ವಿನೂತನವಾದ ಆಧುನಿಕ ಹೆಸರುಗಳನ್ನು ನಿರ್ದೇಶನ ಮಾಡಿಕೊಂಡಿದ್ದಾರೆ. ಅಂದರೆ ಮೇಲ್ಜಾತಿಗಳಲ್ಲಿ ಹಳೆಯ ತಲೆಮಾರಿನಲ್ಲಿ ಬಳಕೆಯಲ್ಲಿದ್ದ ಹೆಸರುಗಳು, ಮಾದಿಗರಲ್ಲಿ ಹೊಸ ತಲೆಮಾರಿನವರಲ್ಲಿ ಕಂಡುಬರುತ್ತವೆ. ಕೆಲವೊಮ್ಮೆ ಹಳೆಯ ಹೆಸರುಗಳನ್ನು ಮುಂದುವರೆಸಿಕೊಂಡು ಹೋಗಬೇಕೆನ್ನುವ ಹಂಬಲದಿಂದ ಇಟ್ಟುಕೊಂಡರೂ, ಆಧುನಿಕ ಸಂದರ್ಭಕ್ಕೆ ತಕ್ಕಂತೆ ಸ್ವಲ್ಪಮಟ್ಟಿಗೆ ಬದಲಾಯಿಸಿಕೊಳ್ಳುವುದೂ ಕಂಡುಬರುತ್ತದೆ. ಉದಾಹರಣೆಗೆ ಕೆಲವು ಹೆಸರನ್ನು ನೋಡಬಹುದು.

| ಹಳೆಯ ತಲೆಮಾರು | ಹೊಸ ತಲೆಮಾರು |
|---|---|
| ದುರುಗಪ್ಪ | ದುರುಗೇಶ್ |
| ಮಾರಪ್ಪ | ಮಾರೇಶ್ |
| ಚೌಡಪ್ಪ | ಚೌಡೇಶ್ |
| ಓಬಳಪ್ಪ | ಓಬಳೇಶ್ |
| ಕಣುಮಪ್ಪ | ಕಣುಮೇಶ್ |

ಮಾದಿಗ ಸಮುದಾಯದಲ್ಲಿನ ಮೇಲ್ವರ್ಗದವರು, ಮೇಲ್ಜಾತಿಯವರು ಅನುಸರಿಸುತ್ತಿರುವ ಹೆಸರುಗಳನ್ನೇ ನಿರ್ದೇಶಿಸಿಕೊಂಡರೆ, ಕೆಳವರ್ಗದವರು ತಮ್ಮ ಮೂಲ ಸಂಸ್ಕೃತಿಯ ತೆಕ್ಕೆಯಲ್ಲೇ ಉಳಿದಿದ್ದು, ಮೂಲ ಹೆಸರುಗಳಲ್ಲೇ ಕೊಂಚ ಮಾರ್ಪಾಟುಗಳನ್ನು ಮಾಡಿಕೊಳ್ಳುವುದರ ಮೂಲಕ ಆಧುನಿಕರಾಗ ಬಯಸುತ್ತಿರುವುದನ್ನು ಗಮನಿಸಬಹುದು. ಮಾದಿಗರು ನಗರಗಳಿಗಿಂತ ಗ್ರಾಮೀಣ ಪರಿಸರದಲ್ಲಿಯೇ ಹೆಚ್ಚು ನೆಲೆಸಿರುವುದು ಕಂಡುಬರುತ್ತದೆ. ಆದಕಾರಣ ಆಧುನಿಕತೆಯ ಪ್ರಭಾವ ನಿಧಾನವಾಗಿ ಪ್ರವೇಶಿಸುತ್ತಿದೆ. ಎಲ್ಲಾ ನೆಲೆಗಳಲ್ಲಿ ಹಿಂದುಳಿದಿರುವ ಕುಟುಂಬಗಳಲ್ಲಿ ಈಗಲೂ ಹಳೆಯ ಹೆಸರುಗಳು ಚಾಲ್ತಿಯಲ್ಲಿವೆ. ಈ ಪ್ರಕ್ರಿಯೆ

ಹೀಗೇ ಮುಂದುವರೆದರೆ, ಭವಿಷ್ಯದ ದಿನಗಳಲ್ಲಿ ಮಾದಿಗ ಸಂಸ್ಕೃತಿಯನ್ನು ಪ್ರತಿನಿಧಿಸುವಂತಹ ಹೆಸರುಗಳು ಬಳಕೆಯಿಂದ ದೂರಸರಿಯಬಹುದು. ಮೂರೂ ತಲೆಮಾರುಗಳ ಹೆಸರುಗಳನ್ನು ವೀಕ್ಷಿಸಿದಾಗ ತಲೆಮಾರಿನಿಂದ ತಲೆಮಾರಿಗೆ ನಿಧಾನಗತಿಯಲ್ಲಿ ವ್ಯತ್ಯಾಸಗಳು ಆಗುತ್ತಾ ಬಂದಿವೆ. ಯಾವ ತಲೆಮಾರಿನ ಹೆಸರುಗಳಲ್ಲಿ, ಯಾವ ಮೂಲದ ಹೆಸರುಗಳು ಎಷ್ಟು ಬಳಕೆಯಾಗಿವೆ ಎಂಬುದನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗುವುದು.

ಮಾದಿಗರ ವ್ಯಕ್ತಿನಾಮಗಳಲ್ಲಿ ಸಂಬಂಧವಾಚಿ ವಾರ್ಗಿಕಗಳನ್ನು ಬಿಟ್ಟು ಬೇರೆ ವೃತ್ತಿ/ಜಾತಿವಾಚಿ ವಾರ್ಗಿಕಗಳ ಬಳಕೆ ಇರುವುದು ಕಾಣಬಂದಿಲ್ಲ. ಆದರೆ ಇತ್ತೀಚಿಗೆ 'ಮಾದಿಗ' ಎಂಬುದು ಕೆಲವು ಹೆಸರುಗಳಲ್ಲಿ ಬಳಕೆಯಾಗುತ್ತದೆ. ಮೊದಲೆರಡು ತಲೆಮಾರಿನ ಸ್ತ್ರೀ, ಪುರುಷ ವ್ಯಕ್ತಿನಾಮಗಳಲ್ಲಿ ಸಾಮಾನ್ಯವಾಗಿ ಸಂಬಂಧವಾಚಿ ವಾರ್ಗಿಕಗಳು ಬಳಕೆಯಾಗಿದ್ದು, ಹೊಸ ತಲೆಮಾರಿನವರಲ್ಲಿ ಇವುಗಳ ಬಳಕೆ ಕಡಿಮೆಯಾಗಿದೆ. ಪರಂಪರಾಗತ ಶೋಷಣೆಯ ಬದುಕಿಗೆ ಬದಲಾಗಿ, ಸ್ವತಂತ್ರವಾದ ಬದುಕನ್ನು ಕಟ್ಟಿಕೊಳ್ಳುವಲ್ಲಿ ಮುಂದಾಗಿರುವ ಈ ಸಮುದಾಯ ವ್ಯಕ್ತಿನಾಮಗಳಲ್ಲೂ ಹೊಸತನವನ್ನು ಕಂಡುಕೊಳ್ಳುವಲ್ಲಿ ಕ್ರಿಯಾಶೀಲವಾಗಿದೆ. ಇಂಥ ಹಲವು ಧೋರಣೆಗಳ ಹಿನ್ನಲೆಯನ್ನಿಟ್ಟುಕೊಂಡು ವ್ಯಕ್ತಿನಾಮಗಳನ್ನು ಅಧ್ಯಯನ ಮಾಡಬೇಕಾದ ಅಗತ್ಯವಿದೆ.

ತಲೆಮಾರುಗಳ ಅಂತರದಲ್ಲಿ ಸಂಬಂಧವಾಚಿ ವಾರ್ಗಿಕಗಳ ಬಳಕೆ ಯಾವ ಬಗೆಯ ಚಲನೆಯನ್ನು ಹೊಂದಿದೆ ಎಂಬುದನ್ನು ಮುಂದಿನ ಭಾಗದಲ್ಲಿ ವಿವರವಾಗಿ ಚರ್ಚಿಸಲಾಗುವುದು.

ಮಾದಿಗ ಸಮುದಾಯದ '೭೧೧' ಹೆಸರುಗಳನ್ನು ಅಧ್ಯಯನದ ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ. ತಲೆಮಾರುಗಳಲ್ಲಿ ವ್ಯಕ್ತಿನಾಮಗಳ ಪ್ರಭಾವ-ಪ್ರೇರಣೆಗಳಲ್ಲಿ ಆಗಿರುವ ಬದಲಾವಣೆಯನ್ನು ಪ್ರಸ್ತುತ ಸಂದರ್ಭದಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

## ಮಾದಿಗ ಸಮುದಾಯದ ವ್ಯಕ್ತಿನಾಮಗಳ ಮಾದರಿ ಸಮೀಕ್ಷೆ ಕೋಷ್ಟಕ ಪಟ್ಟಿ - ೧೧

| ತರೆ ಮಾರು | ಧಾರ್ಮಿಕ ಪ್ರಭಾವ ಶೇಕಡವಾರು (%) | | | ಸಮಕಾಲೀನ ಪ್ರಸಿದ್ಧ ವ್ಯಕ್ತಿಗಳ ಪ್ರಭಾವ ಶೇಕಡವಾರು (%) | | | ಆಧುನೀಕರಣದ ಪ್ರಭಾವ ಶೇಕಡವಾರು (%) | | | ಚರಿತ್ರೆ ಪ್ರಭಾವ ಶೇಕಡವಾರು (%) | | | ಇತರೆ ಪ್ರಭಾವ ಶೇಕಡವಾರು (%) | | | ಒಟ್ಟು ಶೇಕಡವಾರು (%) | | |
|---|---|---|---|---|---|---|---|---|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೩ | ೭೭ | ೪೨ | ೬೬ | ೩.೫ | ೨ | ೩ | ೧೩ | ೫೪ | ೨೫ | - | - | - | ೫ | ೨ | ೪ | ೭೦ | ೩೦ | ೨೩ |
| ೨ | ೯೧ | ೮೦ | ೮೪ | ೦.೬ | - | ೦.೩ | ೪ | ೧೮ | ೧೧ | - | - | - | ೫ | ೪ | ೪ | ೪೭ | ೫೩ | ೪೫ |
| ೧ | ೯೪ | ೯೧ | ೯೩ | - | - | - | ೨ | ೪ | ೨ | - | - | - | ೪ | ೫ | ೪ | ೫೩ | ೪೭ | ೩೨ |
| ಒಟ್ಟು | ೮೮ | ೭೬ | ೮೩ | ೧.೩ | ೦.೩ | - | ೬ | ೧೮ | ೧೧ | - | - | - | ೫ | ೪ | ೪.೫ | ೫೪ | ೪೬ | - |

ಕೋಷ್ಟಕ ೧.೨೦

ಮೇಲಿನ ಕೋಷ್ಟಕವನ್ನು ಗಮನಿಸದರೆ, ಮಾದಿಗ ಸಮುದಾಯದಲ್ಲಿ ದೈವಸಂಬಂಧಿ ಹೆಸರುಗಳು ಅಧಿಕವಾಗಿವೆ. ಮೊದಲೆರಡು ತಲೆಮಾರುಗಳಲ್ಲಿ ಪುರುಷ ಹಾಗೂ ಸ್ತ್ರೀಯರ ನಡುವೆ ಹೆಚ್ಚೂ ಕಡಿಮೆ ಒಂದೇ ಪ್ರಮಾಣವಿದ್ದರೆ, ಮೂರನೆ ತಲೆಮಾರಿನಲ್ಲಿ ಸ್ವಲ್ಪ ವ್ಯತ್ಯಾಸವಿದೆ. ದೈವಸಂಬಂಧಿ ಹೆಸರುಗಳು ಪುರುಷರಲ್ಲಿ ನಿಧಾನವಾಗಿ ಕಡಿಮೆಯಾಗುತ್ತಾ ಹೋದರೆ, ಸ್ತ್ರೀಯರಲ್ಲಿ ವ್ಯಾಪಕವಾಗಿ ಕಡಿಮೆಯಾಗುತ್ತಿರುವುದು ಗೋಚರವಾಗುತ್ತಿದೆ. ಆಧುನೀಕರಣದ ಪ್ರಭಾವ ಇದಕ್ಕೆ ವಿರುದ್ಧವಾಗಿ ಇರುವುದನ್ನು ಗಮನಿಸಬಹುದು. ಸಮಕಾಲೀನ ವ್ಯಕ್ತಿಗಳ ಪ್ರಭಾವ ಇತ್ತೀಚಿನವರ ಹೆಸರುಗಳಲ್ಲಿ ಕೊಂಚಮಟ್ಟಿಗೆ ಪ್ರೇರಣೆಯಾಗಿದ್ದರೂ ಸಹ, ಇಲ್ಲವೆಂದೇ ಹೇಳಬಹುದು. ಸಂಕೀರ್ಣ ವ್ಯಕ್ತಿನಾಮಗಳು ಮೂರು ತಲೆಮಾರಿನ ಹೆಸರುಗಳಲ್ಲಿ ಕಂಡುಬರುತ್ತಿದ್ದು, ಅವುಗಳ ಬಳಕೆಯಲ್ಲಿ ಅಂಥ ವ್ಯತ್ಯಾಸಗಳೇನೂ ಆಗಿರುವುದಿಲ್ಲ.

### ವಾರ್ಗಿಕಗಳು

ಮಾದಿಗ ಸಮುದಾಯದ ವ್ಯಕ್ತಿನಾಮಗಳಲ್ಲಿ ಬಳಕೆಯಾಗುವ ವಾರ್ಗಿಕಗಳನ್ನು ಈ ಕೆಳಗೆ ಪಟ್ಟಿಮಾಡಲಾಗಿದೆ.

**ಪುರುಷರಲ್ಲಿ**

| ಸಂಬಂಧವಾಚಿ ವಾರ್ಗಿಕ | ವೃತ್ತಿ/ಜಾತಿವಾಚಿ ವಾರ್ಗಿಕ |
|---|---|
| ಅಪ್ಪ | ಮಾದಿಗ |
| ಅಣ್ಣ | ಗೌಡ |
| ಅಯ್ಯ | ರೆಡ್ಡಿ |

**ಸ್ತ್ರೀಯರಲ್ಲಿ**

| ಸಂಬಂಧವಾಚಿ ವಾರ್ಗಿಕ. |
|---|
| ಅಮ್ಮ |
| ಅಕ್ಕ |
| ಅವ್ವ |

ಸಂಬಂಧವಾಚಕಗಳ ಬಗೆಗೆ ಮುಂದಿನ ಭಾಗದಲ್ಲಿ ಚರ್ಚಿಸಲಾಗುವುದು. ಪ್ರಸ್ತುತ ವೃತ್ತಿ/ಜಾತಿವಾಚಿ ವಾರ್ಗಿಕಗಳ ಕುರಿತು ವಿಶ್ಲೇಷಿಸಲಾಗುವುದು.

### ಮಾದಿಗ

'ಮಾದಿಗ' ಸಮುದಾಯದ ವ್ಯಕ್ತಿನಾಮಗಳಲ್ಲಿ ಈವರೆಗೆ ಸಂಬಂಧವಾಚಿ ವಾರ್ಗಿಕಗಳು ಮಾತ್ರ ಬಳಕೆಯಾಗಿದ್ದು, ಇತ್ತೀಚೆಗೆ 'ಮಾದಿಗ' ಎಂಬುದು ವಾರ್ಗಿಕವಾಗಿ ಬಳಕೆಯಾಗುತ್ತಿದೆ. ಹಿಂದೆ ಸಾಮಾಜಿಕವಾಗಿ

ಹಿಂದುಳಿದ ಕೆಳಜಾತಿಗಳು, ಬಹಿರಂಗವಾಗಿ ತಮ್ಮ ಜಾತಿಯ ಹೆಸರನ್ನು ಹೇಳಲು ಹಿಂಜರಿಯುತ್ತಿದ್ದರು. ಜಾತಿಯ ಹೆಸರನ್ನು ಹೇಳುವುದು ಅಪಮಾನ, ಅಪರಾಧವಾಗಿತ್ತು. ಆದರೆ ಕಾಲ ಇಂದು ಬದಲಾಗಿದೆ. ಸಾರ್ವಜನಿಕವಾಗಿ ಜಾತಿಯ ಹೆಸರನ್ನು ಹೇಳಿಕೊಳ್ಳುವುದು ಅವಮಾನದ ಸಂಗತಿ ಎಂಬುದಕ್ಕಿಂತ ಇಂದು, ಜಾತಿಯ ಹೆಸರನ್ನು ಹೇಳಿಕೊಳ್ಳುವುದು ಗೌರವ, ಪ್ರತಿಷ್ಠೆ ಅಭಿಮಾನದ ಸಂಕೇತವಾಗಿದೆ. ಆದ್ದರಿಂದ ಯಾವುದೇ ಮುಜುಗರಗಳಿಲ್ಲದೆ ಇಂದು ಜಾತಿಯ ಹೆಸರನ್ನು ಸೂಚಿಸಿಕೊಳ್ಳುತ್ತಾರೆ.

ಕೆಳಸಮುದಾಯಗಳು ಜಾಗೃತವಾಗಿದ್ದು ಸಂಘಟನೆಗೊಳ್ಳುತ್ತಿವೆ. ಭಾರತೀಯ ಪ್ರಜಾಪ್ರಭುತ್ವದ ಆಡಳಿತ ವ್ಯವಸ್ಥೆಯಲ್ಲಿ ವ್ಯಕ್ತಿಗೆ ಸೌಲಭ್ಯಗಳು ದೊರೆಯುವುದು ಜಾತಿ ಆಧಾರದ ಮೇಲೆಯೇ. ಈ ಕಾರಣಕ್ಕಾಗಿ ಜಾತಿಯ ಹೆಸರನ್ನು ಹೆಸರಿನ ಮೂಲಕ ಗುರುತಿಸಿಕೊಳ್ಳುವುದು ಒಂದು ಪ್ರವೃತ್ತಿಯಾಗಿ ಬೆಳೆಯುತ್ತಿದೆ.

ಆಂಧ್ರಪ್ರದೇಶದಲ್ಲಿ 'ಮಾದಿಗ ದಂಡೋರ' ಎಂಬ ಸಂಘಟನೆಯಿದೆ. ಈ ಸಂಘಟನೆಯ ಕೆಲವು ಕಾರ್ಯಕರ್ತರು ತಮ್ಮ ಹೆಸರಿನ ಮುಂದೆ 'ಮಾದಿಗ' ಎಂದು ಇಟ್ಟುಕೊಂಡಿದ್ದಾರೆ. ಉದಾಹರಣೆಗೆ

| | |
|---|---|
| ಕೃಷ್ಣಾ ಮಾದಿಗ | ಲಕ್ಷ್ಮಣ ಮಾದಿಗ |
| ಚಂದ್ರು ಮಾದಿಗ | ಜಯದೇವ ಮಾದಿಗ |

ಇದರ ಪ್ರಭಾವ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಆಗಿರುವಂತೆ, ಚಿತ್ರದುರ್ಗ ಪರಿಸರದಲ್ಲಿಯೂ ಕಂಡುಬರುತ್ತದೆ.

| | |
|---|---|
| ಅರ್ಜುನ ಮಾದಿಗ | ಶಿವಾ ಮಾದಿಗ |

ಇದು ಚಿತ್ರದುರ್ಗ ಪರಿಸರದ ಎಲ್ಲಾ ಮಾದಿಗ ಸಮುದಾಯದವರ ಮೇಲೆ ಪ್ರಭಾವ ಬೀರಿದೆಯೆಂದಲ್ಲ. ಸಂಘಟನೆಗಳಲ್ಲಿ ಕೆಲಸ ಮಾಡುವ ಕೆಲವರು ಮಾತ್ರ 'ಮಾದಿಗ' ಎಂದು ನಿರ್ದೇಶಿಸಿಕೊಂಡಿರುವುದು ತಿಳಿದುಬರುತ್ತದೆ. 'ಮಾದಿಗ' ಎಂಬುದು ಹೊಸತಲೆಮಾರಿನ ಪುರುಷರಲ್ಲಿ ಮಾತ್ರ ಕಾಣಬರುತ್ತದೆ ಎಂಬುದು ಗಮನಾರ್ಹ.

### ಗೌಡ

'ಮಾದಿಗ' ಸಮುದಾಯದಲ್ಲಿ 'ಗೌಡ' ದಿಂದ ಕೊನೆಗೊಳ್ಳುವ ಕೆಲವು ವ್ಯಕ್ತಿನಾಮಗಳು ಕಂಡುಬಂದಿವೆ. ಈ ಮೂಲಕ ಮಾದಿಗರು ಕೂಡ ಹಿಂದೆ 'ಗೌಡ' ವೃತ್ತಿಯನ್ನು ಪಡೆದಿದ್ದರು ಎಂಬುದು ಇದರಿಂದ ತಿಳಿದುಬರುತ್ತದೆ. ಮೇಲ್ಜಾತಿಗಳಲ್ಲಿ ಇರುವ ಹಾಗೆ ಮಾದಿಗರಲ್ಲಿ ಇದಕ್ಕೆ ವಿಶಾಲವ್ಯಾಪ್ತಿ, ದೊಡ್ಡ ಪರಂಪರೆ ಇರಲಾರದು. ಆ ವೃತ್ತಿಯನ್ನು ಹೊಂದಿದ ಕುಟುಂಬಕ್ಕೆ ಮಾತ್ರ ಇದರ ಬಳಕೆ ನಿರ್ದಿಷ್ಟವಾಗಿದ್ದು, ಆ ಸಮುದಾಯದ ಇತರರ ವ್ಯಕ್ತಿನಾಮಗಳಲ್ಲಿ ಇದು ಬಳಕೆಯಾಗುವುದಿಲ್ಲ. ಆದರೂ ಇತ್ತೀಚೆಗೆ ಇವರಲ್ಲಿ, ಇದರ ಬಳಕೆ ಗೌಣವಾಗುತ್ತಿರುವುದು ಕ್ಷೇತ್ರದ ಮಾಹಿತಿಯಿಂದ ತಿಳಿದುಬರುತ್ತದೆ.

## ರೆಡ್ಡಿ

ಚಿತ್ರದುರ್ಗ ಪರಿಸರದ ಪೂರ್ವದ ಗಡಿಪ್ರದೇಶದ ಮಾದಿಗ ಸಮುದಾಯದವರಲ್ಲಿ 'ರೆಡ್ಡಿ' ಬಳಕೆಯಾಗಿರುವುದು ಕಂಡುಬರುತ್ತದೆ. ಆಂಧ್ರ ಮತ್ತು ಕರ್ನಾಟಕದ (ಚಿತ್ರದುರ್ಗ ಭಾಗಕ್ಕೆ ಅನ್ವಯಿಸಿ) ಗಡಿಭಾಗಗಳಲ್ಲಿ 'ರೆಡ್ಡಿ' ಸಮುದಾಯವು ಬಹುಸಂಖ್ಯಾತ ಮತ್ತು ಪ್ರಬಲ ಜನಾಂಗವಾಗಿ ನೆಲೆಸಿದೆ. 'ಮಾದಿಗ' ಮತ್ತು 'ರೆಡ್ಡಿ'ಗಳ ನಡುವೆ ವ್ಯಾವಹಾರಿಕ ಸಂಬಂಧಗಳು ಮೊದಲಿನಿಂದಲೂ ಬೆಳೆದು ಬಂದಿವೆ. ಈ ಸಮುದಾಯದ ಸಂಪರ್ಕದ ಪ್ರಭಾವದಿಂದ ಮಾದಿಗರ ಹೆಸರುಗಳಲ್ಲಿ 'ರೆಡ್ಡಿ' ಬಳಕೆಯಾಗಿರುವ ಸಾಧ್ಯತೆ ಇದೆ. ಈ ಸಂಬಂಧವಷ್ಟೇ ಕಾರಣವಾಗಿರದೆ, ಬೇರೆ ಕಾರಣಗಳು ಇರಲೂಬಹುದು.

ಮಾದಿಗರ ವ್ಯಕ್ತಿನಾಮಗಳಲ್ಲಿ ಕಂಡುಬಂದಿರುವ ವಾರ್ಗಿಕಗಳ ಪ್ರಮಾಣವನ್ನು ಈ ಕೆಳಗೆ ಚರ್ಚಿಸಲಾಗುವುದು.

| ಪುರುಷ ವಾರ್ಗಿಕ | | | | | | | ಸ್ತ್ರೀ ವಾರ್ಗಿಕ | | |
|---|---|---|---|---|---|---|---|---|---|
| ಸಂಬಂಧವಾಚಿ ವಾರ್ಗಿಕ | | | | ವೃತ್ತಿ/ಜಾತಿವಾಚಿ ವಾರ್ಗಿಕ | | | | | |
| ತಲೆ ಮಾರು | ಅಪ್ಪ | ಅಣ್ಣ | ಅಯ್ಯ | ಮಾದಿಗ | ಗೌಡ | ರೆಡ್ಡಿ | ಅಮ್ಮ | ಅಕ್ಕ | ಅಜ್ಜ |
| ೩ | ೧೩ | ೫ | ೫ | ೩ | - | ೨ | ೩೬ | ೮ | - |
| ೨ | ೪೯ | ೧೨ | ೧೩ | - | ೧ | ೩ | ೬೭ | ೨೦ | ೦.೬ |
| ೧ | ೫೭ | ೮ | ೧೭ | - | ೨ | - | ೭೦ | ೨೩ | ೩ |
| ಒಟ್ಟು | ೪೦ | ೯ | ೧೨ | ೧ | ೧ | ೧.೮ | ೬೩ | ೨೦ | ೧.೩ |
| ಸರಾಸರಿ ಒಟ್ಟು | | | ೬೨ | ೫.೬ | | | ೯.೫ | | |

ಕೋಷ್ಟಕ ೧.೨೧

ಮಾದಿಗ ಸಮುದಾಯದಲ್ಲಿ ಸಂಬಂಧವಾಚಿ ಮತ್ತು ವೃತ್ತಿವಾಚಿ ವಾರ್ಗಿಕಗಳು ಬಳಕೆಯಾಗಿದ್ದು, ಸಂಬಂಧವಾಚಿ ವಾರ್ಗಿಕಗಳು ಹಳೆಯ ತಲೆಮಾರಿನ ಪುರುಷ ಮತ್ತು ಸ್ತ್ರೀ ವ್ಯಕ್ತಿನಾಮಗಳಲ್ಲಿ ಅಧಿಕವಾಗಿವೆ. ಅಲ್ಲದೆ ಇವು ತಲೆಮಾರಿನಿಂದ ತಲೆಮಾರಿಗೆ ಕಡಿಮೆಯಾಗಿರುವುದು ತಿಳಿದುಬರುತ್ತದೆ. 'ಗೌಡ' ಮತ್ತು 'ರೆಡ್ಡಿ' ವಾರ್ಗಿಕಗಳು ಸಹ ಹಿಂದೆಗಿಂತ ಇಂದು ಕಡಿಮೆಯಾಗಿದ್ದು, ಬಳಕೆಯಿಂದ ದೂರ ಸರಿಯುತ್ತಿವೆ. 'ಮಾದಿಗ' ಎಂಬುದು ಮೊದಲೆರಡು ತಲೆಮಾರುಗಳಲ್ಲಿ ಕಂಡುಬರದೆ, ಇತ್ತೀಚಿನ ಕೆಲವು ಹೆಸರುಗಳಲ್ಲಿ ಮಾತ್ರ ಕಾಣಬಂದಿದೆ. 'ಮಾದಿಗ' ಎಂಬ ವಾರ್ಗಿಕವನ್ನು ಹೊರತುಪಡಿಸಿ, ಮಾದಿಗ ಸಮುದಾಯದಲ್ಲಿ ಎಲ್ಲಾ ವಾರ್ಗಿಕಗಳ ಬಳಕೆ ತಲೆಮಾರುಗಳ ಅಂತರದಲ್ಲಿ ಕಡಿಮೆಯಾಗುತ್ತಿರುವುದು ಮೇಲಿನ ಕೋಷ್ಟಕದಿಂದ ತಿಳಿದುಬರುತ್ತದೆ.

### ೩.೫.೧೧ ಲಂಬಾಣಿ

ಕನ್ನಡ ಪ್ರದೇಶಕ್ಕೆ ವಲಸೆ ಬಂದಿರುವ ಹಲವು ಸಮುದಾಯಗಳಲ್ಲಿ 'ಲಂಬಾಣಿ' ಸಮುದಾಯವೂ ಒಂದು. ವಲಸೆ ಬಂದ ಸಮುದಾಯವಾದರೂ, ಇವರ ನೆಲೆಗಳು ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲಿ ಕಂಡುಬರುತ್ತವೆ. ಚಿತ್ರದುರ್ಗ ಪರಿಸರದಲ್ಲಿ ಹೆಚ್ಚು ದಟ್ಟವಾಗೇನೂ ಇರದಿದ್ದರೂ ಸಾಧಾರಣವಾಗಿ ಈ ಜನರು ವಾಸವಾಗಿದ್ದಾರೆ. ಕನ್ನಡ ಸಂಸ್ಕೃತಿಗೆ, ಭಾಷಾ ಪರಿಸರಕ್ಕೆ ಹೊರಗಿನ ಸಮುದಾಯವಾಗಿರುವುದರಿಂದ ಇವರ ವ್ಯಕ್ತಿನಾಮಗಳು ಸಹಜವಾಗಿಯೇ ಭಿನ್ನವಾಗಿವೆ.

ಲಂಬಾಣಿ ಸಮುದಾಯ ಬುಡಕಟ್ಟು ಸಮುದಾಯವಾಗಿದ್ದು, ತಮ್ಮ ಬುಡಕಟ್ಟು ವ್ಯವಸ್ಥೆಯಲ್ಲಿ ಸೃಷ್ಟಿಸಿಕೊಂಡ ದೈವಗಳು ಆಗಿಹೋದ ಸಾಂಸ್ಕೃತಿಕ ವೀರರು (ಕೆಲವರನ್ನು ಆರಾಧನೆ ಮಾಡಲಾಗುತ್ತದೆ) ಇವರ ಹೆಸರುಗಳ ಮೇಲೆ ತುಂಬಾ ಪ್ರಭಾವ ಬೀರಿವೆ. ಈ ಬಗೆಯ ವ್ಯಕ್ತಿನಾಮಗಳು ಆ ಸಂಸ್ಕೃತಿಗೆ ಮಾತ್ರ ನಿರ್ದಿಷ್ಟವಾಗಿದ್ದು, ಅವು ಆ ಸಮಾಜದ ಅನನ್ಯತೆಯ ಸಂಕೇತಗಳೂ ಆಗಿವೆ. ಅನೇಕ ಭಿನ್ನ ಭಾಷಾ, ಸಂಸ್ಕೃತಿಗಳ ಮಧ್ಯೆ ಬದುಕುತ್ತಿರುವ ಈ ಸಮುದಾಯ ಕಾಲಕ್ರಮೇಣ ಅವುಗಳ ಪ್ರಭಾವಕ್ಕೆ ಒಳಗಾಗಿದ್ದೂ ಇದೆ. ಅಲ್ಲದೆ ಆಧುನಿಕತೆಯೊಂದಿಗೆ ಎದುರಾಗಿ ನಿಂತು, ತಮ್ಮ ಮೂಲ ಸಂಸ್ಕೃತಿಗಿಂತ ಬೇರೆಯೇ ಆದ ಹೆಸರುಗಳನ್ನು ಪಡೆದುಕೊಂಡಿದೆ. ಮುಂದೆ ಈ ಬಗೆಗೆ ವಿವರವಾಗಿ ಚರ್ಚಿಸಲಾಗುವುದು.

ಲಂಬಾಣಿ ಸಮುದಾಯದ ಮೂರು ತಲೆಮಾರುಗಳಲ್ಲಿ ಬಳಕೆಯಾಗಿರುವ ವ್ಯಕ್ತಿನಾಮಗಳು ಮತ್ತು ಅವುಗಳಲ್ಲಾಗಿರುವ ಬದಲಾವಣೆಗಳನ್ನು ಗುರುತಿಸಲು ನಿದರ್ಶನಕ್ಕೆ ಕೆಲವು ಮಾದರಿಗಳನ್ನು ನೋಡಬಹುದು.

ಪುರುಷರಲ್ಲಿ

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
|---|---|---|
| ಕೂಬ್ಯಾನಾಯ್ಕ | ತಿಪ್ಯಾನಾಯ್ಕ | ಪ್ರಭಾಕರನಾಯ್ಕ |
| ತೋತ್ಯಾನಾಯ್ಕ | ಲಚ್ಮಾನಾಯ್ಕ | ಶ್ರೀನಿವಾಸನಾಯ್ಕ |
| ಫತ್ಯಾನಾಯ್ಕ | ಶಂಕರನಾಯ್ಕ | ಕುಮಾರನಾಯ್ಕ |
| ದೇವ್ಲಾನಾಯ್ಕ | ರಾಮಾನಾಯ್ಕ | ತಿರುಮಲ |
| ಫೋಮ್ಯಾನಾಯ್ಕ | ಗಂಗಾಧರನಾಯ್ಕ | ರವಿಶಂಕರ |
| ಪೀಕ್ಯಾನಾಯ್ಕ | ನಾಗೇಂದ್ರನಾಯ್ಕ | ಜಗನ್ನಾಥ |
| ರಾವೋಜಿನಾಯ್ಕ | ಚಂದ್ರಾನಾಯ್ಕ | ಪ್ರದೀಪ್ |
| ಕಾಳ್ಯಾನಾಯ್ಕ | ಲಿಂಬ್ಯಾನಾಯ್ಕ | ಪ್ರಶಾಂತ |
| ವೀರಾಸಿಂಗ್ ನಾಯ್ಕ | ಗಾಂಗ್ಯಾನಾಯ್ಕ | ಮುರಳಿ |
| ಲಾಲ್‌ಸಿಂಗ್ ನಾಯ್ಕ | ಹನುಮಾನಾಯ್ಕ | ಉಮೇಶ್ |

ಸ್ತ್ರೀಯರಲ್ಲಿ

| | | |
|---|---|---|
| ಗೋಮ್ಲಿಬಾಯಿ | ಚಂದ್ರಿಬಾಯಿ | ಪದ್ಮಾವತಿ |
| ಸೇವ್ಲಿಬಾಯಿ | ರುಕ್ಮಿಣಿಬಾಯಿ | ಮೀನಾಕ್ಷಿ |
| ಹೇಮ್ಲಿಬಾಯಿ | ತಿಪ್ಪೀಬಾಯಿ | ನಂದಿನಿ |
| ಭನ್ನೀಬಾಯಿ | ಸರಸ್ವತಿ | ಸುಧಾ |
| ಪೀರೀಬಾಯಿ | ಪಾರ್ವತಿ | ಗೀತ |
| ಜಮಲೀಬಾಯಿ | ಸುನಂದ | ರೂಪ |
| ಸುಬ್ಬೀಬಾಯಿ | ಸಕ್ರೀಬಾಯಿ | ಶಾಂತಿಬಾಯಿ |
| ಬುಕ್ಕೀಬಾಯಿ | ಈರೂಬಾಯಿ | ಗೌರಿಬಾಯಿ |
| ತೋಳ್ಳಿಬಾಯಿ | ಚಾಳ್ವೀಬಾಯಿ | ಸೀತಾಬಾಯಿ |

ಈ ಮೂರು ತಲೆಮಾರಿನವರಲ್ಲಿ ಮೊದಲ ತಲೆಮಾರಿನ ಪುರುಷ ಮತ್ತು ಸ್ತ್ರೀಯರಲ್ಲಿ ಪರಂಪರಾಗತವಾಗಿ ಬಳಕೆಯಲ್ಲಿದ್ದ ಧಾರ್ಮಿಕ ಪರಂಪರೆಯ ಹೆಸರುಗಳು ದಟ್ಟವಾಗಿವೆ. ಈ ನಾಮಗಳು ಕನ್ನಡ ಭಾಷಾ ಪರಿಸರಕ್ಕೆ ಹೊರತಾಗಿದ್ದು ಕುತೂಹಲವನ್ನುಂಟುಮಾಡುತ್ತವೆ.

ಎರಡನೆ ತಲೆಮಾರಿನವರ ಹೆಸರುಗಳು ಮೊದಲ ತಲೆಮಾರಿನವರ ಹೆಸರುಗಳಿಂದ ಭಿನ್ನವಾದ ರಚನೆಗಳಾಗಿವೆ. ಎರಡನೆ ತಲೆಮಾರಿನ ಹೆಸರಿನ ನಿರ್ದಿಷ್ಟಗಳು ಕನ್ನಡ ಭಾಷಾಪರಿಸರದಲ್ಲಿ, ಸಾಮಾಜಿಕವಾಗಿ ಮೇಲಂತಸ್ತಿನ ಸಮುದಾಯಗಳಲ್ಲಿ ವ್ಯವರಿಸುವಂಥ ಹೆಸರುಗಳಾಗಿದ್ದು, ಇವು ಲಂಬಾಣಿ ಸಮುದಾಯದ ವ್ಯಕ್ತಿನಾಮಗಳ ಮೇಲೆ ಪ್ರಭಾವ ಬೀರಿವೆ. ಅಥವಾ ಕನ್ನಡ ಪರಿಸರದಲ್ಲಿ ಸಾಮಾಜಿಕವಾಗಿ ಮೇಲ್ಜಾತಿಯವರಲ್ಲಿ ಬಳಕೆಯಾಗುವ ವ್ಯಕ್ತಿನಾಮಗಳನ್ನು, ಲಂಬಾಣಿ ಸಮುದಾಯ ಅನುಕರಿಸಿರುವುದನ್ನು ಕಾಣಬಹುದು. ಲಂಬಾಣಿ ಸಮುದಾಯ, ಅನ್ಯ ಸಮಾಜಗಳಿಂದ ಸ್ವೀಕರಣೆ ಮಾಡಿರುವ ಬಹುಪಾಲು ಹೆಸರುಗಳು ದೈವ ಮೂಲದವುಗಳೇ ಆಗಿರುವುದು ಗಮನಾರ್ಹ ಸಂಗತಿ. ಮತ್ತು ಪ್ರಾದೇಶಿಕ ಧೈವಮೂಲದ ಹೆಸರುಗಳೂ ಇವರಲ್ಲಿ ಕಂಡುಬರುತ್ತವೆ. ಮೂರನೆ ತಲೆಮಾರಿನ ವ್ಯಕ್ತಿನಾಮಗಳು ಮೊದಲೆರಡು ತಲೆಮಾರುಗಳ ವ್ಯಕ್ತಿನಾಮಗಳಿಗಿಂತ ಹೆಚ್ಚು ಬದಲಾವಣೆಗೆ ಒಳಗಾಗಿವೆ. ಶೈಕ್ಷಣಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಸುಧಾರಣೆಗೊಂಡಿರುವ ಮೇಲ್ವರ್ಗದವರು ಹಳೆಯ ತಲೆಮಾರುಗಳ ವ್ಯಕ್ತಿನಾಮಗಳನ್ನು ಕೈಬಿಟ್ಟು ಆಧುನಿಕ ಹೆಸರುಗಳನ್ನು ಪಡೆಯುತ್ತಿದ್ದಾರೆ. ಅದೇ ಸಮುದಾಯದ ಕೆಳವರ್ಗದವರು ತಮ್ಮ ಸುತ್ತಲಿನ ಮೇಲ್ಜಾತಿಗಳ ವ್ಯಕ್ತಿನಾಮಗಳನ್ನು ಅನುಕರಿಸಿರುವುದನ್ನು, ಎರಡೂ ಪಟ್ಟಿಗಳಲ್ಲಿನ ಮೂರನೆ ತಲೆಮಾರಿನ ಹೆಸರುಗಳಿಂದ ಸ್ಪಷ್ಟಪಡಿಸಿಕೊಳ್ಳಬಹುದು. ಅಂದರೆ ಲಂಬಾಣಿ ವ್ಯಕ್ತಿನಾಮಗಳ ನಿರ್ದಿಷ್ಟಗಳು ತಲೆಮಾರಿನಿಂದ ತಲೆಮಾರಿಗೆ ವ್ಯತ್ಯಾಸವಾಗುತ್ತಾ ಬಂದಿದ್ದು, ಹೊಸ ತಲೆಮಾರಿನಲ್ಲಿ ತಮ್ಮ ಮೂಲ ಸಂಸ್ಕೃತಿಯನ್ನು ಪ್ರತಿನಿಧಿಸುವಂಥ ಹೆಸರುಗಳು ಬಳಕೆಯಿಂದ ದೂರ ಸರಿದಿರುವುದು ಕಂಡುಬರುತ್ತದೆ.

ನಿರ್ದಿಷ್ಟಗಳಲ್ಲಿ ಬದಲಾವಣೆಗಳು ಆಗಿರುವಂತೆ ವಾರ್ಗಿಕಗಳಲ್ಲಿಯೂ, ಈ ಬದಲಾವಣೆಗಳು ತಲೆದೋರಿವೆ. ಮೊದಲ ತಲೆಮಾರಿನ ಪುರುಷರಲ್ಲಿ 'ನಾಯ್ಕ' ಎಂಬುದು ಒಂದು ಪರಂಪರೆಯಾಗಿ

ಬಳಕೆಯಾಗುತ್ತಿರುವಂತೆ ಕಂಡುಬರುತ್ತದೆ. ಎರಡನೆ ತಲೆಮಾರಿನ ನಿರ್ದಿಷ್ಟಗಳಲ್ಲಿ ವ್ಯತ್ಯಾಸಗಳು ಸಂಭವಿಸಿದ್ದರೂ, ವಾರ್ಗಿಕ ಘಟಕ ಅದೇ ಸ್ಥಿತಿಯಲ್ಲಿ ಇಲ್ಲಿಯೂ ಮುಂದುವರೆದಿದೆ. ಮೂರನೆ ತಲೆಮಾರಿನ ವ್ಯಕ್ತಿನಾಮಗಳಲ್ಲಿ ವ್ಯತ್ಯಾಸಗಳಾಗಿವೆ. 'ನಾಯ್ಕ' ಎಂಬುದು ಅನೇಕ ಹೆಸರುಗಳಲ್ಲಿ ಬಿಟ್ಟು ಹೋಗಿದ್ದು, ಕ್ರಮೇಣ ಇದರ ಬಳಕೆ ಕಡಿಮೆಯಾಗಿದೆ. ಆರ್ಥಿಕವಾಗಿ, ಶೈಕ್ಷಣಿಕವಾಗಿ ಮುಂದುವರೆದ, ಜೀವನಮಟ್ಟ ಸುಧಾರಿಸಿರುವ, ಪರಂಪರಾಗತ ವ್ಯಕ್ತಿನಾಮಗಳ ಬಗ್ಗೆ ಅಸಮಾಧಾನ ಭಾವನೆಯನ್ನು ಹೊಂದಿರುವ, ಆಧುನಿಕತೆಯೊಂದಿಗೆ ನೇರ ಮುಖಾಮುಖಿಯಾಗ ಬಯಸುವ ಕೆಲವರು, ವಿನೂತನವಾದ ಹೆಸರುಗಳನ್ನಷ್ಟೇ ಇಟ್ಟುಕೊಂಡರೆ, ಜಾತಿ ಅಭಿಮಾನವನ್ನಿರಿಸಿಕೊಂಡವರು ಹೊಸ ಹೆಸರುಗಳನ್ನು (ನಿರ್ದಿಷ್ಟಗಳನ್ನು) ಅನುಕರಿಸಿದರೂ, 'ನಾಯ್ಕ' ಎಂಬುದನ್ನು ಹಾಗೆಯೇ ಮುಂದುವರೆಸಿಕೊಂಡು ಬಂದಿರುವುದು ತಿಳಿಯುತ್ತದೆ. 'ನಾಯ್ಕ' ಎಂಬುದು ನಗರ ಪ್ರದೇಶದವರಿಗಿಂತ, ಗ್ರಾಮೀಣ ಪರಿಸರದವರಲ್ಲಿ ವ್ಯಾಪಕವಾಗಿದೆ. ಲಂಬಾಣಿ ಪುರುಷರ ಕೆಲವು ವ್ಯಕ್ತಿನಾಮಗಳಲ್ಲಿ 'ಸಿಂಗ್' ಎಂಬ ಪದ ಬಳಕೆಯಾಗಿರುವುದು ಕಂಡುಬರುತ್ತದೆ. ಉದಾಹರಣೆಗೆ

ಬಾಲಾಜಿಸಿಂಗ್ ನಾಯ್ಕ

ವೀರಾಸಿಂಗ್ ನಾಯ್ಕ

ಲಾಲ್ ಸಿಂಗ್ ನಾಯ್ಕ -ಇತ್ಯಾದಿ

ಲಂಬಾಣಿ ವ್ಯಕ್ತಿನಾಮಗಳಲ್ಲಿ 'ಸಿಂಗ್' ಎಂಬುದು ಯಾಕೆ ಬಳಕೆಯಾಗುತ್ತದೆ ಅದಕ್ಕೂ ಮತ್ತು ಈ ಸಮುದಾಯಕ್ಕೂ ಇರುವ ಸಂಬಂಧಗಳ ಬಗೆಗೆ ಸ್ಪಷ್ಟಕಾರಣಗಳು ತಿಳಿದುಬಂದಿರುವುದಿಲ್ಲವಾದರೂ, ಸೀಖ್ಖ ಧರ್ಮದ ಪ್ರಭಾವದಿಂದ ಇದು ಬಳಕೆಯಾಗಿರಬಹುದೆಂದು ಭಾವಿಸಲಾಗಿದೆ. ಈ ಕುರಿತು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆಯಾದರೂ, ಇದಕ್ಕೆ ಅನ್ಯ ಕಾರಣಗಳು ಇರಲೂ ಸಾಧ್ಯ.

ಸ್ತ್ರೀ ವ್ಯಕ್ತಿನಾಮಗಳಲ್ಲಿ 'ಬಾಯಿ' ಎಂಬ ವಾರ್ಗಿಕ ಮೊದಲ ತಲೆಮಾರಿನಲ್ಲಿ ಕಡ್ಡಾಯವಾಗಿದ್ದು ಎರಡನೆ ತಲೆಮಾರಿನ ಹೆಸರುಗಳಲ್ಲಿ ಇದರ ಬಳಕೆಯಲ್ಲಿ ಸ್ವಲ್ಪ ಸಡಿಲಿಕೆಯಾಗಿದ್ದು, ಕೆಲವು ಹೆಸರುಗಳಲ್ಲಿ ಬಿಟ್ಟು ಹೋಗಿದೆ. ಮೂರನೆ ತಲೆಮಾರಿನಲ್ಲಿ ಹೊಸ ನಿರ್ದಿಷ್ಟಗಳು ಬಳಕೆಯಾದಂತೆಲ್ಲಾ ಅದರ ಬಳಕೆ ಕಡಿಮೆಯಾಗುತ್ತಾ ಹೋಗಿದೆ. ಈ ಹಿಂದೆ ಹೇಳಿದಂತೆ ನಗರದವರಿಗಿಂತ, ಗ್ರಾಮೀಣ ಪರಿಸರದಲ್ಲಿ ಆರ್ಥಿಕವಾಗಿ ಹಿಂದುಳಿದ ಅನಕ್ಷರಸ್ಥ ಕುಟುಂಬಗಳಲ್ಲಿ ಮಾತ್ರ ಇದರ ಬಳಕೆ ಹೆಚ್ಚು ಉಳಿದಿದೆ. ಪುರುಷ ಮತ್ತು ಸ್ತ್ರೀ ವ್ಯಕ್ತಿನಾಮಗಳಿಗೆ ತುಲನೆ ಮಾಡಿದಾಗ ಪುರುಷರಿಗಿಂತ, ಸ್ತ್ರೀಯರಲ್ಲಿ ವಾರ್ಗಿಕಗಳ ಬಳಕೆ ಕಡಿಮೆಯಾಗಿದೆ. ಲಂಬಾಣಿ ವ್ಯಕ್ತಿನಾಮಗಳಲ್ಲಿ ಬಳಕೆಯಾಗುವ ವಾರ್ಗಿಕಗಳು ತಲೆಮಾರುಗಳಲ್ಲಿ ಯಾವ ಬಗೆಯಲ್ಲಿ ಬಳಕೆಯಾಗಿವೆ ಎಂಬುದನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗುವುದು.

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ೨೩೧ ಹೆಸರುಗಳಲ್ಲಿ ಯಾವ ಮೂಲದ ಹೆಸರುಗಳು, ಯಾವ ತಲೆಮಾರಿನವರ ಹೆಸರುಗಳ ಮೇಲೆ ಎಷ್ಟರ ಮಟ್ಟಿಗೆ ಪ್ರಭಾವ ಬೀರಿವೆ ಎಂಬುದನ್ನು ಶೇಕಡವಾರು ಪ್ರಮಾಣದಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

## ಲಂಬಾಣಿ ಸಮುದಾಯದ ವ್ಯಕ್ತಿನಾಮಗಳ ಮಾದರಿ ಸಮೀಕ್ಷೆ ಕೋಷ್ಟಕ ಪಟ್ಟಿ - ೧೨

| ತಲೆ ಮಾರು | ಧಾರ್ಮಿಕ ಪ್ರಭಾವ ಶೇಕಡವಾರು (%) | | | ಸಮಕಾಲೀನ ಪ್ರಸಿದ್ಧ ವ್ಯಕ್ತಿಗಳ ಪ್ರಭಾವ ಶೇಕಡವಾರು (%) | | | ಆಧುನೀಕರಣದ ಪ್ರಭಾವ ಶೇಕಡವಾರು (%) | | | ಚರಿತ್ರ ಪ್ರಭಾವ ಶೇಕಡವಾರು (%) | | | ಇತರೆ ಪ್ರಭಾವ ಶೇಕಡವಾರು (%) | | | ಒಟ್ಟು ಶೇಕಡವಾರು (%) | | |
|---|---|---|---|---|---|---|---|---|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೩ | ೬೦ | ೪೬ | ೫೮ | ೪ | ೧೩ | ೧೬ | ೧೮ | ೩೩ | ೧೨ | ೨.೨ | ೩.೩ | ೨.೬ | ೨.೨ | ೭ | ೪ | ೫೫ | ೩೫ | ೩೬ |
| ೨ | ೬೭ | ೮೬ | ೮೪ | - | - | - | ೭ | ೧೦ | ೮ | - | - | - | ೨೫ | ೩ | ೧೮ | ೬೭ | ೪೦ | ೩೨ |
| ೧ | ೮೩ | ೯೦ | ೮೬ | - | - | - | ೭ | ೬ | ೭ | - | - | - | ೫ | ೩ | ೪ | ೫೮ | ೪೨ | ೩೦ |
| ಒಟ್ಟು | ೭೪ | ೭೮ | ೭೫ | ೧.೪ | ೩ | ೫ | ೧೧ | ೬ | ೯ | ೦.೭ | ೧ | ೦.೯ | ೧೨ | ೪ | ೯ | ೬೨ | ೩೯ | - |

ಕೋಷ್ಟಕ ೧.೨೨

ಇತರ ಸಮುದಾಯಗಳಂತೆ, ಲಂಬಾಣಿ ಸಮುದಾಯದಲ್ಲಿಯೂ ಸಹ ದೈವ ಸಂಬಂಧಿ ಹೆಸರುಗಳೇ ಅಧಿಕವಾಗಿದ್ದು, ತಲೆಮಾರಿನಿಂದ ತಲೆಮಾರಿಗೆ ಕ್ರಮೇಣ ಕಡಿಮೆಯಾಗುತ್ತಾ ಬಂದಿವೆ. ಅಲ್ಲದೆ ಪುರುಷರಿಗಿಂತ ಸ್ತ್ರೀಯರಲ್ಲಿ ಈ ಪ್ರಕ್ರಿಯೆ ಕೊಂಚ ತೀವ್ರವಾಗಿದೆ. ಆಧುನೀಕರಣದ ಪ್ರಭಾವ ಮೂರು ತಲೆಮಾರಿನವರ ಹೆಸರುಗಳಲ್ಲಿ ಕಂಡುಬಂದಿದ್ದು ಬರಬರುತ್ತಾ ಅದರ ಪ್ರಭಾವ ಹೆಚ್ಚಾಗುತ್ತಾ ಬಂದಿದೆ. ಪುರುಷರಿಗಿಂತ ಸ್ತ್ರೀಯರು ಆಧುನೀಕರಣದ ಪ್ರಭಾವಕ್ಕೆ ಹೆಚ್ಚು ಒಳಗಾಗುತ್ತಿರುವುದು ಕಂಡುಬರುತ್ತದೆ. ಚರಿತ್ರೆ ಹಾಗೂ ಸಮಕಾಲೀನ ವ್ಯಕ್ತಿಗಳ ಪ್ರಭಾವ ಮೂರನೆ ತಲೆಮಾರಿನವರ ಹೆಸರುಗಳಲ್ಲಿ ಗೋಚರವಾಗುತ್ತಿದ್ದು, ಮೊದಲೆರಡು ತಲೆಮಾರಿನವರ ವ್ಯಕ್ತಿನಾಮಗಳಲ್ಲಿ ಕಾಣಬರುವುದಿಲ್ಲ. ಹಾಗೂ ಮೇಲಿನ ಪಟ್ಟಿಗಳಿಗೆ ಸೇರದ ಹೆಸರುಗಳು ಎಲ್ಲಾ ತಲೆಮಾರಿನವರಲ್ಲಿಯೂ ಕಾಣಬರುತ್ತಿವೆ.

### ವಾರ್ಗಿಕಗಳು

ಲಂಬಾಣಿ ವ್ಯಕ್ತಿನಾಮಗಳಲ್ಲಿ ಸಂಬಂಧ ಮತ್ತು ವೃತ್ತಿ/ಜಾತಿವಾಚಿ ವಾರ್ಗಿಕಗಳೆರಡೂ ಬಳಕೆಯಾಗಿವೆ. ಪುರುಷ ಮತ್ತು ಸ್ತ್ರೀಯರಲ್ಲಿ ಬಳಕೆಯಾಗಿರುವ ವಾರ್ಗಿಕಗಳನ್ನು ಈ ಕೆಳಗೆ ಪಟ್ಟಿಮಾಡಿದೆ.

ಪುರುಷರಲ್ಲಿ

| ಸಂಬಂಧವಾಚಿ ವಾರ್ಗಿಕ | ವೃತ್ತಿ/ಜಾತಿವಾಚಿ ವಾರ್ಗಿಕ |
|---|---|
| ಅಪ್ಪ | ನಾಯ್ಕ |
| ಅಣ್ಣ | |

ಸ್ತ್ರೀಯರಲ್ಲಿ

| ಸಂಬಂಧವಾಚಿ ವಾರ್ಗಿಕ |
|---|
| ಅಮ್ಮ |
| ಬಾಯಿ |

ಅಲೆಮಾರಿ ಸಮುದಾಯದವರಾದ ಲಂಬಾಣಿಗರು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಕಾಲಘಟ್ಟಗಳಲ್ಲಿ ಬೇರೆ ಬೇರೆ ಸಂಸ್ಕೃತಿಗಳ ಪ್ರಭಾವಕ್ಕೆ ಒಳಗಾಗುತ್ತಾ ಬಂದಿರುವುದನ್ನು ಅನೇಕ ಜನ ವಿದ್ವಾಂಸರು ಗುರುತಿಸಿದ್ದಾರೆ. ಲಂಬಾಣಿ ಸಮುದಾಯದ ವ್ಯಕ್ತಿನಾಮಗಳಲ್ಲಿ 'ಸಿಂಗ್ 'ದಿಂದ ಅಂತ್ಯಗೊಂಡಿರುವ ಇಲ್ಲವೆ 'ಸಿಂಘ್ ' ಬಳಕೆಯಾಗಿರುವ ವ್ಯಕ್ತಿನಾಮಗಳು ಚಲಾವಣೆಯಲ್ಲಿರುವುದು ಕಂಡುಬರುತ್ತಿದ್ದು, 'ಸೀಖ್ಖ'ರ (ಸಿಖ್ಖ್) ಪ್ರಭಾವಕ್ಕೆ ಅಥವಾ ಸೀಖರ ಪ್ರಭಾವ ಇವರ ವ್ಯಕ್ತಿನಾಮಗಳ ಮೇಲೆ ಆಗಿರುವುದನ್ನು ಸೂಚಿಸುತ್ತದೆ. ನಿದರ್ಶನಕ್ಕೆ ಕೆಲವು ಹೆಸರುಗಳನ್ನು ಗಮನಿಸಬಹುದು.

| 'ಅ' ಪಟ್ಟಿ | 'ಬ' ಪಟ್ಟಿ | 'ಕ' ಪಟ್ಟಿ |
|---|---|---|
| ವೀರಾಸಿಂಗ್ | ವೀರಾಸಿಂಗ್ ನಾಯ್ಕ | ವೀರ್ಯಾನಾಯ್ಕ |
| ಲಾಲ್‌ಸಿಂಗ್ | ಲಾಲ್‌ಸಿಂಗ್ ನಾಯ್ಕ | ಲಾಲ್ಯಾನಾಯ್ಕ |
| ಧರ್ಮಸಿಂಗ್ | ಧರ್ಮಸಿಂಗ್ ನಾಯ್ಕ | ಧರ್ಮಾನಾಯ್ಕ |
| "ರಾಮಸಿಂಗ್ | | |
| ಖೇಮ್ ಸಿಂಗ್ | | |
| ಮಾನಸಿಂಗ್ "[೮] | | |

'ಅ' ಪಟ್ಟಿಯ ಹೆಸರುಗಳು ನೇರವಾಗಿ 'ಸಿಖ್ಖ' ಸಂಸ್ಕೃತಿಯಿಂದ ಸ್ವೀಕರಿಸಲ್ಪಟ್ಟ ಹೆಸರುಗಳಾಗಿವೆ. 'ಬ' ಪಟ್ಟಿಯ ಹೆಸರುಳು 'ಸಿಖ್ಖ' ಧರ್ಮದಿಂದ ಎರವಲು ಪಡೆದ ಹೆಸರುಗಳೇ ಆಗಿದ್ದು, ಅವುಗಳ ಮುಂದೆ 'ನಾಯ್ಕ' ಎಂಬುದನ್ನು ಅಂಟಿಸಿಕೊಂಡಿರುವುದು ಕಂಡುಬರುತ್ತದೆ. 'ಕ' ಪಟ್ಟಿಯ ಹೆಸರುಗಳು ಮೂಲತ: ಸಿಖ್ಖ ಸಂಸ್ಕೃತಿಯಿಂದ ಅನುಕರಿಸಲ್ಪಟ್ಟ ಹೆಸರುಗಳಾಗಿದ್ದರೂ ತಮ್ಮ ಭಾಷಾಸಂಸ್ಕೃತಿಗೆ ಅನುಗುಣವಾಗಿ ಬದಲಿಸಿಕೊಂಡು, 'ಸಿಂಗ್ ' ಎಂಬುದನ್ನು ಕೈಬಿಟ್ಟು, 'ನಾಯ್ಕ' ಎಂಬುದನ್ನು ಮಾತ್ರ ಉಳಿಸಿಕೊಂಡಿರುವುದನ್ನು ಗಮನಿಸಬಹುದು. ಕರ್ನಾಟಕದ ವಿಭಿನ್ನ ಪರಿಸರಗಳಲ್ಲಿ ಈ ಬಗೆಯ ಹೆಸರುಗಳು ಬಳಕೆಯಾಗುತ್ತಿರುವುದು ಕಂಡುಬರುವಂತೆ, ಚಿತ್ರದುರ್ಗ ಪರಿಸರದ ಲಂಬಾಣಿ ವ್ಯಕ್ತಿನಾಮಗಳಲ್ಲಿ 'ಮೇಲಿನ' ಮೂರು ಮಾದರಿ ಹೆಸರುಗಳು ಬಳಕೆಯಲ್ಲಿರುವುದು ಕಂಡುಬರುತ್ತದೆ.

ಮೊಗಲರ ಜೊತೆಗೆ ಹೆಚ್ಚಿನ ಸಂಪರ್ಕವನ್ನು ಇಟ್ಟುಕೊಂಡಿದ್ದರ ಪರಿಣಾಮವಾಗಿ ಅವರ ಹೆಸರುಗಳ ಮೇಲೆ ಮುಸ್ಲೀಮರ ಕೆಲವು ಹೆಸರುಗಳ ಪ್ರಭಾವವೂ ಆಗಿರುವುದು ಕಂಡುಬರುತ್ತದೆ. ಉದಾಹರಣೆಗೆ

ಕಸನ್ಯಾನಾಯ್ಕ
ಪೀರ್ಯಾನಾಯ್ಕ
ಹುಸನ್ಯಾನಾಯ್ಕ - ಇತ್ಯಾದಿ

'ಇಸ್ಲಾಂ' ಮೂಲದ ನಿರ್ದಿಷ್ಟಗಳನ್ನು ತಮ್ಮ ಸಂಸ್ಕೃತಿಗೆ ತಕ್ಕಂತೆ ಅಲ್ಪಸ್ವಲ್ಪ ಬದಲಾವಣೆಗಳನ್ನು ಮಾಡಿಕೊಂಡು ಬಳಸಿಕೊಂಡಿರುವುದು ಮೇಲಿನ ಉದಾಹರಣೆಗಳಿಂದ ತಿಳಿದುಬರುತ್ತದೆ. ಲಂಬಾಣಿ ವ್ಯಕ್ತಿನಾಮಗಳಲ್ಲಿ ಬಳಕೆಯಾಗಿರುವ ಸಂಬಂಧವಾಚಿ ವಾರ್ಗಿಕಗಳ ಕುರಿತು ಮುಂದಿನ ಭಾಗದಲ್ಲಿ ಚರ್ಚಿಸಲಾಗುವುದು. ಪ್ರಸ್ತುತ ವೃತ್ತಿ/ಜಾತಿವಾಚಿ ವಾರ್ಗಿಕಗಳ ಬಗೆಗೆ ವಿಶ್ಲೇಷಿಸಲಾಗುವುದು.

### ನಾಯ್ಕ

'ನಾಯ್ಕ' ಎಂಬುದು ಲಂಬಾಣಿ ಸಮುದಾಯದ ಪುರುಷ ನಾಮಗಳಲ್ಲಿ ವಾರ್ಗಿಕವಾಗಿ ಬಳಕೆಯಾಗುತ್ತದೆ. 'ನಾಯ್ಕ' ಎಂಬುದು 'ನಾಯಕ' ಎಂಬುದರ ಹ್ರಸ್ವೀಕರಣವಾಗಿದೆ. ನಾಯ್ಕ/ನಾಯಕ ಎಂಬುದು ಮೂಲತ: ವೃತ್ತಿವಾಚಿ ಪದವಾಗಿದ್ದು, ಇಂದು ಜಾತಿವಾಚಿ ಅರ್ಥದಲ್ಲಿ ಮೌಖಿಕವಾಗಿ ವ್ಯವಹರಿಸಲ್ಪಡುತ್ತಿದೆ. 'ಲಂಬಾಣಿ' ಸಮುದಾಯವನ್ನು ಕುರಿತು ಕೆಲವು ಸಂಶೋಧನ ಅಧ್ಯಯನಗಳು

ಈಗಾಗಲೇ ನಡೆದಿವೆ. ಪ್ರಕಟಗೊಂಡಿರುವ ಅಧ್ಯಯನಗಳಲ್ಲಿ 'ನಾಯ್ಕ' ಎಂಬುದು ಈ ಸಮುದಾಯಕ್ಕೆ ಅಥವಾ ಈ ಸಮುದಾಯದ ವ್ಯಕ್ತಿನಾಮಗಳಲ್ಲಿ ಯಾಕೆ ಬಂತು? ಮತ್ತು ಇದಕ್ಕಿರುವ ಚಾರಿತ್ರಿಕ ಹಿನ್ನೆಲೆಗಳನ್ನು ಕುರಿತು, ಅಷ್ಟಾಗಿ ಯಾವ ಅಧ್ಯಯನಗಳೂ ಗಮನಹರಿಸಿರುವಂತೆ ಕಂಡುಬಂದಿಲ್ಲ.

ಲಂಬಾಣಿ ಸಮುದಾಯದ ಮುಖಂಡನಿಗೆ ನಾಯ್ಕ/ನಾಯಕ ಎಂದು ಕರೆಯಲಾಗುತ್ತಿದೆ. ಈ ಹಿನ್ನೆಲೆಯಲ್ಲಿ 'ನಾಯ್ಕ' ಎಂಬುದು ಇಡೀ ಸಮುದಾಯದ ವ್ಯಕ್ತಿನಾಮಗಳಿಗೆ ಪ್ರೇರಣೆಯಾಗಿರಬಹುದು. ಸಂಸ್ಕೃತಿಯ ಗುರುತಾಗಿ, ಆ ಪರಂಪರೆಯ ಮುಂದುವರಿಕೆಯಾಗಿ, ಲಂಬಾಣಿಗರು ತಮ್ಮ ವ್ಯಕ್ತಿನಾಮಗಳಲ್ಲಿ 'ನಾಯ್ಕ' ಎಂಬುದನ್ನು ಬಳಸಿಕೊಂಡು ಬಂದಿರಬಹುದು ಎಂಬುದು ಕೆಲವರ ಅಭಿಪ್ರಾಯವಾಗಿದೆ.

ಭಿನ್ನ ಪರಿಸರಗಳಲ್ಲಿ ನೆಲೆಸಿರುವ ಎಲ್ಲಾ ಲಂಬಾಣಿ ವ್ಯಕ್ತಿನಾಮಗಳಲ್ಲಿ 'ನಾಯ್ಕ' ಎಂಬುದು ಕಂಡುಬರದೆ, ಕೆಲವು ಪ್ರದೇಶಗಳಲ್ಲಿ ಮಾತ್ರ ಇದರ ಬಳಕೆ ಕಾಣಬರುತ್ತಿರುವುದು ತುಂಬಾ ಕುತೂಹಲಕಾರಿ ಸಂಗತಿಯಾಗಿದೆ. "ಲಂಬಾಣಿಗರ ಇತಿಹಾಸ ಬಹು ಪ್ರಾಚೀನ ಹಾಗೂ ಗೌರವಯುತವಾಗಿದೆ. ಮೂಲತಃ ರಾಜಸ್ಥಾನದವರಾದ ಲಂಬಾಣಿಗರು ರಾಜಸ್ಥಾನದ ವೀರ ಹಾಗೂ ಪರಾಕ್ರಮಿ ರಜಪೂತ ವಂಶದವರಾಗಿದ್ದಾರೆ. ರಾಜಸ್ಥಾನ, ಗುಜರಾತ ಹಾಗೂ ಮಾಲವಾ (ಮಾಳ್ವ) ಪ್ರದೇಶಗಳ ಒಂದು ಭಾಗ ವೀರತನಕ್ಕೆ ಪ್ರಸಿದ್ಧವಾಗಿದ್ದರೆ, ಮತ್ತೊಂದು ಭಾಗ ವ್ಯಾಪಾರಕ್ಕಾಗಿ ಅತ್ಯಂತ ಪ್ರಸಿದ್ಧಿಯನ್ನು ಪಡೆದಿದೆ.

ಮಧ್ಯಕಾಲದಲ್ಲಿ ರಾಜಸ್ಥಾನ, ಪಂಜಾಬ, ಉತ್ತರ ಹಾಗೂ ಮಧ್ಯ ಭಾರತಗಳ ಮೇಲೆ ವಿದೇಶಿಯರ ಆಕ್ರಮಣ ನಡೆದು ರಾಜನೈತಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಒಂದು ಬಗೆಯ ದಿಗ್ಭ್ರಮೆಯನ್ನು ಉಂಟುಮಾಡಿತು. ಈ ಸಂದರ್ಭದಲ್ಲಿ ರಜಪೂತರ ಪರಿಸ್ಥಿತಿ ತುಂಬಾ ಡೋಲಾಯಮಾನವಾಯಿತು. ಆಗ ಲಂಬಾಣಿಗಳು ಅನಿವಾರ್ಯವಾಗಿ ಮೊಗಲರ ಸೇವೆಗಾಗಿ ನಿಲ್ಲಬೇಕಾಯಿತು. ಇವರು ಮೊಗಲರ ಸೈನ್ಯಕ್ಕೆ ಆಹಾರಧಾನ್ಯ ಹಾಗೂ ಯುದ್ಧಸಾಮಗ್ರಿಗಳನ್ನು ತಲುಪಿಸುವ ಗುರುತರವಾದ ಜವಾಬ್ದಾರಿಯನ್ನು ನಿರ್ವಹಿಸಿದರು. ಕ್ರಿ.ಶ. ೧೭೯೧-೯೨ರಲ್ಲಿ ಬ್ರಿಟಿಶರ ಸೈನ್ಯಕ್ಕೆ ಆಹಾರಧಾನ್ಯ ಪೂರೈಕೆಗಾಗಿ ಬಂಜಾರಾ ಜನರನ್ನು ನಿಯಮಿಸಿಕೊಳ್ಳಲಾಗುತ್ತಿತ್ತು. ಅಲ್ಲದೆ ಡ್ಯೂಕ್ ಆಫ್ ವೆಲ್ಲಿಂಗ್ಟನ್ ಕೂಡ ಅವರನ್ನು ಈ ಕೆಲಸಕ್ಕಾಗಿ ನಿಯಮಿತವಾಗಿ ನಿಯಮಿಸಿಕೊಂಡಿದ್ದನು ಎಂದು ಮಿ.ಫರೀದಿ ಉಲ್ಲೇಖಿಸಿದ್ದಾನೆ. (೧೮೮೩:೮೯) ಹೀಗೆ ಲಂಬಾಣಿಗರು ಬೇರೆ ಬೇರೆ ಅರಸರ ಬಳಿಯಲ್ಲಿದ್ದುಕೊಂಡು ಬಹುದೂರದ ಶತ್ರು ಪ್ರದೇಶಗಳಲ್ಲಿ ಹೋರಾಡುತ್ತಿದ್ದ ಸೈನ್ಯಗಳಿಗೆ ನಿರ್ಭಯವಾಗಿ ಹಾಗೂ ನಿರಾತಂಕವಾಗಿ ಆಹಾರವನ್ನು ಸರಬರಾಜು ಮಾಡುತ್ತಿದ್ದರು. ಅಷ್ಟೇ ಅಲ್ಲ ಆಗಾಗ ಉದ್ಭವಿಸಬಹುದಾದ ಘೋರವಾದ ಯುದ್ಧದ ಪ್ರಸಂಗಗಳಲ್ಲಿ ಅನಿವಾರ್ಯವಾಗಿ ಭಾಗವಹಿಸಬೇಕಾಗುತ್ತಿತ್ತು."[೯]

"ಊರುಗಳಿಂದ ದೂರದಲ್ಲಿ 'ತಾಂಡಾ'ಗಳನ್ನು ಕಟ್ಟಿಕೊಂಡು ವಾಸಿಸುವ ಈ ಜನರು ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಒಂದು ಕಾಲದಲ್ಲಿ ರಾಜರು, ಸೈನಿಕರು ಹಾಗೂ ವೀರಯೋಧರು ಆಗಿದ್ದ ಇವರು ಬ್ರಿಟಿಷರ ಕಾಲದಲ್ಲಿ ತಮ್ಮ ಮೂಲ ಉದ್ಯೋಗದಿಂದ ವಂಚಿತರಾಗಿ ಕಾಡನ್ನು ಸೇರಿದರು."[೧೦] ಎಂಬ ಉಲ್ಲೇಖಗಳನ್ನು ನೋಡಿದರೆ, ಲಂಬಾಣಿ ಸಮುದಾಯಕ್ಕೆ ಚಾರಿತ್ರಿಕವಾದ ಮಹತ್ವ ಇರುವುದು ತಿಳಿದುಬರುತ್ತದೆ. ರಾಜರಾಗಿ, ಸೈನಿಕರಾಗಿ, ಸೈನ್ಯಕ್ಕೆ ಸಹಾಯಕರಾಗಿ ಕಾರ್ಯನಿರ್ವಹಿಸಿರುವುದು ಆ ಹಿನ್ನಲೆಯಿಂದ 'ನಾಯಕ'/ನಾಯ್ಕ ಎಂಬುದು ಬಂದಿರುವ ಸಾಧ್ಯತೆ ಇದೆ.

ರಾಜಸ್ಥಾನದಿಂದ ಟಿಸಿಲೊಡೆದ ಲಂಬಾಣಿ ಸಮುದಾಯದ ಒಂದು ಗುಂಪು ವ್ಯಾಪಾರವೃತ್ತಿಯನ್ನು ಕೈಗೊಂಡರೆ, ಮತ್ತೊಂದು ಗುಂಪು ಸೈನಿಕ ವೃತ್ತಿಯಲ್ಲಿ ಸೇರ್ಪಡೆಯಾದುದು ಅಧ್ಯಯನಗಳಿಂದ ತಿಳಿದುಬರುತ್ತದೆ. ಸೈನಿಕ ವೃತ್ತಿಯಲ್ಲಿ ಸೇವೆ ಮಾಡಿದ ಗುಂಪಿನವರು ತಮ್ಮ ವೃತ್ತಿಯನ್ನು ತಮ್ಮ ಹೆಸರಿನ ಮುಂದೆ ಗುರುತಿಸಿಕೊಳ್ಳುವುದು ರೂಢಿಗತವಾಗಿ ಬೆಳೆದು ಮುಂದಿನ ತಲೆಮಾರುಗಳಿಗೆ ಅದು ಪರಂಪರೆಯಾಗಿ ಬೆಳೆದು ಬಂದಿರುವ ಸಾಧ್ಯತೆಯಿದೆ. ಮೊಗಲರ ಪತನಾನಂತರ ಮತ್ತೆ ಈ ಸಮುದಾಯ ಚದುರಿಹೋಯಿತು. 'ನಾಯ್ಕ' ಎಂದು ಇಟ್ಟುಕೊಳ್ಳುವವರು ಪ್ರಾಯಶಃ ಈ ಮೂಲದಿಂದ ಬಂದವರೇ ಎಂದು ಸ್ಥೂಲವಾಗಿ ಭಾವಿಸಬಹುದು.

ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿಯೂ ಲಂಬಾಣಿಗರು ಕಂಡುಬರುತ್ತಾರೆ. ದಕ್ಷಿಣ ಕರ್ನಾಟಕ ಮತ್ತು ಮಧ್ಯಕರ್ನಾಟಕದ ಲಂಬಾಣಿ ವ್ಯಕ್ತಿನಾಮಗಳಲ್ಲಿ ಮಾತ್ರ 'ನಾಯ್ಕ' ಎಂಬುದು ಬಳಕೆಯಾಗುತ್ತಿದ್ದು, ಉತ್ತರ ಕರ್ನಾಟಕದಲ್ಲಿ ಇದರ ಬಳಕೆ ಇರುವುದಿಲ್ಲ. "ಉತ್ತರ ಕರ್ನಾಟಕದ ಲಂಬಾಣಿ ಗಂಡಸರ ಹೆಸರುಗಳು ಸಾಮಾನ್ಯವಾಗಿ 'ಅ' ಕಾರಾಂತವಾಗಿಯೂ, ಹೆಂಗಸರ ಹೆಸರುಗಳು 'ಈ' ಕಾರಾಂತವಾಗಿಯೂ ಕೊನೆಗೊಂಡಿರುವುದನ್ನು ಗಮನಿಸಬಹುದು. ಈ ಹೆಸರುಗಳಿಗೆ ದಕ್ಷಿಣ ಕರ್ನಾಟಕದ 'ನಾಯ್ಕ' ಹಾಗೂ 'ಬಾಯಿ' ಎಂಬ ಉತ್ತರಾರ್ಧಗಳನ್ನು ಸೇರಿಸಿಕೊಳ್ಳಬಹುದು. ಸರಕಾರಿ ಕಡತಗಳಲ್ಲಿ ದಕ್ಷಿಣದವರು ಖಿಬ್ಯಾನಾಯ್ಕ, ಮಂಜ್ಯಾನಾಯ್ಕ, ಧೇನ್ಯಾನಾಯ್ಕ, ಲಿಂಬ್ಯಾನಾಯ್ಕ, ಮುರಾರಿನಾಯ್ಕ, ರಾಮಾನಾಯ್ಕ ಹಾಗೂ ರೂಪ್ಲಿಬಾಯಿ, ಸೋಮ್ಲಿಬಾಯಿ, ಹಾಂಕಿಬಾಯಿ, ಲಾಲೀಬಾಯಿ ಇತ್ಯಾದಿಯಾಗಿ ನೇರವಾಗಿ ಮೂಲ ಹೆಸರುಗಳನ್ನೇ ಬರೆಯಿಸಿದರೆ, ಉತ್ತರದವರು ಸಂಪೂರ್ಣವಾಗಿ ಕನ್ನಡಿಗರ ಪ್ರಭಾವಕ್ಕೆ ಒಳಗಾಗಿ ಲಂಬಾಣಿ ಪೂರ್ವಾರ್ಧಕ್ಕೆ 'ಅಪ್ಪ', 'ಅವ್ವ' ಎಂಬ ಉತ್ತರಾರ್ಧಗಳನ್ನು ಸೇರಿಸಿ ಬರೆಯಿಸುತ್ತಾರೆ. ಉದಾಹರಣೆಗೆ ಖೂಬ್ಯಾ-ಖೂಬಪ್ಪ, ಮಂಜ್ಯಾ-ಮಂಜಪ್ಪ, ಧೇನ್ಯಾ-ಧೇನಪ್ಪ ಹಾಗೂ ರೂಪ್ಲಿ-ರೂಪಲವ್ವ, ಸೋಮ್ಲಿ-ಸೋಮಲವ್ವ, ಲಾಲೀ-ಲಾಲವ್ವ, ಹೀಗೆ ಉತ್ತರದವರಲ್ಲಿ ಮೂಲ ಹೆಸರುಗಳನ್ನು ಕನ್ನಡೀಕರಣಗೊಳಿಸಿ ಹೆಸರುಗಳನ್ನು ಬರೆಯಿಸುವ ಸಂಪ್ರದಾಯ ಬಳಕೆಯಲ್ಲಿದೆ."[೧೧]

ಬೆಳಗಾಂ, ಧಾರವಾಡ, ಕಾರವಾರ ಪರಿಸರದ ಲಂಬಾಣಿ ವ್ಯಕ್ತಿನಾಮಗಳಲ್ಲೂ 'ನಾಯ್ಕ' ಎಂಬುದು ಕಾಣಬರುವುದಿಲ್ಲ. ಬದಲಿಗೆ 'ರಾಠೋಡ್' ಚವ್ಹಾಣ, ಲಮಾಣಿ, ಪವಾರ, ಸಿಂಗ್, ನಾಯಕ, ಭಾನಾವತ ಇತ್ಯಾದಿಗಳು ಲಂಬಾಣಿ ಸಮುದಾಯದಲ್ಲಿನ ಬೆಡಗುಗಳಾಗಿದ್ದು, ಉತ್ತರರಾರ್ಧದಲ್ಲಿ ಈ ಪದಗಳು ಬಳಕೆಯಾಗುವುದನ್ನು ಕಾಣಬಹುದು. ಕೆಲವು ಹೆಸರುಗಳನ್ನು ಉದಾಹರಣೆಗೆ ಗಮನಿಸಬಹುದು.

| | |
|---|---|
| ವಿಜಯಾ ರಾಠೋಡ್ | ಪ್ರೇಮಸಿಂಗ್ ರಾಠೋಡ್ |
| ಜೇಮಲಾ ಚವ್ಹಾಣ | ಲಾಲು ಚವ್ಹಾಣ |
| ಪಾಂಡುರಂಗ ಚವ್ಹಾಣ | ಸುರೇಶ್ ಲಮಾಣಿ |
| ಭೀಮು ನಾಯಕ | ಯಂಕ್ಯಾ ನಾಯಕ |
| ಚಿತಾ ಭಾನಾವತ | ಧರ್ಮಸಿಂಗ್ |
| ಗೋಪಾಲ್ ಸಿಂಗ್ - ಇತ್ಯಾದಿ | |

ದಕ್ಷಿಣ ಕರ್ನಾಟಕದಲ್ಲಿ ನಾಯಕ/ನಾಯ್ಕ ಎಂಬುದು ಒಕ್ಕಲಿಗ ಮತ್ತು ಈಡಿಗ ಸಮುದಾಯದ ವ್ಯಕ್ತಿನಾಮಗಳಲ್ಲಿಯೂ ಬಳಕೆಯಾಗುವುದು ಕಂಡುಬರುತ್ತದೆ. ಚಿತ್ರದುರ್ಗ ಪರಿಸರದಲ್ಲಿ ನಾಯಕ/ನಾಯ್ಕ ಎಂಬುದು 'ವಾಲ್ಮೀಕಿ' (ಬೇಡ ಜನಾಂಗ) ಮತ್ತು ಲಂಬಾಣಿಗರ ವ್ಯಕ್ತಿನಾಮಗಳಲ್ಲಿ ಬಳಕೆಯಾಗುತ್ತದೆ. 'ನಾಯಕ'/'ನಾಯ್ಕ' ಉತ್ತರಾರ್ಧ ಭಾಗಗಳಿಂದ ವ್ಯಕ್ತಿಯ ಜಾತಿಯ ಹಿನ್ನೆಲೆಯನ್ನು ಗುರುತಿಸುವುದು ಕಷ್ಟವಾದರೂ, ನಿರ್ದಿಷ್ಟಗಳಿಂದ ಅವುಗಳ ಪ್ರತ್ಯೇಕತೆಯನ್ನು ಕಂಡುಕೊಳ್ಳಬಹುದು.

'ನಾಯಕ' ಮತ್ತು 'ನಾಯ್ಕ' ಪದಗಳು ರಾಚನಿಕ ಸ್ವರೂಪದ ದೃಷ್ಟಿಯಿಂದ ಸ್ವಲ್ಪ ವ್ಯತ್ಯಾಸದಿಂದ ಕೂಡಿದ್ದರೂ ಅರ್ಥದ ದೃಷ್ಟಿಯಿಂದ ಎರಡೂ ಒಂದೇ. 'ವಾಲ್ಮೀಕಿ ಸಮುದಾಯದವರ ವ್ಯಕ್ತಿನಾಮಗಳಲ್ಲಿ 'ನಾಯಕ' ಎಂಬ ರೂಪ ಮಾತ್ರ ಬಳಕೆಯಾಗುತ್ತಿದ್ದು, ಲಂಬಾಣಿ ವ್ಯಕ್ತಿನಾಮಗಳಲ್ಲಿ 'ನಾಯ್ಕ', 'ನಾಯಕ', 'ನಾಯಕ್ ', 'ನಾಯಿಕ' - ಇತ್ಯಾದಿ ರೂಪಗಳಲ್ಲಿ ಕಂಡುಬರುತ್ತದೆ. ಆದರೂ ಲಂಬಾಣಿ ಮತ್ತು ವಾಲ್ಮೀಕಿ ಸಮುದಾಯ ತಮ್ಮ ನಡುವೆ ಭಿನ್ನತೆ ಅಥವಾ ವೈಶಿಷ್ಟ್ಯವನ್ನು ಗುರುತಿಸಿಕೊಳ್ಳುವ ಉದ್ದೇಶದಿಂದಲೋ ಏನೋ 'ನಾಯಕ' ಎಂದು ಬರೆದರೆ 'ವಾಲ್ಮೀಕಿ' ಜನಾಂಗವೆಂದೂ (ಪರಿಶಿಷ್ಟಪಂಗಡ), 'ನಾಯ್ಕ' ಎಂದು ಬರೆದರೆ 'ಲಂಬಾಣಿ' (ಪರಿಶಿಷ್ಟಜಾತಿ) ಸಮುದಾಯವೆಂಬುದು ಜನಸಾಮಾನ್ಯರ ತಿಳುವಳಿಕೆಯಾಗಿದೆ. ಈ ಪರಿಕಲ್ಪನೆಗಳು ಇದ್ದಾಗ್ಯೂ ಕೂಡ 'ಲಂಬಾಣಿ' ವ್ಯಕ್ತಿನಾಮಗಳಲ್ಲಿ 'ನಾಯ್ಕ' ಮತ್ತು 'ನಾಯಕ' ಎರಡೂ ರೂಪಗಳು ಬಳಕೆಯಲ್ಲಿರುವುದನ್ನು ಗಮನಿಸಬಹುದು. ಉದಾಹರಣೆಗೆ ಬಿ.ಟಿ.ಲಲಿತಾ'ನಾಯಕ', ಕುಮುದಾ'ನಾಯಕ' ಎಂಬ ಉದಾಹರಣೆಗಳಲ್ಲಿ 'ನಾಯಕ' ಎಂಬುದು ಪುರುಷರಲ್ಲಿ ಮಾತ್ರವಲ್ಲ ಸ್ತ್ರೀ ವ್ಯಕ್ತಿನಾಮಗಳಲ್ಲಿಯೂ ಬಳಕೆಯಲ್ಲಿರುವುದು ಗಮನಾರ್ಹ ಸಂಗತಿಯಾಗಿದೆ.

'ನಾಯಕ' ಮತ್ತು 'ನಾಯ್ಕ' ಎಂಬುದು ಚಿತ್ರದುರ್ಗ ಪರಿಸರದಲ್ಲಿ ಭಿನ್ನ ಸಮಾಜಗಳನ್ನು ಸಂಕೇತಿಸುವಂತೆ, ಇವುಗಳಿಗೆ ಅಂಟುವ ನಿರ್ದಿಷ್ಟಗಳೂ ಕೂಡ ಬೇರೆ ಬೇರೆಯಾಗಿರುತ್ತವೆ. ಉದಾಹರಣೆಗೆ ಕೆಲವು ಹೆಸರುಗಳನ್ನು ಗಮನಿಸಬಹುದು.

| ವಾಲ್ಮೀಕಿ ಸಮುದಾಯದಲ್ಲಿ | ಲಂಬಾಣಿ ಸಮುದಾಯದಲ್ಲಿ |
|---|---|
| ಬೋರನಾಯಕ | ಯಂಕಾನಾಯ್ಕ |
| ಪಾಪನಾಯಕ | ಕಾಳ್ಯಾನಾಯ್ಕ |
| ಓಬನಾಯಕ | ಮೋತಿನಾಯ್ಕ |
| ಮಲ್ಲನಾಯಕ | ಢಾಕ್ಯಾನಾಯ್ಕ |
| ಬೋಸನಾಯಕ - ಇತ್ಯಾದಿ | ಮಾನ್ಯಾನಾಯ್ಕ - ಇತ್ಯಾದಿ |

ವಾಲ್ಮೀಕಿ ಸಮುದಾಯದ ವ್ಯಕ್ತಿನಾಮಗಳಲ್ಲಿನ ನಿರ್ದಿಷ್ಟಗಳು -ಬೋರ, ಪಾಪ, ಓಬ, ಮಲ್ಲ, ಬೋಸ ಎಂಬುದಾಗಿದ್ದು, ಲಂಬಾಣಿ ಜನಾಂಗದ ವ್ಯಕ್ತಿನಾಮಗಳಲ್ಲಿನ ನಿರ್ದಿಷ್ಟಗಳು ಯಂಕಾ, ಕಾಳ್ಯಾ, ಮೋತಿ, ಢಾಕ್ಯಾ, ಮಾನ್ಯ ಎಂದಾಗಿರುವುದು ತಿಳಿದುಬರುತ್ತದೆ. 'ವಾಲ್ಮೀಕಿ' ಸಮುದಾಯದ ವ್ಯಕ್ತಿನಾಮಗಳಿಗಿಂತ, ಲಂಬಾಣಿ ಸಮುದಾಯದ ವ್ಯಕ್ತಿನಾಮ ನಿರ್ದಿಷ್ಟಗಳು ತುಂಬಾ ವಿಶಿಷ್ಟವಾಗಿವೆ. ಲಂಬಾಣಿ ಸಮುದಾಯದ

ಕೆಲವು ವ್ಯಕ್ತಿನಾಮಗಳು 'ಯ' ದ್ವಿತ್ವಾಕ್ಷರ (ಒತ್ತಕ್ಷರ)ದಿಂದ ಕೊನೆಗೊಳ್ಳುತ್ತಿದ್ದು ಮೂಲತಃ ಅವು 'ಯ' ವರ್ಣದಿಂದ ಕೊನೆಗೊಳ್ಳುವಂತ ಹೆಸರುಗಳಾಗಿದ್ದು, 'ಯ' ವರ್ಣಲೋಪವಾಗಿ ದ್ವಿತ್ವರೂಪದಲ್ಲಿ ಬಳಕೆಯಾಗಿರಬಹುದು. ಉದಾಹರಣೆಗೆ -

ಕಾಳ್ಯಾನಾಯ್ಕ < ಕಾಳಯ್ಯನಾಯ್ಕ

ಢಾಕ್ಯಾನಾಯ್ಕ < ಡಾಕಯ್ಯನಾಯ್ಕ

ಮಾನ್ಯಾನಾಯ್ಕ < ಮಾನಯ್ಯನಾಯ್ಕ

ಓಬ್ಯಾನಾಯ್ಕ < ಓಬಯ್ಯನಾಯ್ಕ

ಸಾಂಕ್ರ್ಯಾನಾಯ್ಕ < ಸಂಕ್ರಯ್ಯನಾಯ್ಕ

ರೇವ್ಯಾನಾಯ್ಕ < ರೇವಯ್ಯನಾಯ್ಕ

ಪದಾದಿಯ ಎರಡನೆ ವರ್ಣ ದೀರ್ಘವಾಗಿ, ಕೊನೆಯ ವರ್ಣ ನಶಿಸಿಹೋಗಿದ್ದು, ಎರಡನೆಯ ವರ್ಣಕ್ಕೆ ದ್ವಿತ್ವಾಕ್ಷರವಾಗಿ ಉಳಿದಿರುವುದು ಮೇಲಿನ ಹೆಸರುಗಳಲ್ಲಿ ಕಂಡುಬರುತ್ತದೆ. ಮೂಲತಃ ಇಲ್ಲಿನ ನಿರ್ದಿಷ್ಟಗಳು ಕನ್ನಡ ರಚನಗಳೇ ಆಗಿದ್ದು, ನಂತರ ತಮ್ಮ ಭಾಷಾ ಸಂಸ್ಕೃತಿಗೆ, ಉಚ್ಚಾರಣೆ ಸೌಲಭ್ಯಕ್ಕೆ ಅನುಗುಣವಾಗಿ ಈ ರೀತಿ ಮಾಡಿಕೊಂಡಿರಬಹುದು. ಇದು ಕೇವಲ ಒಂದು ಊಹೆ ಮಾತ್ರವಾಗಿದ್ದು, ಈ ಕುರಿತು ಹೆಚ್ಚಿನ ಅಧ್ಯಯನಗಳು ಆಗಬೇಕಿದೆ. ಚಿತ್ರದುರ್ಗ ಪರಿಸರದಲ್ಲಿ ಲಂಬಾಣಿ ವ್ಯಕ್ತಿನಾಮಗಳಲ್ಲಿ 'ನಾಯ್ಕ' ವಾರ್ಗಿಕದ ಬಳಕೆಯ ಪ್ರಕ್ರಿಯೆಯನ್ನು ಗಮನಿಸಿದಾಗ, ಮೊದಲ ತಲೆಮಾರಿನ ವ್ಯಕ್ತಿನಾಮಗಳಲ್ಲಿ 'ನಾಯ್ಕ' ಎಂಬುದು ಕಡ್ಡಾಯವಾಗಿ ಬಳಕೆಯಾಗಿದ್ದು, ಎರಡನೆ ತಲೆಮಾರಿನ ವೇಳೆಗೆ ಇದರ ಬಳಕೆ ಸ್ವಲ್ಪ ಇಳಿಮುಖವಾಗಿದೆ. ಮೂರನೆ ತಲೆಮಾರಿನ ವ್ಯಕ್ತಿನಾಮಗಳಲ್ಲಿ 'ನಾಯ್ಕ' ಎಂಬುದನ್ನು ತುಂಬಾ ಕಡಿಮೆ ಜನರು ಇಟ್ಟುಕೊಂಡಿರುವುದು ಮಾತ್ರ ಕಂಡುಬರುತ್ತದೆ. ತಲೆಮಾರಿನಿಂದ ತಲೆಮಾರಿಗೆ 'ನಾಯ್ಕ' ಪದದ ಬಳಕೆ ಕಡಿಮೆಯಾಗುತ್ತಾ ಬಂದಿದ್ದು, ಇದಕ್ಕೆ ಕೆಲವು ಕಾರಣಗಳನ್ನು ಕೊಡಬಹುದು.

೧. ಲಂಬಾಣಿ ಸಮುದಾಯ ಕನ್ನಡ ಪರಿಸರಕ್ಕೆ ವಲಸೆ ಬಂದಿದ್ದು, ಇಲ್ಲಿನ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿ ಕನ್ನಡ ಭಾಷಾ ಪರಿಸರದ ವ್ಯಕ್ತಿನಾಮಗಳನ್ನು ನಿರ್ದೇಶನ ಮಾಡಿಕೊಂಡಿರುವುದು.

೨. ಶೈಕ್ಷಣಿಕವಾಗಿ, ಆರ್ಥಿಕವಾಗಿ ಮುಂದುವರೆದಂತೆ, ಹಳೆಯ ವ್ಯಕ್ತಿನಾಮಗಳ ಬಗೆಗೆ ವರ್ಜ್ಯ ಭಾವನೆಯನ್ನು ಹೊಂದಿರುವುದು.

೩. ಸಂಸ್ಕೃತಾನುಕರಣ ಮತ್ತು ಆಧುನೀಕರಣ ಪ್ರಕ್ರಿಯೆಗಳ ಪ್ರಭಾವ. ಇತ್ಯಾದಿ ಬೇರೆ ಬೇರೆ ಕಾರಣಗಳೂ ಇರಬಹುದು.

ಶೈಕ್ಷಣಿಕವಾಗಿ ಮುಂದುವರೆದ ವರ್ಗದವರಲ್ಲಿ ಕೆಲವರು ಬಿಟ್ಟುಕೊಟ್ಟಿದ್ದರೆ, ಕೆಲವರು ಪರಂಪರೆಯ ಮುಂದುವರಿಕೆಯಾಗಿ ಹಾಗೆಯೇ ಉಳಿಸಿಕೊಂಡು ಬಂದಿರುವುದೂ ಕಾಣಬರುತ್ತದೆ. ನಗರ ಪರಿಸರದ ವ್ಯಕ್ತಿನಾಮಗಳಲ್ಲಿ 'ನಾಯ್ಕ' ಎಂಬುದು ಹೆಚ್ಚು ಬಿಟ್ಟುಹೋಗಿದ್ದು, ಗ್ರಾಮೀಣ ಅನಕ್ಷರಸ್ಥ ಪರಿಸರಗಳಲ್ಲಿ ಮಾತ್ರ ಈಗಲೂ ದಟ್ಟವಾಗಿ ಬಳಕೆಯಲ್ಲಿರುವುದು ಕಂಡುಬರುತ್ತದೆ.

### ಬಾಯಿ

ಲಂಬಾಣಿ ಸಮುದಾಯದ ಸ್ತ್ರೀ ವ್ಯಕ್ತಿನಾಮಗಳಲ್ಲಿ 'ಬಾಯಿ' ಎಂಬುದು 'ವಾರ್ಗಿಕ'ವಾಗಿ ಬಳಕೆಯಾಗುತ್ತದೆ. ಒಂದು ಕಾಲಕ್ಕೆ ಅರಸರಾಗಿ ಕಾರ್ಯಭಾರ ಮಾಡಿದ್ದು, ಸಾಮಾಜಿಕವಾಗಿ ಮೇಲ್ ಸ್ತರದ ಸಮುದಾಯವೆನಿಸಿಕೊಂಡಿದ್ದರಿಂದ 'ಬಾಯಿ' ಎಂಬುದು ಇವರ ವ್ಯಕ್ತಿನಾಮಗಳಿಗೆ ಅಂಟಿರಬಹುದು. ಹಳೆಯ ತಲೆಮಾರುಗಳಲ್ಲಿ ಇದರ ಬಳಕೆ ದಟ್ಟವಾಗಿದ್ದು ಕಾಲಕ್ರಮೇಣ ಕಡಿಮೆಯಾಗಿರುವುದು ಕಂಡುಬರುತ್ತದೆ. ಪುರುಷರ ವ್ಯಕ್ತಿನಾಮಗಳಲ್ಲಿ 'ನಾಯ್ಕ' ಎಂಬುದು ದಕ್ಷಿಣ ಕರ್ನಾಟಕದ ಭಾಗದಲ್ಲಿ ಮಾತ್ರವಿದ್ದರೆ, 'ಬಾಯಿ' ಎಂಬುದು ಎಲ್ಲಾ ಭಾಗದಲ್ಲೂ ಬಳಕೆಯಲ್ಲಿರುವುದು ತಿಳಿದುಬರುತ್ತದೆ.

ಚಿತ್ರದುರ್ಗ ಪರಿಸರದ ಲಂಬಾಣಿ ವ್ಯಕ್ತಿನಾಮಗಳಲ್ಲಿ ಮೊದಲ ತಲೆಮಾರಿನವರಲ್ಲಿ ತೀವ್ರವಾಗಿ ಕಾಣಿಸಿಕೊಂಡರೆ, ಎರಡನೆ ತಲೆಮಾರಿಗೆ 'ಬಾಯಿ'ಯ ಬಳಕೆ ಗೌಣವಾಗಿದೆ. ಮೂರನೆ ತಲೆಮಾರಿಗೆ 'ಬಾಯಿ' ಬಳಕೆ ತುಂಬಾ ಕಡಿಮೆಯಾಗಿದ್ದು ಕೆಲವೇ ಕೆಲವು ಹೆಸರುಗಳಲ್ಲಿ ಮಾತ್ರ ಉಳಿದುಕೊಂಡಿದೆ. ಲಂಬಾಣಿ ಸಮುದಾಯದ ಸ್ತ್ರೀಯರೂ ಕೂಡ ಆಧುನಿಕತೆಗೆ ತಮ್ಮನ್ನು ತೆರೆದುಕೊಂಡಿದ್ದು, ಸಮಕಾಲೀನ ಸಂದರ್ಭಕ್ಕೆ ಸರಿಹೊಂದುವಂತಹ ಹೆಸರುಗಳನ್ನು ಪಡೆಯುವತ್ತ ಚಲನಶೀಲವಾಗಿರುವುದರಿಂದ, 'ಬಾಯಿ' ಅಥವಾ ಹಳೆಯ ಮಾದರಿಯ ಹೆಸರುಗಳು ಹಿಂದೆ ಸರಿಯುವುದಕ್ಕೆ ಕಾರಣವಾಗಿರಬಹುದು.

ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡಿರುವ ವ್ಯಕ್ತಿನಾಮಗಳಲ್ಲಿ ವಾರ್ಗಿಕಗಳು ಕಾಲಾಂತರಗಳಲ್ಲಿ ಯಾವ ಬಗೆಯ ಚಲನಶೀಲತೆಯಲ್ಲಿ ಸಾಗಿವೆ ಎಂಬುದನ್ನು ಇಲ್ಲಿ ಗಮನಿಸಬಹುದು.

| ಪುರುಷ ವಾರ್ಗಿಕ ಸಂಬಂಧವಾಚಿ ವಾರ್ಗಿಕ | | | ವೃತ್ತಿ/ಜಾತಿವಾಚಿ ವಾರ್ಗಿಕ | | ಸ್ತ್ರೀ ವಾರ್ಗಿಕ | |
|---|---|---|---|---|---|---|
| ತಲೆಮಾರು | ಅಪ್ಪ | ಅಣ್ಣ | ನಾಯ್ಕ | ಸಿಂಗ್ | ಅಮ್ಮ | ಬಾಯಿ |
| ೩ | - | - | ೨೮ | ೨ | ೫ | ೧೦ |
| ೨ | ೭ | ೫ | ೮೩ | ೩ | ೧೦ | ೧೭ |
| ೧ | - | - | ೯೩ | ೫ | - | ೯೪ |
| ಒಟ್ಟು | ೨.೩ | ೧.೫ | ೭೯ | ೩ | ೫ | ೭೦ |
| ಸರಾಸರಿ ಒಟ್ಟು | ೩.೫ | | ೭೨ | | ೭೫ | |

ಕೋಷ್ಟಕ ೧.೨೩

ಲಂಬಾಣಿ ಸಮುದಾಯದ ಪುರುಷ ಹೆಸರುಗಳಲ್ಲಿ ಅಪ್ಪ ಮತ್ತು ಅಣ್ಣ ಹಾಗೂ ಸ್ತ್ರೀಯರಲ್ಲಿ ಅಮ್ಮ ಮತ್ತು ಬಾಯಿ ಸಂಬಂಧವಾಚಿ ವಾರ್ಗಿಕಗಳೂ ಹಾಗೂ ಪುರುಷರಲ್ಲಿ 'ನಾಯ್ಕ', 'ಸಿಂಗ್ ' ಎಂಬ ವೃತ್ತಿ/ ಜಾತಿವಾಚಿ ವಾರ್ಗಿಕಗಳೂ ಬಳಕೆಯಲ್ಲಿವೆ. ಸಂಬಂಧವಾಚಿ ವಾರ್ಗಿಕಗಳು ಮೊದಲಿನವರ ಹೆಸರುಗಳಲ್ಲಿ ಕಾಣಬರುವುದಿಲ್ಲ. ಎರಡನೆ ತಲೆಮಾರಿನವರ ಕೆಲವರ ಹೆಸರುಗಳಲ್ಲಿ ಮಾತ್ರ ಕಂಡುಬರುತ್ತಿದ್ದು, ಇತ್ತೀಚಿನವರಲ್ಲಿ ಅವುಗಳ ಬಳಕೆ ಬಿಟ್ಟುಹೋಗಿರುತ್ತದೆ. 'ಬಾಯಿ' ಎಂಬುದು ಹಿಂದಿನವರ ಹೆಸರುಗಳಲ್ಲಿ

ವ್ಯಾಪಕವಾಗಿ ಕಾಣಬರುತ್ತಿದ್ದು, ಕಾಲಾಂತರದಲ್ಲಿ ಕಡಿಮೆಯಾಗುತ್ತಾ ಬಂದಿದೆ. 'ನಾಯ್ಕ' ಎಂಬುದು ಮೊದಲ ತಲೆಮಾರಿನವರ ಹೆಸರುಗಳಲ್ಲಿ ಅಧಿಕವಾಗಿದ್ದು, ನಂತರದ ಪೀಳಿಗೆಯವರಲ್ಲಿ ಕಡಿಮೆಯಾಗುತ್ತಾ ಬಂದಿರುವುದನ್ನು ಮೇಲಿನ ಕೋಷ್ಟಕವು ಸೂಚಿಸುತ್ತದೆ. 'ಸಿಂಗ್' ಎಂಬುದು ಸಹ ಕ್ರಮೇಣ ಕಡಿಮೆಯಾಗುತ್ತಾ ಬಂದಿರುವುದನ್ನು ಕಾಣಬಹುದಾಗಿದೆ.

ಸ್ಥೂಲವಾಗಿ ಎಲ್ಲಾ ಸಮುದಾಯಗಳ ವ್ಯಕ್ತಿನಾಮಗಳ ಬೆಳವಣಿಗೆಯನ್ನು ಗಮನಿಸಿದರೆ ದೈವಸಂಬಂಧಿ ಹೆಸರುಗಳ ಬಳಕೆ ತಲೆಮಾರಿನಿಂದ ತಲೆಮಾರಿಗೆ ಕಡಿಮೆಯಾಗುತ್ತಾ ಬಂದರೆ, ಇದಕ್ಕೆ ವಿರುದ್ಧವಾಗಿ ಆಧುನೀಕರಣದ ಪ್ರಭಾವ ಹೆಚ್ಚಾಗುತ್ತಾ ಹೋಗುತ್ತಿದೆ. ದೈವಸಂಬಂಧಿ ಹೆಸರುಗಳು ಸ್ತ್ರೀಯರಲ್ಲಿ ಹೆಚ್ಚು ವೇಗವಾಗಿ ಬಿಟ್ಟುಹೋಗುತ್ತಿದ್ದರೆ, ಪುರುಷರಲ್ಲಿ ನಿಧಾನವಾಗಿ ಕಡಿಮೆಯಾಗುತ್ತಿವೆ. ಅದೇ ರೀತಿ ಆಧುನೀಕರಣದ ಪ್ರಭಾವ ಪುರುಷರಿಗಿಂತ, ಸ್ತ್ರೀಯರಲ್ಲಿ ಅಧಿಕವಾಗಿರುವುದು ತಿಳಿದುಬರುತ್ತದೆ. ಅಲ್ಲದೆ ಸಂಬಂಧವಾಚಿ ವಾರ್ಗಿಕಗಳ ಬಳಕೆ ಕ್ರಮೇಣವಾಗಿ ಕಡಿಮೆಯಾಗುತ್ತಾ ಬಂದರೆ, ವೃತ್ತಿವಾಚಿ ಪದಗಳು, ಜಾತಿವಾಚಿ ಅರ್ಥವನ್ನು ಪಡೆದುಕೊಂಡು, ಹೆಚ್ಚು ವ್ಯಾಪಕವಾಗಿ ಎಡೆಪಡೆಯುತ್ತಿವೆ. ಈ ಎಲ್ಲಾ ಬೆಳವಣಿಗೆಗಳಿಗೆ ಸಾಮಾಜಿಕ, ರಾಜಕೀಯ ಮತ್ತು ಆಧುನೀಕರಣದ ಪ್ರಭಾವ ಪ್ರಮುಖ ಕಾರಣಗಳಾಗಿವೆ ಎಂಬುದು ಗಮನಾರ್ಹ ಸಂಗತಿಯಾಗಿದೆ.

## ೩.೬ ಇಸ್ಲಾಂ ಪರಿಸರದ ವ್ಯಕ್ತಿನಾಮಗಳು

ಸಾವಿರಾರು ಜನಸಮುದಾಯಗಳು ಒಂದೇ ಪರಿಸರದಲ್ಲಿ ಬಿಡಿ ಬಿಡಿಯಾಗಿ ಕೂಡಿ ಬದುಕುತ್ತಿರುವ ನಮ್ಮ ಅವಿಭಕ್ತ ಸಮಾಜ ವ್ಯವಸ್ಥೆಯಲ್ಲಿ ಪ್ರತಿಯೊಂದು ಜನಾಂಗವೂ ಕೂಡ ವಿಶಿಷ್ಟವಾದ ಮತ್ತು ಅನನ್ಯ ಎಂದು ಭಾವಿಸಿರುವ ತನ್ನದೇ ಆದಂತಹ ಸಂಸ್ಕೃತಿಯನ್ನು ಒಳಗೊಂಡಿದೆ. ಇಂಥ ಸಂದರ್ಭದಲ್ಲಿ ಒಂದು ಮತ್ತೊಂದರಿಂದ ಪ್ರಭಾವಿತವಾಗಿ ಸಾಂಸ್ಕೃತಿಕ ಮುಖಾಮುಖಿ ಏರ್ಪಡುವುದು ಮನುಷ್ಯ ಬದುಕಿನ ಪ್ರಕ್ರಿಯೆಯಲ್ಲಿ ತೀರಾ ಸ್ವಾಭಾವಿಕವಾದುದು. ಒಂದು ಸಂಸ್ಕೃತಿ ತನಗಿಂತ ಭಿನ್ನವಾದ ಸಂಸ್ಕೃತಿಯಿಂದ ಕೆಲವು ಅಂಶಗಳನ್ನು ತನ್ನ ಜೀವನಾಚರಣೆಯ ನೆಲೆಗೆ ತಂದುಕೊಳ್ಳುವಷ್ಟು ಮುಕ್ತವಾಗಿರಬೇಕು. ಇಂಥ ಕೊಡುಕೊಳ್ಳುವಿಕೆ ಚಾರಿತ್ರಿಕವಾಗಿ ಮಹತ್ವವೆನಿಸುವುದಲ್ಲದೆ, ವೈಶಿಷ್ಟ್ಯವೂ ಎನಿಸುತ್ತದೆ.

ಕರ್ನಾಟಕಕ್ಕೆ ಬೇರೆ ಕಡೆಯಿಂದ ವಲಸೆಬಂದು ನೆಲೆಸಿರುವ ಜನಾಂಗಗಳು ಅನೇಕ. ಅದರಲ್ಲಿ ಮುಸ್ಲಿಂ ಜನಾಂಗವೂ ಒಂದು. ಪ್ರಪಂಚದ ಹಲವಾರು ರಾಷ್ಟ್ರಗಳಲ್ಲಿ ಈ ಜನರು ಇದ್ದಾರೆ. ಭೌಗೋಳಿಕ ಪರಿಸರಕ್ಕನುಗುಣವಾಗಿ ಸಂಸ್ಕೃತಿಯ ಸ್ವರೂಪ ಭಿನ್ನವಾಗಿರಲು ಸಾಧ್ಯ. ಪ್ರಾದೇಶಿಕ ಬದಲಾವಣೆಗಳಿಂದ ಸಾಕಷ್ಟು ವ್ಯತ್ಯಾಸಗಳು ಇರುತ್ತವೆ. ಇದನ್ನು ಕೇವಲ ಅವರ ಆಚಾರ-ವಿಚಾರದಲ್ಲಿ ಮಾತ್ರವಲ್ಲ, ಆ ಜನಾಂಗದ ವ್ಯಕ್ತಿನಾಮಗಳಲ್ಲಿಯೂ ಕಾಣಲು ಸಾಧ್ಯವಿದೆ. ಈ ವೈಶಿಷ್ಟ್ಯತೆಗೆ ಪ್ರಾದೇಶಿಕತೆಯ ಜೊತೆಗೆ ಸುತ್ತ ಮುತ್ತಲಿನ ಸಾಮಾಜಿಕ ಧಾರ್ಮಿಕ ಭಾಷಿಕ ಅಂಶಗಳೂ ಕಾರಣವಾಗಿರುತ್ತವೆ. ಪ್ರಸ್ತುತ ಮುಸ್ಲಿಂ ಸಮುದಾಯದ ವ್ಯಕ್ತಿನಾಮಗಳ ಕೆಲವು ಆಯಾಮಗಳ ಬಗೆಗೆ ಗಮನಿಸಲಾಗುವುದು.

ಅಧ್ಯಯನದ ಅನುಕೂಲಕ್ಕಾಗಿ ಇವರ ಹೆಸರುಗಳನ್ನು ಈ ರೀತಿ ವರ್ಗೀಕರಿಸಿಕೊಳ್ಳಬಹುದು.

೧. ದೈವಮೂಲದ ಹೆಸರುಗಳು

೨. ಪುರಾಣಮೂಲದ ಹೆಸರುಗಳು

೩. ಚಾರಿತ್ರಿಕ ಮೂಲದ ಹೆಸರುಗಳು

೪. ಸೂಫಿಸಂತರ ಮೂಲದ ಹೆಸರುಗಳು

೫. ಇತರೆ ವ್ಯಕ್ತಿನಾಮಗಳು

## ದೈವಮೂಲದ ಹೆಸರುಗಳು

ದೇವರ ನಾಮವನ್ನು ಮಕ್ಕಳಿಗೆ ಇಟ್ಟರೆ, ಯಾವುದೇ ಅಪಾಯ ತೊಂದರೆ ಬಾರದಂತೆ ದೇವರು ರಕ್ಷಣೆ ಮಾಡುತ್ತಾನೆಂಬುದು ಆಸ್ತಿಕ ಸಮಾಜದ ಒಂದು ನಂಬಿಕೆ. 'ನಿನ್ನ ನಾಮದ ಬಲವೊಂದಿದ್ದರೆ ಸಾಕು' ಎಂದು ದಾಸರು ಹೇಳಿದ ಮಾತನ್ನು ಇಲ್ಲಿ ಉಲ್ಲೇಖಿಸಬಹುದು. ಮುಸ್ಲಿಂ ಏಕದೇವೋಪಾಸಕರು 'ಅಲ್ಲಾ'ನ ಹೆಸರನ್ನು ಬಿಟ್ಟರೆ ಇನ್ನೊಂದು ನಾಮವನ್ನು ಹೇಳರು. ಕನ್ನಡದ ಪರಿಸರ ಇದಕ್ಕೆ ತೀರ ಭಿನ್ನವಾಗಿದೆ. ಮನೆಗೊಂದು, ಕುಲಕ್ಕೊಂದು, ಊರಿಗೊಂದು - ದೇವರುಗಳು ಸಾಧ್ಯ. ದೇವರ ನೂರೊಂದು ಹೆಸರುಗಳು, 'ಸಹಸ್ರ ನಾಮಾವಳಿ' ಇತ್ಯಾದಿ ಇತ್ಯಾದಿ ಇದೆ. ಒಬ್ಬೊಬ್ಬರು ಒಂದು ಕಡೆ, ಒಂದೊಂದು ಹೆಸರಿಂದ ಕರೆದು ಆ ಹೆಸರನ್ನು ಮಕ್ಕಳಿಗೆ ಇಡಬಹುದು. ಇಂಥ ಹೆಚ್ಚಿನ ಅವಕಾಶಗಳು ಮುಸ್ಲಿಂರಲ್ಲಿ ಕಂಡು ಬರಲಾರವು. ದೈವ ಮತ್ತು ಧರ್ಮಕ್ಕೆ ಸಂಬಂಧಿಸಿ ಇವರಲ್ಲೂ ಕಂಡುಬರಲಾರವು. ದೈವ ಮತ್ತು ಧರ್ಮಕ್ಕೆ ಸಂಬಂಧಿಸಿ ಇವರಲ್ಲೂ ಅನೇಕ ನಾಮಗಳು ಕಂಡುಬರುತ್ತವೆ. ಅವು 'ಅಲ್ಲಾ'ನ ಗುಣ, ಸ್ವಭಾವ, ಕರ್ತವ್ಯಗಳನ್ನು ಹೇಳುವ ವರ್ಣನಾತ್ಮಕ ಹೆಸರುಗಳು 'ಅಲ್ಲಾ'ನ ಈ ವರ್ಣನಾತ್ಮಕ ಹೆಸರುಗಳು ಮುಸ್ಲಿಂರ ಪುರುಷ ಹೆಸರುಗಳಲ್ಲಿ ಮಾತ್ರ ಕಂಡುಬರುತ್ತವೆಯೋ ಹೊರತು ಸ್ತ್ರೀ ಹೆಸರುಗಳಲ್ಲಿ ಕಾಣಿಸುವುದಿಲ್ಲ. 'ಅಲ್ಲಾ' ಪುರುಷ ದೈವವಾಗಿರುವುದೇ ಇದಕ್ಕೆ ಕಾರಣವಾಗಿರಬಹುದು. ಇದು ಆ ಸಮಾಜದಲ್ಲಿ ಹೆಣ್ಣಿಗಿರುವ ಸ್ಥಾನಮಾನವನ್ನು ಅಪ್ರತ್ಯಕ್ಷವಾಗಿ ಸೂಚಿಸುತ್ತದೆ. ಧಾರ್ಮಿಕ ಹಿನ್ನೆಲೆಗೆ ಸಂಬಂಧಿಸಿದ ಕೆಲವು ನಿದರ್ಶನಗಳನ್ನು ಮಾದರಿಗಾಗಿ ಗಮನಿಸಬಹುದು.

ರೆಹಮಾನ್ ಸಾಬ್ (ಅನುಕಂಪ ತೋರಿಸುವವನು)

ಗಫೂರಸಾಬ್ (ಕ್ಷಮಿಸುವವನು)

ಅಬ್ದುಲ್ ಗನಿಸಾಬ್ (ಸಿರಿವಂತ)

ಅಬ್ದುಲ್ ಮಾಲಿಕ್ (ಪ್ರಪಂಚದ ಒಡೆಯ)

ಮುಜೀದ್ (ಪಾಪಿಗಳನ್ನು ರಕ್ಷಿಸುವವನು)

ಅಕ್ಬರ್ ಭಾಷಾ (ಶ್ರೇಷ್ಠ ಪರಮೋಚ್ಚ)

(ಸಲೀಂ) ಅಲೀಂಸಾಬ್ (ವಿವೇಕಿ ತಿಳಿದವನು)

ಖಾಲಿಕ್ ಭಾಷಾ (ಸೃಷ್ಟಿಸುವವನು, ಸೃಷ್ಟಿಕರ್ತ)

## ಪುರಾಣ ಮೂಲದ ಹೆಸರು

ಜಗದೊಡೆಯ 'ಅಲ್ಲಾ'ನ ಸಂದೇಶಗಳನ್ನು ಮನುಕುಲಕ್ಕೆ ತಿಳಿಸಲು ಬಂದ ವ್ಯಕ್ತಿಗಳನ್ನು 'ಪ್ರವಾದಿ'ಗಳು ಎಂದು ಕರೆಯುತ್ತಾರೆ. ಈ ಪ್ರವಾದಿಗಳೇ ಪುರಾಣ ಪುರುಷರೆನಿಸಿದ್ದಾರೆ. (ಕಮಲೀಬಾಬು, ಶಿಕ್ಷಕರು, ಮಸೀದಿ ಶಾಲೆ, ಚಪ್ಪರದಹಳ್ಳಿ, ಹೊಸಪೇಟೆ) ಧರ್ಮ ತತ್ವಗಳನ್ನು ಸಾರುವುದು ಪುಣ್ಯದ ಕೆಲಸ. ಅಂತಹ ವ್ಯಕ್ತಿಗಳು ದೇವರಿಗೆ ಸಮಾನರು ಎಂಬುದು ಈ ಸಮುದಾಯದ ನಂಬಿಕೆ. ಅವರ ನೆನಪಿಗಾಗಿ ಮತ್ತು ಅವರಂತೆ ನಮ್ಮ ಮಕ್ಕಳು ಆಗಲಿ ಎಂಬ ಆಶಯದಿಂದ ಪ್ರವಾದಿಗಳ ಹೆಸರನ್ನು ತಮ್ಮ ಮಕ್ಕಳಿಗೆ ಇಡುತ್ತಾರೆ. 'ಆದಮ್'ನಿಂದ ಹಿಡಿದು ಮಹಮ್ಮದ್ ಪೈಗಂಬರರ ವರೆಗಿನ ಮತ್ತು ಪೈಗಂಬರರ ಸಮಕಾಲೀನರು ಮತ್ತು ಅವನ ಕುಟುಂಬ ಪರಿವಾರದವರ ಸ್ತ್ರೀ ಪುರುಷರ ಹೆಸರುಗಳು ಮುಸ್ಲಿಂ ಸಮುದಾಯದ ವ್ಯಕ್ತಿನಾಮಗಳ ಮೇಲೆ ಗಾಢವಾದ ಪ್ರಭಾವ-ಪ್ರೇರಣೆಯನ್ನುಂಟು ಮಾಡಿವೆ. ಉದಾಹರಣೆಗೆ ಕೆಲವು ಹೆಸರುಗಳನ್ನು ನೋಡಬಹುದು.

| ಪುರುಷ ಹೆಸರು | ಸ್ತ್ರೀ ಹೆಸರುಗಳು |
|---|---|
| ಯಾಕೊಬಾ ಸಲಾಂ | ಫಾತಿಮಾ |
| ಅಯೂಬ್ ಸಲಾಂ | ಆಯಿಷಾ |
| ಇಲಿಯಾಸ್ ಸಲಾಂ | ಜೈನಬ್ |
| ಮಹಮ್ಮದ್ ಸಲಾಂ | ಖತೀಜಾ |
| ಮಹಮ್ಮದ್ ಇಬ್ರಾಹಿಂ | ಉಮ್ಮಿಕುಲ್ ಸಮ್ |
| ಲಜೀರ್ ಮಹಮ್ಮದ್ | |
| ಯೂನಿಸ್ ಸಲಾಂ | |
| ಖಜಿರ್ ಸಲಾಂ | |

ಮಹಮ್ಮದ್ ಪೈಗಂಬರರ ಹೆಸರನ್ನು ಯಥಾವತ್ತಾಗಿ ಇಟ್ಟುಕೊಂಡಿರುವ ಉದಾಹರಣೆಗಳು ಸಿಕ್ಕಿಲ್ಲ. ಬದಲಾಗಿ ಅವನಿಗೆ ಸಂಬಂಧಿಸಿದ ಇತರ ನಾಮಗಳನ್ನು ಮಾತ್ರ ಅನುಕರಿಸುತ್ತಾರೆ. ಮಹಮ್ಮದರವರ ಹೆಸರುಗಳನ್ನು ಮಕ್ಕಳಿಗೆ ಇಡುವಾಗ 'ಮಹಮ್ಮದ್' ಎನ್ನುವುದು ಕಡ್ಡಾಯವಾಗಿ ಬಳಕೆಯಾಗುತ್ತದೆ. ಕಾರಣ ಹೆಸರಿನ ಜೊತೆ 'ಮಹಮ್ಮದ್' ಎಂದು ಸೇರಿಸದೆ ಬರೀ ಹೆಸರನ್ನಷ್ಟೆ ನಿರ್ದೇಶನ ಮಾಡಿದರೆ, ಪ್ರವಾದಿಗೆ ಅಗೌರವ ತೋರಿದಂತಾಗುತ್ತ ಎಂಬುದು ಜನರ ನಂಬಿಕೆಯಾಗಿದೆ.

| | |
|---|---|
| ಮಹಮ್ಮದ್ ನಜೀರ್ | ಮಹಮ್ಮದ್ ರಫೀದ್ |
| ಮಹಮ್ಮದ್ ಪಿರಾಜ್ | ಮಹಮ್ಮದ್ ಸಾಧಿಖ್ |

ಮೇಲಿನ ಈ ಎಲ್ಲಾ ಹೆಸರುಗಳು ಪೈಗಂಬರನಿಗೆ ಸಂಬಂಧಿಸಿದವುಗಳು. ಮಹಮ್ಮದ್ ಎನ್ನುವುದು ಹೆಸರಿನ ಹಿಂದೆ ಅಲ್ಲದೇ ಮುಂದೆ ಸಹ ಬರುತ್ತದೆ. ಉದಾಹರಣೆಗೆ ಬಷೀರ್ ಮಹಮ್ಮದ್, ಫೀರ್ ಮಹಮ್ಮದ್, ನೂರ ಮಹಮ್ಮದ್.

ಇಸ್ಲಾಂ ಧರ್ಮದ ಮೇಲೆ ಯಹೂದಿ, ಕ್ರಿಶ್ಚಿಯನ್ ಧರ್ಮಗಳ ಪ್ರಭಾವ ಆಗಿದೆ. ಇಸ್ಲಾಂ

ವ್ಯಕ್ತಿನಾಮಗಳಲ್ಲೂ ಈ ಪ್ರಭಾವವನ್ನು ಗುರುತಿಸಬಹುದು. ಇವೆರಡೂ ಧರ್ಮಗಳಿಗೂ ಸಮಾನವಾದ ಹೆಸರುಗಳನ್ನು ಈ ರೀತಿ ತೋರಿಸಬಹುದು.

| ಕ್ರಿಶ್ಚಿಯನ್ | | ಇಸ್ಲಾಂ |
|---|---|---|
| ಅಬ್ರಾಹಂ | > | ಇಬ್ರಾಹಿಂ (ಅ > ಇ) |
| ಐಸಾಕ್ | > | ಇಸಾಕ್ (ಐ > ಇ) |
| ಡೇವಿಡ್ | > | ದಾವೂದ್ (ಡ > ದ) |
| ಅಸ್ಮಾಯಿಲ್ | > | ಇಸ್ಮಾಯಿಲ್ (ಅ > ಇ) |
| ಸುಲೋಮಾನ್ | > | ಸುಲೇಮಾನ್ |

ಇವು ಸಹ ಪುರಾಣದ ಮೂಲದ ಹೆಸರುಗಳೇ. ಮುಸ್ಲಿಂರು ಕ್ರಿಶ್ಚಿಯನ್ ಮೂಲದ ಹೆಸರುಗಳನ್ನು ಸ್ವೀಕರಿಸುವಾಗ ಹೆಸರಿನ ಮೊದಲಕ್ಷರದಲ್ಲಿ ಅಲ್ಪ ಬದಲಾವಣೆಯಾಗಿರುವುದನ್ನು ಗಮನಿಸಬಹುದು. ಅರಬ್ಬೀ ಮೂಲದ ಹೆಸರುಗಳು ಸುನ್ನಿ ಮತ್ತು ಷಿಯಾ ಪಂಗಡದವರ ವ್ಯಕ್ತಿನಾಮಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. (ಹಿಂದೂಗಳಲ್ಲಿ ಸಂಸ್ಕೃತ ಮೂಲದ ಹೆಸರುಗಳನ್ನು ಇಟ್ಟುಕೊಳ್ಳುವಂತೆ) 'ಮುಸ್ಲಿಂ' ವ್ಯಕ್ತಿನಾಮಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಹೆಸರುಗಳ ಮೂಲಕವೇ ಅವರ ಸಾಮಾಜಿಕ ವರ್ಗಗಳನ್ನು ಗುರುತಿಸಬಹುದು.

## ಚರಿತ್ರೆ ಮೂಲದ ವ್ಯಕ್ತಿನಾಮಗಳು

ಇತಿಹಾಸ ಪ್ರಸಿದ್ಧ ವ್ಯಕ್ತಿಗಳ ಹೆಸರುಗಳನ್ನು ಉಳಿಸಿಕೊಂಡು ಬರುವಂತಹದ್ದು ಎಲ್ಲಾ ಧರ್ಮ ಜಾತಿಗಳಲ್ಲಿ ಕಂಡುಬರುತ್ತದೆ. ಮತ್ತು ಪಾರಂಪರಿಕವಾಗಿ ಬೆಳೆದುಬಂದಿರುವ ಪದ್ಧತಿ. ತಮ್ಮ ಜಾತಿ ಧರ್ಮದ ವ್ಯಕ್ತಿಗಳಲ್ಲದೆ, ಮೌಲ್ಯಾಧಾರಿತ ವ್ಯಕ್ತಿತ್ವವನ್ನು ಹೊಂದಿರುವ ಬೇರೆ ಧರ್ಮದ ಬೇರೆ ದೇಶದ ವ್ಯಕ್ತಿಯ ಹೆಸರುಗಳನ್ನು ಅನುಕರಿಸುವುದು ನಮ್ಮಲ್ಲಿ ಕಂಡುಬರುತ್ತದೆ. ಮುಸ್ಲಿಂ ಜನಾಂಗದಲ್ಲಿ ಅನೇಕ ಜನ ಇತಿಹಾಸ ಪ್ರಸಿದ್ಧ ವ್ಯಕ್ತಿಗಳು ಆಗಿ ಹೋಗಿದ್ದಾರೆ. ಅಂತಹ ಮಹಾನ್ ವ್ಯಕ್ತಿಗಳ ಪ್ರಭಾವ ಈ ಸಮುದಾಯದ ಸ್ತ್ರೀ-ಪುರುಷ ಹೆಸರುಗಳ ಮೇಲೆ ಆಗಿದೆ. ಉದಾಹರಣೆಗೆ

| ಪುರುಷ ಹೆಸರುಗಳು | ಸ್ತ್ರೀ ಹೆಸರುಗಳು |
|---|---|
| ಅಬ್ದುಲ್ ರೆಹಮಾನ | ನೂರ್ ಜಹಾನ್ |
| ಅಬೂಬಕರ್ | ಮಮ್ತಾಜ್ |
| ಮಹಮ್ಮದ್ ಹುಸೇನ್ | ಸಲೀಮಾ |
| ಸರ್ ಸಯ್ಯದ್ ಅಹಮ್ಮದ್ ಖಾನ್ | ಚಾಂದ್ ಬೀಬಿ |
| ಜಾಕೀರ್ ಹುಸೇನ್ | ಲೈಲಾ |
| ಅಬ್ದುಲ್ ಗಫಾರ್ ಖಾನ್ | ಹಸೇನ್ ಬಿ |
| ಖಾಲಿದ್ ಅಲಿಮಾಬೀ - ಇತ್ಯಾದಿ | |

ಆಧುನಿಕತೆಯ ಪ್ರಭಾವದಿಂದ ಈ ಹೆಸರುಗಳು ಹಿಂದಕ್ಕೆ ಸರಿಯುತ್ತಿವೆ. ಚರಿತ್ರೆಯಲ್ಲಿ ಹೆಚ್ಚು ಪ್ರಸಿದ್ಧಿ ಪಡೆದಿರುವ 'ಹಸನ್ ' ಮತ್ತು 'ಹುಸೇನ್ 'ರ ಹೆಸರುಗಳನ್ನು ಹಿಂದೂಗಳೂ ಇಟ್ಟುಕೊಂಡಿದ್ದಾರೆ. ಉದಾಹರಣೆಗೆ

| ಪುರುಷ ಹೆಸರುಗಳು | ಸ್ತ್ರೀ ಹೆಸರುಗಳು |
|---|---|
| ಹುಸೇನಮ್ಮ | ಹುಸೇನಮ್ಮ |
| ಹಸನಪ್ಪ | ಹಸನಮ್ಮ > ಅಸನಮ್ಮ |

'ಹಸನ್', 'ಹುಸೇನ್'ರ ಹೆಸರುಗಳು ಮುಸ್ಲಿಂರಲ್ಲಿ ಬಂದಾಗ ಸಾಬ್, ಮಹಮ್ಮದ್, ಎಂಬ ಪದಗಳನ್ನು ಹೊಂದುತ್ತವೆ. ಹಿಂದೂಗಳಲ್ಲಿ 'ಅಪ್ಪ', 'ಅಮ್ಮ' ವಾರ್ಗಿಕಗಳು ಸೇರಿವೆ. ಪಿಂಜಾರರ ಹೆಸರುಗಳಲ್ಲೂ ಹುಸೇನಪ್ಪ-ಹುಸೇನಮ್ಮ ಹೆಸರುಗಳು ಕಂಡುಬರುತ್ತವೆ. ಹಿಂದೂಗಳಲ್ಲಿ ಈ ಹೆಸರುಗಳು ಇದ್ದರೂ ಕೆಳವರ್ಗದವರಲ್ಲಿ ಮಾತ್ರ ಎಂಬುದು ಗಮನಾರ್ಹ. ಈ ಬಗೆಯ ಹೆಸರುಗಳಿಗೆ ಕಾಲ ದೇಶಗಳ ಮಿತಿ ಇರುವುದನ್ನು ಗಮನಿಸಬೇಕು. (ಇತಿಹಾಸ ಪ್ರಸಿದ್ಧಿಯಾದ 'ಲೈಲಾ' ಪ್ರೀತಿಗಾಗಿ ಪ್ರಾಣವನ್ನೇ ತ್ಯಾಗ ಮಾಡಿದವಳು ಈಗಲೂ ಪ್ರೀತಿ ಮಾಡುವ ಹುಡುಗಿ ಅಥವಾ ಜೋಡಿಯನ್ನು ಕಂಡಾಗ ಕೆಲವರು ಲೈಲಾ - ಮಜುನು ಎಂದು ತಮಾಷೆ ಮಾಡುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು)

## ಇತರೆ ಹೆಸರುಗಳು

ಪಿಂಜಾರ ಮತ್ತು ಮುಸ್ಲಿಂರ ಮಧ್ಯ ಸ್ಪಷ್ಟವಾದ ಕೆಲವು ಭಿನ್ನತೆಗಳನ್ನು ಗುರುತಿಸಬಹುದು. ಪಿಂಜಾರರು ಹಿಂದೂ ಧರ್ಮದಿಂದ ಮುಸ್ಲಿಂ ಧರ್ಮಕ್ಕೆ ಮತಾಂತರ ಹೊಂದಿದವರು ಎಂಬುದು ಇತ್ತೀಚಿನ ಕೆಲವು ವಿದ್ವಾಂಸರ ಅಭಿಪ್ರಾಯ. ಈಗಲೂ ಕೂಡ ಹಿಂದೂ ಮುಸ್ಲಿಂ ಧರ್ಮದ ಅನೇಕ ಆಚರಣೆಗಳನ್ನು ಅನುಸರಿಸುತ್ತಿದ್ದು ಒಂದು ವಿಶಿಷ್ಟ ಜನಾಂಗವಾಗಿ ಕಂಡುಬರುತ್ತಿದೆ. ಹಿಂದೂ ಮುಸ್ಲಿಂ ಭಾಂದವ್ಯ ಮತ್ತು ಸಮ್ಮಿಶ್ರ ಸಂಸ್ಕೃತಿಯನ್ನು ಬಿಂಬಿಸುವ ಅನೇಕ ಅಂಶಗಳಲ್ಲಿ ವ್ಯಕ್ತಿನಾಮಗಳೂ ಒಂದು. ಮುಸ್ಲಿಂರ ಹೆಸರುಗಳಿಗಿಂತ ನೇರ ವ್ಯತ್ಯಾಸವಿರುವ ಪಿಂಜಾರರ ಹೆಸರುಗಳು ಕನ್ನಡದ ನುಡಿಗಟ್ಟುಗಳನ್ನು ಹೊಂದಿರುತ್ತವೆ. ಅನೇಕ ಹೆಸರುಗಳಂತೂ ಇಡಿಯಾಗಿ ಕನ್ನಡವೇ ಆಗಿರುತ್ತವೆ. ಉದಾಹರಣೆಗೆ

| ಪುರುಷ ಹೆಸರುಗಳು | ಸ್ತ್ರೀ ಹೆಸರುಗಳು |
|---|---|
| ಬುಡೇನಪ್ಪ | ಬುಡ್ಡಮ್ಮ |
| ಫಕೀರಪ್ಪ | ಅಲ್ಲೆವ್ವ (ಅಲ್ಲಾನ ಹೆಸರಿನ ಪ್ರಭಾವ ಇರಬಹುದೆ?) |
| ಚಮನಪ್ಪ | ನೂರವ್ವ |
| ಪೀರಪ್ಪ | ರೋಸವ್ವ |
| ಬುಡ್ಡಣ್ಣ | ಪಾತವ್ವ |
| ಚಿಕ್ಕಣ್ಣ | ಕಾಸವ್ವ |
| ಹೊಂದ್ರಪ್ಪ | ಬಾಲಮ್ಮ |

ಕನ್ನಡದ ಅಪ್ಪ, ಅಣ್ಣ, ಅಯ್ಯ, ಅಜ್ಜ, ಅವ್ವ, ಅಮ್ಮ ಸಂಬಂಧವಾಚಿ ಪದಗಳನ್ನು ತಮ್ಮ ಹೆಸರುಗಳಲ್ಲಿ ಬಳಸಿಕೊಳ್ಳುತ್ತಾರೆ. 'ಥರ್ಸ್‌ಟನ್' ಕೂಡ ಇಂತಹ ಹೆಸರುಗಳನ್ನು ಗುರುತಿಸಿದ್ದಾನೆ. ತೆಲುಗು ಮಾತನಾಡುವಾಗ ಕನ್ನಡದ ಸ್ಥಾನದಲ್ಲಿ ತೆಲುಗು ರೂಪಗಳನ್ನು ಬಳಸುತ್ತಾರೆ. ಹೀಗೆ ಸ್ಥಳೀಯ ಭಾಷೆ ಸಂಸ್ಕೃತಿಯೊಂದಿಗೆ ಬೆರೆತು ಹೋಗುವ ಇವರು ಅಲ್ಲಿನ ಎಲ್ಲಾ ಲಕ್ಷಣಗಳನ್ನು ಸಹಜವಾಗಿ ಹೊಂದಿದ್ದಾರೆ. ಮುಸ್ಲಿಂರಲ್ಲಿ ಕಾಣದ ಅನೇಕ ಹೆಸರುಗಳು ಪಿಂಜಾರರಲ್ಲಿ ದೊರೆಯುತ್ತವೆ. ಉದಾಹರಣೆಗೆ

| ಪುರುಷ ಹೆಸರುಗಳು | ಸ್ತ್ರೀ ಹೆಸರುಗಳು |
|---|---|
| ರಾಜಾಸಾಬ್ | ಸೀತವ್ವ |
| ಬುಡೇನ್ ಸಾಬ್ | ರೋಸವ್ವ |
| ದಾದಾಪೀರ್ | ಬುಡ್ನವ್ವ |
| ಚಮನ್ ಸಾಬ್ | ಸಕ್ರವ್ವ |

ಇಲ್ಲಿನ ಸ್ತ್ರೀ ಪುರುಷ ಹೆಸರುಗಳನ್ನು ಗಮನಿಸಿದರೆ, ಪುರುಷ ಹೆಸರುಗಳಲ್ಲಿ ಬರುವ ವಾರ್ಗಿಕಗಳು ಉರ್ದು ಭಾಷಾ ಸಮುದಾಯದವರ ವ್ಯಕ್ತಿನಾಮ ವಾರ್ಗಿಕಗಳಾಗಿದ್ದು, ಮುಸ್ಲಿಂ ಹೆಸರುಗಳಲ್ಲಿ ಬರುತ್ತವೆ. ಆದರೆ ಸ್ತ್ರೀ ಹೆಸರುಗಳಲ್ಲಿಯ ವಾರ್ಗಿಕಗಳು ಕನ್ನಡ ಭಾಷಾ ಸಮುದಾಯದವರ ವ್ಯಕ್ತಿನಾಮಗಳ ವಾರ್ಗಿಕಗಳಾಗಿವೆ. ಅದೇಕಾಲಕ್ಕೆ ಇವು ತೆಲುಗಿಗೂ ಅನ್ವಯಿಸುತ್ತವೆ. ಇವು ತುಂಬಾ ಗಮನೀಯ ವಿಷಯಗಳಾಗಿ ಕಾಣಿಸಿಕೊಳ್ಳುತ್ತವೆ. ಪುರುಷ ಹೆಸರಿನ ಕೊನೆಯಲ್ಲಿ ಬಳಕೆಯಾಗುವ ಸಾಹೇಬ > ಸಾಬ್ ವಾರ್ಗಿಕ ಪದ, ಸಂಬೋಧನೆಯಲ್ಲಿ ಪ್ರಯೋಗಗೊಳ್ಳುವುದು ತೀರಾ ವಿರಳ. ಪ್ರತಿಯಾಗಿ ಬುಡ್ನ, ದಾದಾ, ಚಮನ ಇತ್ಯಾದಿಯಾಗಿ ವಯಸ್ಸಿಗೆ ಅನುಗುಣವಾಗಿ ಬಳಸುತ್ತಾರೆ. ಇವರ ವ್ಯಕ್ತಿನಾಮಗಳಲ್ಲಿನ ಕನ್ನಡದ ದಟ್ಟ ಪ್ರಭಾವ ಅಧ್ಯಯನಕಾರರನ್ನು ಹೊಸ ಆಲೋಚನೆಗೆ ಹಚ್ಚುತ್ತದೆ.

'ಉತ್ತರ ಭಾರತದ ಕಡೆಯಿಂದ ನೇರವಾಗಿ ಕರ್ನಾಟಕಕ್ಕೆ ಬಂದು ಆಡಳಿತ ಚುಕ್ಕಾಣಿ ಹಿಡಿದ ಮುಸಲ್ಮಾನರು ಆಡಳಿತ ವ್ಯಾಪ್ತಿಯಲ್ಲಿ ಅನೇಕ ಬದಲಾವಣೆ, ಸುಧಾರಣೆಗಳನ್ನು ಮಾಡತೊಡಗಿದರು.' ಆ ಸಂದರ್ಭದಲ್ಲಿ ಅನೇಕ ಸ್ಥಳನಾಮಗಳು ಮರುನಾಮಕರಣ ಮಾಡಲ್ಪಟ್ಟವು. ಸ್ಥಳನಾಮಗಳಲ್ಲಾದ ಬದಲಾವಣೆ, ವ್ಯಕ್ತಿನಾಮಗಳಲ್ಲಿ ಬೇರೊಂದು ನೆಲೆಯಲ್ಲಿ ಆಯಿತು. ಈ ಬದಲಾವಣೆ ಕೇವಲ ಹಿಂದೂಗಳಲ್ಲಿ ಮಾತ್ರ ಆಗಲಿಲ್ಲ. ಹಿಂದೂಗಳ ಪ್ರಭಾವ ಮುಸ್ಲಿಂರ ಮೇಲೂ ಆಯಿತು. ಉದಾಹರಣೆಗೆ

ಪುರುಷ ಹೆಸರುಗಳು

ಹುಸೇನ + ಅಪ್ಪ = ಹುಸೇನಪ್ಪ

ಸುಲ್ತಾನ + ಅಪ್ಪ = ಸುಲ್ತಾನಪ್ಪ

ಖಾಜ + ಅಣ್ಣ = ಖಾಜಣ್ಣ

ಫಕೀರ + ಅಪ್ಪ = ಫಕೀರಪ್ಪ

ಸ್ತ್ರೀ ಹೆಸರುಗಳು

ಹುಸೇನ + ಅಮ್ಮ = ಹುಸೇನಮ್ಮ

ಸಾಬ (ಸಾಹೇಬ) + ಅಮ್ಮ = ಸಾಬಮ್ಮ

ಅಲಿ + ಅಮ್ಮ = ಅಲಿಯಮ್ಮ

ದಾದ + ಅಮ್ಮ = ದಾದಮ್ಮ

ಹೊನ್ನೂರ + ಅಮ್ಮ = ಹೊನ್ನೂರಮ್ಮ

ಇಲ್ಲಿಯ ಉದಾಹರಣೆಗಳನ್ನು ಗಮನಿಸಿದರೆ ಪೂರ್ವಪದ ಅಂದರೆ ಹೆಸರಿನ ನಿರ್ದಿಷ್ಟ ಭಾಗ ಉರ್ದು ಪದವಾಗಿದ್ದರೆ ಉತ್ತರ ಪದ ಕನ್ನಡ ಪದವಾಗಿದೆ. ಈ ರೀತಿಯ ಹೆಸರುಗಳು ದಲಿತ ಹಿಂದೂಗಳು, ಕೆಳ ಅಥವಾ ಬಡ ಮುಸ್ಲಿಂರು ಮತ್ತು ಪಿಂಜಾರ ಈ ಮೂರು ವರ್ಗದವರಲ್ಲಿ ನೋಡಬಹುದು. ಇವೇ ಹೆಸರುಗಳು ಮಧ್ಯಮ ವರ್ಗದ ಮುಸ್ಲಿಂರಲ್ಲಿ ಹುಸೇನ್ ಸಾಬ್, ಖಾಜಾಸಾಬ್, ಫಕೀರ್ ಸಾಬ್, ಹುಸೇನ್ ಬೀ, ಹೊನ್ನೂರ್ ಬೀ ಎಂದಾಗುತ್ತವೆ. ಕನ್ನಡ ವಾರ್ಗಿಕಗಳೊಂದಿಗೆ ರಚನೆಯಾಗುವ ಈ ಹೆಸರಿನ ವ್ಯಕ್ತಿ ಯಾವ ಜಾತಿ, ಧರ್ಮಕ್ಕೆ ಸೇರಿದವನು ಎಂಬುದನ್ನು ನಿರ್ಧರಿಸುವುದು ಬಹಳ ಸಲ ತೊಡಕಾಗಬಹುದು. ಬಳಕೆಯ ಸಂದರ್ಭದಲ್ಲಿ ವಾರ್ಗಿಕವನ್ನು ಬಿಟ್ಟು ಕೇವಲ ನಿರ್ದಿಷ್ಟವನ್ನಷ್ಟೇ ಬಳಸಿದರೆ ಅದು ಉರ್ದು ಮೂಲದ ಹೆಸರೆಂದು ಹೇಳಬಹುದಾದರೂ, ವಾರ್ಗಿಕ ಸೇರಿಸಿ ಪೂರ್ಣ ಹೆಸರು ಬಳಸಿದಾಗ ಅವು ವಿಶಿಷ್ಟ ಹೆಸರುಗಳಾಗಿ ಗೋಚರಿಸುತ್ತವೆ.

ಮುಸ್ಲಿಂ ಆಡಳಿತದ ಕುರುಹುಗಳು ಅನೇಕ ಕ್ಷೇತ್ರಗಳಲ್ಲಿ ಈಗಲೂ ಉಳಿದಿವೆ. ಹತ್ತಿಪ್ಪತ್ತು ವರ್ಷಗಳ ಹಿಂದೆ ಕನ್ನಡದಲ್ಲಿ ಸಾಲಪತ್ರ, ಜಮೀನುಗಳಿಗೆ ಸಂಬಂಧಿಸಿ ಪತ್ರ ಬರೆಯುವಾಗ ಅರೇಬಿಕ್ ಮೂಲದ ಹೆಸರಿನ ರಚನೆಯ ಮಾದರಿಯನ್ನು ಬಳಸಿರುವುದು ಕಂಡುಬಂದಿದೆ. ಉದಾಹರಣೆಗೆ ನಾಗೇಂದ್ರ ಬಿನ್ ದಾಸರಪಾಲಯ್ಯ. ಪ್ರಕಾಶ ಬಿನ್ ಓಬಯ್ಯ. ಮಂಜುನಾಥ ಬಿನ್ ಓಬಯ್ಯ ಇತ್ಯಾದಿ. ತಂದೆ ಎಂಬುದಕ್ಕೆ ಸಂವಾದಿಯಾಗಿ 'ಬಿನ್' ಎಂಬ ಪದ ಬಳಸಿರುವುದನ್ನು ಕಾಣಬಹುದು. ಈ ಹೆಸರುಗಳನ್ನು ಗಮನಿಸಿದಾಗ ಪ್ರಾರಂಭದಲ್ಲಿ ಇಲ್ಲಿಗೆ ಬಂದ ಮುಸ್ಲಿಂರ ಹೆಸರುಗಳೂ ಹೀಗೆಯೇ ಉದ್ದವಾಗಿ ಅರಬ್ ಮಾದರಿಯಲ್ಲಿಯೇ ಇದ್ದಿರಬೇಕು. ಉದಾಹರಣೆಗೆ ಒಸಾಮ್ ಬಿನ್ ಲಾಡೆನ್‌ನ ಹೆಸರನ್ನು ಇಲ್ಲಿ ಗಮನಿಸಬಹುದು. ಕಾಲಾಂತರದಲ್ಲಿ ಕನ್ನಡದ ವ್ಯಕ್ತಿನಾಮಗಳ ರಚನೆಗೆ ಹೊಂದಿಕೊಂಡಿರಬೇಕು ಎನಿಸುತ್ತದೆ. ಮಂಗಳೂರು ಕಡೆಯ ಮುಸಲ್ಮಾನರಲ್ಲಿ ಈಗಲೂ ಪರ್ಶಿಯಾ ಮೂಲದ ಮಾದರಿಯ ಹೆಸರುಗಳನ್ನೇ ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ.

ಗ್ರಾಮೀಣ ಪರಿಸರದ ಮುಸ್ಲಿಂರ ಹೆಸರುಗಳು ನಗರದ ಮತ್ತು ಮುಂದುವರೆದ ಮುಸ್ಲಿಂರ ಹೆಸರುಗಳಿಗಿಂತ ಭಿನ್ನವಾಗಿವೆ. ಗ್ರಾಮೀಣ ಪರಿಸರದವರ ಹೆಸರುಗಳು ಹೆಚ್ಚಾಗಿ ಸಂಕ್ಷಿಪ್ತ ರಚನೆಗಳಾಗಿರುತ್ತವೆ. ಹೆಸರು ಉದ್ದರಚನೆಗಳನ್ನು ಹೊಂದಿದ್ದರೂ, ಅವು ಸಾಮಾನ್ಯವಾಗಿ ದಾಖಲೆಗಳಲ್ಲಿ ಮಾತ್ರ ಕಾಣಬರುತ್ತವೆ ಎಂಬುದು ಗಮನೀಯ ಸಂಗತಿ.

| ಪುರುಷ ಹೆಸರುಗಳು | ಸ್ತ್ರೀ ಹೆಸರುಗಳು |
|---|---|
| ದೌಲ್ಯ | ಬುಡೇಬಿ |
| ಕಾಲಿಯಾ | ಮಾಬುನ್ನಿ |
| ಗೂಡುಸಾ | ಗೌಸಿ |
| ಪ್ಯಾರಾ | ಮಕ್ಕ |
| ಮಾಬು (ಮೆಹಬೂಬ್ ) - ಇತ್ಯಾದಿ | |

ಇವರ ಹೆಸರುಗಳಲ್ಲಿ ವಾರ್ಗಿಕಗಳ ಬಳಕ ಕಡಿಮೆ. ವಾರ್ಗಿಕಗಳು ಬಳಕೆ ಆದರೂ ಸಂಕ್ಷಿಪ್ತವಾಗಿ ಇಲ್ಲವೆ ಸವಕಳಿ ರೂಪದಲ್ಲಿ ಬರುವುದನ್ನು ಗಮನಿಸಬಹುದು. ಇತ್ತೀಚಿಗೆ ಇವರೂ ಶಿಕ್ಷಣವಂತರಾಗಿ ಆಧುನಿಕತೆಗೆ ಹೊಂದಿಕೊಳ್ಳುತ್ತಿರುವುದರಿಂದ ಹೊಸ ಹೊಸ ಹೆಸರುಗಳನ್ನು ಇಟ್ಟುಕೊಳ್ಳುವುದು ಕಂಡುಬರುತ್ತದೆ.

## ಕುಲನಾಮ - ಅಡ್ಡಹೆಸರು

ವ್ಯಕ್ತಿನಾಮಕ್ಕೆ ಹಿಂದಿನಿಂದಲೂ ಅಂಟಿಕೊಂಡು ಬರುವುದೆಂದರೆ ಕುಲನಾಮ. ಎಲ್ಲರ ವ್ಯಕ್ತಿನಾಮಗಳಿಗೆ ಇದು ಇರುತ್ತದೆ ಎಂದು ಹೇಳಲಾಗದು. ಇರಬಹುದು, ಇಲ್ಲದಿರಬಹುದು. ವ್ಯಕ್ತಿನಾಮಕ್ಕಿಂತ ಕುಲನಾಮಗಳು ವ್ಯಕ್ತಿಯ ಬಗೆಗೆ ಹೆಚ್ಚಿನ ಮಾಹಿತಿಯನ್ನು ಒದಗಿಸಬಲ್ಲವು. ಸೂಕ್ಷ್ಮವಾಗಿ ಗಮನಿಸಿದಾಗ ಕುಲನಾಮದ ಮೂಲಕ ವ್ಯಕ್ತಿಯ ಸಾಮಾಜಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ, ಆರ್ಥಿಕ ಸ್ಥಿತಿಗತಿಗಳನ್ನು ತಿಳಿಯಲು ಸಾಧ್ಯ. ಮೇಲೆ ಹೇಳಿದ ಹಾಗೆ ಕೆಲವು ಹೆಸರುಗಳಲ್ಲಿ, ಕೆಲವು ಜನಾಂಗಗಳಲ್ಲೇ ಕುಲನಾಮಗಳು ಇಲ್ಲದಿರಬಹುದು. ಇಲ್ಲಿ ಮುಸ್ಲಿಂ ಜನಾಂಗದ ವ್ಯಕ್ತಿನಾಮಗಳಲ್ಲಿ ಕಂಡುಬರುವ ಕುಲನಾಮಗಳನ್ನು ಮಾತ್ರ ಗಮನಿಸಲಾಗುವುದು. ಕನ್ನಡ ಪರಿಸರದಲ್ಲಿ ವಾಸಿಸುವ ಸಾಮಾನ್ಯ ಮುಸ್ಲಿಂರಲ್ಲಿ ಕಂಡುಬರುವ ಕುಲನಾಮಗಳನ್ನು ಈ ರೀತಿಯಾಗಿ ಚರ್ಚಿಸಬಹುದು.

| ಎ | ಬಿ |
|---|---|
| ಪಾನ್ ವಾಲೆ | ಚಟ್ನಿವಾಲೆ |
| ಸಫಾರಿವಾಲೆ | ಬೆಳ್ಳಿಕಟ್ ವಾಲೆ |
| ಚುನ್ನವಾಲೆ | ಬೇವಿನಕಟ್ಟಿವಾಲೆ |
| ಜಾಗೀರ್ ದಾರ್ | ತಗಡವಾಲೆ |
| ಹವಾಲ್ದಾರ್ | ಬಡೇಪಾಪ |
| ಇನಾಮ್ ದಾರ್ | ಬಟ್ಟಿವಾಲೆ |
| ನಾಳ್ ಬಂದ್ | |

ಕುಲನಾಮಗಳನ್ನು ಇಲ್ಲಿ ಎರಡು ಪಟ್ಟಿಯಲ್ಲಿ ಕೊಡಲಾಗಿದೆ. ಈ ಉದಾಹರಣೆಗಳನ್ನು ಗಮನಿಸಿದರೆ, ಇವು ಜನಸಾಮಾನ್ಯರಿಗೆ ಸಂಬಂಧಪಟ್ಟವುಗಳೆಂದು ತಿಳಿದುಬರುತ್ತದೆ. 'ಎ' ಪಟ್ಟಿಯಲ್ಲಿನ ಉದಾಹರಣೆಗಳು ವೃತ್ತಿಸೂಚಕಗಳಾಗಿದ್ದು, ಉರ್ದುಪದಗಳಾಗಿವೆ. 'ಬಿ' ಪಟ್ಟಿಯಲ್ಲಿನ ಉದಾಹರಣೆಗಳು ವೃತ್ತಿ ಮತ್ತು ವಾಸಸ್ಥಳವನ್ನು ಹೇಳಿದರೂ ರಚನೆಯಲ್ಲಿ ವಿಶಿಷ್ಟವಾಗಿವೆ. 'ಬಿ' ಪಟ್ಟಿಯಲ್ಲಿ ಒಂದು ಉದಾಹರಣೆಯನ್ನು ಹೊರತುಪಡಿಸಿ ಉಳಿದವುಗಳು ದ್ವಿಭಾಷಾ ಪದ ರಚನೆಗಳಾಗಿವೆ. ಪೂರ್ವಸ್ಥಾನದಲ್ಲಿ ಕನ್ನಡ ಪದವಿದ್ದು, ಉತ್ತರ ಸ್ಥಾನದಲ್ಲಿ ಉರ್ದುಪದವಿದೆ. ಕರ್ನಾಟಕದ ಎಲ್ಲಾ ಮುಸ್ಲಿಂರಲ್ಲಿ ಇದೇ ಮಾದರಿಯ ಕುಲನಾಮಗಳು ಕಂಡುಬರುವುದಿಲ್ಲ. ಇವು ಉತ್ತರ ಕರ್ನಾಟಕದ ಮತ್ತು ಬಳ್ಳಾರಿ, ಚಿತ್ರದುರ್ಗ ಪರಿಸರದ ಕೆಲವು ಪ್ರದೇಶಗಳಲ್ಲಿ ವಿಶೇಷವಾಗಿ ಕಾಣಬರುತ್ತಿವೆ. ಇವು ಬೇರೊಂದು ಪರಿಸರದಲ್ಲಿ ವಿಭಿನ್ನವಾಗಿರಬಹುದು. ಮೇಲಿನ ಉದಾಹರಣೆಗಳ ಮೂಲಕ ಅವರ ಆರ್ಥಿಕ ಸ್ಥಿತಿಗತಿಯನ್ನು ಊಹಿಸಬಹುದು. ಅಲ್ಲದೆ ಕನ್ನಡದ ಪ್ರಭಾವ ಕೇವಲ ವ್ಯಕ್ತಿನಾಮಗಳ ಮೇಲೆ ಆಗಿರದೆ ಕುಲನಾಮಗಳ ಮೇಲೂ ಆಗಿರುವುದು ಇದರಿಂದ ವೇದ್ಯವಾಗುತ್ತದೆ.

## ಅಡ್ಡಹೆಸರು

ಮುಸ್ಲಿಂ ಸಮುದಾಯದವರಲ್ಲಿ ಅಡ್ಡಹೆಸರಿನ ಬಳಕೆಯಿದೆ. ಇಲ್ಲಿ ಅಡ್ಡಹೆಸರು ವ್ಯಕ್ತಿಯ ವೈಯಕ್ತಿಕತೆಗೆ ಸಂಬಂಧಿಸಿದ್ದು, ಅವನನ್ನೇ ಕುರಿತು ಹೇಳುತ್ತಿರುತ್ತವೆ. ದಕ್ಷಿಣ ಕರ್ನಾಟಕದ ಭಾಷಾ ಸಂದರ್ಭದಲ್ಲಿ ಪ್ರಯೋಗಗೊಳ್ಳುವ ಹಾಗೆ, ಮುಸ್ಲಿಂರಲ್ಲಿ ಅಡ್ಡಹೆಸರು ವ್ಯಕ್ತಿಗತವಾಗಿರುವುದು ತಿಳಿದುಬರುತ್ತದೆ. ಮಾದರಿಗೆ ಕೆಲವು ನಿದರ್ಶನಗಳನ್ನು ನೋಡಬಹುದು.

| ಎ | ಬಿ |
|---|---|
| ಗೂಡ್ ಸಾಬ್ | ತುಪ್ಪದ ಕುಡ್ಕಿಭಾಷಾಸಾಬ್ |
| ಚಿಕಿನಿ ನಜೀರ್ | ಬಂಡಿವಾಲಸಾಬ್ |
| ಕಾಲೂಸಾಬ್ (ಕರಿಯ) | |
| (ಕಾಳ-ಕರಿಯ) | |
| ಚೋಟಾಸಾಬ್ | |
| ಗೋರೆಬೀ (ಸ್ತ್ರೀ ಅಡ್ಡಹೆಸರು) | |
| (ಗೌರಿ > ಗೌರ > ಗೋರಿ - ಬೆಳ್ಳಗಿನ) | |

ಮೇಲಿನ ಉದಾಹರಣೆಗಳು ಬೆಲ್ಲದ, ಕರಿಯ, ಕುಳ್ಳ, 'ಗಿಡ್ಡ' ಎಂಬ ಅರ್ಥಗಳನ್ನು ನೀಡುತ್ತವೆ. 'ಬಿ' ಪಟ್ಟಿಯಲ್ಲಿನ ಅಡ್ಡಹೆಸರುಗಳು ಕನ್ನಡ ಉರ್ದು ಭಾಷೆಗಳ ಪದ ರಚನೆಗಳಾಗಿವೆ. ಈ ಅಡ್ಡಹೆಸರುಗಳು ಮನೆಯವರಿಗಿಂತ ಸಂಬಂಧಿಕರಲ್ಲಿ ಮತ್ತು ಹೊರಗಿನವರಿಂದ ಅದೂ ವ್ಯಕ್ತಿಯ ಗೈರು ಹಾಜರಿಯಲ್ಲಿ ಹೆಚ್ಚು ಬಳಕೆಯಾಗುತ್ತವೆ. ಉರ್ದು ಅಡ್ಡಹೆಸರಿನ ರೂಪಗಳು ಉರ್ದುವಿನಲ್ಲೂ, ಕನ್ನಡದ ಅಡ್ಡಹೆಸರಿನ ರೂಪಗಳು ಕನ್ನಡದಲ್ಲೂ ಬಳಕೆಯಾಗುವುದು ಕಂಡುಬರುತ್ತಿದೆ. ಈ ಮೂಲಕ ಮುಸಲ್ಮಾನರ ಎಲ್ಲಾ ಬಗೆಯ ನಾಮಗಳಲ್ಲೂ ಕನ್ನಡದ ಪ್ರಭಾವ ಆಗಿರುವುದನ್ನು ಕಾಣಬಹುದು.

### ವಾರ್ಗಿಕಗಳು

ಕನ್ನಡದ ವ್ಯಕ್ತಿನಾಮಗಳಲ್ಲಿ ಇದ್ದಷ್ಟು ವಾರ್ಗಿಕಗಳು ಮುಸಲ್ಮಾನರಲ್ಲಿ ಇಲ್ಲವೆಂದೇ ಹೇಳಬಹುದು. ಆ ಸಮುದಾಯದ ಸಾಮಾಜಿಕ ಸಂರಚನೆ ಇದಕ್ಕೆ ಬಹುಮುಖ್ಯ ಕಾರಣವಾಗಿದೆ. ಮುಖ್ಯವಾದ ಕೆಲವನ್ನು ಇಲ್ಲಿ ಗಮನಿಸಲಾಗಿದೆ.

ಪುರುಷ ಹೆಸರುಗಳಲ್ಲಿ ಕಂಡುಬರುವ ವಾರ್ಗಿಕಗಳು

ಸಾಹೇಬ (ಸಾಬ್ > ಸಾ)

ಖಾನ್

ಭಾಷಾ/ಪಾಶಾ > ಶಾ

ಸಲಾಂ

ಸ್ತ್ರೀ ಹೆಸರುಗಳಲ್ಲಿ ಕಂಡುಬರುವ ವಾರ್ಗಿಕಗಳು

ಬೇಗಂ

ಬೀ

ಸಾ

ಬಾನು

'ಸಾಹೇಬ' ಎಂದರೆ 'ಸಹವಾಸ' ಎಂದರ್ಥ. ಅಂದರೆ ಪೈಗಂಬರನ ಸಹವಾಸ ಮಾಡಿದವನು ಎಂದರ್ಥ. ಇದು ಸಾಬೇಬ-ಸಾಬ್ (ಸಾಬು ಕನ್ನಡ ಮಾತನಾಡುವವರಲ್ಲಿ) 'ಸಾ' ಎಂಬ ರೂಪಗಳಲ್ಲಿ ದೊರೆಯುತ್ತದೆ. ಕೆಲವು ಹೆಸರಿನ ನಿರ್ದಿಷ್ಟಗಳಿಗೆ ಈ ವಾರ್ಗಿಕ ಹತ್ತುವುದಿಲ್ಲ. ತೀರಾ ವಯಸ್ಸಾದವರೆಂದು ಸೂಚಿಸುವಾಗ 'ಸಾಬೀ' ಎಂದು ಬಳಕೆಯಾಗುತ್ತದೆ. ಮುಸ್ಲಿಂ ಆಡಳಿತದ ಪ್ರಭಾವದಿಂದ ಈಗಲೂ ನಮ್ಮಲ್ಲಿ ಸಾಹೇಬರೇ ಎಂಬುದು ಗೌರವ ಸೂಚಕ ಸಂಬೋಧನೆಯಾಗಿ ಬಳಸಲ್ಪಡುತ್ತದೆ. ಗ್ರಾಮೀಣ ಪರಿಸರದ ಮುಸ್ಲಿಂರಲ್ಲಿ 'ಸಾ' ಪ್ರತ್ಯಯದಿಂದ ಅಂತ್ಯಗೊಂಡಿರುವ ಹೆಸರುಗಳು ಕಾಣಬರುತ್ತಿವೆ. ಪ್ರಾಯಶಃ ಈ 'ಸಾ' ಎಂಬುದು 'ಸಾಹೇಬ'ದ ಸಂಕ್ಷಿಪ್ತ ರೂಪವೇ ಇರಬೇಕು.

### ಖಾನ್

ಇದೊಂದು ಪುರುಷವಾಚಿ ಪದ. ಮುಸ್ಲಿಂರಲ್ಲಿ 'ಪಠಾಣ' ಎನ್ನುವ ಒಂದು ಪಂಗಡ ಇದೆ. ಆ ಮನೆತನದವರು ಮಾತ್ರ ತಮ್ಮ ಹೆಸರುಗಳಲ್ಲಿ 'ಖಾನ್' ಎಂದು ಇಟ್ಟುಕೊಳ್ಳುತ್ತಾರೆ.

### ಬಾಷಾ

'ಬಾಷಾ' ಎಂದರೆ ರಾಜ ಮನೆತನಕ್ಕೆ ಸೇರಿದವನು ಎಂಬರ್ಥವನ್ನು ನೀಡುತ್ತದೆ. ಬಾಷಾ ಅನ್ನುವುದು ಕೆಲವೊಮ್ಮೆ 'ಪಾಷಾ' ಎಂದು ಆಗುತ್ತದೆ. ಅಲ್ಲದೆ 'ಷ' ಬದಲು 'ಶ'ನ್ನೂ ಬಳಸುತ್ತಾರೆ. ಬಾಷಾ > ಪಾಷಾ >

ಷಾ ಅಥವಾ ಬಾಶಾ > ಪಾಶ > ಶಾ ಎಂಬ ರೂಪಗಳಲ್ಲೂ ಕಂಡುಬರುತ್ತದೆ. ಈ ವಾರ್ಗಿಕವೂ ಕೂಡ ಎಲ್ಲಾ ನಿರ್ದಿಷ್ಟಗಳಿಗೆ ಹತ್ತುವುದಿಲ್ಲ.

## ಸಲಾಂ

'ಸಲಾಂ' ಎಂದರೆ ನಮಸ್ತೆ, ವಂದನೆ ಹೇಳುವುದು. 'ಸಲಾಂ' ಎಂಬ ವಾರ್ಗಿಕ ಹೆಚ್ಚಾಗಿ ಪುರಾಣ ಮೂಲದ ವ್ಯಕ್ತಿಗಳ ಹೆಸರುಗಳಲ್ಲಿ ಕಾಣಿಸಿಕೊಳ್ಳುತ್ತದೆ.

ಸ್ತ್ರೀ ಹೆಸರುಗಳಲ್ಲಿ ಬರುವ ವಾರ್ಗಿಕಗಳು ಹೆಣ್ಣು ಒಡತಿ, 'ಹೆಂಡತಿ' ಎಂಬ ಸ್ತ್ರೀ ಸೂಚಕ ಸಂಕೇತವನ್ನು ಸೂಚಿಸುತ್ತದೆ. ಕೆಲವು ವಾರ್ಗಿಕಗಳು ಕೆಲವು ಪಂಗಡ ವರ್ಗದವರಲ್ಲಿ ಮಾತ್ರ ಕಾಣಿಸಿಕೊಳ್ಳುತ್ತವೆ. ಕನ್ನಡದಲ್ಲಿ ಕೆಲವೊಮ್ಮೆ ವಾರ್ಗಿಕಗಳ ಮೂಲಕ ವ್ಯಕ್ತಿಯ ಜಾತಿ, ಸ್ಥಾನಮಾನಗಳನ್ನು ತಿಳಿಯಬಹುದಾದಂತಹ 'ಮುಸ್ಲಿಂ' ಸಮುದಾಯದ ವ್ಯಕ್ತಿನಾಮ ವಾರ್ಗಿಕಗಳ ಮೂಲಕ ಇದು ಸಾಧ್ಯವೇ ಎಂಬುದನ್ನು ಅಧ್ಯಯನ ಮಾಡಬೇಕಾದ ಅಗತ್ಯವಿದೆ.

ಉರ್ದು ಹೆಸರಿನ ನಿರ್ದಿಷ್ಟದ ಜೊತೆಗೆ ಕನ್ನಡದ ವಾರ್ಗಿಕ ಮತ್ತು ಕನ್ನಡದ ನಿರ್ದಿಷ್ಟದ ಜೊತೆ ಉರ್ದು ವಾರ್ಗಿಕ ಸೇರಿ ರಚನೆಗೊಂಡ ಹೆಸರುಗಳು ಕಾಣಬರುತ್ತವೆ. ಈ ಬಗೆಯ ರಚನೆಗಳು ವಿಶೇಷವಾದರೂ ಸಹಜವಾಗಿವೆ. ಆದರೆ ಒಂದು ಉರ್ದು ಮತ್ತು ಒಂದು ಕನ್ನಡದ ವಾರ್ಗಿಕ ಸೇರಿ ವ್ಯಕ್ತಿನಾಮ ಆಗಿರುವುದು ತುಂಬಾ ವಿಶೇಷವೆನಿಸುತ್ತದೆ. ಎರಡು ಉದಾಹರಣೆಗಳನ್ನು ಇಲ್ಲಿ ಗಮನಿಸಬಹುದು. 'ಅಪ್ಪಾಸಾಹೇಬ', 'ಸಾಯಿಬಣ್ಣ' ಅಪ್ಪ + ಸಾಹೇಬ = ಅಪ್ಪಾಸಾಹೇಬ. ಪೂರ್ವಪದ ಕನ್ನಡದ್ದಾಗಿದ್ದು, ನಿರ್ದಿಷ್ಟದ ಸ್ಥಾನದಲ್ಲಿ ಬಂದಿದೆ. ಉತ್ತರಪದ ಉರ್ದುವಿನಾಗಿದ್ದು ವಾರ್ಗಿಕದ ಸ್ಥಾನದಲ್ಲಿ ಬಂದಿದೆ. 'ಅಪ್ಪ' ಎಂಬುದು ಸಮಸ್ತಪದವಾಗುವಾಗ ದೀರ್ಘವಾಗಿ 'ಆ' ಕಾರಾಂತ್ಯವಾಗುತ್ತದೆ. ಸೌಲಭ್ಯಾಕಾಂಕ್ಷೆಗಾಗಿ ಈ ಕ್ರಿಯೆ ನಡೆದಿರಬಹುದು.

ಇನ್ನೊಂದು ಹೆಸರು ಸಾಯಿಬಣ್ಣ. ಇದು ಸಾಹೇಬ + ಅಣ್ಣ ಎಂಬ ರಚನೆ ಆಗಿದ್ದು, ಸಾಹೇಬಣ್ಣ > ಸಾಯಿಬಣ್ಣ ಆಗಿದೆ. ಕೆಲವೊಮ್ಮೆ 'ಸಾಯ್ಬಣ್ಣ' ಎಂದೂ ಆಗುತ್ತದೆ. ಇಲ್ಲಿ ಪೂರ್ವಪದ ಉರ್ದು ಪದವಾಗಿದ್ದು, ಉತ್ತರಪದ ಕನ್ನಡ ಪದವಾಗಿರುವುದು ಸ್ಪಷ್ಟವಾಗಿ ತಿಳಿಯುತ್ತದೆ. ವಿಗ್ರಹ ರಚನೆಯಲ್ಲಿ ಇದನ್ನು ಕಾಣಬಹುದಾಗಿದೆ. ಇಂಥ ಹೆಸರುಗಳು ವಿರಳವಾದರೂ ತುಂಬಾ ಕುತೂಹಲ ರಚನೆಗಳಾಗಿವೆ.

## ಮುಸ್ಲಿಂ ಹೆಸರುಗಳಲ್ಲಿ ಕನ್ನಡದ ವಿಶೇಷಣಗಳು

ಒಂದೇ ಹೆಸರಿನ ವ್ಯಕ್ತಿಗಳು ಒಂದೇ ಕುಟುಂಬದಲ್ಲಿ ಒಬ್ಬರಿಗಿಂತ ಜಾಸ್ತಿ ಜನರಿದ್ದಾಗ ಈ ವಿಶೇಷಣಗಳು ಹೆಸರಿನೊಂದಿಗೆ ಬಂದು ವ್ಯಕ್ತಿಯನ್ನು ಪ್ರತ್ಯೇಕಿಸುತ್ತವೆ. ಹೆಚ್ಚೂ ಕಡಿಮೆ ಎಲ್ಲಾ ಭಾಷಾ ನಾಮ ಸಂದರ್ಭಗಳಲ್ಲಿ ಈ ವಿಶೇಷಣಗಳು ಕಾಣಬಂದಂತೆ ತೋರುತ್ತವೆ. ಉರ್ದು ಹೆಸರುಗಳಲ್ಲಿ ಉರ್ದುಭಾಷೆಯ ವಿಶೇಷಣಗಳೂ ಬರುತ್ತವೆ. ಕನ್ನಡದ ವಿಶೇಷಣದ ಜೊತೆಗೆ ರಚನೆಯಾಗುವ ಉರ್ದು ಹೆಸರುಗಳನ್ನು ಮಾತ್ರ ಇಲ್ಲಿ ಗಮನಿಸಲಾಗಿದೆ. ಉದಾಹರಣೆಗೆ

ಸಣ್ಣ + ಖುದ್ದು + ಸಾಹೇಬ್ = ಸಣ್ಣಖುದ್ದುಸಾಬ್

ಸಣ್ಣ + ಹುಸೇನ್ + ಸಾಬಿ = ಸಣ್ಣಹುಸೇನ್ ಸಾಬಿ

ದೊಡ್ಡ + ಇಮಾಂಮ್ + ಸಾಬ್ = ದೊಡ್ಡ ಇಮಾಂಮ್ ಸಾಬ್

ಚಿಕ್ಕ + ಫಕೀರ + ಸಾಬ್ = ಚಿಕ್ಕ ಫಕೀರ್ ಸಾಬ್

ಮೇಲಿನ ಉದಾಹರಣೆಗಳನ್ನು ಗಮನಿಸಿದರೆ ಹೆಸರಿನ ಪೂರ್ವಭಾಗದಲ್ಲಿರುವ 'ಸಣ್ಣ', 'ದೊಡ್ಡ', 'ಚಿಕ್ಕ' ಪದಗಳು ಕನ್ನಡದ ವಿಶೇಷಣಗಳಾಗಿವೆ. ಸುತ್ತಮುತ್ತಲು ಕನ್ನಡದ ಜನರೇ ಇರುವುದರಿಂದ ಈ ಪ್ರಭಾವ ಆಗಿರಬೇಕು. ಈ ವಿಶೇಷಣಗಳು ಸಂಬೋಧನೆಯಲ್ಲಿ ಬಳಕೆಯಾಗುವುದು ಕಡಿಮೆಯೆಂದೇ ಹೇಳಬಹುದು. ಈ ಹೆಸರುಗಳು ಕನ್ನಡಿಗರ ಮಧ್ಯೆ ವಾಸಿಸುವ ಸಾಮಾನ್ಯ ಮುಸ್ಲಿಂ ಜನರಲ್ಲಿ ಮಾತ್ರ ಸಾಧ್ಯ ಎಂಬುದು ಗಮನಾರ್ಹ. ಇವಲ್ಲದೆ ವೃತ್ತಿ ಮತ್ತು ಇತರ ವಿಶೇಷಣ ರೂಪಗಳನ್ನು ಕೆಲವು ಸಲ ಕನ್ನಡದಲ್ಲಿಯೇ ಸಂಬೋಧಿಸುವುದು ಕಂಡುಬರುತ್ತವೆ. ಉದಾಹರಣೆಗೆ ತೆಂಗಿನಕಾಯಿ ಮಾಬ್ಬಾಶ, ವಕೀಲ ಉಸ್ಮಾನ್ ಸಾಬ್ ಇತ್ಯಾದಿ. ತೆಂಗಿನಕಾಯಿ, ವಕೀಲ ಎಂಬ ವಿಶೇಷಣಗಳು ಕನ್ನಡದಲ್ಲಿಯೇ ಪ್ರಯೋಗವಾಗುತ್ತವೆ. ಪುರುಷ ಹೆಸರುಗಳಲ್ಲಿ ಈ ಉದಾಹರಣೆಗಳು ಅಧಿಕವಾಗಿದ್ದು, ಸ್ತ್ರೀ ಹೆಸರುಗಳಲ್ಲಿ ಅತ್ಯಂತ ವಿರಳವೆಂದೇ ಹೇಳಬಹುದು.

ಸಮಕಾಲೀನ ಆಧುನಿಕ ಜಗತ್ತು ತುಂಬಾ ವೇಗವಾಗಿ ಚಲಿಸುತ್ತಿದೆ. ಹಳೆಯದನ್ನು ಕೀಳು, ಹಳಸಲು ಎಂದು ಭಾವಿಸುವ ಜನ ಹೊಸದನ್ನು ಪಡೆಯುವ ತವಕದಲ್ಲಿದ್ದಾರೆ. ಇದು ಕೇವಲ ಊಟ, ಉಡುಪು, ಅನ್ವೇಷಣೆಗಳಲ್ಲಿ ಮಾತ್ರವಲ್ಲ. ಎಲ್ಲಾ ರಂಗಗಳಲ್ಲೂ ಈ ಬದಲಾವಣೆ ಸಾಧ್ಯವಾಗುತ್ತಿದೆ. ಪರಂಪರಾಗತವಾಗಿ ಉಳಿದು, ಬೆಳೆದು ಬಂದಂಥ ವ್ಯಕ್ತಿನಾಮಗಳು ಹಿಂದಕ್ಕೆ ಸರಿದು ಇಂದು ಹೊಸ ನಾಮಗಳು ಪ್ರವೇಶ ಪಡೆದಿವೆ. ಇದು ಎಲ್ಲಾ ಜನಾಂಗದವರಲ್ಲಿ ಕಾಣಸಿಗುವ ಸಾಮಾನ್ಯ ಪ್ರಕ್ರಿಯೆಯಾಗಿದೆ. ಮುಸ್ಲಿಂರ ಹೆಸರುಗಳಲ್ಲೂ ಈ ಬದಲಾವಣೆಯನ್ನು ಗುರುತಿಸಬಹುದಾಗಿದೆ. ಹಳೆಯ ಹೆಸರಿಗೆ ಬದಲು ಚಿತ್ರತಾರೆಯರ, ಕ್ರೀಡಾಪಟುಗಳ, ರಾಜಕೀಯ ವ್ಯಕ್ತಿಗಳ ಪ್ರಭಾವವಾಗಿರುವುದು ತಿಳಿದುಬರುತ್ತದೆ.

ವ್ಯಕ್ತಿನಾಮಗಳ ಹಿಂದೆ ಸಂಸ್ಕೃತಿಯ ಉಸಿರು ಆಡುತ್ತಿರುತ್ತದೆ. ಅದಕ್ಕಾಗಿ ಭಿನ್ನದೃಷ್ಟಿಕೋನಗಳಿಂದ ಅಧ್ಯಯನ ಮಾಡಬೇಕಾದ ಜವಬ್ದಾರಿ ಇವತ್ತಿನ ವಿದ್ವಾಂಸರ, ಸಂಶೋಧಕರ ಮೇಲಿದೆ. ಸಂಸ್ಕೃತಿಯು ಹೊಸ ಹೊಸ ಸಾಧ್ಯತೆಗಳನ್ನು ಕಂಡುಕೊಂಡಂತೆ ಅಲ್ಲಿಯ ಹೆಸರುಗಳು ಬದಲಾದ ಸಂಸ್ಕೃತಿಗೆ ಸ್ಪಂದಿಸುತ್ತವೆ. ಆಯಾ ಕಾಲಘಟ್ಟದ ಪ್ರತೀಕವಾಗಿ ನಿಲ್ಲುತ್ತವೆ. ಈ ಕಾರಣದಿಂದ ಒಂದೊಂದು ಪ್ರದೇಶದ, ಒಂದೊಂದು ಜನಾಂಗದ, ಒಂದೊಂದು ಕಾಲದ ವ್ಯಕ್ತಿನಾಮಗಳನ್ನು ಬಿಡಿ ಬಿಡಿಯಾಗಿ ಅಧ್ಯಯನ ನಡೆಸಬೇಕಿದೆ. ಜೊತೆಗೆ ತೌಲನಿಕ ಅಧ್ಯಯನಗಳೂ ಸಾಧ್ಯವಾಗಬೇಕು. ಈ ದಿಸೆಯ ಅಧ್ಯಯನಗಳು ನಡೆದರೆ ನಾವು ನಮ್ಮ ಸಂಸ್ಕೃತಿಯನ್ನು ಹೆಚ್ಚು ವಾಸ್ತವ ನೆಲೆಯಲ್ಲಿ ಕಟ್ಟಿಕೊಂಡಂತೆ ಆಗಬಹುದು. ಇಲ್ಲಿ ಚರ್ಚಿಸಲ್ಪಟ್ಟಿರುವ ಮುಸ್ಲಿಂ ವ್ಯಕ್ತಿನಾಮಗಳು ಅವರ ಸಂಸ್ಕೃತಿಯ ಕುರಿತು ಅನೇಕ ಹೊಳಹುಗಳನ್ನು ನೀಡುತ್ತವೆ. ಸ್ತ್ರೀ ನಾಮಗಳ ಕುರಿತು ಮಾತನಾಡುವಾಗ ಹೆಚ್ಚು ಉದಾಹರಣೆಗಳನ್ನು ಕೊಡಲು ಆಗಿಲ್ಲ. ಇದು ಪ್ರಸ್ತುತ ಅಧ್ಯಯನದ ಮಿತಿಯಾಗಿದೆ.

## ೩.೭ ಮತಾಂತರ ಪ್ರಕ್ರಿಯೆ

ವ್ಯಕ್ತಿನಾಮಗಳು ಸಂಸ್ಕೃತಿಯ ಪ್ರತಿನಿಧಿ ಆಕರಗಳಾಗಿರುವುದರಿಂದ ಪ್ರಾಯಶ: ಹೆಸರುಗಳು ವ್ಯಕ್ತಿಯ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಮತ್ತು ಭಾಷಿಕ ಹಿನ್ನೆಲೆಯನ್ನು ಅನುಸರಿಸಿಯೇ ಬಂದಿರುತ್ತವೆ. ವ್ಯಕ್ತಿನಾಮಗಳ ನಿರ್ದೇಶನಕ್ಕೆ ಇಂಥ ಮಿತಿಗಳು ಇರುವುದರಿಂದಲೇ, ಹೆಸರಿನ ಮೂಲಕವೇ ವ್ಯಕ್ತಿಯ ಜಾತಿ, ಧರ್ಮವನ್ನು ಗುರುತಿಸಲು ಸಾಧ್ಯವಾಗುತ್ತಿರುವುದು. ಇದು ಜಗತ್ತಿನ ಎಲ್ಲಾ ಸಾಮಾಜಿಕ ಸಂದರ್ಭಗಳಿಗೆ ಅನ್ವಯಿಸುತ್ತದೆಯೇ? ಎಂಬುದನ್ನು ಖಚಿತಪಡಿಸಿಕೊಳ್ಳಬೇಕಾದ ಅಗತ್ಯವಿದೆ. ಈ ಬಗೆಯಲ್ಲಿ ಜಗತ್ತಿನ ಎಲ್ಲಾ ಭಾಷೆಗಳ ವ್ಯಕ್ತಿನಾಮಗಳನ್ನು ಅಧ್ಯಯನ ಮಾಡಬೇಕಾದ ಅವಶ್ಯಕತೆಯೂ ಇದೆ. ಇಲ್ಲಿ ಬಹಳ ಮುಖ್ಯವಾಗಿ ಭಾರತೀಯ ಸಾಮಾಜಿಕ ಸಂದರ್ಭಗಳನ್ನು ಗಮನದಲ್ಲಿರಿಸಿಕೊಂಡು, ಮೇಲಿನ ಮಾತುಗಳನ್ನು ಹೇಳಲಾಗಿದೆ. ಆದಾಗ್ಯೂ ಹೆಸರುಗಳು ಆಯಾಭಾಷೆ ಮತ್ತು ಧಾರ್ಮಿಕ ಮಿತಿಗಳ ಒಳಗೆ ಕೆಲಸಮಾಡುತ್ತಿರುವುದರಿಂದ, ಯಾವ ಹೆಸರು ಯಾವ ಜಾತಿ, ಧರ್ಮಕ್ಕೆ ಸೇರಿದುದು ಎಂಬುದನ್ನು ಸುಲಭವಾಗಿ ಗುರುತಿಸಬಹುದು. ಸ್ಪಷ್ಟನೆಗಾಗಿ ಬೇರೆ ಬೇರೆ ಧರ್ಮಕ್ಕೆ ಸಂಬಂಧಪಟ್ಟ ಕೆಲವು ಹೆಸರುಗಳನ್ನು ಇಲ್ಲಿ ನೋಡಬಹುದು.

ಹಿಂದೂ ಧರ್ಮಕ್ಕೆ ಸಂಬಂಧಿಸಿದ ಹೆಸರುಗಳು :

| ಪುರುಷ ಹೆಸರು | ಸ್ತ್ರೀ ಹೆಸರು |
|---|---|
| ಪರಮೇಶ್ವರಪ್ಪ | ಗೌರಮ್ಮ |
| ಚಂದ್ರಶೇಖರಯ್ಯ | ಪಾರ್ವತಮ್ಮ |
| ನಾರಾಯಣಸ್ವಾಮಿ | ಸೀತ |
| ಲಕ್ಷ್ಮಣ | ಮಹದೇವಿ |
| ಮಹದೇವ | ಲೀಲಾವತಿ |
| ತಿರುಮಲ | ಭಾಗ್ಯಮ್ಮ |
| ಮಾರುತಿ | ಮೀನಾಕ್ಷಿ |

ಕ್ರಿಶ್ಚಿಯನ್ ಧರ್ಮಕ್ಕೆ ಸಂಬಂಧಿಸಿದ ಹೆಸರುಗಳು :

| ಪುರುಷ ಹೆಸರು | ಸ್ತ್ರೀ ಹೆಸರು |
|---|---|
| ರಿಚರ್ಡ್ಸ್ | ಮೇರಿ |
| ವಿಲ್ಸನ್ | ಮಾರ್ಥಾ |
| ಸ್ಟುಅರ್ಟ್ | ಎಲಿಜಬೆತ್ |
| ಆಂಥೋಣಿ | ರೋಜೀ |
| ಮೆಕಾಲೆ | ಲೂಸೀ |
| ಪೀಟರ್ | ಲಿಲಿ |
|  | ಮ್ಯಾಥ್ಯೂ |

ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ ಹೆಸರುಗಳು :

| ಪುರುಷ ಹೆಸರು | ಸ್ತ್ರೀ ಹೆಸರು |
| --- | --- |
| ಇಕ್ಬಾಲ್ | ರಝಿಯಾಬೇಗಂ |
| ಜಾಫರ್ ಖಾನ್ | ನಫೀಜಾ |
| ರಿಯಾಜ್ | ಫಾತಿಮಾ |
| ಸೈಫುಲ್ ಖಾನ್ | ನೂರ್ ಜಹಾನ್ |
| ಅಕ್ಬರ್ ಬಾಷಾ | ಬೀಬಿಜಾನ್ |
| ಖಲೀಲ್ ಸಾಬ್ | ಅಕ್ತರ್ ಉನ್ನೀಸಾ |
| ಅನ್ವರ್ | ಸುಲ್ತಾನ್ |

ಮೇಲಿನ ಮೂರು ಗುಂಪುಗಳ ಪುರುಷ ಮತ್ತು ಸ್ತ್ರೀ ಹೆಸರುಗಳನ್ನು ಗಮನಿಸಿದರೆ, ಮೂರು ಗುಂಪಿನ ಹೆಸರುಗಳು ಪ್ರತ್ಯೇಕ ಧರ್ಮದವುಗಳಾಗಿರುವುದು ಸ್ಪಷ್ಟವಾಗುತ್ತದೆ. ಮತ್ತು ಈ ಹೆಸರುಗಳು ಯಾವ ಯಾವ ಭಾಷಾ ಪರಿಸರದಲ್ಲಿ ಕಾಣಬರುತ್ತವೆ ಎಂಬುದನ್ನು ಗುರುತಿಸಬಹುದು. ಒಂದನೆ ಗುಂಪಿನ ಹೆಸರುಗಳು, ಕನ್ನಡದಲ್ಲಿ ಅರ್ಥವನ್ನು ಹೊಂದಿರುವ ಕನ್ನಡ ಭಾಷಾ ಪರಿಸರದಲ್ಲಿ ಕಂಡುಬರುತ್ತಿದ್ದು, ಭಾರತದ ಬಹುತೇಕ (ಸಮಾಜಗಳಲ್ಲಿ) ಭಾಷೆಗಳಲ್ಲಿ ಈ ಹೆಸರುಗಳು ಬಳಕೆಯಲ್ಲಿವೆ. ಮೇಲೆ ಸೂಚಿಸಿರುವ ಈ ಹೆಸರುಗಳಿಗೆ ಧಾರ್ಮಿಕ (ಧರ್ಮದ) ಚೌಕಟ್ಟುಗಳು ಇದ್ದರೂ, ಭಾಷಾ ಮಿತಿಗಳು ಇರುವುದಿಲ್ಲ. ಅಂದರೆ ಭಾರತೀಯ ಭಾಷೆಗಳಲ್ಲೆಲ್ಲಾ ಈ ಹೆಸರುಗಳು ಇರಲು ಸಾಧ್ಯ.

ಎರಡನೆ ಗುಂಪಿನ ಹೆಸರುಗಳು ಜಗತ್ತಿನ ಹಲವು ಭಾಷಾ ಪರಿಸರಗಳಲ್ಲಿ ಕಾಣಬರುತ್ತವೆ. ಹೀಗೆ ಹೆಚ್ಚು ಭಾಷೆಗಳಲ್ಲಿ ಕಂಡುಬಂದರೂ, ಇವುಗಳ ಬಳಕೆಗೆ ನಿರ್ದಿಷ್ಟವಾದ ಧಾರ್ಮಿಕ ಚೌಕಟ್ಟುಗಳು ಇರುವುದನ್ನು ಗಮನಿಸಬಹುದು. ಮೂರನೆ ಗುಂಪಿನ ಹೆಸರುಗಳೂ ಸಹ ಒಂದು ನಿರ್ದಿಷ್ಟ ಭಾಷೆ ಅಲ್ಲದಿದ್ದರೂ ಉರ್ದು, ಪರ್ಷಿಯನ್ ಮತ್ತು ಅರಾಬಿಕ್ ಭಾಷಾ ಪರಿಸರಗಳಲ್ಲಿ ಕಾಣಬರುತ್ತವೆ. ಹೀಗೆ ವ್ಯಕ್ತಿನಾಮಗಳು ನೀಡುವ ಅರ್ಥ, ಭಾಷಿಕ ಸಂದರ್ಭ ಹಾಗೂ ಹೆಸರಿನ ಚಾರಿತ್ರಿಕ ಹಿನ್ನೆಲೆಯನ್ನು ಗಮನಿಸಿ ವ್ಯಕ್ತಿನಾಮಗಳ ಮೂಲವನ್ನು ಸೂಚಿಸಬಹುದಾಗಿದೆ. ಜಗತ್ತಿನ ಪ್ರತಿ ಭಾಷೆಯ ಹೆಸರುಗಳಲ್ಲಿ ಲಿಂಗ ಸೂಚನೆಗೆ ಅಂದರೆ ಗಂಡು, ಹೆಣ್ಣು ಎಂದು ಪ್ರತ್ಯೇಕಿಸಲು ಕೆಲವು ಸೂಚನೆಗಳು ಇರುತ್ತವೆ. ಆದರೆ ಭಾಷೆ ತೀರಾ ಅಪರಿಚಿತವಾದರೆ, ಯಾವುದು ಗಂಡು ಹೆಸರು, ಯಾವುದು ಸ್ತ್ರೀ ಹೆಸರು ಎಂದು ಗುರುತಿಸುವುದು ಮಾತ್ರವಲ್ಲ, ಕೆಲವು ಸಾರಿ ಇದು ಯಾವ ಭಾಷಾಪರಿಸರಕ್ಕೆ ಸಂಬಂಧಪಟ್ಟ ಹೆಸರು ಎಂದು ಗುರುತಿಸಲು ಸಾಧ್ಯವಾಗದೆ ಇರಬಹುದು. ಅಂದರೆ ಪ್ರತಿ ಹೆಸರಿಗೂ ಲಕ್ಷಣಸೂಚಕ ಅರ್ಥ ಇರುತ್ತದೆ ಎಂಬುದು ಮೇಲಿನ ಚರ್ಚೆಯಿಂದ ತಿಳಿದುಬರುತ್ತದೆ.

ಮತಾಂತರ ಅಥವಾ ಧರ್ಮಾಂತರ ಪ್ರಕ್ರಿಯೆಗೆ ಜಾಗತಿಕ ಮಟ್ಟದ ವ್ಯಾಪಕತೆ ಇರುವ ಹಾಗೆ, ಅದಕ್ಕೊಂದು ಚಾರಿತ್ರಿಕವಾದ ಮಹತ್ವವೂ ಇದೆ. ಭಾರತೀಯ ಇತಿಹಾಸದಲ್ಲಿ ಮತಾಂತರದ ಸಂದರ್ಭಗಳನ್ನು ಬೇರೆ ಬೇರೆ ಕಾಲಘಟ್ಟಗಳಲ್ಲಿ ಕಾಣಬಹುದಾದರೂ ವಸಾಹತುಶಾಹಿ ಕಾಲಘಟ್ಟದಲ್ಲಿ ನಡೆದ ಮತಾಂತರ ಪ್ರಕ್ರಿಯೆ ತುಂಬಾ ಮಹತ್ವದ ಸಂಗತಿಯಾಗಿ ಪರಿಣಮಿಸುತ್ತದೆ. ಬ್ರಿಟೀಷರು ತಮ್ಮ ಧರ್ಮಪ್ರಚಾರ ಮಾಡುವ

ಉದ್ದೇಶದಿಂದ ಸಾವಿರಾರು ಜನ ಹಿಂದೂಗಳನ್ನು ಬಲತ್ಕಾರದಿಂದ ಮತಾಂತರಿಸಿದರು. ಹೀಗೆ ಒತ್ತಾಯದಿಂದ ಮತಾಂತರಗೊಂಡ ಹಿಂದೂಗಳು ಕ್ರಿಶ್ಚಿಯನ್ ಧರ್ಮದ ತತ್ವಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡರೇ? ಎಂಬ ಪ್ರಶ್ನೆ ನಮಗೆ ಇಂದಿಗೂ ಸವಾಲಾಗಿಯೇ ನಿಲ್ಲುತ್ತದೆ. ಪ್ರಸ್ತುತ ದಿನಮಾನಗಳಲ್ಲಿಯೂ ಅನೇಕ ಜನ ಹಿಂದೂಗಳು ಸ್ವಇಚ್ಛೆಯ ಮೇರೆಗೆ ಬೌದ್ಧ, ಕ್ರಿಶ್ಚಿಯನ್, ಇಸ್ಲಾಂ ಮುಂತಾದ ಧರ್ಮಗಳಿಗೆ ಮತಾಂತರವಾಗುತ್ತಿರುವುದು ಗಮನಾರ್ಹವಾದುದು. ಮತಾಂತರ ಅಥವಾ ಧರ್ಮಾಂತರವೆಂದರೆ ಬೇರೇನೂ ಅಲ್ಲ. ಒಂದು ಧರ್ಮದ ಜೀವನ ಪದ್ಧತಿಗೆ ಬದಲಾಗಿ ಇನ್ನೊಂದು ಧರ್ಮದ ಜೀವನ ಕ್ರಮವನ್ನು ಅಳವಡಿಸಿಕೊಳ್ಳುವುದೇ ಆಗಿರುತ್ತದೆ. ಹೀಗೆ ಒಂದು ಧರ್ಮದಿಂದ ಇನ್ನೊಂದು ಧರ್ಮಕ್ಕೆ ಪರಿವರ್ತನೆಯಾದಾಗ ಪೂರ್ವಧರ್ಮದ ಸಂಸ್ಕೃತಿಯನ್ನು ಬಿಟ್ಟು, ಸ್ವೀಕರಿಸಲ್ಪಟ್ಟ ಧರ್ಮದ ಸಂಸ್ಕೃತಿಯನ್ನು ಅಳವಡಿಸಿಕೊಳ್ಳಬೇಕಾಗುತ್ತದೆ. ಹೀಗೆ ಒಂದು ಧರ್ಮದಿಂದ ಇನ್ನೊಂದು ಧರ್ಮಕ್ಕೆ ಪರಿವರ್ತಿತರಾಗುವ ಸಂದರ್ಭದಲ್ಲಿ ಮೊದಲಿನ ಧರ್ಮದ ಸಂಸ್ಕೃತಿ, ಭಾಷಾಪರಿಸರಕ್ಕೆ ಅನುಗುಣವಾಗಿ ಪಡೆದಿದ್ದ ಹೆಸರನ್ನು ಕೈಬಿಟ್ಟು ಇಲ್ಲವೆ ಮೊದಲಿನ ಹೆಸರಿಗೆ ಬದಲಾಗಿ, ಒಪ್ಪಿಕೊಂಡ ಧರ್ಮದ ಭಾಷಿಕ ಸಂಸ್ಕೃತಿಯ ಹೆಸರನ್ನು ಪಡೆದುಕೊಳ್ಳಬೇಕಾಗುತ್ತದೆ. ಇದು ಎಲ್ಲಾ ಧರ್ಮಗಳಿಗೆ ಅನ್ವಯಿಸುತ್ತದೆ ಎಂದು ಹೇಳಲು ಬರುವುದಿಲ್ಲ. ಕೆಲವು ಧರ್ಮಗಳಲ್ಲಿ ಕಡ್ಡಾಯವಾಗಿರುವಂತೆ ಕೆಲವು ಧರ್ಮಗಳಲ್ಲಿ ಐಚ್ಛಿಕವಾಗಿರುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಬೇರೆ ಬೇರೆ ಧರ್ಮಗಳ ಮತಾಂತರ ಪ್ರಕ್ರಿಯೆಗಳನ್ನು ಗಮನಿಸದೆ, ಪರಿವರ್ತಿತ ಕನ್ನಡಿಗ ಕ್ರಿಶ್ಚಿಯನ್ನರಲ್ಲಿ ಕಂಡುಬರುವ ವ್ಯಕ್ತಿನಾಮಗಳ ಕೆಲವು ಆಯಾಮಗಳನ್ನು ಮಾತ್ರ ಮುಖ್ಯವಾಗಿ ಗಮನಿಸಲಾಗುವುದು.

ಕ್ರಿಶ್ಚಿಯನ್ ಧರ್ಮದಲ್ಲಿ 'ಕ್ಯಾಥೋಲಿಕ್' ಮತ್ತು 'ಪ್ರೊಟೆಸ್ಟೆಂಟ್' ಎಂಬ ಎರಡು ಪ್ರಧಾನ ಪಂಥಗಳಿವೆ. ಈ ಎರಡೂ ಪಂಥಗಳ ಧೋರಣೆಗಳು ಒಂದಕ್ಕೊಂದು ಭಿನ್ನವಾಗಿವೆ. ಕ್ಯಾಥೋಲಿಕ್ ಪಂಥಕ್ಕೆ ಪರಿವರ್ತನೆಯಾದವರು, ತನ್ನ ಮೊದಲಿನ ಹೆಸರನ್ನು ಬಿಟ್ಟು, ಕ್ರಿಶ್ಚಿಯನ್ ಧರ್ಮದ ಹೆಸರನ್ನು ಪಡೆಯುವುದು ಕಡ್ಡಾಯವಾಗಿರುತ್ತದೆ. ಆದರೆ ಪ್ರೊಟೆಸ್ಟೆಂಟ್ ಪಂಥದಲ್ಲಿ ಇದು ಕಡ್ಡಾಯವಾಗಿರುವುದಿಲ್ಲ. ವ್ಯಕ್ತಿ ಸ್ವತಃ ಬೇರೆ ಹೆಸರು ಬಯಸಿದ ಸಂದರ್ಭದಲ್ಲಿ ಮಾತ್ರ ಬದಲಾಯಿಸಲಾಗುವುದು. ಪರಿವರ್ತಿತ ಕ್ರಿಶ್ಚಿಯನ್ನರಿಗೆ ಹೊಸ ನಾಮಕರಣ ಮಾಡುವವರು ಪಾದ್ರಿಗಳು. ನಾಮಕರಣ ಕ್ರಿಯೆಯನ್ನು ಚರ್ಚ್‌ನ ಪರಿಭಾಷೆಯಲ್ಲಿ 'ಸ್ನಾನದೀಕ್ಷೆ' ಎಂದು ಕರೆಯುತ್ತಾರೆ. ಕರ್ನಾಟಕದಲ್ಲಿ ಈಗಿರುವ ಬಹುಪಾಲು ಚರ್ಚುಗಳು ಪ್ರೊಟೆಸ್ಟೆಂಟ್ ಪಂಥಕ್ಕೆ ಸೇರಿದವುಗಳು ಎಂಬುದು ಉಲ್ಲೇಖಾರ್ಹ ಸಂಗತಿಯಾಗಿದೆ.

ಕ್ಷೇತ್ರ ಮಾಹಿತಿಯನ್ನು ಆಧರಿಸಿ ಪರಿವರ್ತಿತ ಕನ್ನಡಿಗ ಕ್ರಿಶ್ಚಿಯನ್ನರ ಹೆಸರುಗಳನ್ನು ಈ ರೀತಿ ವರ್ಗೀಕರಿಸಿಕೊಳ್ಳಬಹುದು.

೧. ಪರಿವರ್ತಿತ ನಾಮಗಳು
೨. ಮಿಶ್ರ ನಾಮಗಳು
೩. ಭಾವನಾಮಗಳು
೪. ಇತರೆ

## ಪರಿವರ್ತಿತ ನಾಮಗಳು

ಕನ್ನಡ ಭಾಷಾಪರಿಸರದಿಂದ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ಹೊಂದಿದಾಗ, ಈ ಹಿಂದೆ ಪಡೆದಿದ್ದ ಹೆಸರನ್ನು ಸಂಪೂರ್ಣವಾಗಿ ಕೈಬಿಟ್ಟು, ಕ್ರಿಶ್ಚಿಯನ್ ಧರ್ಮಕ್ಕೆ ಸಂಬಂಧಪಟ್ಟ ಹೆಸರನ್ನು ಧರಿಸುವುದು. ಉದಾಹರಣೆಗೆ ಕೆಲವು ಹೆಸರುಗಳನ್ನು ಗಮನಿಸಬಹುದು.

| ಪುರುಷ ಹೆಸರು | ಸ್ತ್ರೀ ಹೆಸರು |
|---|---|
| ಕನ್ನಡ > ಕ್ರಿಶ್ಚಿಯನ್ | ಕನ್ನಡ > ಕ್ರಿಶ್ಚಿಯನ್ |
| ಉಮಾಶಂಕರ > ವಿಲ್ಸನ್ | ಮಹದೇವಿ > ಮೇರಿ |
| ನಾರಾಯಣ > ರಿಚರ್ಡ್ಸ್ | ನೀಲಮ್ಮ > ಮಾರ್ಥಾ |
| ಶಿವಕುಮಾರ್ > ಕ್ರಿಸ್ಟೋಫರ್ | ಉಮಾದೇವಿ > ರೀಟಾ |
| ವೆಂಕಟೇಶ > ಎಬನೇಜರ್ | ತಿಪ್ಪಮ್ಮ > ರೋಜೀ |
| ಮೂಕಣ್ಣ > ಜಾನ್ | ಜಯಪ್ರದ > ಲೂಸಿ |
| ಗಂಗಪ್ಪ > ಪೀಟರ್ | ಅಂಬುಜ > ಲಿಲಿ |
| ಶಿವದಾಸ > ಪಾಲ್ | ಸಮಂಗಳ > ಆಯಲಿಸ್ |
| ಮಾರುತಿ > ಆಂಥೋಣಿ | ಗಂಗಮ್ಮ > ಬೊಥೆಲ್ಲೋ |

## ೨. ಮಿಶ್ರನಾಮಗಳು

ಮತಾಂತರಗೊಂಡವರು ಕ್ರಿಶ್ಚಿಯನ್ ಧರ್ಮದ ಹೊಸ ಹೆಸರನ್ನು ಪಡೆದುಕೊಳ್ಳುವುದರ ಜೊತೆಗೆ, ಪೂರ್ವದ ಹೆಸರನ್ನು ಪೂರ್ಣಪ್ರಮಾಣದಲ್ಲಿ ಇಲ್ಲವೆ ಹೆಸರಿನ ಯಾವುದಾದರು ಒಂದು ಭಾಗವನ್ನು ಹಾಗೆಯೇ ಮುಂದುವರೆಸಿಕೊಂಡು ಬರಲಾಗುತ್ತದೆ. ಇನ್ನೊಂದು ಧರ್ಮವನ್ನು ಒಪ್ಪಿಕೊಂಡರೂ ಮೂಲಧರ್ಮದ ಮೇಲಿನ ಅಭಿಮಾನವನ್ನು ಇದು ಪರೋಕ್ಷವಾಗಿ ಸೂಚಿಸುತ್ತದೆ. ಹೀಗೆ ಎರಡೂ ಧರ್ಮಗಳ ಸಂಕರವನ್ನು ಅಥವಾ ಧರ್ಮಸಾಮರಸ್ಯ ಈ ನಾಮಗಳಲ್ಲಿ ಕಾಣಬರುವುದರಿಂದ ಇಂಥ ಹೆಸರುಗಳನ್ನು ಮಿಶ್ರನಾಮಗಳು ಎಂದು ಕರೆಯಬಹುದು. ಕ್ರಿಶ್ಚಿಯನ್ನರಲ್ಲಿ ಇಂಗ್ಲಿಶ್ ಹೆಸರುಗಳು ಭಾರತೀಯ ಹೆಸರುಗಳೊಂದಿಗೆ ಸೇರಿಕೊಂಡ ಜಂಟಿ ಹೆಸರುಗಳಿವೆ. ಉದಾಹರಣೆಗೆ ಸ್ಯಾಮುಯಲ್ ಅಪ್ಪಾಜಿ, ವಿಲಿಯಮ್ ಭಾಸ್ಕರ್, ಚಾರ್ಲೆಟ್ ಕಸ್ತೂರಿಬಾಯಿ, ಜಾರ್ಜ್‌ಪುಷ್ಪ, ವಿಲಿಯಮ್ ಅನಸೂಯ, ನವೀನ್ ನೊನ್ನಾತಸೆ, ಎಡ್ಮಂಡ್ ಸುಧೀರ್, ಪ್ರದೀಪ್ ಅಲೋಶಿಯಸ್ ಸಿಕ್ವೇರಾ, ನಿವೇದಿತಾ ಫಿಲೋಮಿನಾ ಲೋಬೋ, ಜ್ಯೋತಿ ಥಾಮಸ್ ಇತ್ಯಾದಿ. ಇಂತಹ ಹೆಸರುಗಳು ಪ್ರಾಟೆಸ್ಟೆಂಟರಲ್ಲಿ ಹೆಚ್ಚು ಕಂಡುಬರುವುದೂ ಸ್ವಾಭಾವಿಕವೇ"[೨] ಈ ಬಗೆಯ ನಾಮಗಳು ಹೆಚ್ಚಾಗಿ ವಿದ್ಯಾವಂತ ಪ್ರೊಟೆಸ್ಟೆಂಟ್ ಪಂಥಕ್ಕೆ ಸೇರಿದವರಲ್ಲಿ ಮಾತ್ರ ಎಂಬುದು ಗಮನಾರ್ಹ ಸಂಗತಿಯಾಗಿದೆ. ನಿದರ್ಶನಕ್ಕೆ ಕೆಲವು ಹೆಸರುಗಳನ್ನು ಇಲ್ಲಿ ನೋಡಬಹುದು.

| ಪುರುಷ ಹೆಸರು | ಸ್ತ್ರೀ ಹೆಸರು |
|---|---|
| ‘ಅ’ | ‘ಬ’ |
| ಜಾಯ್ಸ್ ವಿಜಯಕುಮಾರ್ | ಆಯಲಿಸ್ ಅನುಪಮ |
| ಸ್ಟಾನ್ ಲೀ ಮದನ್ ಕುಮಾರ್ | ಆಯನ್ನಾ ನಳಿನಿ |
| ಲಾರೆನ್ಸ್ ವಿಜಯವರ್ಧನ್ | ಮಾರ್ಗರೇಟ್ ಜ್ಯೋತಿ |
| ರಿಚರ್ಡ್ಸ್ ಅರುಣ್ ಕುಮಾರ್ | ಮೇರಿ ಕಮಲ |
| ಆಲ್ಫ್ರೆಡ್ ಅನಿಲ್ | ಥೆರೇಜ ಮೀನಾ |
| ಜಾನ್ ಮೋಹನ್ | |
| ಪೀಟರ್ ಸುಭಾಷ್ | |
| ‘ಕ’ | ‘ಡ’ |
| ಅಜಯ್ ಮ್ಯಾಥ್ಯೂ | ಅನಿತಾ ಬೊಥೆಲ್ಲೋ |
| ಅನಿಲ್ ಮಾರ್ಷಲ್ | ಅನಿತಾ ಜಾಯ್ಸ್ |
| ಕರುಣಾಕರ ರೊನಾಲ್ಡ್ | ಚೇತನ ಮಾರ್ಥಾ |
| ಅಜಾನ್ ಕಮಲ ಮೇರಿ | |

ಮೇಲೆ ‘ಅ’, ‘ಬ’, ‘ಕ’, ‘ಡ’ ಎಂಬ ನಾಲ್ಕು ಗುಂಪುಗಳಿವೆ. ‘ಅ’ ಮತ್ತು ‘ಕ’ ಪಟ್ಟಿಯ ಹೆಸರುಗಳು ಪುರುಷ ಹೆಸರುಗಳಾದರೆ, ‘ಬ’ ಮತ್ತು ‘ಡ’ ಪಟ್ಟಿಯ ಹೆಸರುಗಳು ಸ್ತ್ರೀ ಹೆಸರುಗಳಾಗಿವೆ. ‘ಅ’ ಮತ್ತು ‘ಬ’ ಗುಂಪಿನ ಪುರುಷ ಮತ್ತು ಸ್ತ್ರೀ ಹೆಸರುಗಳಲ್ಲಿ ಕ್ರಿಶ್ಚಿಯನ್ ಮೂಲದ ಹೆಸರುಗಳು ಮೊದಲ ಭಾಗದಲ್ಲಿದ್ದು, ಕೊನೆಯಲ್ಲಿ ಕನ್ನಡ ಮೂಲದ ಹೆಸರುಗಳಿವೆ. ‘ಕ’ ಮತ್ತು ‘ಡ’ ಗುಂಪಿನ ಪುರುಷ ಮತ್ತು ಸ್ತ್ರೀ ಹೆಸರುಗಳಲ್ಲಿ ಮೊದಲು ಕನ್ನಡ ಮೂಲದ ಹೆಸರುಗಳಿದ್ದು, ಕೊನೆಯಲ್ಲಿ ಕ್ರಿಶ್ಚಿಯನ್ ಮೂಲದ ಹೆಸರುಗಳಿವೆ. ಈ ಬಗೆಯ ನಾಮರಚನೆಗಳು ವ್ಯಕ್ತಿಯ ವೈಯಕ್ತಿಕ ಹಿತಾಸಕ್ತಿಯನ್ನು ಅವಲಂಬಿಸಿ ರಚನೆಯಾಗುತ್ತಿರಬಹುದಾದರೂ ಇದಕ್ಕೆ ಸಾಮಾಜಿಕ ಕಾರಣಗಳೂ ಇರಬಹುದು. ಕೆಲವು ಸ್ತ್ರೀ ವ್ಯಕ್ತಿನಾಮಗಳು ಕ್ರಿಶ್ಚಿಯನ್ ಮೂಲದ ನಿರ್ದಿಷ್ಟ ಮತ್ತು ಕನ್ನಡ ಸಂಬಂಧಸೂಚಕ ವಾರ್ಗಿಕಗಳು ಸೇರಿ ಆಗಿರುವುದು ಕಂಡುಬರುತ್ತದೆ. ಉದಾಹರಣೆಗೆ

| | |
|---|---|
| ಮರಿಯಮ್ಮ (< ಮೇರಿ) | ಥೆರೇಜಮ್ಮ (< ಥೆರೇಜ) |
| ರೋಜಮ್ಮ (< ರೋಜ) | ರೀಟಮ್ಮ (< ರೀಟ) |
| ಗೌರಮ್ಮ (< ಗ್ರೇಸಿ) | |

ಹೀಗೆ ಕ್ರಿಶ್ಚಿಯನ್ ಮೂಲದ ಹೆಸರಿಗೆ ಕನ್ನಡದ ವಾರ್ಗಿಕವನ್ನು ಅಂಟಿಸಿಕೊಳ್ಳುತ್ತಿರುವುದು ಗ್ರಾಮೀಣ ಪರಿಸರದ, ಅನಕ್ಷರಸ್ಥ ಅಥವಾ ಹೆಚ್ಚು ಶಿಕ್ಷಣವಂಥರಲ್ಲದ ಹೆಣ್ಣುಮಕ್ಕಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಸ್ತ್ರೀಯರಲ್ಲಿ ಕಂಡುಬಂದಂತೆ ಪುರುಷರಲ್ಲಿ ಈ ಬಗೆಯ ಹೆಸರುಗಳು ಇರುವುದು ಪ್ರಸ್ತುತ ಅಧ್ಯಯನದ ಗಮನಕ್ಕೆ ಬಂದಿರುವುದಿಲ್ಲ.

## ಭಾವನಾಮಗಳು

ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ಹೊಂದಿದಾಗ ಅದರ ಕುರುಹಿಗಾಗಿ ಮೂಲ ಹೆಸರನ್ನು ಬಿಟ್ಟು ಇನ್ನೊಂದು ಹೆಸರನ್ನು ಧರಿಸುತ್ತಾರೆ. ಹೀಗೆ ಇನ್ನೊಂದು ಹೆಸರನ್ನು ಪಡೆದುಕೊಳ್ಳುವಾಗ ಕ್ರಿಶ್ಚಿಯನ್ ಧರ್ಮಮೂಲದ ಹೆಸರನ್ನು ಪಡೆಯದೆ, ಹಿಂದೂ ಧರ್ಮಸೂಚಕ ಹೆಸರನ್ನು ಉಳಿಸಿಕೊಳ್ಳದೆ ಅಮೂರ್ತವಾದ ಭಾವನಾಮಗಳನ್ನು ಧರಿಸುತ್ತಾರೆ. "ಕ್ರಿಶ್ಚಿಯನ್ ಜಂಟಿ ಹೆಸರುಗಳಲ್ಲಾಗಲಿ, ಶುದ್ಧ ಭಾರತೀಯ ಹೆಸರುಗಳಲ್ಲಾಗಲೀ ಇಂದು ಪೂಜೆಗೊಳ್ಳುತ್ತಿರುವ ಹಿಂದೂ ದೇವತೆಗಳ ಹೆಸರುಗಳಿಲ್ಲದಿರುವುದು ಗಮನಿಸಬೇಕಾದ ಸಂಗತಿ, ಭಾರತೀಯ ಕ್ರಿಶ್ಚಿಯನ್ನರು ಹಿಂದೂ ಧರ್ಮವನ್ನು ಹೊರತುಪಡಿಸಿ, ಒಟ್ಟು ಭಾರತೀಯ ಸಂಸ್ಕೃತಿಗೆ ತಮ್ಮನ್ನು ತಾವು ಸಂಬಂಧಿಸಿಕೊಂಡಿರುವುದರ ಸ್ಪಷ್ಟ ಸಂಕೇತವಿದು."[೧೬] ಅಂದರೆ ಈ ಹೆಸರುಗಳು ಯಾವುದೇ ಜಾತಿ, ಧರ್ಮಕ್ಕೆ ಸೇರುವುದಿಲ್ಲ. ಇವು ಅಮೂರ್ತ ರೂಪದವುಗಳಾಗಿರುವುದರಿಂದ ಜಾತ್ಯಾತೀತವೂ, ಧರ್ಮಾತೀತವೂ ಆಗಿರುತ್ತವೆ. ಇಂಥ ಹೆಸರುಗಳು ಕನ್ನಡ ಭಾಷಾಪರಿಸರದಲ್ಲಿ ಬಳಕೆಯಲ್ಲಿದ್ದರೂ, ಪರಿವರ್ತಿತ ಕನ್ನಡಿಗ ಕ್ರಿಶ್ಚಿಯನ್ನರಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಉದಾಹರಣೆಗೆ ಕೆಲವು ಹೆಸರುಗಳನ್ನು ಗಮನಿಸಬಹುದು.

| ಪುರುಷ ಹೆಸರು | ಸ್ತ್ರೀ ಹೆಸರು |
|---|---|
| ಕೃಷ್ಣಮೂರ್ತಿ > ಸತ್ಯಮೂರ್ತಿ | ಗೌರಮ್ಮ > ಲಲಿತ |
| ರಾಮಮೂರ್ತಿ > ಶುಭಮೂರ್ತಿ | ಲೀಲಾವತಿ > ಪಂಕಜ |
| ಶಶಿಧರ > ಆತ್ಮಾನಂದ | ಸೀತಮ್ಮ > ತೃಪ್ತಿ |
| ಭೀಮಣ್ಣ > ನವೀನ್ ಮೂರ್ತಿ | ಪಾರ್ವತಿ > ಪ್ರೇಮ |
| ಕರಿಯಪ್ಪ > ಕರುಣಾಕರ | ಲಕ್ಷ್ಮಿದೇವಿ > ಸ್ನೇಹ |
| ಮಹದೇವಯ್ಯ > ಜ್ಞಾನಪ್ರಕಾಶ್ | ತಿಪ್ಪಮ್ಮ > ಮಮತ |
| ಮಹೇಶ > ನವೀನ್ ಪ್ರಕಾಶ್ | ರಾಮಕ್ಕ > ಕಮಲ |
| ಓಬಳೇಶ > ಪ್ರೇಮಾನಂದ | ಶಿವಮ್ಮ > ಸುಪ್ರಿಯ |
| ಕೇಶವಮೂರ್ತಿ > ಚೇತನ್ ಕುಮಾರ್ | ಜಾನಕಮ್ಮ > ಸಹನಾ |

ಚಿತ್ರದುರ್ಗ ಪರಿಸರದಲ್ಲಿ ಮಧ್ಯಮ ಮತ್ತು ಮೇಲ್ ಮಧ್ಯಮ ಜನಾಂಗಗಳಲ್ಲಿ ಈ ಹೆಸರುಗಳು ಹೆಚ್ಚು ಕಂಡುಬರುತ್ತವೆ. ಅದೇ ರೀತಿ ಹೈದ್ರಾಬಾದ್ ಕರ್ನಾಟಕದಲ್ಲಿ ಹಿಂದುಳಿದ ವರ್ಗಗಳಲ್ಲಿ ಜಾಸ್ತಿ ಕಂಡುಬಂದರೆ, ಹಳೇ ಮೈಸೂರು ಪ್ರದೇಶಗಳಲ್ಲಿ ಒಕ್ಕಲಿಗ ಮತ್ತು ಲಿಂಗಾಯತ ಸಮುದಾಯವರಲ್ಲಿ ಹೆಚ್ಚು ಕಾಣಬರುತ್ತವೆ. ಈ ಬಗೆಯ ಭಾವನಾಮಗಳು ಹಿಂದೂಗಳಲ್ಲಿ ಸಾಮಾನ್ಯವಾದರೂ ಪರಿವರ್ತಿತ ಕನ್ನಡಿಗ ಕ್ರಿಶ್ಚಿಯನ್ ಸಮುದಾಯಗಳಲ್ಲಿ ವಿಶೇಷವಾಗಿ ಕಂಡುಬರುತ್ತವೆ.

## ಇತರೆ

ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ಹೊಂದಿದರೂ ಕೆಲವರು ತಮ್ಮ ಹೆಸರಿನಲ್ಲಿ ಯಾವುದೇ ಬದಲಾವಣೆಯನ್ನು ಮಾಡಿಕೊಳ್ಳುವುದಿಲ್ಲ. ಆಚಾರ-ವಿಚಾರಗಳಲ್ಲಿ ಮಾತ್ರ ಆ ಧರ್ಮದವರಾಗಿರುತ್ತಾರೆ. ಈ ವರ್ಗದ ಜನರು ನಗರ ಪರಿಸರಕ್ಕಿಂತ ಗ್ರಾಮೀಣ ಪರಿಸರದಲ್ಲಿ ಹೆಚ್ಚು ಕಂಡುಬರುತ್ತಾರೆ. ತಿಪ್ಪೇಸ್ವಾಮಿ, ಕರಿಯಮ್ಮ, ಮಲ್ಲಮ್ಮ, ಪಾಪಮ್ಮ ಎಂಬುವವರು ಕನ್ನಡ ಭಾಷಾಪರಿಸರದವರಾಗಿದ್ದು, ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಂಡರೂ ತಮ್ಮ ಹೆಸರನ್ನು ಹಾಗೆಯೇ ಮುಂದುವರೆಸಿಕೊಂಡು ಹೋಗುತ್ತಾರೆ.

## ೩.೮ ವ್ಯಕ್ತಿನಾಮ ದ್ವೀಪಗಳು

ಭಾರತೀಯರ ಬದುಕಿನಲ್ಲಿ ದೈವ ಮತ್ತು ಧರ್ಮ ಎನ್ನುವಂಥದ್ದು ತುಂಬಾ ಹಾಸು ಹೊಕ್ಕಾಗಿ ಬಂದಿದೆ. ಇವರ ಬಹುಪಾಲು ಸಂಗತಿಗಳಿಗೆ ಅದು ಪ್ರೇರಣೆಯೂ, ಪ್ರಭಾವವೂ ಆಗಿರುವಂತೆ ಅವರ ವ್ಯಕ್ತಿನಾಮಗಳ ಮೇಲೆ ಇದರ ಛಾಪು ತುಂಬಾ ದಟ್ಟವಾಗಿ ಆಗಿರುವುದು ಕಂಡುಬರುತ್ತದೆ. ಹೆಸರು ಕೇಳಿದ ತಕ್ಷಣವೆ, ಆ ಹೆಸರು ಯಾವ ಜಾತಿಗೆ, ಯಾವ ಪ್ರದೇಶಕ್ಕೆ ಸೇರಿದುದು ಎಂಬುದನ್ನು ಗುರುತಿಸಲು ಸಾಧ್ಯವಾಗುತ್ತಿರುವುದು ಪ್ರಾಯಶ: ಆ ಸಮುದಾಯದ ಇಲ್ಲವೆ ಸ್ಥಳೀಯ ಪ್ರಭಾವೀ ದೈವಗಳಿಂದ ಪ್ರೇರಣೆಗೊಂಡ ಹೆಸರುಗಳಿಂದಲೇ ಎಂಬುದು ಗಮನಾರ್ಹ ಸಂಗತಿಯೆನಿಸಿದೆ. ಮೈಸೂರು ಪರಿಸರದ 'ಮಾದೇಶ್ವರ'ನ ಪ್ರಭಾವದಿಂದ ಮಾದೇವ, ಮಹದೇವ, ಬಿಜಾಪುರ, ಬಾಗೇವಾಡಿ ಪರಿಸರದಲ್ಲಿ ಬಸವಣ್ಣನ ಪ್ರಭಾವದಿಂದ ಬಸವ, ಬಸವರಾಜ, ಗುಲ್ಬರ್ಗಾ ಪರಿಸರದ ಶರಣಬಸವೇಶ್ವರರ ಪ್ರಭಾವದಿಂದ ಶರಣಪ್ಪ, ಶರಣಬಸಪ್ಪ, ಶರಣಮ್ಮ, ಶರಣಬಸಮ್ಮ, ಮೈಲಾರ ಪರಿಸರದ ಮೈಲಾರಲಿಂಗನ ಪ್ರಭಾವದಿಂದ ಮೈಲಾರ, ಮೈಲಾರಪ್ಪ, ಸಂಡೂರಿನ ಕುಮಾರಸ್ವಾಮಿಯ ಪ್ರಭಾವದಿಂದ ಕುಮಾರಸ್ವಾಮಿ, ಷಣ್ಮುಖ, ಕಾರ್ತೀಕ ಎಂಬ ಹೆಸರುಗಳು, ಆ ಕ್ಷೇತ್ರದ ಸುತ್ತಮುತ್ತಲಿನ ಜನರಲ್ಲಿ ತುಂಬಾ ದಟ್ಟವಾಗಿ ಕಂಡುಬರುತ್ತವೆ. ಇಂಥ ಪ್ರಭಾವೀ ದೈವಗಳ ಹೆಸರುಗಳನ್ನು ಸಮಾಜದ ಬೇರೆ ಬೇರೆ ವರ್ಗದವರು ಸಾಮಾಜಿಕ ಚೌಕಟ್ಟುಗಳನ್ನು ಮೀರಿ ನಿರ್ದೇಶಿಸಿಕೊಳ್ಳುತ್ತಿರುವುದನ್ನು ಗಮನಿಸಬಹುದು. ಹೀಗೆ ಒಂದು ಧಾರ್ಮಿಕ ಕೇಂದ್ರದ ಸುತ್ತ, ಆ ಹೆಸರುಗಳು ಹೆಚ್ಚು ದಟ್ಟವಾಗಿ ಕಾಣಬರುವಂಥದನ್ನೇ ಪ್ರಸ್ತುತ ಅಧ್ಯಯನದಲ್ಲಿ "ವ್ಯಕ್ತಿನಾಮದ್ವೀಪ" ಎಂದು ಪರಿಭಾವಿಸಿಕೊಳ್ಳಲಾಗಿದೆ. 'ವ್ಯಕ್ತಿನಾಮದ್ವೀಪ' ಎಂಬ ಪದವನ್ನು 'ದಟ್ಟವಾಗಿರುವುದು' ಅಥವಾ ಹೇರಳವಾಗಿರುವುದು ಎಂಬ ಪದಕ್ಕೆ ಸಂವಾದಿಯಾಗಿ ಬಳಸಲಾಗಿದೆ. ಈ ಹಿನ್ನೆಲೆಯೊಂದಿಗೆ ಚಿತ್ರದುರ್ಗ ಪರಿಸರದಲ್ಲಿ ಇಂಥ ಅನೇಕ ಪ್ರಭಾವೀ ದೈವಗಳು ಅಲ್ಲಿನ ಜನರ ಹೆಸರುಗಳ ಮೇಲೆ ಗಮನಾರ್ಹವಾದ ಪರಿಣಾಮವನ್ನು ಉಂಟುಮಾಡಿವೆ. ಇಂಥ ಕೆಲವು ನಿದರ್ಶನಗಳನ್ನು ಕುರಿತು ಇಲ್ಲಿ ಚರ್ಚಿಸಲಾಗುವುದು.

ಒಂದು ಹೆಸರು ವಿಭಿನ್ನ ಜನಸಂಸ್ಕೃತಿಗಳಲ್ಲಿ ಪ್ರೇರಣೆ ಪಡೆದಿದ್ದರೂ, ಆ ಎಲ್ಲಾ ಸಂಸ್ಕೃತಿಗಳು ಆ ಹೆಸರನ್ನು ಒಂದೇ ರೂಪದಲ್ಲಿ ಸ್ವೀಕರಿಸುವುದಿಲ್ಲ. ಸಾಮಾಜಿಕ ಅಂತರಗಳಿಗೆ ಅನುಗುಣವಾಗಿ ವಿಭಿನ್ನ ರೂಪಗಳಲ್ಲಿ ಬಳಸಲ್ಪಡುತ್ತದೆ. ಡಾ. ಎಂ.ಎಂ.ಕಲಬುರ್ಗಿ ಅವರು ದಾಖಲಿಸುವ ಸಿದ್ಧನಗೌಡ ಪಾಟೀಲ '-ನಾ' ಬಸ್ಯಾ ಅಂತ. ಎಂಬ ಪದ್ಯದ ಸಾಲುಗಳನ್ನು ಇಲ್ಲಿ ಉಲ್ಲೇಖಿಸಬಹುದು.

"ಆ ಅಯ್ಯನಾರ ಹುಡುಗ
'ಬಸಯ್ಯ' ಅಂತ
ಗೌಡರ ಹುಡುಗ
ಬಸವನಗೌಡ ಅಂತ.
ಬಣಜಗೇರು (ಉಳಿದ ಲಿಂಗಾಯಿತ್ರ ಹುಡುಗ್ರು)
ಬಸವರಾಜ ಅಂತ
ಆ ಕುರುಬರ ಹುಡುಗ
'ಬಸಪ್ಪ' ಅಂತ
ನಾ 'ಬಸ್ಯಾ' ಅಂತ
ಯಾಕಂದ್ರ ನಾ ಹೊಲ್ಯಾ ಅಂತ."[೧೪]

ಮೇಲಿನ ಹೆಸರು ಸಾಮಾಜಿಕ ಅಂತರಗಳನ್ನು ಸೂಕ್ಷ್ಮವಾಗಿ ಬಿಂಬಿಸುವುದನ್ನು ಗಮನಿಸಬಹುದು. ಮುಂದಿನ ವಿಶ್ಲೇಷಣೆಯಲ್ಲಿ ಕೆಲವು ಕಡೆ ಇಂಥ ವ್ಯತ್ಯಾಸಗಳು ಕಾಣಬರದಿದ್ದರೂ, ಬಹುತೇಕ ಕಡೆಗಳಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

## ತಿಪ್ಪೇರುದ್ರಸ್ವಾಮಿ

ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲೂಕಿನ ನಾಯ್ಕನಹಟ್ಟಿ ಪ್ರಸಿದ್ಧ ಧಾರ್ಮಿಕ ಕೇಂದ್ರವಾಗಿದೆ. ಇಲ್ಲಿನ ದೈವ ತಿಪ್ಪೇರುದ್ರಸ್ವಾಮಿ. ಇದನ್ನು ತಿಪ್ಪೇಸ್ವಾಮಿ, ತಿಪ್ಪೇರುದ್ರಸ್ವಾಮಿ, ನಾಯ್ಕನಹಟ್ಟಿ ತಿಪ್ಪಯ್ಯ, ತಿಪ್ಪೇಶ ಎಂದೆಲ್ಲಾ ಜನ ಕರೆಯುವುದುಂಟು. 'ನಾಯ್ಕನಹಟ್ಟಿ ತಿಪ್ಪೇಸ್ವಾಮಿ' ಎಂದೇ ಹೆಚ್ಚು ಪ್ರಸಿದ್ಧಿಯಾಗಿರುವ ಈ ದೈವಕ್ಕೆ ಸುತ್ತಮುತ್ತಲಿನ ನೂರಾರು ಮೈಲುಗಳ ದೂರದವರೆಗೂ ಒಕ್ಕಲು, ಭಕ್ತರು ಇದ್ದಾರೆ. ಒಕ್ಕಲು ಮತ್ತು ಹರಕೆ ಮಾಡಿಕೊಳ್ಳುವ ಅನೇಕ ಜನರು ತಮ್ಮ ಮಕ್ಕಳಿಗೆ ತಿಪ್ಪೇಸ್ವಾಮಿ, ತಿಪ್ಪಯ್ಯ, ತಿಪ್ಪಣ್ಣ, ತಿಪ್ಪೇಶ್, ತಿಪ್ಪಮ್ಮ, ತಿಪ್ಪಕ್ಕ, ತಿಪ್ಪಮ್ಮ ಎಂದೆಲ್ಲಾ ಹೆಸರಿಟ್ಟಿದ್ದಾರೆ. ಜಾತ್ಯಾತೀತವಾಗಿ ಬೆಳೆದುಬಂದಿರುವ ಈ ಕ್ಷೇತ್ರದ ದೈವದ ಹೆಸರು ಎಲ್ಲಾ ಸಂಸ್ಕೃತಿಗಳಲ್ಲಿ ಕಾಣಬರುತ್ತಿರುವುದು ಕುತೂಹಲಕರವಾದ ಸಂಗತಿಯಾಗಿದೆ. ಬ್ರಾಹ್ಮಣ ಸ್ತ್ರೀ ವ್ಯಕ್ತಿನಾಮಗಳನ್ನು ಬಿಟ್ಟರೆ, ಸಮಾಜದ ಎಲ್ಲಾ ಜಾತಿಯ ಪುರುಷ ಮತ್ತು ಸ್ತ್ರೀಯರಲ್ಲಿ 'ತಿಪ್ಪೇಸ್ವಾಮಿ' ಹೆಸರು ಬಳಕೆಯಲ್ಲಿರುವುದು ಕ್ಷೇತ್ರಕಾರ್ಯದ ಮೂಲಕ ತಿಳಿದುಬಂದಿದೆ. ಬ್ರಾಹ್ಮಣ ಸ್ತ್ರೀಯರಲ್ಲಿ ಈ ಹೆಸರು ಇರಬಹುದಾದರೂ ಪ್ರಸ್ತುತ ಅಧ್ಯಯನದ ಗಮನಕ್ಕೆ ಬಂದಿರುವುದಿಲ್ಲ. ಎಲ್ಲಾ ಜಾತಿ ಜನಾಂಗಗಳು ಈ ಹೆಸರನ್ನು ಇಟ್ಟುಕೊಂಡರು, ಮೇಲ್ಜಾತಿ ಮೇಲ್ವರ್ಗಗಳಲ್ಲಿ ಇದರ ಬಳಕೆ ಅಲ್ಪಪ್ರಮಾಣದಲ್ಲಿದ್ದರೆ, ಕೆಳಜಾತಿ ಮತ್ತು ಕೆಳವರ್ಗಗಳಲ್ಲಿ ವಿಪುಲವಾಗಿರುವುದು ಕಂಡುಬರುತ್ತದೆ. ತಲೆಮಾರುಗಳ ವಿಧಿ-ವಿಧಾನಗಳಲ್ಲಿ ಈ ಹೆಸರಿನ ಬಳಕೆಯ ಪ್ರಮಾಣವನ್ನು ಗಮನಿಸಿದಾಗ ಮೂರನೆಯ ತಲೆಮಾರಿನವರಲ್ಲಿ ಕಡಿಮೆಯಿದ್ದು, ೨ನೆಯ ಮತ್ತು ೧ನೆಯ ತಲೆಮಾರಿನವರಲ್ಲಿ ಅಧಿಕವಾಗಿದೆ. ಪುರುಷ ವ್ಯಕ್ತಿನಾಮಗಳಿಗಿಂತ ಸ್ತ್ರೀ ವ್ಯಕ್ತಿನಾಮಗಳಲ್ಲಿ ಈ ಬದಲಾವಣೆ ಪ್ರಕ್ರಿಯೆ ಅಧಿಕವಾಗಿರುವುದು ಗಮನಾರ್ಹ ಸಂಗತಿಯಾಗಿದೆ. ಮತ್ತು

ಈ ಪರಿಸರದ ಸಮೀಪದವರಿಗಿಂತ, ದೂರದವರಲ್ಲಿ ಕಡಿಮೆಯಾಗುತ್ತಿರುವ ಪ್ರಮಾಣ ಅಧಿಕವಾಗಿರುವುದು ಕ್ಷೇತ್ರಕಾರ್ಯದ ಮೂಲಕ ತಿಳಿದುಬಂದಿರುವ ಸಂಗತಿಯಾಗಿದೆ. ಎಲ್ಲಾ ಜನಾಂಗದವರೂ ಈ ಹೆಸರನ್ನು ಅನುಸರಿಸುತ್ತಾರೆ ಎಂಬ ಅಂಶವನ್ನು ಈ ಹಿಂದೆ ಚರ್ಚೆ ಮಾಡಲಾಗಿದೆ. ಕುತೂಹಲದ ಸಂಗತಿ ಎಂದರೆ ಒಂದೇ ಹೆಸರನ್ನು ಸಮಾಜದ ವಿವಿಧ ಜನ ವರ್ಗಗಳು ಇಟ್ಟುಕೊಂಡರೂ, ನಿರ್ದೇಶನ ಮಾಡಿಕೊಂಡಿರುವ ಹೆಸರಿನ ರೂಪಗಳು ಬೇರೆ ಬೇರೆಯಾಗಿರುತ್ತವೆ. ಈ ಭಿನ್ನ ನಾಮರೂಪಗಳಿಂದ ಸಾಮಾಜಿಕ ಸ್ತರ ಮತ್ತು ಜಾತಿಗಳನ್ನು ಗುರುತಿಸಬಹುದು. ಸಾಮಾಜಿಕ ಸ್ತರಗಳಿಗನುಗುಣವಾಗಿಯೇ ಈ ವ್ಯತ್ಯಾಸಗಳು ಸಂಭವಿಸಿರುತ್ತವೆ. ಈ ವ್ಯತ್ಯಾಸಗಳೇ ಆಯಾ ಸಮುದಾಯವನ್ನು ಪ್ರತ್ಯೇಕಿಸಲು ನೆರವಾಗುತ್ತವೆ.

'ತಿಪ್ಪೇಸ್ವಾಮಿ' ಎಂಬ ಹೆಸರು ಬೇರೆ ಬೇರೆ ಸಮುದಾಯಗಳಲ್ಲಿ ಯಾವ ರೂಪಗಳಲ್ಲಿ ಬಳಕೆಯಾಗುತ್ತದೆ. ಸ್ತ್ರೀ ಮತ್ತು ಪುರುಷ ಹೆಸರುಗಳಲ್ಲಿ ಈ ಹೆಸರಿನ ಸಾಧ್ಯತೆಗಳನ್ನು ತಿಳಿಯಲು ಕೆಲವು ಉದಾಹರಣೆಗಳನ್ನು ಗಮನಿಸಬಹುದು.

ಪುರುಷರಲ್ಲಿ

ತಿಪ್ಪೇಸ್ವಾಮಿ : ಲಿಂಗಾಯತ
ನಾಯಕ
ಮಾದಿಗ
ಗೊಲ್ಲ
ಕುರುಬ
ಮಡಿವಾಳ
ಜಂಗಮ
ಭೋವಿ - ಇತ್ಯಾದಿ

ತಿಪ್ಪಯ್ಯ : ನಾಯಕ
ಜಂಗಮ
ಕುರುಬ
ಗೊಲ್ಲ
ಲಿಂಗಾಯತ - ಇತ್ಯಾದಿ

ತಿಪ್ಪಣ್ಣ : ಲಿಂಗಾಯತ
ನಾಯಕ
ಗೊಲ್ಲ
ಕುರುಬ
ಮಡಿವಾಳ - ಇತ್ಯಾದಿ

ತಿಪ್ಪೇಶಾಚಾರಿ : ವಿಶ್ವಕರ್ಮ

ತಿಪ್ಪೇಶಾಚಾರ್ಯ : ಬ್ರಾಹ್ಮಣ

ತಿಪ್ಪೇಶ್ ರಾವ್ : ಮರಾಠ

ಬ್ರಾಹ್ಮಣ

ತಿಪ್ಪಾರೆಡ್ಡಿ : ರೆಡ್ಡಿ

ಲಿಂಗಾಯತ (ರೆಡ್ಡಿ ಲಿಂಗಾಯತರಲ್ಲಿ)

ತಿಪ್ಪೇಶಗೌಡ : ಲಿಂಗಾಯತ

ಒಕ್ಕಲಿಗ

ತಿಪ್ಪಾನಾಯ್ಕ : ಲಂಬಾಣಿ

ತಿಪ್ಪೇಶ್ ನಾಯ್ಕ

ತಿಪ್ಪಾನಾಯಕ : ನಾಯಕ

ತಿಪ್ಪೇರುದ್ರ : ಮಾದಿಗ/ನಾಯಕ

ತಿಪ್ಪೇರುದ್ರಪ್ಪ : ಲಿಂಗಾಯತ

ನಾಯಕ

ಮಾದಿಗ

ತಿಪ್ಪೇರುದ್ರಯ್ಯ : ಜಂಗಮ

ನಾಯಕ

ಸ್ತ್ರೀಯರಲ್ಲಿ

ತಿಪ್ಪಮ್ಮ : ನಾಯಕ

ಲಿಂಗಾಯತ

ಒಕ್ಕಲಿಗ

ಮಡಿವಾಳ

ಭೋವಿ

ಗೊಲ್ಲ

ಕುರುಬ

ವಿಶ್ವಕರ್ಮ

ಮಾದಿಗ

ತಿಪ್ಪವ್ವ : ನಾಯಕ

ಮಾದಿಗ

ಲಿಂಗಾಯತ

ತಿಪ್ಪಕ್ಕ : ನಾಯಕ
ಮಾದಿಗ
ಭೋವಿ
ಮಡಿವಾಳ
ಕುರುಬ
ಗೊಲ್ಲ

ತಿಪ್ಪಾಬಾಯಿ : ಲಂಬಾಣಿ
ಮರಾಠ

'ತಿಪ್ಪೇಸ್ವಾಮಿ'ಯನ್ನು ರುದ್ರಮುನಿ, ರುದ್ರಯ್ಯ ಎಂಬ ನಾಮಗಳಿಂದಲೂ ಕರೆಯುತ್ತಾರೆ. ಈ ಹೆಸರುಗಳು ಸಾಮಾನ್ಯವಾಗಿ ಜಂಗಮ ಮತ್ತು ಲಿಂಗಾಯತರ ಪುರುಷರಲ್ಲಿ ಹೆಚ್ಚಾಗಿ ಬಳಕೆಯಲ್ಲಿರುವುದು ಕಂಡುಬರುತ್ತದೆ.

೨೦.೧೨.೨೦೦೧ ರಂದು "ಕ್ಷೇತ್ರಕಾರ್ಯ ಮಾಡಲು ಚಳ್ಳಕೆರೆಗೆ ಹೋದಾಗ ನಾಯ್ಕನಹಟ್ಟಿಗೆ ಹೋಗಲು ಬಸ್ ನಿಲ್ದಾಣದಲ್ಲಿ ಬಸ್ಸಿಗಾಗಿ ಕಾಯುತ್ತಿದ್ದೆ. 'ತಿಪ್ಪೇಸ್ವಾಮಿ' ಹೆಸರಿನ ನನ್ನ ಸ್ನೇಹಿತನೊಬ್ಬ ಪಕ್ಕದ ರಸ್ತೆಯ ಮೇಲೆ ಹೋಗುತ್ತಿದ್ದ. ನಾನು ನಿಂತಿದ್ದ ಜಾಗದಿಂದಲೇ ಅವನನ್ನು ಹೆಸರಿಡಿದು ಎರಡು ಸಲ ಕೂಗಿದೆ. 'ತಿಪ್ಪೇಸ್ವಾಮಿ' ಎಂಬ ಹೆಸರು ಕೇಳಿದೊಡನೆ ಅಲ್ಲಿ ನೆರೆದಿದ್ದ ಜನರಲ್ಲಿ ಹತ್ತನ್ನೆರಡು ಜನ ಕುತೂಹಲದಿಂದ ನನ್ನ ಕಡೆ ತಿರುಗಿ ನೋಡಿದರು. ನಾನು ಕೆಲವರ ಬಳಿ ಹೋಗಿ ಹೆಸರು ಕೇಳಿದೆ. ಆಶ್ಚರ್ಯದ ಸಂಗತಿಯೆಂದರೆ ಅವರೆಲ್ಲರ ಹೆಸರು 'ತಿಪ್ಪೇಸ್ವಾಮಿ' ಎಂಬುದೇ ಆಗಿತ್ತು. ಅವರಲ್ಲಿ ಲಿಂಗಾಯತ, ನಾಯಕ, ಕುರುಬ, ಗೊಲ್ಲ, ಕ್ಷೌರಿಕ ಹೀಗೆ ಬೇರೆ ಬೇರೆ ಸಮಾಜಕ್ಕೆ ಸೇರಿದವರಾಗಿದ್ದುದು ತಿಳಿದುಬಂದಿತು." ಇದರಿಂದ 'ತಿಪ್ಪೇಸ್ವಾಮಿ' ಎಂಬ ಹೆಸರು ಆ ಪರಿಸರದ ವ್ಯಕ್ತಿನಾಮಗಳಲ್ಲಿ ದಟ್ಟವಾಗಿದ್ದು, ಅದು ಬೇರೆ ಬೇರೆ ಸಮಾಜಗಳಲ್ಲೂ ಬಳಕೆಯಾಗುತ್ತಿರುವುದು ಈ ಮೂಲಕ ಗೊತ್ತಾಗುತ್ತದೆ.

**ಕೊಟ್ಟೂರು - ಬಸವೇಶ್ವರ**

ಬಳ್ಳಾರಿ ಜಿಲ್ಲೆಯ ಕೊಟ್ಟೂರು (ಕೂಡ್ಲಿಗಿ ತಾಲೂಕು) ಪ್ರಾದೇಶಿಕವಾಗಿ ಪ್ರಸಿದ್ಧ ಧಾರ್ಮಿಕ ಸಂಸ್ಕೃತಿಯ ಕೇಂದ್ರವಾಗಿದೆ. ಇದು ಚಿತ್ರದುರ್ಗ ಪರಿಸರಕ್ಕೆ ಹೆಚ್ಚು ಸಾಮಿಪ್ಯದಲ್ಲಿದ್ದು, ಕೊಟ್ಟೂರಿನ ಪ್ರಭಾವ ಈ ಭಾಗದ ನೆಲೆಗಳ ಮೇಲೂ ಪ್ರಭಾವ ಬೀರಿದೆ. ಅಂದರೆ, ಚಿತ್ರದುರ್ಗ ಪರಿಸರದ ಅನೇಕ ಮೈಲುಗಳ ವ್ಯಾಪ್ತಿಯೊಳಗೆ ಕೊಟ್ಟೂರು ಬಸವೇಶ್ವರನ ಹೆಸರನ್ನು ಜನ ಇಟ್ಟುಕೊಂಡಿರುವುದು ಕಾಣಬರುತ್ತದೆ. ಈ ಕಾರಣಕ್ಕಾಗಿ ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ಈ ವಿಷಯವನ್ನು ಚರ್ಚಿಸಲಾಗಿದೆ. ಮತ್ತು ಕೆಲವು ಸಂಗತಿಗಳಿಗಾಗಿ ಇದನ್ನು 'ವ್ಯಕ್ತಿನಾಮ ದ್ವೀಪ' ಎಂದು ಗುರುತಿಸಿಕೊಂಡು ವಿಶೇಷ ಗಮನ ನೀಡಲಾಗಿದ್ದು, ಸ್ಥಳೀಯವಾಗಿ ಹಾಗೂ ಅಕ್ಕ-ಪಕ್ಕದ ನೆಲೆಗಳಲ್ಲಿ ಜನರ ಹೆಸರುಗಳಲ್ಲಿ ಇದರ ಪರಿಣಾಮವನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ವ್ಯಕ್ತಿಯ ಹೆಸರನ್ನು ಸ್ಥಳಕ್ಕೆ, ಸ್ಥಳದ ಹೆಸರನ್ನು ವ್ಯಕ್ತಿಗೆ ನಿರ್ದೇಶನ ಮಾಡುವುದು ಕನ್ನಡದ ಸಂದರ್ಭಕ್ಕೆ ಹೊಸದೇನೂ ಅಲ್ಲ. ಇದಕ್ಕೆ ಚಾರಿತ್ರಿಕ ಮಹತ್ವವಿದೆ. ಹೀಗೆ ಪರಸ್ಪರ ಒಂದರ ಹೆಸರನ್ನು ಇನ್ನೊಂದು ಪಡೆಯುವ ಈ ಪ್ರಕ್ರಿಯೆಯ ಎರಡೂ ಸನ್ನಿವೇಶಗಳೂ ಕೂಡ ಮಹತ್ತರವಾದ ಸಂದರ್ಭಗಳನ್ನೇ ಹೊಂದಿರುತ್ತವೆ. ಸಾಮಾನ್ಯವಾಗಿ ಸ್ಥಳನಾಮ ಆಧಾರಿತ ವ್ಯಕ್ತಿನಾಮ, ವಾಸ್ತವವಾಗಿ ಸ್ಥಳನಾಮದ ಹೆಸರಾಗಿರದೆ, ಆ ಸ್ಥಳದ ದೈವದ ಹೆಸರೇ ಆಗಿರುತ್ತದೆ ಎಂಬುದು ಗಮನಾರ್ಹ. ಒಂದು ಪ್ರದೇಶದಲ್ಲಿ ಹೆಸರುವಾಸಿಯಾದ ದೈವವನ್ನು ಆ ಸ್ಥಳದ ಹೆಸರಿನ ಮೂಲಕವೇ ಗುರುತಿಸುವುದು ಕನ್ನಡ ಪರಿಸರದಲ್ಲಿ ರೂಢಿಯಲ್ಲಿರುವ ಉಪಕ್ರಮವಾಗಿದೆ. "ಚಳ್ಳೇರಮ್ಮ, ಮುಸ್ಸೂರಪ್ಪ, ಕುರುಗೋಡಪ್ಪ, ಯಡೆಯೂರಪ್ಪ ಎಂಬ ಹೆಸರುಗಳನ್ನು ಗಮನಿಸಬಹುದು." ಈ ಹೆಸರುಗಳು ಒಂದು ಸ್ಥಳವನ್ನು ಸೂಚಿಸಿದರೂ ಸಹ ಆಯಾ ಪ್ರದೇಶದ ದೈವವನ್ನೇ ಧ್ವನಿಸುತ್ತವೆ. 'ಕೊಟ್ಟೂರಪ್ಪ > ಕೊಟ್ರಪ್ಪ, ಕೊಟ್ರಯ್ಯ ಎಂಬ ಹೆಸರುಗಳೂ ಇದೇ ಆಶಯವನ್ನು ಹೊಂದಿರುವಂಥವುಗಳು. ಕೊಟ್ರಪ್ಪ, ಕೊಟ್ರಯ್ಯ ಎಂಬ ಹೆಸರುಗಳು ಅಲ್ಲಿನ ದೈವ ಬಸವೇಶ (ಬಸವೇಶ್ವರ)ನ ಪ್ರಭಾವದಿಂದ ಬಂದಿದ್ದು, ಅವು ಬಸಪ್ಪ, ಬಸಯ್ಯ ಎಂಬ ಹೆಸರಿನ ಸಾದೃಶ್ಯ ರೂಪಗಳೇ ಆಗಿವೆ. ಕೊಟ್ಟೂರಿನ ಬಸವೇಶ್ವರ, ಕೊಟ್ರೇಶ/ಕೊಟ್ರೇಶಿ ಎಂಬ ಹೆಸರಿನಿಂದಲೇ ಹೆಚ್ಚು ಪ್ರಸಿದ್ಧಿ ಪಡೆದಿದೆ. ಸುತ್ತಲ ಪ್ರದೇಶದ ಜನರ ಜೀವನಕ್ರಮದ ಮೇಲೆ ಈ ದೈವದ ಪ್ರಭಾವ ಆಗಿರುವುದು ತಿಳಿದುಬರುತ್ತದೆ. ವ್ಯಕ್ತಿನಾಮಗಳಲ್ಲಿ ಇದೊಂದು ವಿಶೇಷ ಅಂಶವೆಂದೇ ಭಾವಿಸಬಹುದು. ಜನರ ಹೆಸರುಗಳಲ್ಲಿ ಈ ದೈವನಾಮ ಹೆಚ್ಚು ಪ್ರಭಾವ ಬೀರಿದೆ. ಜಂಗಮ ಮತ್ತು ಲಿಂಗಾಯತ ಜನಾಂಗದವರು ಈ ದೇವರಿಗೆ ವಿಶೇಷ ಭಕ್ತರಾಗಿದ್ದರೂ, ಬೇರೆ ಬೇರೆ ಜಾತಿ ಜನಾಂಗದವರೂ ಕೂಡ ಅಧಿಕ ಪ್ರಮಾಣದಲ್ಲಿ ಈ ದೇವರಿಗೆ ಭಕ್ತರಾಗಿರುವುದರಿಂದ, ಸಹಜವಾಗಿಯೇ ಎಲ್ಲಾ ಸಮುದಾಯಗಳ ಮೇಲೆ ಪ್ರಭಾವವಿದೆ. ಇದರಿಂದಾಗಿ ತಮ್ಮ ಮಕ್ಕಳಿಗೆ ಈ ದೈವದ ಹೆಸರನ್ನು ನಿರ್ದೇಶನ ಮಾಡಿದ್ದಾರೆ. ಯಾರಲ್ಲಿ ಎಷ್ಟೆಷ್ಟು ಪ್ರಭಾವ ಆಗಿದೆ, ಮತ್ತು ಒಂದೇ ಹೆಸರನ್ನು ಭಿನ್ನ ಸಮಾಜದವರು ಅನುಸರಿಸುವಾಗ, ತಮ್ಮ ಸಾಮಾಜಿಕ ಸ್ತರಗಳಿಗೆ ಅನುಗುಣವಾಗಿ ಯಾವ ರೀತಿ ಇಟ್ಟುಕೊಳ್ಳುತ್ತಾರೆ ಎಂಬುದನ್ನು ಇಲ್ಲಿ ಚರ್ಚಿಸಲಾಗುವುದು.

೧. 

| 'ಅ' ಪಟ್ಟಿ | 'ಬ' ಪಟ್ಟಿ |
|---|---|
| ಪುರುಷರಲ್ಲಿ | ಸ್ತ್ರೀಯರಲ್ಲಿ |
| ಕೊಟ್ರಪ್ಪ - ಕೊಟ್ಟೂರಪ್ಪ | ಕೊಟ್ಟಮ್ಮ - ಕೊಟ್ಟೂರಮ್ಮ |
| ಕೊಟ್ರಯ್ಯ - ಕೊಟ್ಟೂರಯ್ಯ | ಕೊಟ್ರಕ್ಕ - ಕೊಟ್ಟೂರಕ್ಕ |
| ಕೊಟ್ರೇಶ - ಕೊಟ್ಟೂರು ಈಶ | ಕೊಟ್ರವ್ವ - ಕೊಟ್ಟೂರವ್ವ |

ಇವು ಒಂದೇ ಹೆಸರಿನ ಭಿನ್ನ ರೂಪಗಳು. ಅ ಮತ್ತು ಬ ಪಟ್ಟಿಯಲ್ಲಿನ ಪುರುಷ ಮತ್ತು ಸ್ತ್ರೀ ಹೆಸರುಗಳು ಮೇಲ್ಜಾತಿ ಮತ್ತು ಕೆಳಜಾತಿ ಎರಡೂ ವರ್ಗಗಳಲ್ಲೂ ಬಳಕೆಯಲ್ಲಿವೆ. ಮೇಲ್ಜಾತಿಯ ಜಂಗಮ ಮತ್ತು ಲಿಂಗಾಯತರ ಮಧ್ಯೆ ಈ ಸಂಬಂಧವನ್ನು ಗಮನಿಸಿದರೆ ಲಿಂಗಾಯತರಲ್ಲಿ ಈ ರೂಪಗಳು ಅಧಿಕವಾಗಿರುವುದು ಕಂಡುಬರುತ್ತದೆ. ಮೇಲ್ಜಾತಿ ಮತ್ತು ಕೆಳಜಾತಿ ಎರಡು ಭಿನ್ನವರ್ಗಗಳಲ್ಲಿ ಇದರ ಪ್ರಭಾವದ ಪ್ರಮಾಣ ಹೆಚ್ಚು ಕಡಿಮೆಯಿದ್ದರೂ, ಇಬ್ಬರಲ್ಲೂ ಇವೇ ರೂಪಗಳು ಬಳಕೆಯಲ್ಲಿವೆ. ತಲೆಮಾರುಗಳ ಅಂತರದಲ್ಲಿ ಈ

ಹೆಸರಿನ ಪ್ರಕ್ರಿಯೆಯನ್ನು ಗಮನಿಸಿದಾಗ ಒಂದು ಮತ್ತು ಎರಡನೆಯ ತಲೆಮಾರಿನವರಲ್ಲಿ ಹೆಚ್ಚು ಕಡಿಮೆ ಇದರ ಪ್ರಭಾವ ಒಂದೇ ರೀತಿಯಲ್ಲಿದ್ದು, ಮೂರನೆಯ ತಲೆಮಾರಿನವರಲ್ಲಿ ಕಡಿಮೆಯಾಗಿದೆ. ಕೊಟ್ರಪ್ಪ, ಕೊಟ್ರಯ್ಯ ಎಂಬ ರೂಪಗಳು ಹಳೆಯ ತಲೆಮಾರಿನವರಲ್ಲಿ ಇದ್ದರೆ, ಕೊಟ್ರೇಶಿ/ಕೊಟ್ರೇಶ ಎಂಬ ರೂಪಗಳು ಹೊಸ ತಲೆಮಾರಿನವರಲ್ಲಿ ಹೆಚ್ಚು ಕಂಡುಬರುತ್ತವೆ.

೨. 

| 'ಅ' ಪಟ್ಟಿ | 'ಬ' ಪಟ್ಟಿ |
|---|---|
| ಕೊಟ್ರಬಸಪ್ಪ | ಕೊಟ್ರಬಸಮ್ಮ |
| ಕೊಟ್ರಬಸಯ್ಯ | ಕೊಟ್ರಬಸವ್ವ |
| ಕೊಟ್ರಗೌಡ | ಕೊಟ್ರಬಸಕ್ಕ |

ಮೇಲಿನ ಎರಡು ಪಟ್ಟಿಗಳ ಹೆಸರುಗಳು ಸಾಮಾನ್ಯವಾಗಿ ಜಂಗಮ ಮತ್ತು ಲಿಂಗಾಯತ ಜನಾಂಗದವರ ಹೆಸರುಗಳಲ್ಲಿ ಮಾತ್ರ ಕಂಡುಬರುತ್ತಿವೆ. ಈ ಹಿಂದೆ ಹೇಳಿದ ಹಾಗೆ ಹಳೆಯ ತಲೆಮಾರಿನವರಲ್ಲಿ ಇದ್ದಷ್ಟು ತೀವ್ರತೆ ಹೊಸ ತಲೆಮಾರಿನ ಜನರಲ್ಲಿ ಇರುವುದಿಲ್ಲ. ಕ್ರಮೇಣವಾಗಿ ಕಡಿಮೆಯಾಗುತ್ತಾ ಬರುತ್ತಿವೆ. ಮೊದಲ ಪಟ್ಟಿ ಮತ್ತು ಎರಡನೆಯ ಪಟ್ಟಿಯ ಹೆಸರುಗಳನ್ನು ಗಮನಿಸಿದಾಗ ಸಾಮಾಜಿಕ ಸ್ತರಗಳಿಗೆ ಅನುಗುಣವಾಗಿ ಬಳಕೆಯಾಗಿರುವುದು ಸ್ಪಷ್ಟಪಡುತ್ತದೆ. 'ಕೊಟ್ರೇಶಾಚಾರಿ' ಎಂಬ ಹೆಸರು ವಿಶ್ವಕರ್ಮ ಜಾತಿಯವರಲ್ಲಿ ಇದ್ದದ್ದು ಕಂಡುಬಂದಿದೆ.

ಚಿತ್ರದುರ್ಗ ಪರಿಸರದ (ಗಡಿಪ್ರದೇಶಗಳಲ್ಲಿ) ಅನೇಕ ಮೈಲುಗಳ ವ್ಯಾಪ್ತಿಯಲ್ಲಿ ಈ ನಾಮದ ಬಳಕೆ ಆಗಿರುವುದು ತಿಳಿದುಬರುತ್ತದೆ. ಪ್ರಾದೇಶಿಕವಾಗಿ ಮತ್ತು ಚಿತ್ರದುರ್ಗ ಭಾಗದಲ್ಲಿ ಈ ಹೆಸರಿನ ಪ್ರಸರಣವನ್ನು ಗಮನಿಸಿದರೆ, ಗಡಿಭಾಗಗಳಲ್ಲಿ ಇದರ ಪ್ರಭಾವ ಪ್ರಾದೇಶಿಕ ವಲಯಕ್ಕಿಂತ ಕಡಿಮೆಯಿದೆ. ಈ ಎರಡು ಪರಿಸರಗಳಲ್ಲಿ ಈ ಹೆಸರಿನ ಬಳಕೆಯ ಸಾಧ್ಯತೆಗಳ ಹಲವು ಆಯಾಮಗಳನ್ನು ಜಾತಿ, ಲಿಂಗ ಮತ್ತು ತಲೆಮಾರುಗಳ ಮೂಲಕ ಹೀಗೆ ಗುರುತಿಸಬಹುದು.

### ಕೊಟ್ಟೂರು ಪರಿಸರ

ಕೋಷ್ಟಕ - ೧

| ತಲೆಮಾರು | ಮೇಲ್ಜಾತಿಗಳಲ್ಲಿ | | ಕೆಳಜಾತಿಗಳಲ್ಲಿ | |
|---|---|---|---|---|
| | ಗಂಡು | ಹೆಣ್ಣು | ಗಂಡು | ಹೆಣ್ಣು |
| ೧ | ೨೫ | ೧೪ | ೧೬ | ೮ |
| ೨ | ೧೮ | ೬ | ೧೧ | ೫ |
| ೩ | ೦೮ | ೩ | ೪ | ೨ |

ಕೋಷ್ಟಕ - ೨

| ತಲೆಮಾರು | ಮೇಲ್ಜಾತಿಗಳಲ್ಲಿ | | ಕೆಳಜಾತಿಗಳಲ್ಲಿ | |
|---|---|---|---|---|
| | ಗಂಡು | ಹೆಣ್ಣು | ಗಂಡು | ಹೆಣ್ಣು |
| ೧ | ೧೫ | ೬ | ೬ | ೫ |
| ೨ | ೭ | ೫ | ೫ | ೨ |
| ೩ | ೪ | ೨ | ೩ | ೦ |

ಕೋಷ್ಟಕ (೧ ಮತ್ತು ೨) ಒಂದು ಮತ್ತು ಎರಡು ಕ್ರಮವಾಗಿ ಕೊಟ್ಟೂರು ಮತ್ತು ಚಿತ್ರದುರ್ಗ ಪರಿಸರದಲ್ಲಿ ಕೊಟ್ಟೂರು ದೈವದ ಹೆಸರಿನ ಪ್ರಭಾವವನ್ನು ಸೂಚಿಸುತ್ತವೆ. ಎರಡೂ ಕೋಷ್ಟಕಗಳನ್ನು ತುಲನೆಮಾಡಿ ನೋಡಿದಾಗ ಪ್ರಾದೇಶಿಕವಾಗಿ ಇದರ ಪ್ರಭಾವ, ಚಿತ್ರದುರ್ಗ ಪರಿಸರಕ್ಕಿಂತ ಅಧಿಕವಾಗಿದೆ. ಜಾತಿವಾರು ನೆಲೆಗಳಲ್ಲಿಯೂ ಕೂಡ ಇದರ ಪ್ರಭಾವ ಹೆಚ್ಚಿದೆ. ಚಿತ್ರದುರ್ಗ ಪರಿಸರದ ಮೇಲ್ಜಾತಿ ಮತ್ತು ಕೆಳಜಾತಿಗಳಲ್ಲಿ ಇದರ ಪ್ರೇರಣೆ-ಪ್ರಭಾವವನ್ನು ಗಮನಿಸಿದಾಗ ಕೆಳಜಾತಿಗಳಿಗಿಂತ, ಮೇಲ್ಜಾತಿಯವರಲ್ಲಿ ವ್ಯಾಪಕವಾಗಿದೆ. ಸ್ತ್ರೀಯರಿಗಿಂತ ಪುರುಷ ಹೆಸರುಗಳಲ್ಲಿ ಈ ದೈವದ ಹೆಸರುಗಳು ಹೆಚ್ಚಿನ ಮಟ್ಟದಲ್ಲಿದ್ದು, ತಲೆಮಾರುಗಳ ಅಂತರದಲ್ಲಿ, ಈ ಹೆಸರಿನ ಬಳಕೆಯ ಕ್ರಮದಲ್ಲಿ ವ್ಯತ್ಯಾಸಗಳು ಇರುವುದನ್ನು ಗಮನಿಸಬಹುದು. ಮೇಲ್ಜಾತಿಯ ಪುರುಷರ ಒಂದನೆಯ ತಲೆಮಾರಿನ ಹೆಸರುಗಳಲ್ಲಿ ಶೇಕಡ ೧೫ರಷ್ಟು ಇದ್ದರೆ, ಎರಡು ಮತ್ತು ಮೂರನೆಯ ತಲೆಮಾರಿನವರಲ್ಲಿ ಶೇಕಡ ೭ ಮತ್ತು ೪ ರಷ್ಟಿರುವುದು ತಿಳಿದುಬರುತ್ತದೆ. ಸ್ತ್ರೀಯರಲ್ಲಿ ಒಂದನೆಯ ತಲೆಮಾರಿನವರಲ್ಲಿ ಅಧಿಕವಾಗಿದ್ದು, ನಂತರದ ತಲೆಮಾರುಗಳಲ್ಲಿ ಇದರ ಪ್ರಭಾವ ಕಡಿಮೆಯಾಗುತ್ತಾ ಬಂದಿದೆ. ಸ್ತ್ರೀಯರಿಗಿಂತ ಪುರುಷರಲ್ಲಿ ಇದರ ಪರಿಣಾಮ ಗಾಢವಾಗಿದ್ದು, ಪುರುಷ ಮತ್ತು ಸ್ತ್ರೀ ಇಬ್ಬರಲ್ಲೂ, ಕ್ರಮೇಣವಾಗಿ ತಲೆಮಾರುಗಳಲ್ಲಿ ಈ ಹೆಸರಿನ ಬಳಕೆ ಹಿಂದಕ್ಕೆ ಸರಿಯುತ್ತಿವೆ. ಮೇಲ್ಜಾತಿಗಳಿಗಿಂತ ಕೆಳಜಾತಿಗಳಲ್ಲಿ ಇದರ ಪ್ರಭಾವ ಒಟ್ಟಾರೆಯಾಗಿ ಕಡಿಮೆ ಆಗಿದೆ. ಕೆಳಜಾತಿಗಳಲ್ಲಿ ಸ್ತ್ರೀಯರಿಗಿಂತ ಪುರುಷರಲ್ಲಿ ಇದರ ಪ್ರಭಾವ ಹೆಚ್ಚು. ಇವರಲ್ಲಿಯೂ ಕೂಡ ಕಾಲಕ್ರಮೇಣ ಕಡಿಮೆಯಾಗುತ್ತಾ ಬಂದಿದ್ದು ಹೊಸ ತಲೆಮಾರಿನವರಲ್ಲಿ ಇದರ ಬಳಕೆ ಕಡಿಮೆಯಾಗುತ್ತಿರುವುದು ಸ್ಪಷ್ಟವಾಗುತ್ತದೆ. ಪುರುಷರಲ್ಲಿ ಕೇವಲ ಶೇಕಡ ೩ರಷ್ಟು ಮಾತ್ರ ಇದ್ದು, ಸ್ತ್ರೀಯರಲ್ಲಿ ಇದರ ಬಳಕೆ ಸಂಪೂರ್ಣವಾಗಿ ಕೈಬಿಟ್ಟು ಹೋಗಿರುವುದು ಕೋಷ್ಟಕದಿಂದ ತಿಳಿದುಬರುತ್ತದೆ. ಸಮಕಾಲೀನ ಸಂದರ್ಭದಲ್ಲಿ ಚಿತ್ರದುರ್ಗ ಪರಿಸರದ ಕೆಳಜಾತಿಯ ಮಹಿಳೆಯರಲ್ಲಿ ಇದರ ಪ್ರಭಾವ ಸಂಪೂರ್ಣವಾಗಿ ಹಿಂದಕ್ಕೆ ಸರಿದಿದೆ. ಮೇಲ್ಜಾತಿ ಮತ್ತು ಕೆಳಜಾತಿ ಎರಡು ವರ್ಗದವರಲ್ಲಿಯೂ ಈ ಹೆಸರಿನ ಬಳಕೆ ಕಡಿಮೆಯಾಗುತ್ತಿರುವುದಕ್ಕೆ ಜನರಲ್ಲಿ ದೇವರ ಮೇಲಿನ ನಂಬಿಕೆ ಕಡಿಮೆಯಾಗುತ್ತಿದೆ ಎಂದು ನಿಶ್ಚಿತವಾಗಿ ಹೇಳುವುದು ಕಷ್ಟ. ಈ ಬದಲಾವಣೆ ಪ್ರಕ್ರಿಯೆಗೆ ಬೇರೆ ಬೇರೆ ಕಾರಣಗಳು ಇರಲೂ ಸಾಧ್ಯ ಇದೆ. ಇಲ್ಲಿನ ವಿವರಗಳು ದತ್ತ ಮಾಹಿತಿಯನ್ನು ಆಧರಿಸಿದ್ದರೂ, ವಾಸ್ತವವಾಗಿ ಅಲ್ಪಮಟ್ಟಿನ ವ್ಯತ್ಯಾಸಗಳೂ ಇರಬಹುದು.

## ನುಂಕೆಮಲೆ ಸಿದ್ದೇಶ್ವರ

ಮೊಳಕಾಲ್ಮೂರು ತಾಲೂಕಿನ 'ನುಂಕೆಮಲೆ' ಮೊದಲು ನಾಥಪಂಥದ ಒಂದು ಕೇಂದ್ರವಾಗಿತ್ತು ಎಂಬುದಾಗಿ ತಿಳಿದುಬರುತ್ತದೆ. ಇಂದು ಇದು ಈ ಭಾಗದ ಪ್ರಸಿದ್ಧ ಧಾರ್ಮಿಕ ಕ್ಷೇತ್ರವಾಗಿ ಹೆಸರು ಪಡೆದಿದೆ. ನುಂಕೆಮಲೆ ಸಿದ್ದೇಶ್ವರ (ನುಂಕಪ್ಪ) ಎಂಬ ಹೆಸರಿನಿಂದಲೇ ಪ್ರಸಿದ್ಧಿ ಪಡೆದಿರುವ ಈ ಕ್ಷೇತ್ರಕ್ಕೆ ಭೈರವ, ಕಾಲಭೈರವ, ಸಿದ್ದಪ್ಪ, ರಸಾಸಿದ್ಧ ಎಂಬ ಇತರ ಹೆಸರುಗಳಿಂದಲೂ ಕರೆಯಲಾಗುತ್ತದೆ. ಮೇಲ್ಜಾತಿಯ ಬ್ರಾಹ್ಮಣರನ್ನು ಬಿಟ್ಟರೆ, ಈ ಭಾಗದ ಉಳಿದೆಲ್ಲ ಜಾತಿ ಜನಾಂಗದವರು ಈ ಕ್ಷೇತ್ರಕ್ಕೆ ಅಥವಾ ಈ ದೇವರಿಗೆ ನಡೆದುಕೊಳ್ಳುತ್ತಿರುವುದು ಕಂಡುಬರುತ್ತದೆ. ಮಾದಿಗ ಮತ್ತು ನಾಯಕ ಜನಾಂಗದವರಿಗೆ ಈ ದೇವರ ಪೂಜೆ, ಆಚರಣೆಗಳಲ್ಲಿ ವಿಶೇಷ ಸ್ಥಾನಮಾನಗಳಿದ್ದು, ಕೆಳ ಸಮುದಾಯಗಳಲ್ಲಿ ಇದರ ಪ್ರಭಾವ ಗಮನಾರ್ಹವಾಗಿದೆ. ಇಲ್ಲಿನ ಜನರ ಆಚಾರ-ವಿಚಾರಗಳಲ್ಲಿ ಈ ದೈವದ ಪ್ರಭಾವವನ್ನು ಕಾಣುವಂತೆ, ವ್ಯಕ್ತಿನಾಮಗಳ ಮೇಲೂ ಇದರ ಪ್ರಭಾವ ಗಮನಾರ್ಹವಾದುದಾಗಿದೆ. ಈ ದೈವದ ಹೆಸರನ್ನು ಬೇರೆ ಬೇರೆ ಸಮುದಾಯಗಳು ತಮ್ಮ ತಮ್ಮ ನಂಬಿಕೆಗಳಿಗೆ ಅನುಗುಣವಾಗಿ ನಿರ್ದೇಶಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ.

ನುಂಕಪ್ಪ, ನುಂಕಣ್ಣ, ಸಿದ್ದಪ್ಪ, ಸಿದ್ದಣ್ಣ ಮತ್ತು ನುಂಕವ್ವ, ನುಂಕಮ್ಮ, ಸಿದ್ದವ್ವ, ಸಿದ್ದಮ್ಮ ಎಂಬ ಹೆಸರುಗಳು ಸಾಮಾನ್ಯವಾಗಿ ಎಲ್ಲಾ ಜಾತಿಯ ಪುರುಷ ಮತ್ತು ಸ್ತ್ರೀಯರಲ್ಲಿ ಬಳಕೆಯಲ್ಲಿವೆ. ಆದರೂ ಲಿಂಗಾಯತ, ಒಕ್ಕಲಿಗ, ಕುರುಬ ಜಾತಿಗಳಿಗಿಂತ ಕೆಳಸಮುದಾಯವರಲ್ಲಿ ಈ ಹೆಸರಿನ ಪ್ರಭಾವ ದಟ್ಟವಾಗಿರುವುದು ಕಂಡುಬರುತ್ತದೆ. ಮತ್ತು ಈ ಹೆಸರಿನ ಬಳಕೆ ಯಾವುದೇ ಜಾತಿಯ ಒಂದು ಮತ್ತು ಎರಡನೆ ತಲೆಮಾರಿನವರಲ್ಲಿ ಅಧಿಕವಾಗಿದ್ದು ಹೊಸ ತಲೆಮಾರಿನವರಲ್ಲಿ ಕಡಿಮೆಯಾಗಿದೆ. ಮೂರನೆಯ ತಲೆಮಾರಿನವರಲ್ಲಿ ಈ ಹೆಸರು ಹೊಸಕಾಲದ ಅಗತ್ಯಕ್ಕೆ ಅನುಗುಣವಾಗಿ ಬದಲಾವಣೆಗೊಂಡಿರುವುದು ತಿಳಿದುಬರುತ್ತದೆ. ನುಂಕೇಶ್, ನುಂಕನಗೌಡ ಎಂಬ ನಾಮಗಳು ಒಕ್ಕಲಿಗ ಮತ್ತು ಲಿಂಗಾಯತ ಸಮುದಾಯದ ಇತ್ತೀಚಿನವರಲ್ಲಿ ಕಂಡುಬಂದರೆ, 'ನುಂಕೇಶಿ', 'ಸಿದ್ದೇಶಿ' ಎಂಬ ನಾಮಗಳು ಕೆಳಸಮುದಾಯದ ಇತ್ತೀಚಿನವರಲ್ಲಿ ಕಂಡುಬರುತ್ತವೆ.

| A. ಮೇಲ್ಜಾತಿಗಳಲ್ಲಿ | B. ಕೆಳಜಾತಿಗಳಲ್ಲಿ |
|---|---|
| ನುಂಕೇಶ್ | ನುಂಕೇಶಿ |
| ನುಂಕನಗೌಡ | ಸಿದ್ದೇಶಿ |
| ಸಿದ್ದೇಶ್ | |
| ಸಿದ್ದನಗೌಡ | |

'A' ಪಟ್ಟಿಯಲ್ಲಿನ ಹೆಸರುಗಳು ಒಕ್ಕಲಿಗ ಮತ್ತು ಲಿಂಗಾಯತರಲ್ಲಿ ಹಾಗೂ 'B' ಪಟ್ಟಿಯ ಹೆಸರುಗಳು ಕೆಳಜಾತಿಯವರ ಮೂರನೆಯ ತಲೆಮಾರಿನವರ ಹೆಸರುಗಳಲ್ಲಿ ಬಳಕೆಯಲ್ಲಿವೆ. ಇದಕ್ಕೂ ಪೂರ್ವದಲ್ಲಿ ಅಥವಾ ಈ ರಚನೆಗಳು ಉಳಿದಂತೆ ಬೇರೆ ಸಮುದಾಯಗಳಲ್ಲಿ ಇಟ್ಟುಕೊಳ್ಳುವುದಿಲ್ಲವೆಂದಲ್ಲ. ಈ ಪರಿಸರದ ಅಥವಾ ಈ ವಯಸ್ಸಿನವರ ಹೆಸರುಗಳಲ್ಲಿ ಹೆಚ್ಚು ಬಳಕೆಯಲ್ಲಿವೆ ಎಂಬುದು ಗಮನಾರ್ಹವಾದುದು.

ಪುರುಷರು ಮೂಲರೂಪದ ಹೆಸರಿನಲ್ಲಿ ಅಲ್ಪಸ್ವಲ್ಪ ಬದಲಾವಣೆಗಳನ್ನು ಮಾಡಿಕೊಂಡು ಈ ಹೆಸರಿನ ಬಳಕೆಯನ್ನು ಹೊಸ ತಲೆಮಾರಿಗೆ ತಂದುಕೊಂಡಿರುವಂತೆ, ಸ್ತ್ರೀ ನಾಮಗಳಲ್ಲಿ ಈ ಬದಲಾವಣೆ ಪ್ರಕ್ರಿಯೆ ಕಂಡುಬಂದಂತೆ ತೋರುವುದಿಲ್ಲ. ಅಲ್ಲದೆ ಇದರ ಪ್ರಭಾವ ಪುರುಷರಲ್ಲಿ ಆಗಿರುವಷ್ಟು, ಸ್ತ್ರೀಯರಲ್ಲಿ ಆಗಿರುವುದಿಲ್ಲ.

ನಾಯಕ ಜನಾಂಗದವರಲ್ಲಿ ಈ ದೈವದ ಮೂಲಪರಂಪರೆಗೆ ಸಂಬಂಧಿಸಿದ ಹೆಸರುಗಳು ಈಗಲೂ ಬಳಕೆಯಲ್ಲಿರುವುದು ಕುತೂಹಲದ ಸಂಗತಿಯಾಗಿದೆ. ಉದಾಹರಣೆಗೆ

| ಪುರುಷ ಹೆಸರುಗಳು | ಸ್ತ್ರೀ ಹೆಸರುಗಳು |
|---|---|
| ಭೈರವ | ಭೋರಮ್ಮ (> ಬೋರಮ್ಮ) |
| ಕಾಲಭೈರವ | ಭೈಯ್ಯಮ್ಮ (> ಬೈಯಮ್ಮ) |
| ಭೋರಯ್ಯ (> ಬೋರಯ್ಯ) | |
| ಬೈಯಣ್ಣ - ಇತ್ಯಾದಿ | |

ಇಲ್ಲಿ ಹೆಸರಿಸಿರುವ ಮಾದರಿಗಳು ನಾಯಕ ಸಮುದಾಯದ ಪುರುಷ ಮತ್ತು ಸ್ತ್ರೀಯರಲ್ಲಿ ಮಾತ್ರ ಕಂಡುಬಂದಿದ್ದು, ಬೇರೆ ಸಮುದಾಯದವರಲ್ಲಿ ಇರುವುದು ಗಮನಕ್ಕೆ ಬಂದಿರುವುದಿಲ್ಲ. ಅಲ್ಲಲ್ಲಿ ಒಂದೆರಡು ನಿದರ್ಶನಗಳು ಇರಲೂಬಹುದು. ಮೊಳಕಾಲ್ಮೂರು ತಾಲೂಕಿನ ಪಶ್ಚಿಮಭಾಗದಲ್ಲಿ 'ಭೋರುವಯ್ಯ' ಹೆಸರಿನ ಒಂದು ದೈವವಿದೆ. ಭೋರವಯ್ಯ ಎಂಬುದು ಭೈರವದಿಂದಲೇ ಬಂದಿರುವ ಸಾಧ್ಯತೆಯಿದೆ. (ಭೈರವ > ಭೈರವಯ್ಯ > ಭೋರುವಯ್ಯ > ಭೋರಯ್ಯ > ಬೋರಯ್ಯ ಎಂದಾಗಿರಬೇಕು)

ಭೈಯಣ್ಣ, ಭೈಯ್ಯಮ್ಮ ಎಂಬ ಹೆಸರುಗಳು ಕೂಡ 'ಭೈರವ' ಎಂಬುದರಿಂದಲೇ ನಿಷ್ಪನ್ನಗೊಂಡಿರಬಹುದು. ಬೋರಯ್ಯ, ಬೋರಮ್ಮ, ಭೈಯ್ಯಣ್ಣ, ಭೈಯ್ಯಮ್ಮ ಎಂಬ ರೂಪಗಳು ಬಹಳ ದಟ್ಟವಾಗಿ ಬಳಕೆಯಲ್ಲಿದ್ದರೆ, ಭೈರವ, ಕಾಲಭೈರವ ಎಂಬುದು ತೀರ ತೆಳುವಾಗಿ ಅಲ್ಲಲ್ಲಿ ಕಂಡುಬರುತ್ತದೆ. ವಿಶೇಷವಾಗಿ ಹಳೆ ತಲೆಮಾರಿನವರಲ್ಲಿ ಈ ಹೆಸರುಗಳು ಕಾಣಿಸಿಕೊಳ್ಳುತ್ತಿದ್ದು, ಇತ್ತೀಚಿನವರ ಹೆಸರುಗಳಲ್ಲಿ ಇವುಗಳ ಬಳಕೆ ಕಡಿಮೆಯಾಗುತ್ತಿರುವುದನ್ನು ಗಮನಿಸಬಹುದು. (ಮೈಸೂರು, ಬೆಂಗಳೂರು ಪರಿಸರದ ಒಕ್ಕಲಿಗ, ಲಿಂಗಾಯತರಲ್ಲಿ ಭೋರೇಗೌಡ, ಭೋರಲಿಂಗಯ್ಯ ಎಂಬ ಹೆಸರುಗಳು ಬಳಕೆಯಲ್ಲಿರುವುದನ್ನು ಗಮನಿಸಬಹುದು)

'ಭೈರವ' ಮೂಲದ ಹೆಸರುಗಳು 'ನುಂಕೆಮಲೆ' ನಾಥಪಂಥ ಪರಂಪರೆಗೆ ಸೇರಿದುದು ಎಂದು ಹೇಳುವುದಕ್ಕೆ ಇರಬಹುದಾದ ಆಧಾರಗಳೆಂದೇ ಹೇಳಬಹುದು. ಈ ಅಂಶವನ್ನು ಗಮನದಲ್ಲಿರಿಸಿಕೊಂಡು ಹೇಳುವುದಾದರೆ ನಾಯಕ ಜನಾಂಗ ವೈಷ್ಣವ ಮತ್ತು ಶೈವ ಎರಡೂ ಸಾಂಸ್ಕೃತಿಕ ಚಹರೆಗಳನ್ನು ಮೈಗೂಡಿಸಿಕೊಂಡಿದೆ, ತನ್ನಲ್ಲಿ ಅಳವಡಿಸಿಕೊಂಡಿದೆ ಎಂದು ಹೇಳಬಹುದು.

'ನುಂಕೆಮಲೆ' ಈ ಪರಿಸರದ ಜನರ ಹೆಸರಿನ ಮೇಲೆ ದಟ್ಟವಾದ ಪ್ರಭಾವವನ್ನು ಉಂಟು ಮಾಡಿದ್ದರೂ ಈಚಿನವರಲ್ಲಿ ಇದರ ಬಳಕೆ ಕ್ರಮೇಣ ಕ್ಷೀಣಿಸುತ್ತಿರುವುದು ಕ್ಷೇತ್ರಕಾರ್ಯ ಮಾಹಿತಿಯಿಂದ ತಿಳಿದುಬರುತ್ತದೆ.

## ಮುರುಗರಾಜೇಂದ್ರ ಮಠ

ಚಿತ್ರದುರ್ಗದ 'ಬೃಹನ್ಮಠ' 'ಮುರುಗಮಠ'ವೆಂದೇ ಜನಪ್ರಿಯವಾಗಿದೆ. "ಕನ್ನಡ ನಾಡಿನಲ್ಲಿ ಗಂಡುಮೆಟ್ಟಿನ ಸ್ಥಳವೆಂದು ಪ್ರಸಿದ್ಧವಾಗಿರುವ 'ಚಿತ್ರದುರ್ಗ' ಪುರಾಣ, ಇತಿಹಾಸ ಮತ್ತು ಪುರಾತನ ಸಂಸ್ಕೃತಿಯಿಂದ ಪ್ರಖ್ಯಾತವಾಗಿದೆ. ಚಿತ್ರದುರ್ಗಕ್ಕೆ ಹಿರಿಮೆಯನ್ನು ತಂದುಕೊಟ್ಟವರೆಂದರೆ ಪುರಾಣದ ಹಿಡಂಬಿ, ಚರಿತ್ರೆಯ ಮದಕರಿನಾಯಕ ಮತ್ತು ಧಾರ್ಮಿಕ ಸಂಸ್ಕೃತಿಯ ಕೇಂದ್ರವಾದ ಬೃಹನ್ಮಠದ ಪೂಜ್ಯರು"[೧೯] ಎಂದು ಹೇಳಿರುವುದನ್ನು ಗಮನಿಸಿದರೆ ಈ ಮಠಕ್ಕೆ ಇರುವ ಮಹತ್ವ ಗೊತ್ತಾಗುತ್ತದೆ.

ಚಿತ್ರದುರ್ಗ ಸಂಸ್ಥಾನವನ್ನಾಳಿದ ಬಿಚ್ಚುಗತ್ತಿ ಭರಮಣ್ಣನಾಯಕನ ಕಾಲದಲ್ಲಿ ಶ್ರೀಮಠ ಸ್ಥಾಪನೆಯಾಗಿದೆ. ಶೂನ್ಯ ಸಿಂಹಾಸನದ ಗುರುಪರಂಪರೆಯಲ್ಲಿ ಬೆಳೆದುಬಂದಿರುವ ಈ ಮಠಕ್ಕೆ ಐತಿಹಾಸಿಕವಾದ ಮಹತ್ವವಿದೆ. ಶ್ರೀ ಶ್ರೀ ಶ್ರೀ ಶೂನ್ಯ ಸಿಂಹಾಸನಾಧೀಶ್ವರ ಶ್ರೀ ಮನ್ನಿರಂಜನ ಪ್ರಣವಸ್ವರೂಪಿ ಮುರುಗೇಂದ್ರ ರಾಜೇಂದ್ರ ಶ್ರೀ ಶಾಂತವೀರ ಮಹಾಸ್ವಾಮಿಗಳು ಈ ಮಠದ ಕಾರಣಕರ್ತರಾದುದರಿಂದ, 'ಮುರುಗಿ' ಸ್ವಾಮಿಗಳ ಮಠವೆನ್ನುವ ಅಭಿದಾನ ಶ್ರೀಮಠಕ್ಕೆ ನಡೆದುಬಂದಿದೆ. ರಾಜೇಂದ್ರ ಎನ್ನುವುದು ಶೂನ್ಯಸಿಂಹಾಸನದ ಅಲ್ಲಮನ ಗುರು ಅನಿಮಿಷನನ್ನು ನೆನಸುವುದಕ್ಕಾಗಿ ಸೇರಿದ್ದು, ಮುರುಗರಾಜೇಂದ್ರ ಎನ್ನುವ ಅಭಿಧಾನ ಶ್ರೀ ಸ್ವಾಮಿಗಳಿಗೆ, ಶ್ರೀಮಠಕ್ಕೆ ಅಂಟಿಕೊಂಡು ಉಳಿದಿದೆ. ಸಹಸ್ರಾರು ಜನರಿಗೆ ಆಶ್ರಯ ಒದಗಿಸಿರುವ, ಜ್ಞಾನದಾಸೋಹ, ಅನ್ನದಾಸೋಹಗಳನ್ನು ನೀಡುತ್ತಿರುವ ಶ್ರೀಮಠ ಸಹಜವಾಗಿಯೇ ಜನರ ಪ್ರೀತಿಗೆ ಪಾತ್ರವಾಗಿದೆ. ಜನಸಾಮಾನ್ಯರಿಗೆ ಆಶ್ರಯ ನೀಡಿರುವಂತೆ, ಜನರೂ ಇದರ ಪ್ರಭಾವಕ್ಕೆ ಒಳಗಾಗಿದ್ದೂ ಇದೆ. ಚಿತ್ರದುರ್ಗದ ಒಳ-ಹೊರಗೂ ಶ್ರೀಮಠದ ಪ್ರಭಾವವಿರುವುದು ಕಂಡುಬರುತ್ತದೆ. ಮಠದ ಪ್ರಭಾವ, ಪ್ರೇರಣೆ ಪಡೆದವರು ಶ್ರೀಸ್ವಾಮಿಗಳ ಅಭಿದಾನವನ್ನು ಮಕ್ಕಳಿಗೆ ನಿರ್ದೇಶನ ಮಾಡಿರುವುದು ಗಮನಾರ್ಹ ಸಂಗತಿಯಾಗಿದೆ. ಈ ಭಾಗದ ಸುತ್ತಮುತ್ತಲಿನ ಪುರುಷ ಮತ್ತು ಸ್ತ್ರೀಯರಲ್ಲಿ 'ಮುರುಗ' ಎಂಬ ಹೆಸರು ಬಳಕೆಗೊಂಡಿದೆ. ಇದರ ಪ್ರಭಾವ ಯಾವುದೇ ಒಂದು ಜಾತಿಯವರ ಮೇಲಾಗಿರದೆ, ಬೇರೆ ಬೇರೆ ಸಮಾಜಗಳಲ್ಲಿ ಇದರ ಪ್ರಭಾವ ಆಗಿದೆ. ಈ ಹೆಸರು ಭಿನ್ನ ಸಾಮಾಜಿಕ ಸಂದರ್ಭಗಳಲ್ಲಿ ಬಳಕೆಯಾದರೂ, ಇದರ ಬಳಕೆಯಲ್ಲಿ ಅಂಥ ವ್ಯತ್ಯಾಸಗಳೇನೂ ಕಂಡುಬರುವುದಿಲ್ಲ. ಮುರುಗಪ್ಪ, ಮುರುಗಣ್ಣ, ಮುರುಗಯ್ಯ, ಮುರುಗೇಶ, ಮುರುಗೇಂದ್ರ ಎಂಬ ರೂಪಗಳು ಪುರುಷರಲ್ಲಿ ಬಳಕೆಯಲ್ಲಿದ್ದರೆ, ಮುರುಗೆಮ್ಮ, ಮುರುಗೆವ್ವ ಎಂಬ ರೂಪಗಳು ಸ್ತ್ರೀ ಹೆಸರಲ್ಲಿ ಬಳಕೆಯಲ್ಲಿವೆ.

ಶ್ರೀಮಠ ವೀರಶೈವ ಜನಾಂಗಕ್ಕೆ ಸಂಬಂಧಪಟ್ಟಿರುವುದರಿಂದ ಸಹಜವಾಗಿಯೇ ಆ ಸಮುದಾಯವರ ಹೆಸರುಗಳ ಮೇಲೆ ಇದರ ಪ್ರಭಾವ ಅಧಿಕವಾಗಿದೆ. ಆದರೂ ಬೇರೆ ಬೇರೆ ಜನವರ್ಗಗಳಲ್ಲಿ ಈ ಹೆಸರಿನ ಬಳಕೆಯ ಸಾಧ್ಯತೆಗಳನ್ನು ಸ್ಥೂಲವಾಗಿ ಈ ರೀತಿ ಹೇಳಬಹುದು.

| ಪುರುಷ ಹೆಸರು | | ಸ್ತ್ರೀ ಹೆಸರು |
|---|---|---|
| A | B | C |
| ಮುರುಗಪ್ಪ | ಮುರುಗೇಶ | ಮುರಿಗೆಮ್ಮ |
| ಮುರುಗಣ್ಣ | ಮುರುಗೇಂದ್ರ | ಮುರಿಗೆವ್ವ |
| ಮುರಿಗಯ್ಯ | ಮುರುಗೇಂದ್ರಕುಮಾರ್ | |

ಮೇಲಿನ ಮೂರು ಪಟ್ಟಿಯ ಹೆಸರುಗಳು ಒಂದೇ ಹೆಸರಿನ ಬೇರೆ ಬೇರೆ ರೂಪಗಳು. ಮೊದಲ ಪಟ್ಟಿಯ ಹೆಸರುಗಳು ಲಿಂಗಾಯತ, ನಾಯಕ, ಕುರುಬ, ಗೊಲ್ಲ, ಮಾದಿಗ ... ಮುಂತಾದ ಜಾತಿಯವರಲ್ಲಿ ಬಳಕೆಯಲ್ಲಿವೆಯಾದರೂ 'ಮುರಿಗೆಪ್ಪ' ಎಂಬ ಹೆಸರು ಲಿಂಗಾಯತರಲ್ಲಿಯೂ ಮತ್ತು ಮುರುಗಣ್ಣ, ಮುರಿಗೆಯ್ಯ ಎಂಬ ರೂಪಗಳು ಸಾಮಾಜಿಕವಾಗಿ ಕೆಳಸ್ತರದ ಸಮುದಾಯದವರಲ್ಲಿಯೂ ಅಧಿಕವಾಗಿರುವುದನ್ನು ಗಮನಿಸಬಹುದು. ಮತ್ತು ಹಳೆಯ ತಲೆಮಾರುಗಳಲ್ಲೇ ಈ ರೂಪಗಳು ಬಳಕೆಯಲ್ಲಿದ್ದು, ಹೊಸ ತಲೆಮಾರಿನವರಲ್ಲಿ ಮರೆಯಾಗುತ್ತಿರುವುದು ಕಾಣಬರುತ್ತದೆ.

ಎರಡನೆಯ ಪಟ್ಟಿಯ ಹೆಸರುಗಳು ಕೆಳಸ್ತರದವರಿಗಿಂತ ಮೇಲ್ ಸಮುದಾಯದವರಲ್ಲಿ ಅಧಿಕವಾಗಿದ್ದು, ಹೊಸ ತಲೆಮಾರಿನವರಲ್ಲಿ ವಿಶೇಷವಾಗಿ ಕಂಡುಬರುತ್ತವೆ. ಹಳೆಯ ಹೆಸರನ್ನು ಅಲ್ಪ ಸ್ವಲ್ಪ ವ್ಯತ್ಯಾಸ ಮಾಡಿಕೊಂಡು ಹೊಸ ಸಮಾಜ ಸ್ವೀಕರಿಸುತ್ತಿರುವುದನ್ನು ಗಮನಿಸದರೆ, ಎಲ್ಲಾ ಸಮಾಜದವರು ಹಳೆಯದನ್ನು ವರ್ಜ್ಯವೆಂದು ಭಾವಿಸಿ, ಹೆಸರಿನ ಮೂಲಕ ಆಧುನಿಕರಾಗ ಬಯಸುವುದು ಈ ಪ್ರಕ್ರಿಯೆಯ ಮೂಲಕ ತಿಳಿದುಬರುತ್ತದೆ.

ಮೂರನೆಯ ಪಟ್ಟಿಯ ಹೆಸರು ಸ್ತ್ರೀ ಸೂಚಕಗಳಾಗಿದ್ದು, ಈ ಹೆಸರಿನ ಹೆಚ್ಚಿನ ರೂಪಗಳು ಸ್ತ್ರೀ ಹೆಸರುಗಳಲ್ಲಿ ಇದ್ದಂತೆ ತೋರುವುದಿಲ್ಲ. ಮುರುಗೆಮ್ಮ, ಮುರುಗೆವ್ವ ಎಂಬೆರಡು ರೂಪಗಳು ಮಾತ್ರ ಬಳಕೆಯಲ್ಲಿರುವುದು ಕಂಡುಬಂದಿದೆ. ಲಿಂಗಾಯತ ಮತ್ತು ಇತರ ಕೆಳ ಸಮುದಾಯಗಳಲ್ಲಿ ಈ ಹೆಸರುಗಳು ಕಾಣಬಂದರೂ ಒಟ್ಟಾರೆಯಾಗಿ ಸ್ತ್ರೀಯರಲ್ಲಿ ಇದರ ಪ್ರಭಾವ ಕಡಿಮೆಯೆಂದೇ ಹೇಳಬಹುದು. ಈ ಎರಡು ರೂಪಗಳಲ್ಲಿ ಮುರುಗೆಮ್ಮ ಎಂಬುದು ಲಿಂಗಾಯತರಲ್ಲಿ ಮತ್ತು ಮುರುಗೆವ್ವ ಎಂಬುದು ಕೆಳಜಾತಿಗಳಲ್ಲಿ ಅಧಿಕವಾಗಿ ಬಳಕೆಯಲ್ಲಿದೆ. ಈ ಹೆಸರುಗಳು ಒಂದು ಮತ್ತು ಎರಡನೆಯ ತಲೆಮಾರಿನವರಲ್ಲಿ ಹೆಚ್ಚು ಬಳಕೆಯಲ್ಲಿದ್ದು, ಮೂರನೆಯ ತಲೆಮಾರಿನವರಲ್ಲಿ ಈ ಹೆಸರುಗಳು ಹಿಂದೆ ಸರಿದಿವೆ. ಸಮಕಾಲೀನ ಸಂದರ್ಭದಲ್ಲಿ ಹೆಸರಿನ ಬಗೆಗೆ ಜನರ ಧೋರಣೆ ಸಂಪೂರ್ಣವಾಗಿ ಹಿಂದೆಗಿಂತ ಬದಲಾಗಿದ್ದು, ವಿನೂತನವಾದ ಹೆಸರುಗಳ ಕಡೆ ಜನ ವಾಲುತ್ತಿರುವುದನ್ನು ಮೇಲಿನ ಪ್ರಕ್ರಿಯೆಯಿಂದ ಸ್ಪಷ್ಟವಾಗುತ್ತದೆ. ಇದೇ ರೀತಿ ಕಲ್ಲೇಶ್ವರ ದೈವದ ಪ್ರಭಾವದಿಂದ (ಕಲ್ಲೆದೇವರಪುರ) ಪುರುಷ ಮತ್ತು ಸ್ತ್ರೀಯರಲ್ಲಿ ಬಳಕೆಯಲ್ಲಿರುವ ಹೆಸರಿನ ವಿವಿಧ ರೂಪಗಳನ್ನು ಈ ರೀತಿ ಗುರುತಿಸಬಹುದು.

| ಪುರುಷರಲ್ಲಿ | ಸ್ತ್ರೀಯರಲ್ಲಿ |
|---|---|
| ಕಲ್ಲಪ್ಪ | ಕಲ್ಲಮ್ಮ |
| ಕಲ್ಲಯ್ಯ | ಕಲ್ಲಕ್ಕ |
| ಕಲ್ಲಣ್ಣ | ಕಲ್ಲವ್ವ |
| ಕಲ್ಲೇಶ | ಕಲ್ಲೇಶ್ವರಿ |
| ಕಲ್ಲೇಶಿ | |
| ಕಲ್ಲೇಶ್ವರಯ್ಯ | ಕಲ್ಲೇಶ್ವರಮ್ಮ |
| ಈಶಪ್ಪ | ಈಶಮ್ಮ |

ಹಾಲರಾಮೇಶ್ವರ ದೈವದ ಪ್ರಭಾವದಿಂದ (ಹೊಸದುರ್ಗ) ಪುರುಷ ಮತ್ತು ಸ್ತ್ರೀಯರಲ್ಲಿ ಬಳಕೆಯಲ್ಲಿರುವ ಹೆಸರಿನ ವಿವಿಧ ರೂಪಗಳು.

| ಪುರುಷರಲ್ಲಿ | ಸ್ತ್ರೀಯರಲ್ಲಿ |
|---|---|
| ರಾಮಪ್ಪ | ರಾಮಕ್ಕ |
| ರಾಮಣ್ಣ | ರಾಮವ್ವ |
| ರಾಮಯ್ಯ | |
| ಹಾಲರಾಮೇಶ | ಹಾಲವ್ವ |
| ಹಾಲರಾಮಣ್ಣ | ಹಾಲಕ್ಕ |
| ಹಾಲಪ್ಪ | ಹಾಲಮ್ಮ |
| ಹಾಲಯ್ಯ | |
| ಹಾಲೇಶ | |
| ಹಾಲೇಶಿ | |

ಕರಿಬಸವೇಶ್ವರ ದೈವದ ಪ್ರಭಾವದಿಂದ (ಡಾವಣಗೆರೆ) ಪುರುಷ ಮತ್ತು ಸ್ತ್ರೀಯರಲ್ಲಿ ಬಳಕೆಯಲ್ಲಿರುವ ಹೆಸರಿನ ವಿವಿಧ ರೂಪಗಳು.

| ಪುರುಷರಲ್ಲಿ | ಸ್ತ್ರೀಯರಲ್ಲಿ |
|---|---|
| ಕರಿಬಸಪ್ಪ | ಕರಿಬಸಮ್ಮ |
| ಕರಿಬಸವ | ಕರಿಬಸವ್ವ |
| ಕರಿಬಸವರಾಜ | ಅಜ್ಜಮ್ಮ |
| ಕರಿಬಸವೇಶ | ಅಜ್ಜವ್ವ |
| ಕರಿಬಸವೇಶ್ವರ | ಅಜ್ಜಕ್ಕ |
| ಅಜ್ಜಯ್ಯ | ಬಸವ್ವ |
| ಅಜ್ಜಣ್ಣ | ಬಸಮ್ಮ |
| ಅಜ್ಜಪ್ಪ | ಬಸಕ್ಕ |

'ಸಿದ್ದಪ್ಪ' ದೈವದ ಪ್ರಭಾವದಿಂದ (ವದ್ದಿಕೆರೆ ಹಿರಿಯೂರು ತಾಲೂಕು) ಪುರುಷ ಮತ್ತು ಸ್ತ್ರೀಯರಲ್ಲಿ ಬಳಕೆಯಲ್ಲಿರುವ ಹೆಸರಿನ ವಿವಿಧ ರೂಪಗಳು.

| ಪುರುಷರಲ್ಲಿ | ಸ್ತ್ರೀಯರಲ್ಲಿ |
|---|---|
| ಸಿದ್ದಪ್ಪ | ಸಿದ್ದಮ್ಮ |
| ಸಿದ್ದಣ್ಣ | ಸಿದ್ದವ್ವ |
| ಸಿದ್ದಯ್ಯ/ಸ್ವಾಮಿ | ಸಿದ್ದಕ್ಕ |

| | |
|---|---|
| ವದ್ದಿಕೆರಪ್ಪ | ವದ್ದಿಕೆರಮ್ಮ |
| ವದ್ದಿಕೆರೆ ಸಿದ್ದಪ್ಪ | ವದಿಕೆರೆ ಸಿದ್ದವ್ವ |
| ವದ್ದಿಕೆರಯ್ಯ | ಭೈರವಮ್ಮ? |
| ವದ್ದಿಕೆರೆ ಸಿದ್ದಯ್ಯ | ಭೈಯ್ಯಮ್ಮ |
| ಭೈರಪ್ಪ | ಭೈಯ್ಯಕ್ಕ |
| ಭೈರವ | ಭೈಯ್ಯವ್ವ |

ಮಲ್ಲೇಶ್ವರ ದೈವದ ಪ್ರಭಾವದಿಂದ (ಹಿರಿಯೂರು) ಪುರುಷ ಮತ್ತು ಸ್ತ್ರೀಯರಲ್ಲಿ ಬಳಕೆಯಲ್ಲಿರುವ ಹೆಸರಿನ ವಿವಿಧ ರೂಪಗಳು.

| ಪುರುಷರಲ್ಲಿ | ಸ್ತ್ರೀಯರಲ್ಲಿ |
|---|---|
| ಮಲ್ಲಪ್ಪ | ಮಲ್ಲಮ್ಮ |
| ಮಲ್ಲಯ್ಯ | ಮಲ್ಲವ್ವ |
| ಮಲ್ಲಣ್ಣ | ಮಲ್ಲಕ್ಕ |
| ಮಲ್ಲಯ್ಯಸ್ವಾಮಿ | ಮಲ್ಲಿಕಾ |
| ಮಲ್ಲೇಶಿ | |
| ಮಲ್ಲೇಶಪ್ಪ | |
| ಮಲ್ಲಿಕಾರ್ಜುನ | |
| ಮಲ್ಲಿಕಾರ್ಜುನಯ್ಯ | |

ಈ ದೈವಗಳ ಪ್ರಭಾವ ಸುತ್ತಲಿನ ವಿಭಿನ್ನ ಜನಸಂಸ್ಕೃತಿಗಳ ಮೇಲೆ ಆಗಿದ್ದು ನಿರ್ದಿಷ್ಟ ಸಮುದಾಯಗಳು, ನಿರ್ದಿಷ್ಟ ಮಾದರಿಯ ಹೆಸರುಗಳನ್ನು ಇಟ್ಟುಕೊಳ್ಳುವಂಥದ್ದು ಕಂಡುಬರುತ್ತದೆ. ಒಂದೇ ದೈವಮೂಲದ ಹೆಸರು ಸಾಮಾಜಿಕ ಸ್ತರಗಳಿಗೆ ಅನುಗುಣವಾಗಿ ಮತ್ತು ಅದರ ಬಳಕೆ ತಲೆಮಾರುಗಳಲ್ಲಿ ಹೇಗೆ ಸ್ಥಿತ್ಯಂತರಗಳಿಗೆ ಒಳಗಾಗುತ್ತದೆ ಎಂಬುದನ್ನು ಸೂಕ್ಷ್ಮ ಅಧ್ಯಯನದ ಮೂಲಕ ತಿಳಿಯಬಹುದು.

ವ್ಯಕ್ತಿಗೆ ಹೆಸರು ಇಡುವುದರ ಹಿಂದೆ ಒಂದು ಪ್ರಬಲವಾದ ಕಾರಣವಿರುತ್ತದೆ. ಜಾತಿಯಾಧಾರಿತ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ವ್ಯಕ್ತಿನಾಮಗಳು, ಆಯಾ ಜಾತಿ, ವರ್ಗಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಗತಿಗಳ ಹಿನ್ನೆಲೆಯಲ್ಲಿಯೇ ಬಳಕೆಯಾಗಿರುವುದರಿಂದ ಅವು ಆಯಾ ಸಮುದಾಯಗಳ ಸಾಂಸ್ಕೃತಿಕ ಪಳೆಯುಳಿಕೆಗಳಾಗಿವೆ. ಕಾಲದಿಂದ ಕಾಲಕ್ಕೆ ಜನಾಂಗದ ಸಂಸ್ಕೃತಿ ಬದಲಾಗುತ್ತಾ ಬಂದಂತೆ, ವ್ಯಕ್ತಿನಾಮಗಳೂ ಕೂಡ ಬದಲಾಗುತ್ತಲೇ ಬಂದಿವೆ. ಈ ಕಾರಣದಿಂದ ಒಂದು ಜನಾಂಗದ ಸಾಂಸ್ಕೃತಿಕ ಚರಿತ್ರೆಯನ್ನು ನಿರ್ಮಾಣ ಮಾಡುವಲ್ಲಿ ವ್ಯಕ್ತಿನಾಮಗಳು ಆಕರ ಸಾಮಗ್ರಿಗಳಾಗಿ ನಿಲ್ಲುತ್ತವೆ. ಚರಿತ್ರೆಯುದ್ದಕ್ಕೂ ಗಮನಿಸಿದಾಗ ಯಾವುದೇ ರಾಜನ/ವ್ಯಕ್ತಿಯ ಬಿರುದು, ಶ್ರೀ ಸಾಮಾನ್ಯರ ಹೆಸರುಗಳಿಗೆ ಆಕರವಾಗಿರುವಂತೆ ಕಂಡುಬರುವುದಿಲ್ಲ. ಈ ದಿಸೆಯಲ್ಲಿ ಚಿತ್ರದುರ್ಗ ಪಾಳೆಯಗಾರ ರಾಜಾವೀರ ಮದಕರಿನಾಯಕನ ಹೆಸರು ಶೋಧನೀಯವೆನಿಸುತ್ತದೆ.

ಇಂದಿಗೂ ಕೆಲವು ಪ್ರದೇಶಗಳಲ್ಲಿ ಕೆಲವು ಸಮುದಾಯಗಳಿಗೆ ಮಾತ್ರ ಸೀಮಿತವಾದ ಹೆಸರುಗಳು, ಪ್ರಭುತ್ವ ಮತ್ತು ದೇವತಾ ಸಂಪ್ರದಾಯವನ್ನು ಪ್ರತಿಪಾದಿಸುತ್ತವೆ. ತಿಪ್ಪೇಸ್ವಾಮಿ, ಮುರುಘರಾಜೇಂದ್ರ, ಭೈರವ/ಬೋರಯ್ಯ, ಕೊಟ್ರೇಶ್ವರ, ಕರಿಬಸವೇಶ, ಮಾರಮ್ಮ, ದುರುಗಮ್ಮ, ಎಲ್ಲಮ್ಮ ಮುಂತಾದ ಹೆಸರುಗಳು ಬರೀ ಹೆಸರುಗಳಾಗಿರದೆ, ಅವು ನಮ್ಮ ಸಂಸ್ಕೃತಿಯ ವಿಶಿಷ್ಟ ಸಾಂಸ್ಕೃತಿಕ ಪರಂಪರೆಯ ವಾಹಕಗಳಾಗಿವೆ. ಈ ದೃಷ್ಟಿಯಿಂದ ವ್ಯಕ್ತಿನಾಮಗಳನ್ನು ಅಂತರಶಿಸ್ತೀಯ ನೆಲೆಯಲ್ಲಿ ಅಧ್ಯಯನ ಮಾಡಬೇಕಾದ ಅವಶ್ಯಕತೆ ಇದೆ ಎನಿಸುತ್ತದೆ.

**ಅಡಿಟಿಪ್ಪಣಿಗಳು**

೧. ಡಾ. ಎಂ.ಎಂ.ಕಲಬುರ್ಗಿ, ಕನ್ನಡ ನಾಮವಿಜ್ಞಾನ, ಪು. ೨೯, ೧೯೮೯
೨. ಡಾ. ಎಂ.ಚಿದಾನಂದಮೂರ್ತಿ, ವಾಗರ್ಥ, ಪು. ೯೧, ೧೯೮೧
೩. ಡಾ. ಎಂ.ಎಂ. ಕಲಬುರ್ಗಿ, ಕನ್ನಡ ನಾಮವಿಜ್ಞಾನ, ಪು. ೨೮, ೧೯೮೯
೪. ಡಾ. ಕೆ.ವಿ.ನಾರಾಯಣ (ಸಂ). ವ್ಯಕ್ತಿನಾಮಗಳು : ಸ್ವರೂಪ ಮತ್ತು ವಿಶ್ಲೇಷಣೆ, ಪು. ೪೮, ೨೦೦೦
೫. ವಕ್ತೃವಿನ ಹೆಸರು : ದೊಡ್ಡಸ್ವಾಮಿ ನಾಯಕ, ಜಾತಿ : ಪಾಳೆಯಗಾರರು, ವಯಸ್ಸು : ೩೬, ಸ್ಥಳ : ಯರಜೇನಹಳ್ಳಿ, ತಾಲೂಕು : ಮೊಳಕಾಲ್ಮೂರು, ಸಂದರ್ಶನ ದಿನಾಂಕ : ೧೪.೦೭.೨೦೦೧
೬. ಸೌ.ಇ.ಇ. XX, ೧೪-೪, ೮೭೮
೭. ಎಫಿಗ್ರಾಫಿ ಕರ್ನಾಟಕ XIV, ಎಳಂದೂರು ೯೬-೧, ೧೦೦೦
೮. ಡಾ. ಪಿ.ಕೆ.ಖಂಡೋಬ "ಕರ್ನಾಟಕದ ಲಂಬಾಣಿ ಸಂಸ್ಕೃತಿ ಒಂದು ಸಾಂಸ್ಕೃತಿಕ ಅಧ್ಯಯನ," ಪು. ೧೦೬, ೧೯೯೧
೯. ಅದೇ, ಪು. ೧೧೧-೧೧೪
೧೦. ಡಾ. ಡಿ.ಬಿ.ನಾಯಕ, ಲಂಬಾಣಿ ಜಾನಪದ ಸಂಸ್ಕೃತಿ, ಪು. ೩, ೨೦೦೦
೧೧. ಡಾ. ಪಿ.ಕೆ. ಖಂಡೋಬ, ಕರ್ನಾಟಕದ ಲಂಬಾಣಿ ಸಂಸ್ಕೃತಿ ಒಂದು ಸಾಂಸ್ಕೃತಿಕ ಅಧ್ಯಯನ, ಪು. ೧೦೭, ೧೯೯೧
೧೨. ಡಾ. ಎಂ.ಚಿದಾನಂದಮೂರ್ತಿ, ವಾಗರ್ಥ, ಪು. ೬೬, ೧೯೮೭
೧೩. ಅದೇ
೧೪. ಡಾ. ಎಂ.ಎಂ.ಕಲಬುರ್ಗಿ, ಕನ್ನಡ ನಾಮವಿಜ್ಞಾನ, ಪು. ೨೨, ೧೯೮೯
೧೫. ಜಿ.ಶಿವಕುಮಾರ (ಸಂ), ಎಂ.ಎಸ್.ಕರಿಸಿದ್ದೇಶ್ವರಸ್ವಾಮಿ, ಎಸ್.ಎಂ.ವೀರಭದ್ರಯ್ಯ, ಚಿನ್ಮೂಲಾದ್ರಿ ಚೇತನ, ಪು. ೨೦೩, ೧೯೮೯



ಅಧ್ಯಾಯ - ೪

# ವ್ಯಕ್ತಿನಾಮಗಳ ಬಳಕೆಯ ವಲಯಗಳು

೪. ಪ್ರವೇಶ

೪.೧. ಔಪಚಾರಿಕ - ಅನೌಪಚಾರಿಕ

೪.೨. ಬರೆಹ - ಮೌಖಿಕ

೪.೩. ಉಲ್ಲೇಖದ ನೆಲೆಗಳು

೪.೪. ಕೌಟುಂಬಿಕ - ಕುಟುಂಬೇತರ

೪.೫. ಸಾಮಾಜಿಕ ಆವರಣಗಳು

೪.೫.೧. ಜಾತಿ

೪.೫.೨. ವರ್ಗ

೪.೬. ಸಾಂಸ್ಕೃತಿಕ ಸಂದರ್ಭ

ಅಧ್ಯಾಯ - ೪

# ವ್ಯಕ್ತಿನಾಮಗಳ ಬಳಕೆಯ ವಲಯಗಳು

## ೪. ಪ್ರವೇಶ

ವ್ಯಕ್ತಿನಾಮಗಳು ಭಾಷೆಯ ಘಟಕಗಳು ಆಗಿರುವಂತೆ, ಸಂಸ್ಕೃತಿಯ ಘಟಕಗಳೂ ಆಗಿವೆ. ಸಂಸ್ಕೃತಿಯ ನಿರ್ವಚನಕ್ಕೆ ವ್ಯಕ್ತಿನಾಮಗಳು ಮಹತ್ವದ ಸಂಗತಿಯನ್ನು ನೀಡುತ್ತವೆ. ಸಂಸ್ಕೃತಿ ಅಧ್ಯಯನಕಾರರು, ಸಂಸ್ಕೃತಿ ನಿರ್ವಚನ ಮಾಡುವಾಗ ವ್ಯಕ್ತಿನಾಮಗಳನ್ನು ಮುಖ್ಯ ಆಕರಗಳೆಂದು ಈವರೆಗೂ ಭಾವಿಸಿದಂತಿಲ್ಲ. ಕನ್ನಡದಲ್ಲಿ ವ್ಯಕ್ತಿನಾಮಗಳ ಬಗೆಗೆ ಈವರೆಗೆ ಸಮಗ್ರವಾದ ಅಧ್ಯಯನಗಳೂ ನಡೆದಿಲ್ಲ. ಲೇಖನ ಮಾದರಿಯ ಕೆಲವು ಬಿಡಿ ಬರೆಹಗಳು ಮಾತ್ರ ಬಂದಿವೆ. ಈತನಕ ನಡೆದಿರುವ ಅಧ್ಯಯನಗಳು, ವ್ಯಕ್ತಿನಾಮಗಳ ರಾಚನಿಕ ಸ್ವರೂಪ ಮತ್ತು ಸಾಮಾಜಿಕ ಆಯಾಮಗಳ ಕಡೆಗೆ ಗಮನ ಹರಿಸಿವೆ. ವ್ಯಕ್ತಿನಾಮಗಳ ಸಂಬೋಧನೆ ಅಥವಾ ಬಳಕೆಯ ಪ್ರಕ್ರಿಯೆಗಳ ಕುರಿತ ಚರ್ಚೆಗಳು ಕನ್ನಡದ ಮಟ್ಟಿಗೆ ಕಡಿಮೆಯೆಂದೇ ಹೇಳಬಹುದು.

ಪ್ರಾಚೀನ ಕಾಲದಲ್ಲಿ ಕೆಲವು ಸಮಾಜದವರ ಹೆಸರನ್ನು ಕರೆಯುವುದು ನಿಷೇಧಿಸಲ್ಪಟ್ಟಿತ್ತು. ವ್ಯಕ್ತಿನಾಮಗಳ ಸಂಬೋಧನೆಯಲ್ಲಿ ಜಾತಿ, ವರ್ಗ, ಲಿಂಗ, ವಯಸ್ಸು, ಶಿಕ್ಷಣ - ಇತ್ಯಾದಿ ಸಂಗತಿಗಳು ಮುಖ್ಯವಾಗಿವೆ. ಇವುಗಳನ್ನಾಧರಿಸಿ ವ್ಯಕ್ತಿನಾಮಗಳ ಬಳಕೆಯಲ್ಲಿ ಭಿನ್ನತೆ ಕಂಡುಬರುತ್ತದೆ. ಸಮಾಜದಲ್ಲಿ ಭಿನ್ನ ಜಾತಿ, ವರ್ಗಗಳ ನಡುವಿನ ಆಂತರಿಕ ಸಂಬಂಧವನ್ನು ಅಥವಾ ಜೀವನ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವಲ್ಲಿ, ವ್ಯಕ್ತಿನಾಮಗಳ 'ಬಳಕೆ' ಮಹತ್ವದ ಪಾತ್ರವನ್ನು ವಹಿಸುತ್ತವೆ. ಈ ದೃಷ್ಟಿಯಿಂದ ವ್ಯಕ್ತಿನಾಮಗಳ ಸಂಬೋಧನೆ/ಬಳಕೆಯು ತುಂಬಾ ಮುಖ್ಯವಾಗುತ್ತದೆ. ವ್ಯಕ್ತಿನಾಮಗಳ ಬಳಕೆ ಸಾಮಾಜಿಕ ಸ್ತರ ವಿನ್ಯಾಸಗಳಿಗೆ ಇಲ್ಲವೆ ಅಂತಸ್ತುಗಳಿಗೆ ಅನುಗುಣವಾಗಿ ವ್ಯತ್ಯಾಸವಾಗುತ್ತಿದ್ದು, ಈ ವ್ಯತ್ಯಸ್ಥ ರೂಪ, ಸಾಮಾಜಿಕ ವರ್ಗ, ವರ್ಣಗಳ ಸ್ತರವನ್ನು ಸೂಚಿಸುತ್ತದೆ.

ಮನೆಯ ಒಳಗಿನ ಆವರಣದಲ್ಲಿ ವಿವಿಧ ಸಂಬಂಧಿಕರ ಮಧ್ಯೆ, ಅಪರಿಚಿತರ ಮುಂದೆ, ವ್ಯಕ್ತಿನಾಮ ಸಂಬೋಧನ ಕ್ರಮದಲ್ಲಿ ವ್ಯತ್ಯಾಸವಿದೆ. ಶಾಲಾ ಕಾಲೇಜುಗಳಲ್ಲಿ ಅಧ್ಯಾಪಕರು ಹಾಗೂ ಸ್ನೇಹಿತರು ಹೆಸರನ್ನು ಕರೆಯುವ ರೀತಿ ಹಾಗೂ ಭಿನ್ನ ಸಮುದಾಯದ ಜನರು ಔಪಚಾರಿಕ ಮತ್ತು ಅನೌಪಚಾರಿಕ ನೆಲೆಗಳಲ್ಲಿ ಹೆಸರನ್ನು ಕರೆಯುವ ರೀತಿಗೂ ಭಿನ್ನತೆಗಳಿರುತ್ತವೆ. ಪ್ರಸ್ತುತ ಅಧ್ಯಾಯದಲ್ಲಿ ಆ ಕುರಿತು ಚರ್ಚಿಸಲಾಗಿದೆ.

ಚಿತ್ರದುರ್ಗ ಪರಿಸರದಲ್ಲಿ ಹಲವು ಜಾತಿ, ವರ್ಗ, ಭಾಷೆಗಳಿಗೆ ಸೇರಿದ ಜನರಿದ್ದಾರೆ. ಪರಸ್ಪರ ಜಾತಿ, ವರ್ಗಗಳ ನಡುವೆ ಅಂತರಗಳಿದ್ದು, ಜಿಲ್ಲೆಯ ಸಾಮಾಜಿಕ ವ್ಯವಸ್ಥೆ, ಕರ್ನಾಟಕದ ಅಥವಾ ಭಾರತೀಯ ಸಾಮಾಜಿಕ ವ್ಯವಸ್ಥೆಗಿಂತ ಭಿನ್ನವಾಗೇನೂ ಇರುವುದಿಲ್ಲ. ಬ್ರಾಹ್ಮಣ, ಲಿಂಗಾಯತ, ಒಕ್ಕಲಿಗ ಸಮುದಾಯಗಳು ಆರ್ಥಿಕವಾಗಿ ಸಾಮಾಜಿಕವಾಗಿ ಪ್ರಬಲವಾಗಿದ್ದು, ಉನ್ನತ ಶ್ರೇಣಿಯವರೆನಿಸಿದ್ದಾರೆ. ಅದೇ ರೀತಿ, ಹರಿಜನ, ನಾಯಕ, ಲಂಬಾಣಿ, ಭೋವಿ, ಕೊರಚ ಮುಂತಾದ ಸಮುದಾಯಗಳು ಆರ್ಥಿಕವಾಗಿ ಹಿಂದುಳಿದಿದ್ದು, ಕೆಳ ಶ್ರೇಣಿಯವರಾಗಿದ್ದಾರೆ. ರೆಡ್ಡಿ, ಕುರುಬ, ಗೊಲ್ಲ ಮುಂತಾದವು ಮಧ್ಯಮ ವರ್ಗದ ಸಮುದಾಯಗಳಾಗಿವೆ. ಅವರವರ ಸ್ಥಾನಮಾನಗಳಿಗನುಗುಣವಾಗಿ ಪರಸ್ಪರ ಯಾವ ರೀತಿಯಾಗಿ ಸಂಬೋಧಿಸುತ್ತಾರೆ ಎಂಬುದನ್ನು ಈ ಅಧ್ಯಾಯದಲ್ಲಿ ಗಮನಿಸಿದೆ. ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳ ಬಳಕೆ ಅಥವಾ ಸಂಬೋಧನೆ ಕುರಿತ ಚರ್ಚೆಯಲ್ಲಿ ರೂಪಿಸಲಾಗಿರುವ ನಿಯಮಗಳು, ಪ್ರಸ್ತುತ ಭೌಗೋಳಿಕ ಪರಿಸರಕ್ಕೆ ಸೀಮಿತವಾಗಿರದೆ, ಬಹುತೇಕವಾಗಿ ಕರ್ನಾಟಕದ ಇತರ ಪ್ರದೇಶಗಳಿಗೂ ಅನ್ವಯವಾಗುತ್ತವೆ. ಅಥವಾ ಕರ್ನಾಟಕದ ವ್ಯಕ್ತಿನಾಮ ಸಂಬೋಧನೆ ರೀತಿಯೂ, ಚಿತ್ರದುರ್ಗ ಪರಿಸರದ ವ್ಯಕ್ತಿನಾಮ ಸಂಬೋಧನೆಯ ರೀತಿಯೂ ಒಂದೇ ಆಗಿದೆ.

## ೪.೧ ಔಪಚಾರಿಕ ನೆಲೆ

ವ್ಯಕ್ತಿನಾಮ ಸಂಬೋಧನೆಯ ವಿವಿಧ ಆವರಣಗಳಲ್ಲಿ ಔಪಚಾರಿಕ ನೆಲೆ ಒಂದು. ಇನ್ನುಳಿದ ಸಂಬೋಧನಾ ನೆಲೆಗಳಿಗಿಂತ ಇದು ತೀರಾ ಭಿನ್ನವಾಗಿದ್ದು, ವೈಶಿಷ್ಟ್ಯಪೂರ್ಣವಾದುದು. 'ಒಂದು ನಿರ್ದಿಷ್ಟ ಸನ್ನಿವೇಶದಲ್ಲಿ ವ್ಯಕ್ತಿನಾಮಗಳ ಸಂಬೋಧನೆ, ನಿರ್ದಿಷ್ಟ ನಿಯಮಗಳ ಚೌಕಟ್ಟಿನಲ್ಲಿ ಬಳಸಲ್ಪಡುತ್ತದೆ. ಹೀಗೆ ನಿಯಮಗಳಿಗೆ ಒಳಗಾಗಿ ನಡೆಯುವ ಸಂಬೋಧನಾ ಪರಿಸರ ಅಥವಾ ವಾತಾವರಣವನ್ನು 'ಔಪಚಾರಿಕ ನೆಲೆ' ಎಂದು ಕರೆಯಬಹುದು. ಔಪಚಾರಿಕ ನೆಲೆಯಲ್ಲಿ ಅಭಿವ್ಯಕ್ತಗೊಳ್ಳುವ ಸಂಬೋಧನಾ ರೀತಿಗಳು ಕುತೂಹಲಕಾರಿಯಾಗಿದ್ದು ಅಧ್ಯಯನ ಯೋಗ್ಯವಾಗಿವೆ. ಉದಾಹರಣೆಗೆ ಸಾರ್ವಜನಿಕ ಸಭೆ, ಸಮಾರಂಭ ಮುಂತಾದ ಔಪಚಾರಿಕ ಸ್ಥಾನಗಳಲ್ಲಿ ಬಳಕೆಯಾಗುವ ನಾಮ ಸಂಬೋಧನೆಯನ್ನು ನಾವು ಗಮನಿಸಬಹುದು.

ಸಾರ್ವಜನಿಕ ಸಭೆ-ಸಮಾರಂಭಗಳಲ್ಲಿ ವ್ಯಕ್ತಿ ಸುಸಂಸ್ಕೃತ ರೀತಿಯಲ್ಲಿ ವರ್ತನೆ ಮಾಡಬೇಕಾಗುತ್ತದೆ. ಆ ಹಿನ್ನೆಲೆಯಲ್ಲಿ ಜಾತಿ, ಮತ, ವರ್ಗ, ವಯಸ್ಸು, ಲಿಂಗ, ಅಂತಸ್ತು ಮುಂತಾದ ಅಂಶಗಳು ಅಷ್ಟು ಮುಖ್ಯವಾಗುವುದಿಲ್ಲ. ಪರಸ್ಪರ ಗೌರವ ಪಡೆಯುವಂಥದ್ದು ಬಹಳ ಮುಖ್ಯವಾಗಿರುತ್ತದೆ. ಅಂತೆಯೇ ಸಂಬೋಧನಾ ಸಂದರ್ಭದಲ್ಲಿ ವ್ಯಕ್ತಿಯ ಹೆಸರನ್ನು ವಿರೂಪಮಾಡಿ ಹೇಳುವುದು (ಕೇಶವಮೂರ್ತಿ > ಕೇ - ಶವಮೂರ್ತಿ, ಭಾರತಿ > ಬಾ - ರತಿ) ಏಕವಚನದಿಂದ ಕರೆಯುವುದು (ಮಾರಣ್ಣ > ಮಾರ್ಗ, ತಿಮ್ಮಣ್ಣ > ತಿಮ್ಮ) ಹಾಗೂ ಮುದ್ದು ಹೆಸರು, ಅಡ್ಡಹೆಸರಿನಿಂದ ಕರೆಯುವಂಥದ್ದು ಔಪಚಾರಿಕ ನೆಲೆಯಲ್ಲಿ

ನಿಷೇಧವಾಗಿರುತ್ತದೆ. ಔಪಚಾರಿಕ ನೆಲೆಯ ಸಂಬೋಧನೆ ಇವುಗಳಿಂದ ಮುಕ್ತವಾಗಿರುತ್ತದೆ ಎನ್ನುವಂಥದ್ದು ಗಮನಾರ್ಹ ಸಂಗತಿಯಾಗಿದೆ.

ಔಪಚಾರಿಕ ನೆಲೆಯಲ್ಲಿ ಸಂಬೋಧನೆ ಮಾಡುವಾಗ, ಪೂರ್ಣ ಹೆಸರನ್ನು ಕರೆಯುವುದರ ಜೊತೆಗೆ ಗೌರವಸೂಚಕ ಪದಗಳನ್ನು ಸೇರಿಸುತ್ತಾರೆ. ಕೇವಲ ಹೆಸರನ್ನು ಮಾತ್ರ ಸಂಬೋಧಿಸುವುದು ಇಲ್ಲವೆಂದೇ ಹೇಳಬಹುದು. ಬರೀ ಹೆಸರಿಟ್ಟು ಕರೆದರೆ, ವ್ಯಕ್ತಿಯನ್ನು ಏಕವಚನದಿಂದ ಕರೆದು, ಅವಮಾನ ಮಾಡಿದಂತಾಗುತ್ತದೆ ಅಥವಾ ಅಗೌರವ ತೋರಿದಂತಾಗುತ್ತದೆ ಎಂಬುದು ಇದರ ಹಿಂದಿನ ಆಶಯವಾಗಿದೆ. ಆದಕಾರಣ ಸಂಬೋಧಿಸುವವರು ಮತ್ತು ಸಂಬೋಧಿಸಲ್ಪಡುವವರು ಯಾವುದೇ ಜಾತಿ, ವರ್ಗದವರಿದ್ದರೂ ಹೆಸರನ್ನು ಗೌರವದಿಂದಲೇ ಸಂಬೋಧಿಸಬೇಕಾಗುತ್ತದೆ. ಇದು ಔಪಚಾರಿಕ ನೆಲೆಯ ವೈಶಿಷ್ಟ್ಯವೂ ಹೌದು. ಉದಾಹರಣೆಗೆ ಕೆಲವು ಹೆಸರುಗಳನ್ನು ಗಮನಿಸಬಹುದು.

**'ಅ' ಪಟ್ಟಿ**

ನುಂಕಣ್ಣ > ನುಂಕಣ್ಣನವರು/ರೆ (ಅವರು/ರೆ, 'ನ')

ತಿಪ್ಪೇಸ್ವಾಮಿ > ತಿಪ್ಪೇಸ್ವಾಮಿಯವರು/ರೆ (ಅವರು/ರೆ, 'ಯ')

ಮಾರನಾಯಕ > ಮಾರನಾಯಕರವರು/ರೆ (ಅವರು/ರೆ, 'ನ')

ಕರಿಯಪ್ಪ > ಕರಿಯಪ್ಪನವರು/ರೆ (ಅವರು/ರೆ, 'ನ')

ಮುರಿಗೆಪ್ಪ > ಮುರಿಗೆಪ್ಪನವರು/ರೆ (ಅವರು/ರೆ, 'ನ')

ಓಬಣ್ಣ > ಓಬಣ್ಣನವರು/ರೆ (ಅವರು/ರೆ, 'ನ')

ಗೋವಿಂದಭಟ್ > ಗೋವಿಂದಭಟ್‌ರವರು/ರೆ (ಅವರು/ರೆ, 'ರ')

**'ಬ' ಪಟ್ಟಿ**

ತಿಪ್ಪಮ್ಮ > ತಿಪ್ಪಮ್ಮನವರು/ರೆ (ಅವರು/ರೆ, 'ನ')

ಹನುಮಕ್ಕ > ಹನುಮಕ್ಕನವರು/ರೆ (ಅವರು/ರೆ, 'ನ')

ಮಾರಕ್ಕ > ಮಾರಕ್ಕನವರು/ರೆ (ಅವರು/ರೆ, 'ನ')

ಕರಿಯಮ್ಮ > ಕರಿಯಮ್ಮನವರು/ರೆ (ಅವರು/ರೆ, 'ನ')

ಕಮಲ > ಕಮಲರವರು/ರೆ (ಅವರು/ರೆ, 'ರ')

ಮೀನಾಕ್ಷಿ > ಮೀನಾಕ್ಷಿಯವರು/ರೆ (ಅವರು/ರೆ, 'ಯ')

ಶಾಮಲಬಾಯಿ > ಶಾಮಲಬಾಯಿಯವರು/ರೆ (ಅವರು/ರೆ, 'ಯ')

ಮೇಲಿನ 'ಅ' ಪಟ್ಟಿಯ ಹೆಸರುಗಳು ಪುಲ್ಲಿಂಗ ಸೂಚಕವೂ, 'ಬ' ಪಟ್ಟಿಯ ಹೆಸರುಗಳು ಸ್ತ್ರೀಲಿಂಗ ಸೂಚಕವೂ ಆಗಿವೆ. ಎರಡೂ ಪಟ್ಟಿಯಲ್ಲಿನ ಹೆಸರುಗಳ ಮೊದಲ ಘಟಕವು ವ್ಯಕ್ತಿಯ ಹೆಸರಾಗಿದ್ದು, ಮುಂದಿನ ಭಾಗ, ಬಹುವಚನವಾಚಿ ಪದವಾಗಿದೆ. ಇದು ಔಪಚಾರಿಕ ನೆಲೆಯ ಸಂಬೋಧನಾ ಸ್ವರೂಪವನ್ನು ಸೂಚಿಸುತ್ತದೆ.

ಸ್ತ್ರೀ ಮತ್ತು ಪುರುಷ ಹೆಸರುಗಳ ಸಂಬೋಧನೆಯಲ್ಲಿ ಕೊನೆಗೆ 'ಅವರು' ಎಂಬ ಬಹುವಚನ ಗೌರವಸೂಚಕ ಪ್ರತ್ಯಯ ಸೇರುವುದುಂಟು. ಅವರು ಎಂಬುದು 'ಅವರೆ' ಎಂಬುದಾಗಿಯೂ ಬಳಕೆಯಾಗುತ್ತದೆ. 'ಅವರು' ಎಂಬ ಬಹುವಚನ ಸೂಚಕ ಪದ ಹೆಸರಿನ ಭಾಗದೊಂದಿಗೆ ಸೇರಿ ಸಮಸ್ತ ಪದವಾಗುವಾಗ, ಅವರು ಪದದ ಆದ್ಯಕ್ಷರ 'ಅ' ವರ್ಣಕ್ಕೆ 'ನ', 'ರ', 'ಯ' ಎಂಬ ಅಕ್ಷರಗಳು ಪರವಾಗುತ್ತವೆ. ಸಾಮಾನ್ಯವಾಗಿ ಹೆಸರು ಸಂಬಂಧ ಸೂಚಕ ವಾರ್ಗಿಕಗಳಿಂದ ಕೊನೆಗೊಂಡಿದ್ದರೆ, ಅಂಥ ಹೆಸರುಗಳಲ್ಲಿ 'ನ' ಕಾರವೂ ಹಾಗೂ ವೃತ್ತಿ, ಜಾತಿವಾಚಿ ವಾರ್ಗಿಕ ಇಲ್ಲವೆ ಯಾವುದೆ ವಾರ್ಗಿಕವಿಲ್ಲದೆ ಕೇವಲ ನಿರ್ದಿಷ್ಟಗಳಿಂದ ಕೂಡಿದ್ದರೆ, ಅಂಥ ಹೆಸರುಗಳಲ್ಲಿ 'ಯ', 'ರ' ಕಾರವೂ ಪರವಾಗುತ್ತದೆ. ಈ ನಿಯಮಗಳಿಗೆ ಅಪವಾದವೆಂಬಂತೆ ಕೆಲವು ಹೆಸರುಗಳು ಇರಲೂಬಹುದು.

ಉತ್ತರ ಕರ್ನಾಟಕದಲ್ಲಿ ವ್ಯಕ್ತಿಯ ಹೆಸರಿನ ನಿರ್ದಿಷ್ಟ ಭಾಗಕ್ಕಿಂತ ಅಥವಾ ವ್ಯಕ್ತಿಯ ನಿಜನಾಮಕ್ಕಿಂತ ವ್ಯಕ್ತಿಯ ಕುಲನಾಮವೇ ಪ್ರಧಾನವಾದುದು. ಈ ಕಾರಣದಿಂದ ಇಲ್ಲಿ ಕುಲನಾಮಗಳಿಗೆ ಗೌರವಸೂಚಕ ಪ್ರತ್ಯಯಗಳು ಹತ್ತುತ್ತವೆ. ಉದಾಹರಣೆಗೆ ಅಂಗಡಿಯವರೆ, ಬೆಲ್ಲದವರೆ, ಎಲಿಗಾರರವರೆ, ಪಾವಟೆಯವರೆ, ಆದರೆ ಚಿತ್ರದುರ್ಗ ಪರಿಸರದಲ್ಲಿ ವ್ಯಕ್ತಿಯ ನಿಜನಾಮವೇ ಪ್ರಧಾನವಾಗಿದ್ದು, ಆ ಭಾಗದೊಂದಿಗೆ ಇತರ ಗೌರವವಾಚಿ ಪ್ರತ್ಯಯಗಳು ಸೇರುತ್ತವೆ. ಈ ನಿಯಮ ದಕ್ಷಿಣ ಕರ್ನಾಟಕಕ್ಕೂ ಅನ್ವಯಿಸುತ್ತದೆ.

ಔಪಚಾರಿಕ ಸಂಬೋಧನೆಯಲ್ಲಿ ವ್ಯಕ್ತಿ ಸಂಬಂಧ ಅಷ್ಟು ಮುಖ್ಯವಾಗುವುದಿಲ್ಲ. ಪರಿಚಿತರಾಗಿರಲಿ, ಅಪರಿಚಿತರಾಗಿರಲಿ ವ್ಯಕ್ತಿಯ ಪೂರ್ಣ ಹೆಸರನ್ನು ಬಳಸಬೇಕಾಗುತ್ತದೆ. ಇದು ಔಪಚಾರಿಕ ಸಂಬೋಧನೆಯ ವೈಶಿಷ್ಟ್ಯಗಳಲ್ಲೊಂದಾಗಿದ್ದು, ಆ ನೆಲೆಯ ಸಾಮಾನ್ಯ ಪ್ರಕ್ರಿಯೆಯೂ ಆಗಿದೆ. ಕೆಲವು ವಿಶೇಷ ಸಂದರ್ಭಗಳಲ್ಲಿ ಅಂದರೆ ಅತಿ ಗಣ್ಯ ವ್ಯಕ್ತಿಗಳು ಇದ್ದಾಗ, ಅವರ ಹೆಸರನ್ನು ಬಳಸದೆ, ಬರೀ ಗೌರವಸೂಚಕ ಪದಗಳಿಂದ ಮಾತ್ರ ಸಂಬೋಧಿಸುವುದುಂಟು. ಒಟ್ಟಾರೆಯಾಗಿ ಔಪಚಾರಿಕ ನೆಲೆಯ ಸಂಬೋಧನೆಯಲ್ಲಿ ಗೌರವಸೂಚಕ ಪದಗಳ ಬಳಕೆ ಕಡ್ಡಾಯವಾಗಿರುತ್ತದೆ ಎಂಬುದು ಗಮನಾರ್ಹ. ಇದು ಸಮಾನ ಸಾಮಾಜಿಕ ವ್ಯವಸ್ಥೆಯ ದ್ಯೋತಕವಾಗಿದೆ ಎಂದೆನ್ನಬಹುದು.

ಔಪಚಾರಿಕ ನೆಲೆಯ ಸಂಬೋಧನೆಯಲ್ಲಿ ಹೆಸರಿನ ಉತ್ತರ ಭಾಗದಲ್ಲಿ ಗೌರವಸೂಚಕ ಪದಗಳು ಸೇರಿಸುವಂತೆ, ಹೆಸರಿನ ಪೂರ್ವ ಭಾಗದಲ್ಲಿಯೂ ಸೇರಿಸುವುದುಂಟು. ಇವುಗಳನ್ನು ಅವುಗಳ ಬಳಕೆಯ ಆಧಾರದ ಮೇಲೆ ಎರಡು ಪ್ರಕಾರಗಳಲ್ಲಿ ವರ್ಗೀಕರಿಸಬಹುದು.

೧. ಸಾಮಾನ್ಯ ಗೌರವಸೂಚಕಗಳು

೨. ವಿಶಿಷ್ಟ ಗೌರವಸೂಚಕಗಳು

## ಸಾಮಾನ್ಯ ಗೌರವಸೂಚಕಗಳು

ಸಾಮಾನ್ಯ ಮತ್ತು ಧಾರ್ಮಿಕೇತರ ಅತಿ ಗಣ್ಯವ್ಯಕ್ತಿಗಳನ್ನು ಸಂಬೋಧಿಸುವಾಗ ಸೇರುವ ಗೌರವಸೂಚಕ ಪ್ರತ್ಯಯಗಳು ಸಾಮಾನ್ಯ ಗೌರವಸೂಚಕ ಪ್ರತ್ಯಯಗಳಾಗಿರುತ್ತವೆ. ಉದಾಹರಣೆಗೆ -

'ಶ್ರೀ' - ಶ್ರೀ ಮುಸ್ಟೂರಪ್ಪನವರೇ

'ಶ್ರೀಯುತ' - ಶ್ರೀಯುತ ದುರುಗಣ್ಣನವರೇ

'ಶ್ರೀಮಾನ್' - ಶ್ರೀಮಾನ್ ತಿಪ್ಪೇಸ್ವಾಮಿಯವರೇ

'ಸನ್ಮಾನ್ಯ' - ಸನ್ಮಾನ್ಯ ಶ್ರೀನಿವಾಸಾಚಾರ್ಯಯವರೇ

'ಮಾನ್ಯಶ್ರೀ' - ಮಾನ್ಯಶ್ರೀ ನಾರಾಯಣಭಟ್‌ರವರೇ

ಇಲ್ಲಿ 'ಶ್ರೀ' ಮತ್ತು 'ಶ್ರೀಯುತ' ಎಂಬ ಗೌರವಸೂಚಕಗಳು ಜನಸಾಮಾನ್ಯರ ವಿಷಯದಲ್ಲಿ ಬಳಕೆಯಾದರೆ, 'ಸನ್ಮಾನ್ಯ', 'ಮಾನ್ಯಶ್ರೀ', 'ಶ್ರೀಮಾನ್' ಎಂಬ ಗೌರವ ಸೂಚಕಗಳು ಸಾಮಾಜಿಕವಾಗಿ ಮೇಲ್ ವರ್ಗದ ಮತ್ತು ಗಣ್ಯವ್ಯಕ್ತಿಗಳ ಪುರುಷ ಹೆಸರಿನ ಪೂರ್ವದಲ್ಲಿ ಬಳಕೆಯಾಗುತ್ತದೆ. ಅದೇ ರೀತಿ 'ಶ್ರೀಮತಿ', 'ಸೌಭಾಗ್ಯವತಿ' ಎಂಬಿವು ಮಹಿಳೆಯರ ಹೆಸರಿನ ಪೂರ್ವದಲ್ಲಿ ಬಳಕೆಯಾಗುತ್ತವೆ. ಶ್ರೀಮತಿ ಮಲ್ಲಮ್ಮನವರ, ಶ್ರೀಮತಿ ರಾಮಕ್ಕನವರೆ, ಸೌಭಾಗ್ಯವತಿಯರಾದ - ಕರಿಯಮ್ಮನವರೆ, ಸೌಭಾಗ್ಯವತಿಯಾದ ಗಂಗಮ್ಮನವರೆ. ಈ ಮೇಲಿನ ಹೆಸರುಗಳಲ್ಲಿ ಬಳಕೆಯಾಗಿರುವ ಗೌರವಸೂಚಕಗಳು ಮದುವೆಯಾದ ಪುರುಷ ಮತ್ತು ಸ್ತ್ರೀ ವ್ಯಕ್ತಿನಾಮಗಳ ಸಂಬೋಧನಾ ಸಂದರ್ಭದಲ್ಲಿ ಬಳಸಲ್ಪಡುವಂಥವುಗಳಾಗಿವೆ. ಮದುವೆಯಾಗದ ಪುರುಷ ಮತ್ತು ಸ್ತ್ರೀಯರ ಹೆಸರುಗಳಲ್ಲಿ ಬಳಕೆಯಾಗುವ ಗೌರವಸೂಚಕಗಳನ್ನು ಇಲ್ಲಿ ಗಮನಿಸಬಹುದು.

ಕುಮಾರ - ಕುಮಾರ ಸಿರಿಯಣ್ಣನವರೆ

ಕುಮಾರ - ಕುಮಾರ ಜಡೆಪ್ಪನವರೆ

ಕುಮಾರಿ - ಪಾರ್ವತಮ್ಮನವರೆ

ಕುಮಾರಿ - ಶಿವಮ್ಮನವರೆ

'ಕುಮಾರ' ಎಂಬುದು ಮದುವೆಯಾಗದ ಪುರುಷನ ಹೆಸರನ್ನು ಸಂಬೋಧಿಸುವಾಗ ಬಳಕೆಯಾದರೆ, 'ಕುಮಾರಿ' ಎಂಬುದು ಮದುವೆಯಾಗದ ಸ್ತ್ರೀ ಹೆಸರನ್ನು ಸಂಬೋಧಿಸುವಾಗ ಬಳಕೆಯಾಗುತ್ತದೆ. 'ಶ್ರೀ' ಎಂಬುದು ಕೆಲವು ಸಲ ಮದುವೆಯಾದ ಮತ್ತು ಮದುವೆಯಾಗದ ಪುರುಷರ ಹೆಸರಿನ ಸಂಬೋಧನೆಯಲ್ಲಿ ಬಳಕೆಯಾಗುವುದುಂಟು. ಅದೇ ರೀತಿ 'ಸನ್ಮಾನ್ಯ', 'ಮಾನ್ಯರಾದ' ಎಂಬ ಗೌರವಸೂಚಕಗಳು ಪುರುಷ ಮತ್ತು ಸ್ತ್ರೀಯರ ಇಬ್ಬರ ಹೆಸರಿನ ಸಂಬೋಧನೆಯಲ್ಲಿ ಬಳಕೆಯಾಗುತ್ತಿರುವುದನ್ನು ಗಮನಿಸಬಹುದು. ಸಾಮಾನ್ಯ ವರ್ಗದ ಜನರ ಹೆಸರುಗಳನ್ನು ಸಂಬೋಧಿಸುವಾಗ, ಹೆಸರಿನ ಪೂರ್ವದಲ್ಲಿ ಗೌರವಸೂಚಕ ಪದಗಳು ಬಳಕೆಯಾಗಬಹುದು ಅಥವಾ ಬಳಕೆಯಾಗದೆ ಇರಬಹುದು. ಆದರೆ ಉತ್ತರ ಭಾಗದಲ್ಲಿ ಕಡ್ಡಾಯವಾಗಿ ಗೌರವಸೂಚಕ ಪದ ಬಳಕೆಯಾಗುತ್ತದೆ. ಇದು ಕನ್ನಡ ಭಾಷಿಕ ಸಂಬೋಧನ ವ್ಯವಸ್ಥೆಯ ವಿಶಿಷ್ಟ ಅಂಶವೆಂದೇ ಗುರುತಿಸಬಹುದು.

### ವಿಶಿಷ್ಟ ಗೌರವ ಸೂಚಕಗಳು

ಸಮಾಜ ಮಠಾಧೀಶರಿಗೆ ಉನ್ನತ ಸ್ಥಾನಕೊಟ್ಟು ಗೌರವಿಸಿದೆ. ಆದುದರಿಂದ ಲೌಕಿಕರ ಹೆಸರುಗಳಿಗೆ ಬಳಸುವ ಗೌರವಸೂಚಕಗಳನ್ನು ಇವರ ಹೆಸರುಗಳಿಗೆ ಬಳಸದೆ, ಪ್ರತ್ಯೇಕ ಗೌರವಸೂಚಕಗಳಿಂದ ಸಂಬೋಧನೆ

ಮಾಡುವುದುಂಟು. ಮಠಾಧೀಶರ ಹೆಸರುಗಳ ಸಂಬೋಧನೆಯಲ್ಲಿ ಅಂಟುವ ಗೌರವ ಸೂಚಕಗಳನ್ನು ಪ್ರಸ್ತುತ ಪ್ರಬಂಧದಲ್ಲಿ ವಿಶಿಷ್ಟ ಗೌರವ ಸೂಚಕಗಳೆಂದು ಪರಿಭಾವಿಸಿಕೊಳ್ಳಲಾಗಿದೆ. ಆ ಹಿನ್ನೆಲೆಯಲ್ಲಿ ಮಠಾಧೀಶರ ಹೆಸರುಗಳಲ್ಲಿ ಬಳಕೆಯಾಗುವ ಗೌರವ ಸೂಚಕಗಳನ್ನು ಇಲ್ಲಿ ಚರ್ಚಿಸಲಾಗುವುದು. ಸಾಮಾನ್ಯ ಜನರ ಹೆಸರನ್ನು ಬಳಸುವಂತೆ, ಮಠಾಧೀಶರ ಹೆಸರನ್ನೂ ಕೂಡ ಸಂಬೋಧಿಸಲಾಗುವುದು. ಹೀಗೆ ಸಂಬೋಧನೆ ಮಾಡುವಾಗ ಸಾಮಾನ್ಯರ ವ್ಯಕ್ತಿನಾಮಗಳ ಪೂರ್ವದಲ್ಲಿ ಗೌರವಸೂಚಕಗಳು ಐಚ್ಛಿಕವಾಗಿದ್ದರೆ, ಮಠಾಧೀಶರ ಹೆಸರಿನ ಸಂಬೋಧನೆಯಲ್ಲಿ ಇದು ಕಡ್ಡಾಯವಾಗಿ ಬಳಕೆಯಾಗುತ್ತದೆ. ಉದಾಹರಣೆಗೆ ಕೆಲವು ಹೆಸರುಗಳನ್ನು ಗಮನಿಸಬಹುದು.

ಶ್ರೀಶ್ರೀಶ್ರೀ ಮಲ್ಲಿಕಾರ್ಜುನ ಸ್ವಾಮಿ

ಶ್ರೀಶ್ರೀಶ್ರೀ ಪರಮ ಪೂಜ್ಯ ಮುರುಘರಾಜೇಂದ್ರ ಸ್ವಾಮಿಗಳು

ಶ್ರೀಶ್ರೀಶ್ರೀ ಜ.ನಿ.ಪ್ರ.ಸ್ವ. ಶಿವಾಚಾರ್ಯಮಹಾಸ್ವಾಮಿಗಳು

ಶ್ರೀಶ್ರೀಶ್ರೀ, ಪರಮಪೂಜ್ಯ, ಪೂಜ್ಯರಾದ, ಜಗದ್ಗುರು ನಿರಂಜನ ಪ್ರಣವ ಸ್ವರೂಪಿ ಮುಂತಾದ ಗೌರವ ಸೂಚಕಗಳು ಹೆಸರಿನ ಪೂರ್ವದಲ್ಲಿ ಬಳಕೆಯಾಗುತ್ತವೆ. ಔಪಚಾರಿಕ ನೆಲೆಯಲ್ಲಿ ಮಠಾಧೀಶರನ್ನು ಇದೇ ರೀತಿ ಸಂಬೋಧಿಸಲಾಗುವುದು. ಅದೇ ರೀತಿ ಹೆಸರಿನ ಕೊನೆಗೆ, ಸ್ವಾಮಿ, ಸ್ವಾಮೀಜಿ, ಮಹಾಸ್ವಾಮಿ, ಅಪ್ಪಗಳು, ಗುರೂಜಿ, ಶರಣರು ಮುಂತಾದ ಗೌರವ ಸೂಚಕಗಳು ಹೆಸರಿನ ಉತ್ತರಭಾಗದಲ್ಲಿ ಬಳಕೆಯಾಗುತ್ತವೆ. ಸಾಮಾನ್ಯವಾಗಿ ಕರ್ನಾಟಕದ ಮಠಾಧೀಶರ ಹೆಸರಿನ ಕೊನೆಯಲ್ಲಿ ಸ್ವಾಮಿ, ಮಹಾಸ್ವಾಮಿ, ಅಪ್ಪಗಳು, ಅಜ್ಜ, ಮುತ್ಯಾ ಎಂಬ ಗೌರವಸೂಚಕಗಳಿಂದ ಸಂಬೋಧಿಸಿದರೆ, ಚಿತ್ರದುರ್ಗ ಪರಿಸರದ ಮಠಾಧೀಶರನ್ನು 'ಶರಣರು' ಎಂದು ಸಂಬೋಧಿಸಲಾಗುವುದು. ಕೆಲವೊಮ್ಮೆ ಹೆಸರನ್ನು ಕರೆಯದೆ ಬರೀ ಗೌರವ ಸೂಚಕಗಳಿಂದಲೇ ಸಂಬೋಧನೆ ಮಾಡುವುದುಂಟು. ಹಾಗೂ ಕೆಲವು ಸಂದರ್ಭದಲ್ಲಿ ಮಠಗಳ ಸ್ಥಳದ ಹೆಸರನ್ನು ಬಳಸಿ ಸಂಬೋಧಿಸುವುದುಂಟು. ಉದಾಹರಣೆಗೆ ಚಿತ್ರದುರ್ಗ ಶ್ರೀಗಳು, ಸಿರಿಗೇರಿ ಶ್ರೀಗಳು, ತರಳುಬಾಳು ಶ್ರೀಗಳು ಇತ್ಯಾದಿ. "ಧರ್ಮಾಧಿಕಾರಿಗಳು ರಾಜಕಾರಣಿಗಳನ್ನು, ಅಧಿಕಾರಿಗಳನ್ನು 'ಸಾಹೇಬ'ರೆಂದೇ ಸಂಬೋಧಿಸುತ್ತಾರೆ. ಸಾಮಾನ್ಯ ಜನರನ್ನು ಏಕವಚನದಿಂದ ಪ್ರಯೋಗಿಸಿ ಅವರ ಹೆಸರು ಇಲ್ಲವೆ ಕುಲನಾಮಗಳನ್ನು ಬಳಸಿ ಸಂಬೋಧಿಸುವುದುಂಟು."[೧] ಮಠಾಧಿಪತಿಗಳಿಗೆ ವಿಶೇಷ ಸ್ಥಾನಮಾನ, ಎಲ್ಲರಿಗಿಂತ ಹೆಚ್ಚಿನ ಗೌರವ ಇರುವುದು ಸಹಜ. ಆದರೆ ಮೇಲಿನ 'ವ್ಯಾಖ್ಯೆ' ಅನೌಪಚಾರಿಕ ನೆಲೆಯ ಸಂಬೋಧನ ಪ್ರಕ್ರಿಯೆಯ ಸಾಧ್ಯತೆಗಳನ್ನು ಧ್ವನಿಸುತ್ತದೆಯೇ ಹೊರತು ಔಪಚಾರಿಕ ನೆಲೆಯ ಸಂಬೋಧನೆಯನ್ನಲ್ಲ ಎಂಬುದನ್ನು ಗಮನಿಸಬಹುದು. ಔಪಚಾರಿಕ ನೆಲೆಯ ಸಂಬೋಧನೆಯಲ್ಲಿ ವ್ಯಕ್ತಿಯ ಪೂರ್ಣ ಹೆಸರನ್ನು ಬಳಸುವುದರಿಂದ ಅದು ಬರೆಹದ ರೂಪಕ್ಕೆ ಸಮೀಪವಾಗಿರುತ್ತದೆ ಅಥವಾ ಅದನ್ನು ಹೋಲುತ್ತದೆ. ಉತ್ತರ ಕರ್ನಾಟಕದಲ್ಲಿ ವ್ಯಕ್ತಿಯ ನಿಜನಾಮಕ್ಕಿಂತ ಕುಲನಾಮ ಪ್ರಧಾನವಾಗಿದ್ದು, ಸಂವಹನ ಸಂದರ್ಭದಲ್ಲಿ ಅಧಿಕೃತವಾಗಿ ಕುಲನಾಮವನ್ನೇ ಬಳಸುತ್ತಾರೆ. ಔಪಚಾರಿಕ ನೆಲೆಯಲ್ಲಿ ಸಂಬೋಧನೆ ಮಾಡುವಾಗಲೂ ಕೂಡ ಕುಲನಾಮವನ್ನೇ ಸಂಬೋಧಿಸಲಾಗುತ್ತಿದ್ದು, ಗೌರವ ಸೂಚಕ ಪದಗಳನ್ನು ಇದೇ ಕುಲನಾಮಕ್ಕೆ ಅಂಟಿಸಲಾಗುವುದು. ಉದಾಹರಣೆಗೆ ಕೆಲವು ಹೆಸರುಗಳನ್ನು ಗಮನಿಸಬಹುದು. ಸನ್ಮಾನ್ಯ ಅಂಗಡಿಯವರೆ,

ಶ್ರೀಯುತ ದಿಬ್ಬದ್‌ರವರೆ, ಮಾನ್ಯಶ್ರೀ ಎಲಿಗಾರ್‌ರವರೆ, ಶ್ರೀ ಬೆಲ್ಲದರವರೆ, ಶ್ರೀಮಾನ್ ಪಾಟೀಲ್‌ರವರೆ ಇತ್ಯಾದಿ. ದಕ್ಷಿಣ ಕರ್ನಾಟಕದಲ್ಲಿ ನಾಮರಚನೆ ಮತ್ತು ಸಂಬೋಧನೆ ಪ್ರಕ್ರಿಯೆಗಳು ಉತ್ತರ ಕರ್ನಾಟಕಕ್ಕಿಂತ ಭಿನ್ನವಾಗಿರುವಂಥದ್ದು. ಈ ನಿಯಮ ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳಿಗೂ ಅನ್ವಯಿಸುತ್ತದೆ. ಚಿತ್ರದುರ್ಗ ಪರಿಸರದಲ್ಲಿ ಗೌರವಸೂಚಕ ಪದಗಳು ನಿಜನಾಮದೊಂದಿಗೆ ಸೇರುತ್ತವೆಯೇ ಹೊರತು ಕುಲನಾಮ ಮುಂತಾದ ನಾಮಗಳೊಂದಿಗೆ ಅಲ್ಲ ಎಂಬುದು ಗಮನೀಯ.

ಔಪಚಾರಿಕ ನೆಲೆಯಲ್ಲಿ ಕೆಲವು ಸಂದರ್ಭದಲ್ಲಿ ವ್ಯಕ್ತಿಯ ಹೆಸರು ಹೇಳದೆ ವ್ಯಕ್ತಿಯ 'ಪದನಾಮ'ದಿಂದ ಸಂಬೋಧಿಸುವುದುಂಟು. ಹೀಗೆ ಪದನಾಮದಿಂದ ಸಂಬೋಧನೆ ಮಾಡುವಾಗ, ಬರೀ ಪದನಾಮವನ್ನು ಹೇಳದೆ, ಗೌರವಸೂಚಕ ಪದಗಳನ್ನು ಸೇರಿಸಿ ಸಂಬೋಧಿಸಲಾಗುವುದು. ಉದಾಹರಣೆಗೆ - ಕುಲಪತಿಯವರೆ, ಸಬ್ ಇನ್ಸ್‌ಪೆಕ್ಟರ್‌ರವರೆ, ಜಿಲ್ಲಾಧಿಕಾರಿಯವರೆ, ಎಸ್ಪಿ ಸಾಹೇಬರೆ ಇತ್ಯಾದಿ. ಈ ಬಗೆಯ ಸಂಬೋಧನೆ ಚಿತ್ರದುರ್ಗ ಪರಿಸರದಲ್ಲಿ ಮಾತ್ರವಲ್ಲ ಅಖಂಡ ಕರ್ನಾಟಕ ವ್ಯಾಪ್ತಿಯಲ್ಲಿಯೂ ಕಾಣಬರುತ್ತದೆ.

### ೪.೧.೨ ಅನೌಪಚಾರಿಕ ನೆಲೆ

ಸಾರ್ವಜನಿಕ ಸಭೆ, ಸಮಾರಂಭಗಳನ್ನು ಹೊರತುಪಡಿಸಿ ಬಸ್ ನಿಲ್ದಾಣ, ರೈಲುನಿಲ್ದಾಣ, ಕ್ರೀಡಾಂಗಣ, ಸಂತೆಬಜಾರ್, ಹೋಟೆಲ್, ಸಿನಿಮಾಮಂದಿರ ಮುಂತಾದ ಸ್ಥಳಗಳಲ್ಲಿ ನಡೆಯುವ ಸಂಬೋಧನೆಯನ್ನು ಅನೌಪಚಾರಿಕ ನೆಲೆಯ ಸಂಬೋಧನೆ ಎಂದು ಕರೆಯಬಹುದು. ಮೇಲಿನ ಈ ಅನೌಪಚಾರಿಕ ನೆಲೆಗಳಲ್ಲಿ ವ್ಯಕ್ತಿಯನ್ನು ಸಂಬೋಧಿಸುವಾಗ, ವ್ಯಕ್ತಿಯ ಹೆಸರನ್ನು ಪೂರ್ಣವಾಗಿ ಕರೆಯದೆ ಮೊಟಕುಗೊಳಿಸಿ ಕರೆಯುವುದು ಸಾಮಾನ್ಯ. ಪೂರ್ಣ ಹೆಸರಿನಿಂದ ಸಂಬೋಧಿಸಿದರೂ, ಹೆಸರಿನ ಜೊತೆಗೆ ಗೌರವ ಸೂಚಕ ಪ್ರತ್ಯಯಗಳನ್ನು ಅಂಟಿಸುವುದು ತುಂಬಾ ವಿರಳ. ಅನೌಪಚಾರಿಕ ನೆಲೆಗಳಲ್ಲಿ ಜಾತಿ, ವಯಸ್ಸು, ಲಿಂಗ ಮುಂತಾದ ಅಂಶಗಳು ಮುಖ್ಯವಾಗಿದ್ದು, ಅವುಗಳ ಹಿನ್ನೆಲೆಯಲ್ಲಿ ಸಂಬೋಧನೆಯ ರೀತಿ ನಿರ್ಧರಿಸಲ್ಪಡುತ್ತದೆ. ಸಂಬೋಧಿಸುವವರ ಮತ್ತು ಸಂಬೋಧಿಸಲ್ಪಡುವವರ ನಡುವೆ ಆತ್ಮೀಯತೆ, ಸಲಿಗೆಗಳು ಇದ್ದರೆ, ಮುದ್ದು ಹೆಸರಿನಿಂದಲೂ, ಕೆಲವೊಮ್ಮೆ ಅಡ್ಡ ಹೆಸರಿನಿಂದಲೂ ಕರೆಯುವುದುಂಟು. ಇಂಥ ಸನ್ನಿವೇಶಗಳಲ್ಲಿ ಜಾತಿ, ವಯಸ್ಸುಗಳು ಮುಖ್ಯವಾಗುವುದಿಲ್ಲ. ಬಾಂಧವ್ಯ ಬಹಳ ಮುಖ್ಯವಾಗುತ್ತದೆ. ಮಹಿಳೆ ಮಹಿಳೆಯರ ನಡುವೆ ಪುರುಷ-ಪುರುಷರ ನಡುವಿನ ಸಂಬೋಧನೆಯಲ್ಲಿ ಇರುವಷ್ಟು ಸಲಿಗೆ ಮಹಿಳೆ-ಪುರುಷರ ನಡುವೆ ಕಾಣಬರುವುದಿಲ್ಲ. ಸಾಮಾನ್ಯವಾಗಿ ಗೌರವದಿಂದಲೇ ಸಂಬೋಧಿಸುವುದುಂಟು. ಸಮೀಪ ಸಂಬಂಧಗಳಿದ್ದು ಸಲಿಗೆ ಇದ್ದಲ್ಲಿ ಪರಸ್ಪರರು ಹೆಸರಿಡಿದು ಕರೆಯುವುದಲ್ಲದೆ, ಮುದ್ದು ಹೆಸರಿನಿಂದಲೂ ಕರೆಯುವುದನ್ನು ಗಮನಿಸಬಹುದಾದರೂ ಅಡ್ಡ ಹೆಸರಿನ ಪ್ರಯೋಗ ಇಲ್ಲವೆಂದೇ ಹೇಳಬಹುದು. ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿನ ಲಿಂಗ ತಾರತಮ್ಯಗಳು ಈ ಬಗೆಯ ನಿಷೇಧಗಳಿಗೆ ಕಾರಣವಾಗಿರಬಹುದು.

ಅನೌಪಚಾರಿಕ ನೆಲೆಗಳಲ್ಲಿ ಸಾಮಾಜಿಕ ವ್ಯವಸ್ಥೆಯ ಏಣಿ-ಶ್ರೇಣಿ ಪದ್ಧತಿಗೆ ಬದ್ಧವಾದ ಸಂಬೋಧನಾ ವಿಧಾನ ಇರುವುದಿಲ್ಲವೆಂದಲ್ಲ ಇರುತ್ತದೆ. ಆದರೆ ಸಾಮಾಜಿಕ ನಿಯಮಗಳು ಪ್ರಸ್ತುತ ನೆಲೆಗಳ ಸಂಬೋಧನೆಗೆ ರಿಯಾಯಿತಿಯನ್ನು ಒದಗಿಸುತ್ತವೆ. ಅಂದರೆ ಮೇಲ್ಜಾತಿಯವರನ್ನು, ಕೆಳ ಜಾತಿಯವರು, ಹಿರಿಯ ಶ್ರೇಣಿಯ

ಅಧಿಕಾರಿಯನ್ನು ಕೆಳ ಶ್ರೇಣಿಯ ಅಧಿಕಾರಿಯು ಹೆಸರಿಡಿದು ಕರೆಯಬಹುದು. ಇಂಥ ಸನ್ನಿವೇಶಗಳಲ್ಲಿ ಪರಸ್ಪರ ನಡುವಿನ ಸಂಬಂಧಗಳು ತುಂಬಾ ಮುಖ್ಯ ಎಂಬುದು ಗಮನಾರ್ಹ ಸಂಗತಿ.

ಅನೌಪಚಾರಿಕ ನೆಲೆಯ ಸಂಬೋಧನೆಯು ಹಲವು ವಿನ್ಯಾಸಗಳಿಂದ ಕೂಡಿರುವಂಥದ್ದು. ಒಂದೊಂದು ವರ್ಗದವರ ಸಂಬೋಧನಾ ರೀತಿ ಏಕ ರೀತಿಯದಾಗಿರದೆ ಬಗೆಬಗೆಯಾಗಿರುವ ಸಾಧ್ಯತೆಯುಂಟು. ಈ ಹಿನ್ನೆಲೆಯಲ್ಲಿ ಹಿರಿಯ ವಯಸ್ಸಿನವರು, ಕಿರಿಯ ವಯಸ್ಸಿನವರು ಮತ್ತು ಸ್ನೇಹಿತರು (ಸಮವಯಸ್ಕರು) ಯಾವ ರೀತಿ ಕರೆಯುತ್ತಾರೆ ಎಂಬುದನ್ನು ಕೆಲವು ಉದಾಹರಣೆಗಳ ಮೂಲಕ ಚರ್ಚಿಸಬಹುದು.

| ಪೂರ್ಣಹೆಸರು | ಹಿರಿಯರು | ಕಿರಿಯರು | ಸ್ನೇಹಿತರು |
|---|---|---|---|
| ತಿಪ್ಪೇಸ್ವಾಮಿ | ತಿಪ್ಪೇಸ್ವಾಮಿ, ತಿಪ್ಪ | ತಿಪ್ಪೇಸ್ವಾಮ್ಯಣ್ಣ, ತಿಪ್ಪಣ್ಣ | ತಿಪ್ಪು, ತಿಪ್ಪೇಶ್, ತಿಪ್ಪಣ್ಣ |
| ಕರಿಯಪ್ಪ | ಕರಿಯಪ್ಪ | ಕರಿಯಪ್ಪಣ್ಣ, ಕರಿಯಣ್ಣ | ಕರಿ, ಕರಿಯ |
| ನಾರಾಯಣ | ನಾರಾಯಣ, ನಾರಾಣಿ | ನಾರಾಯಣಣ್ಣ | ನಾಣಿ, ನಾರಾಣಿ |
| ಮಲ್ಲಿಕಾರ್ಜುನ | ಮಲ್ಲಿ, ಮಲ್ಲಿಕಾರ್ಜುನ | ಮಲ್ಲ್ಯಣ್ಣ, ಮಲ್ಲಿಕಾರ್ಜುನಣ್ಣ | ಮಲ್ಲಿ, ಮಲ್ಲಿಕಾ |
| ಪಾಪಣ್ಣ | ಪಾಪ, ಪಾಪ್ಪ, ಪಾಪಣ್ಣ | ಪಾಪಣ್ಣ | ಪಾಪು |
| ನಾಗರಾಜ | ನಾಗರಾಜ, ನಾಗ, ನಾಗಪ್ಪ | ನಾಗರಾಜಣ್ಣ, ನಾಗಣ್ಣ | ನಾಗು, ರಾಜ, ರಾಜು |
| ರಾಮಮೂರ್ತಿರಾವ್ | ರಾಮ್‌ಮೂರ್ತಿ | ರಾಮ್‌ಮೂರ್ತ್ಯಣ್ಣ, ರಾಮಣ್ಣ | ರಾಮ, ರಾಮು, ಮೂರ್ತಿ |
| ಗಂಗಾಧರ | ಗಂಗಾ, ಗಂಗಾಧರ | ಗಂಗಣ್ಣ | ಗಂಗ, ಗಂಗೂ |
| ತಿರುಮಲ | ತಿರುಮಲ | ತಿರುಮಲಣ್ಣ, ತಿಮ್ಮಣ್ಣ | ತಿಮ್ಮ |
| ಲಿಂಗರಾಜ | ಲಿಂಗರಾಜ, ಲಿಂಗಪ್ಪ | ಲಿಂಗರಾಜಣ್ಣ | ಲಿಂಗ/ರಾಜ, ರಾಜು |
| ಲಕ್ಷ್ಮಣ | ಲಕ್ಷ್ಮಣ | ಲಕ್ಷ್ಮಣಣ್ಣ | ಲಚ್ಚ, ಲಚ್ಚು |
| ರಾಜಗೋಪಾಲ | ರಾಜಗೋಪಾಲ, ಗೋಪಾಲ | ರಾಜಗೋಪಾಲಣ್ಣ, ಗೋಪಾಲಣ್ಣ | ರಾಜ, ರಾಜು, ಗೋಪಿ |
| ಆಂಜನೇಯ | ಆಂಜನೆಯ | ಅಂಜಿನಣ್ಣ | ಅಂಜಿ, ಅಂಜು, ಅಂಜಿನಿ |
| ಮರಿಬಸಪ್ಪ | ಮರಿಬಸಪ್ಪ, ಮರಿಬಸ್ಯ, ಬಸಪ್ಪ | ಮರಿಬಸಣ್ಣ, ಮರ್ಯಣ್ಣ | ಮರಿ |
| ತಿಮ್ಮಯ್ಯ | ತಿಮ್ಮಯ್ಯ, ತಿಮ್ಮಣ್ಣ | ತಿಮ್ಮಯ್ಯಣ್ಣ | ತಿಮ್ಮ, ತಿಮ್ಮು |
| ರವಿಶಂಕರ | ರವಿಶಂಕರ, ರವಿ | ರವಿಯಣ್ಣ, ರವಿ, ಶಂಕ್ರಣ್ಣ | ರವಿ, ಶಂಕರ್ |
| ಕುಮಾರಪ್ಪ | ಕುಮಾರಪ್ಪ, ಕುಮಾರ | ಕುಮಾರಣ್ಣ, ಕುಮಾರಪ್ಪಣ್ಣ | ಕುಮಾರ್ , ಕುಮ್ಮಿ |
| ಚಂದ್ರಪ್ಪ | ಚಂದ್ರ, ಚಂದ್ರಪ್ಪ | ಚಂದ್ರಪ್ಪಣ್ಣ, ಚಂದ್ರಣ್ಣ | ಚಂದ್ರ, ಚಂದು |
| ಹಸೇನ್‌ಪೀರ್ | ಹಸೇನ್, ಹಸೇನ್‌ಪೀರ್ | ಹಸೇನಣ್ಣ, ಹಸೇನ್‌ಪೀರಣ್ಣ | ಹಸೇನ್, ಪೀರ್ |
| ಹೊನ್ನೂರಪ್ಪ | ಹೊನ್ನೂರಪ್ಪ, ಹೊನ್ನಪ್ಪ | ಹೊನ್ನೂರಣ್ಣ | ಹೊನ್ನು |
| ಹನುಮಂತರೆಡ್ಡಿ | ಹನುಮಂತ, ಹನುಮಂತರೆಡ್ಡಿ | ಹನುಮಂತಣ್ಣ, ಹನುಮಂತರೆಡ್ಡ್ಯಣ್ಣ | ರೆಡ್ಡಿ |
| ಸಿದ್ದಯ್ಯ | ಸಿದ್ದ, ಸಿದ್ದಯ್ಯ | ಸಿದ್ದಣ್ಣ, ಸಿದ್ದಯ್ಯಣ್ಣ | ಸಿದ್ದು, ಸಿಧು |
| ಮಂಜುನಾಥ | ಮಂಜ, ಮಂಜು, ಮಂಜುನಾಥ | ಮಂಜಣ್ಣ, ಮಂಜುನಾಥಣ್ಣ | ಮಂಜು |
| ಶಂಕರನಾಯ್ಕ | ಶಂಕರ, ನಾಯ್ಕ | ಶಂಕರಣ್ಣ | ನಾಯ್ಕ, ಶಂಕರ್, ಶಂಕು |
| ಶ್ರೀನಿವಾಸರೆಡ್ಡಿ | ಶ್ರೀನಿವಾಸ, ಶ್ರೀನಿವಾಸರೆಡ್ಡಿ | ಶೀನಣ್ಣ, ರೆಡ್ಡ್ಯಣ್ಣ | ಶೀನು, ರೆಡ್ಡಿ |
| ಸಿದ್ದೇಶಾಚಾರಿ | ಸಿದ್ದೇಶ, ಆಚಾರಿ | ಸಿದ್ದಣ್ಣ, ಸಿದ್ದೇಶಣ್ಣ | ಸಿದ್ದು, ಆಚಾರಿ |
| ಕೃಷ್ಣಭಟ್ | ಕೃಷ್ಣಭಟ್, ಭಟ್ | ಕೃಷ್ಣಪ್ಪ | ಕಿಟ್ಟು, ಭಟ್ಟ |

| | | | |
|---|---|---|---|
| ರಾಘವೇಂದ್ರರಾವ್ | ರಾಘವೇಂದ್ರ, ರಾಘವೇಂದ್ರರಾವ್ | ರಾಘವೇಂದ್ರಣ್ಣ, ರಾಘಣ್ಣ | ರಘು, ರಾಘು, ರಾಘವ |
| ಜಗದೀಶ | ಜಗದೀಶ | ಜಗದೀಶಣ್ಣ, ಜಗ್ಗಣ್ಣ | ಜಗ್ಗು, ಜಗ್ಗ |
| ಶಿವನಗೌಡ | ಶಿವಣ್ಣ, ಶಿವನಗೌಡ | ಶಿವಣ್ಣ | ಶಿವು, ಗೌಡ |
| ಪರಮೇಶ್ವರಯ್ಯ | ಪರಮೇಶಿ, ಪರಮೇಶ್ವರ | ಪರಮೇಶಣ್ಣ, ಪರಮಣ್ಣ | ಪರು, ಪರಮಿ |
| ವೆಂಕಟೇಶ ಶೆಟ್ಟಿ | ವೆಂಕಟೇಶ | ವೆಂಕಟೇಶಣ್ಣ, ವೆಂಕಣ್ಣ | ವೆಂಕಿ, ಶೆಟ್ಟಿ, ಎಂಟು |
| ಮುರುಳೀಧರ | ಮುರುಳಿ, ಮುರುಳಿಧರ | ಮುರುಳ್ಯಣ್ಣ, ಮುರಳೀಧರಣ್ಣ | ಮುರುಳಿ, ಮುರು |
| ಸಿರಿಯಣ್ಣ | ಸಿರಿಯಣ್ಣ, ಸಿರಿಯಪ್ಪ, ಸಿಂಗ | ಸಿರಿಯಣ್ಣ | ಸಿರಿ |
| ಚನ್ನಕೇಶವ | ಚನ್ನ, ಚನ್ನಪ್ಪ, ಚನ್ನಕೇಶವ | ಚನ್ನಣ್ಣ | ಚನ್ನ, ಚನ್ನು, ಕೇಶವ್ |
| ಸುರೇಶ್ | ಸುರೇಶ್ | ಸುರೇಶಣ್ಣ, ಸೂರ್‍ಯಣ್ಣ | ಸೂರಿ |
| ನಂದಿಬಸಯ್ಯ | ನಂದಿಬಸಯ್ಯ, ಬಸಯ್ಯ | ನಂದಿಬಸಣ್ಣ, ಬಸಣ್ಣ | ನಂದಿ |
| ರವಿಕುಮಾರ | ರವಿ, ರವಿಕುಮಾರ | ರವ್ಯಣ್ಣ | ರವಿ/ಕುಮಾರ |
| ಗಂಗಾಧರಶಾಸ್ತ್ರಿ | ಗಂಗಾಧರ, ಗಂಗಣ್ಣ | ಗಂಗಾಧರಣ್ಣ, ಗಂಗಣ್ಣ | ಗಂಗು, ಶಾಸ್ತ್ರಿ |
| ನಿಂಗಪ್ಪ | ನಿಂಗ, ನಿಂಗಪ್ಪ | ನಿಂಗಣ್ಣ | ನಿಂಗು |
| ವನಜಾಕ್ಷಿ | ವನಜ, ವನಜಾಕ್ಷಿ | ವನಜಕ್ಕ, ವಂಜಕ್ಕ | ವಂಜಿ |
| ಪಂಕಜಾಕ್ಷಿ | ಪಂಕಜ, ಪಂಕಜಾಕ್ಷಿ | ಪಂಕಕ್ಕ | ಪಂಕ, ಪಂಕಿ |
| ಪವಿತ್ರ | ಪವಿತ್ರ | ಪವಕ್ಕ | ಪವಿ, ಪೈತ್ರ |
| ನಾಗರತ್ನ | ನಾಗರತ್ನ, ರತ್ನ | ನಾಗಕ್ಕ/ರತ್ನಕ್ಕ, ನಾಗರತ್ನಕ್ಕ | ನಾಗು, ರತ್ನ |
| ರಾಜೇಶ್ವರಿ | ರಾಜಮ್ಮ | ರಾಜಕ್ಕ | ರಾಜಿ |
| ಚಿತ್ರಲಿಂಗಮ್ಮ | ಚಿತ್ರಮ್ಮ | ಚಿತ್ರಕ್ಕ | ಚಿತ್ತು |
| ಸಾವಿತ್ರಮ್ಮ | ಸಾವಿತ್ರಿ | ಸಾವಿತ್ರಕ್ಕ, ಸಾವ್ಯಕ್ಕ | ಸಾವಿ |
| ಭಾಗೀರಥಿ | ಭಾಗೀರಥಿ, ಭಾಗಮ್ಮ | ಭಾಗಕ್ಕ | ಭಾಗು |
| ಪದ್ಮಮ್ಮ | ಪದ್ಮ | ಪದ್ಮಕ್ಕ, ಪದ್ದಕ್ಕ | ಪದ್ದು, ಪದ್ಮ |
| ಅನ್ನಪೂರ್ಣಮ್ಮ | ಅನ್ನಪೂರ್ಣ | ಅನ್ನಪೂರ್ಣಕ್ಕ, ಪೂರಕ್ಕ | ಪೂರಿ |
| ಮಾದಮ್ಮ | ಮಾದ, ಮಾದವ್ವ | ಮಾದಕ್ಕ | ಮಾದು, ಮದು |
| ಜಯಮ್ಮ | ಜಯ, ಜಯಿ | ಜಯಕ್ಕ | ಜಯ |
| ತೋಯಿಜಾಕ್ಷಿ | ತೋಯಮ್ಮ, ತೋಯಿಜಾಕ್ಷಿ | ತೋಯಕ್ಕ | ತೋಯ, ತೋಯಿ |
| ನಿರ್ಮಲ | ನಿರ್ಮಲ/ಲಿ | ನಿರ್ಮಲಕ್ಕ | ನಿಮ್ಮಿ, ನಿರ್ಮಿ |
| ಚಳ್ಳೇರಮ್ಮ | ಚಳ್ಳೇರಮ್ಮ | ಚಳ್ಳಕ್ಕ | ಚಳ್ಳಿ, ಚಳಿ |
| ಶಾಮಲ | ಶಾಮಲ | ಶಾಮಕ್ಕ | ಶಮಿ, ಶಾಮಿ |
| ರೂಪ್ಲಿಬಾಯಿ | ರೂಪ್ಲಿ, ರೂಪಮ್ಮ | ರೂಪಕ್ಕ | ರೂಪಿ |
| ಕ್ಯಾತಮ್ಮ | ಕ್ಯಾತಮ್ಮ | ಕ್ಯಾತಕ್ಕ | ಕ್ಯಾತಿ, ಕತಿ |
| ಶಾಹೀನ್ ಬೀ | ಶಾಹೀನ | ಶಾಹೀನಕ್ಕ | ಶಾಹಿ |
| ಸಣ್ಣಕ್ಕ | ಸಣ್ಣಿ, ಸಣ್ಣಕ್ಕ | ಸಣ್ಣಕ್ಕ | ಸಣ್ಣಿ |
| ಶೈಲಜ | ಶೈಲಜ, ಶೈಲ, ಶೈಲಿ | ಶೈಲಕ್ಕ | ಶೈಲಾ |
| ಕಲ್ಪನಾ | ಕಲ್ಪನಾ | ಕಲ್ಪಕ್ಕ, ಕಪ್ಪಕ್ಕ | ಕಲಾ, ಕಲ್ಪ, ಕಲ್ಪಿ |
| ಅಶ್ವಿನಿ | ಅಶ್ವಿನಿ | ಅಶ್ವಿನಕ್ಕ, ಅಶಕ್ಕ | ಅಶಿ, ಅಶ್ವಿ |

| | | | |
|---|---|---|---|
| ಬಸಮ್ಮ | ಬಸಮ್ಮ, ಬಸವ್ವ | ಬಸಕ್ಕ | ಬಸು |
| ಹೇಮಾವತಿ | ಹೇಮ, ಹೇಮಿ, ಹೇಮಾವತಿ | ಹೇಮಕ್ಕ | ಹೇಮ, ಹೇಮಿ, ಹೇಮು |
| ತಿಪ್ಪಮ್ಮ | ತಿಪ್ಪಮ್ಮ, ತಿಪ್ಪವ್ವ, ತಿಪ್ಪಿ | ತಿಪ್ಪಕ್ಕ | ತಿಪ್ಪು |
| ಕವಿತಾ | ಕವಿತ | ಕವಿತಕ್ಕ | ಕವಿ |
| ಸುಜಾತ | ಸುಜಾತ | ಸುಜಾತಕ್ಕ, ಸೂಜಕ್ಕ | ಸೂಜಿ, ಸುಜ್ಜಿ, ಸುಜಿ |
| ಅನುರಾಧ | ಅನುರಾಧ, ರಾಧ | ಅನುರಾಧಕ್ಕ, ರಾಧಕ್ಕ | ಅನು, ರಾಧ |
| ಪಾರ್ವತಮ್ಮ | ಪಾರ್ವತಿ | ಪಾರ್ವತಕ್ಕ, ಪಾರಕ್ಕ | ಪಾರು, ಪರು |
| ಮೀನಾಕ್ಷಮ್ಮ | ಮೀನಾಕ್ಷಿ | ಮೀನಾಕ್ಷಕ್ಕ, ಮೀನಕ್ಕ | ಮೀನು, ಮೀನಾ |
| ಈರಮ್ಮ | ಈರಿ, ಈರಮ್ಮ, ಈರವ್ವ | ಈರಕ್ಕ | ಈರು, ಈರ್ಗಿ |
| ಗಂಗಮ್ಮ | ಗಂಗವ್ವ, ಗಂಗಿ, ಗಂಗಮ್ಮ | ಗಂಗಕ್ಕ | ಗಂಗು |
| ರೇಣುಕಮ್ಮ | ರೇಣುಕ | ರೇಣಕ್ಕ | ರೇಣು, ರೇಣಿ |
| ಉಮಾದೇವಿ | ಉಮಾ | ಉಮಕ್ಕ | ಉಮಾ, ಉಮ್ಮಿ |
| ಗಾಯಿತ್ರಮ್ಮ | ಗಾಯಿತ್ರಿ, ಗಾಯಿತ್ರಕ್ಕ | ಗಾಯಿ | ಗಾಯ |
| ಸರಸ್ವತಿ | ಸರಸ್ವತಿ, ಸರಸು | ಸರಸಕ್ಕ, ಸರಸ್ವತಕ್ಕ | ಸರಸು, ಸರು |
| ಶಕುಂತಲ | ಶಕುಂತಲ | ಶಕುಂತಲಕ್ಕ, ಶಂಕಕ್ಕ | ಶಕು, ಶಂಕು, ಶಕಿ, ಶಕ್ಕು |
| ಪ್ರಭಾವತಿ | ಪ್ರಭಾ, ಪ್ರಭಾವತಿ | ಪ್ರಭಕ್ಕ | ಪ್ರಭಾ, ಪಬಿ |
| ನೂರ್‌ಜಾನ್ | ನೂರ್‌ಜಾನ್ | ನೂರ್‌ಜಾನಕ್ಕ, ನೂರಕ್ಕ | ನೂರ್ |
| ಸುಶೀಲಮ್ಮ | ಸುಶೀಲ | ಸುಶೀಲಕ್ಕ, ಶೀಲಕ್ಕ | ಸುಸಿ |
| ಲಲಿತಮ್ಮ | ಲಲಿತ | ಲಲಿತಕ್ಕ, ಲಲ್ಲ್ಯಕ್ಕ | ಲಲ್ಲಿ |
| ಮಮತ | ಮಮತ | ಮಮತಕ್ಕ, ಮಮ್ಮಕ್ಕ | ಮಮ್ಮಿ |
| ಲಕ್ಷ್ಮಿದೇವಿ | ಲಕ್ಷ್ಮಿ, ಲಕ್ಷ್ಮಿದೇವಿ | ಲಕ್ಷ್ಮಕ್ಕ | ಲಕ್ಷ್ಮಿ, ಲಕ್ಕಿ |
| ಪಾಪಮ್ಮ | ಪಾಪಿ, ಪಾಪವ್ವ | ಪಾಪಕ್ಕ | ಪಪ್ಪು, ಪಾಪ |
| ಮಂಜುಳ | ಮಂಜು, ಮಂಜುಳ | ಮಂಜಕ್ಕ | ಮಂಜಿ, ಮಂಜು |
| ಮಲ್ಲಮ್ಮ | ಮಲ್ಲಿ, ಮಲ್ಲವ್ವ | ಮಲ್ಲಕ್ಕ | ಮಲ್ಲಿಕಾ, ಮಲ್ಲು |

ಮೇಲಿನ ಪಟ್ಟಿಯ ಹೆಸರುಗಳನ್ನು ಗಮನಿಸಿದಾಗ ಒಂದು ಹೆಸರು ಮೂರು ಬೇರೆ ಬೇರೆ ವಯೋಮಾನದ ವ್ಯಕ್ತಿಗಳಿಂದ ಯಾವ ರೀತಿ ಬಳಸಲ್ಪಡುತ್ತದೆ ಎಂಬುದನ್ನು ಗಮನಿಸಬಹುದು. ಹಿರಿಯ ವಯಸ್ಸಿನವರ ಸಂಬೋಧನೆಯಲ್ಲಿ ಹೆಸರು ಪೂರ್ಣವಾಗಿ ಬಳಕೆಯಾಗುವಂತೆ, ಮೊಟಕಾಗಿಯೂ ಸಂಬೋಧಿಸಲ್ಪಡುತ್ತದೆ. "ಹಿರಿಯ ಶ್ರೇಣಿಯ ಅಧಿಕಾರಿಗಳು ಕಿರಿಯ ಶ್ರೇಣಿಯವರನ್ನು ಸಂಬೋಧಿಸುವಾಗ ಅವರ ಹೆಸರು/ಕುಲನಾಮ (ಕೆಲವು ವೇಳೆ ಕ್ವಚಿತ್ತಾಗಿ) ಪದನಾಮಗಳನ್ನು ಬಳಸುವುದುಂಟು."[3] ಎಂಬುದು ಕೇವಲ ಉದ್ಯೋಗಸ್ಥ ವಲಯದ ಸಂಬೋಧನೆಯನ್ನು ಧ್ವನಿಸದೆ, ವಯಸ್ಸಿನ ಅಂತರಗಳ ನಡುವಿನ ಸಂಬೋಧನೆಯನ್ನು ಧ್ವನಿಸುತ್ತದೆ. ಇದು ಹಿರಿಯರು ಕಿರಿಯರನ್ನು ಸಂಬೋಧಿಸುವ ಸಾಮಾನ್ಯ ವಿಧಾನ. ಆದರೆ ಎಲ್ಲಾ ಸಂದರ್ಭದಲ್ಲೂ ಹಿರಿಯರೆಲ್ಲರೂ ಇದೇ ರೀತಿ ಸಂಬೋಧಿಸದೆ, ಸಲಿಗೆ, ಪ್ರೀತಿಗಳು ಜಾಸ್ತಿ ಇದ್ದಲ್ಲಿ ಮುದ್ದು ಹೆಸರು, ಅಡ್ಡ ಹೆಸರಿನಿಂದಲೂ ಸಂಬೋಧಿಸುವ ಸಾಧ್ಯತೆಗಳನ್ನು ಕಾಣಲು ಸಾಧ್ಯ. ಮತ್ತು ಈ ಯಾವ ಹೆಸರಿನಿಂದ ಕರೆಯದೆ ತಾವೇ ಸ್ವತಃ ಒಂದು ಹೆಸರಿಂದ ಮುದ್ದಾಗಿ ಕರೆಯಲೂಬಹುದು.

ಕಿರಿಯ ವಯಸ್ಸಿನವರು ಹಿರಿಯ ವಯಸ್ಸಿನವರನ್ನು ಸಂಬೋಧಿಸುವಾಗ ಹೆಸರಿನಿಂದ ಸಂಬೋಧಿಸದೆ, ಗೌರವಸೂಚಕ ಪದಗಳಿಂದ ಸಂಬೋಧಿಸುವುದು ವಾಡಿಕೆ. ಉದಾಹರಣೆಗೆ ಅಣ್ಣ, ಅಕ್ಕ, ಅಮ್ಮ (ಬಾರಮ್ಮ), ಅಪ್ಪ (ಬಾರಪ್ಪ), ತಾತ, ಅಜ್ಜ, ಅಜ್ಜಿ ಮೊದಲಾದವು. ಇವುಗಳಲ್ಲದೆ, ಸ್ವಾಮಿ, ಯಜಮಾನ, ಗುರುವೆ ಇತ್ಯಾದಿ ಪದಗಳಿಂದಲೂ ಸಂಬೋಧಿಸುತ್ತಾರೆ. ಕಿರಿಯರು, ಹಿರಿಯರನ್ನು ಹೆಸರಿಡಿದು ಕರೆಯುವುದು ಸಾಮಾಜಿಕ ನಿಷೇಧವಾಗಿದೆ. ಈ ನಿಯಮ ಸಮಾಜದ ಎಲ್ಲಾ ವರ್ಗದವರಿಗೂ ಅನ್ವಯವಾಗುವುದಿಲ್ಲ. ಸಮಾನ ವರ್ಗಗಳ ಮಧ್ಯೆ ಪರಸ್ಪರ ಹೆಚ್ಚು ಅತ್ಮೀಯತೆ, ಸಲಿಗೆ ಇದ್ದಾಗ, ಕೆಲವು ಸಂದರ್ಭಗಳಲ್ಲಿ ಕಿರಿಯರು ಹಿರಿಯರನ್ನು ಹೆಸರಿಡಿದು ಕರೆಯುವುದುಂಟು. ಕೆಲವು ಅನಿವಾರ್ಯ ಪ್ರಸಂಗಗಳಲ್ಲಿ ಕಿರಿಯರು, ಹಿರಿಯರ ಹೆಸರಿಡಿದು ಸಂಬೋಧಿಸುವಾಗ ಹೆಸರಿನ ಕೊನೆಗೆ ಗೌರವಸೂಚಕ ಪ್ರತ್ಯಯಗಳನ್ನು ಅಂಟಿಸುತ್ತಾರೆ. ಉದಾಹರಣೆಗೆ ಕರಿಯಪ್ಪಣ್ಣ (< ಅಣ್ಣ) ಸೋಮಪ್ಪಣ್ಣ (< ಅಣ್ಣ) ರಾಜಶೇಖರ`ಪ್ಪ (< ಅಪ್ಪ) ಬೋರಮ್ಮಕ್ಕ (< ಅಕ್ಕ) ರೇಣುಕ' ಮ್ಮ (< ಅಮ್ಮ) ಇತ್ಯಾದಿ. ಅಣ್ಣ, ಅಪ್ಪ, ಅಕ್ಕ, ಅಮ್ಮ ಈ ಪದಗಳು. ಅನೌಪಚಾರಿಕ ನೆಲೆಯಲ್ಲಿ, ಕುಟುಂಬೇತರರ ಸಂಬೋಧನೆಯಲ್ಲಿ ಗೌರವಸೂಚಕ ಅರ್ಥದಲ್ಲಿ ಬಳಕೆಯಾದರೆ, ಕೌಟುಂಬಿಕ ಪರಿಸರದವರ ಸಂಬೋಧನೆಯಲ್ಲಿ ಸಂಬಂಧ ಸೂಚಕ ಅರ್ಥದಲ್ಲಿ ಬಳಕೆಯಾಗುತ್ತವೆ. ಸ್ನೇಹಿತರು ಹೆಸರಿಡಿದು ಸಂಬೋಧಿಸುತ್ತಾರಾದರೂ, ಹೆಸರನ್ನು ಮೊಟಕುಗೊಳಿಸಿ ಮುದ್ದು ಹೆಸರಿಂದ ಸಂಬೋಧಿಸುವುದೇ ಹೆಚ್ಚು. ಹೆಚ್ಚು ಸಲಿಗೆ ಇದ್ದರೆ ಅಡ್ಡ ಹೆಸರಿನಿಂದಲೂ ಕರೆಯಬಹುದು. ಇಬ್ಬರು ಒಂದೇ ಶ್ರೇಣಿಯ ಅಧಿಕಾರಿಗಳು ಒಬ್ಬರನ್ನೊಬ್ಬರು ಸಂಬೋಧಿಸುವಾಗ ಪರಸ್ಪರ ಕುಲನಾಮ ಇಲ್ಲವೆ ಹೆಸರು ಇಲ್ಲವೆ ಪದನಾಮಗಳನ್ನು ಬಳಸುವುದುಂಟು[೩] ಎಂಬ ಮಾತು ಮೇಲಿನ ಹೇಳಿಕೆಗೆ ಪೂರಕವಾಗಿದೆ. ಸ್ನೇಹಿತರ ಸಂಬೋಧನೆಯಲ್ಲಿ ಸಂಬಂಧ ಸೂಚಕ ವಾರ್ಗಿಕಗಳ ಬಳಕೆ ಇಲ್ಲ ಎನ್ನುವಷ್ಟರ ಮಟ್ಟಿಗೆ ಗೌಣವಾಗಿರುತ್ತದೆ. ಹೆಸರು ಎರಡು ನಿರ್ದಿಷ್ಟ ಘಟಕಗಳಿಂದ ಕೂಡಿದ್ದಲ್ಲಿ ಕೆಲವರು ಒಂದು ಭಾಗದಿಂದ ಸಂಬೋಧಿಸಿದರೆ, ಇನ್ನೂ ಕೆಲವರು ಇನ್ನೊಂದು ಭಾಗದಿಂದ ಸಂಬೋಧಿಸಬಹುದು. ಉದಾಹರಣೆಗೆ ಹಿಂದಿನ ಪಟ್ಟಿಯಲ್ಲಿ ಇದಕ್ಕೆ ಉದಾಹರಣೆಗಳು ಇವೆಯಾದರೂ ಅಧಿಕೃತವಾಗಿ ಕೆಲವು ಹೆಸರುಗಳನ್ನು ಇಲ್ಲಿ ಗಮನಿಸಬಹುದು.

ನಾಗರಾಜ

ಕೇಶವಮೂರ್ತಿ

ನಾಗ + ರಾಜ, ಕೇಶವ + ಮೂರ್ತಿ, ಈ ಹೆಸರುಗಳು ಎರಡೆರಡು ಘಟಕಗಳಿಂದ ಕೂಡಿವೆ. 'ನಾಗರಾಜ' ಎಂಬುವವರನ್ನು ಕೆಲವರು ನಾಗ, ನಾಗು ಎಂದು ಕರೆಯುವಂತೆ, ರಾಜ, ರಾಜು ಎಂದೂ ಕರೆಯಬಹುದು. ಅದೇ ರೀತಿ ಕೇಶವ, ಕೇಶು ಎಂದು ಸಂಬೋಧಿಸುವಂತೆ, ಮೂರ್ತಿ ಎಂದೂ ಸಂಬೋಧಿಸುವರು. 'ಅ' ಕಾರಾಂತ್ಯ ಸ್ವರಗಳನ್ನು 'ಎ' ಕಾರಾಂತ್ಯ ಮಾಡಿಯೂ ಸಂಬೋಧಿಸುವಂತೆ, ಇ, ಕಾರಾಂತ್ಯ 'ಎ' ಕಾರಾಂತ್ಯಗೊಳಿಸಿಯೂ ಸಂಬೋಧಿಸುವುದನ್ನು ಗಮನಿಸಬಹುದು.

ಸ್ನೇಹ ವಲಯದಲ್ಲಿ ಕೆಲವು ಸಂದರ್ಭದಲ್ಲಿ ಪ್ರೀತಿಯಿಂದ ವೃತ್ತಿ/ಜಾತಿ ಸೂಚಕ ವಾರ್ಗಿಕಗಳಿಂದ ಮಾತ್ರ ಸಂಬೋಧಿಸುವುದುಂಟು. ಉದಾಹರಣೆಗೆ ಗೋಪಾಲನಾಯಕ, ಶೇಷಶೆಟ್ಟಿ, ನಾರಾಯಣರೆಡ್ಡಿ ಎಂಬ ಹೆಸರುಗಳನ್ನು ಗಮನಿಸಬಹುದು. ಈ ಹೆಸರಿನ ವ್ಯಕ್ತಿಗಳನ್ನು ಸಂಬೋಧಿಸುವಾಗ 'ನಾಯಕ', 'ಶೆಟ್ಟಿ', 'ರೆಡ್ಡಿ'

ಎಂದಷ್ಟೇ ಕರೆಯುವುದುಂಟು. ಸಾಮಾನ್ಯವಾಗಿ ಹೀಗೆ ಜಾತಿಸೂಚಕ ವಾರ್ಗಿಕಗಳಿಂದ ಕರೆಯುವುದು ಅನ್ಯ ಮತೀಯರೇ ಆಗಿದ್ದು, ಸ್ವಜಾತಿಯವರು ಹೀಗೆ ಸಂಬೋಧಿಸುವಂತೆ ಕಾಣಬರುವುದಿಲ್ಲ. ಔಪಚಾರಿಕ ಮತ್ತು ಅನೌಪಚಾರಿಕ ನೆಲೆಯ ಸಂಬೋಧನೆ ಎಂಬ ಎರಡು ಪ್ರಕಾರಗಳಲ್ಲಿ ಚರ್ಚೆಯಾಗಿರುವ ವಿಷಯಗಳು ಚಿತ್ರದುರ್ಗ ಪರಿಸರದ ನಾಮ ಸಂಬೋಧನೆಗೆ ಮೀಸಲಾಗಿರದೆ ಅಥವಾ ಅಲ್ಲಿ ಮಾತ್ರ ಕಾಣಸದೆ, ಕರ್ನಾಟಕದ ಇತರೆ ಕೆಲವು ಭಾಗಗಳ ಸಂಬೋಧನೆಯಲ್ಲೂ ಈ ವಿಧಾನಗಳನ್ನು ಕಾಣಲು ಸಾಧ್ಯ. ಮತ್ತು ಇಲ್ಲಿ ಉಲ್ಲೇಖಿಸಿರುವ ಉದಾಹರಣೆಗಳು ಮಾದರಿಗಾಗಿ ತೆಗೆದುಕೊಂಡಿರುವುದು ಮಾತ್ರ. ಹಾಗೂ ಮೂರು ವಯೋಮಾನದವರ ಸಂಬೋಧನೆಯಲ್ಲಿ ನಿರೂಪಿತವಾಗಿರುವ ನಿಯಮಗಳು ಕಡ್ಡಾಯವಾಗಿರದೆ, ಸಂಭವನೀಯವಾಗಿರುತ್ತವೆ.

## ೪.೨ ಬರೆಹ - ಮೌಖಿಕ

ಭಾಷೆಯನ್ನು ಎರಡು ರೀತಿಯಲ್ಲಿ ಬಳಸುತ್ತೇವೆ. ಒಂದು ಮೌಖಿಕವಾಗಿ, ಇನ್ನೊಂದು ಬರವಣಿಗೆಯ ಮೂಲಕ. ಮೌಖಿಕಭಾಷೆ ಅಂದರೆ ಆಡುಭಾಷೆ. ಈ ಆಡುಭಾಷೆ ಮತ್ತು ಲಿಖಿತ ಭಾಷೆಗಳ ಮಧ್ಯೆ ಕೆಲವು ಸೂಕ್ಷ್ಮ ಅಂತರಗಳಿವೆ. ಈ ಎರಡೂ ವರ್ಗದ ಭಾಷಾ ಬಳಕೆಗೆ ಸಂದರ್ಭಗಳು ಬೇರೆ ಬೇರೆ. ಒಂದರ ವೇದಿಕೆಯಲ್ಲಿ ಇನ್ನೊಂದನ್ನು ಬಳಸುವುದು ಸೂಕ್ತವಾಗಲಾರದು. ವ್ಯಾವಹಾರಿಕ ಭಾಷೆ ಲಿಖಿತ ಭಾಷೆಗಿಂತ ಭಿನ್ನ. ಅದೇ ರೀತಿ ಲಿಖಿತ ಭಾಷೆ ವ್ಯಾವಹಾರಿಕ ಭಾಷೆಗಿಂತ ಭಿನ್ನ. ಕುತೂಹಲದ ಸಂಗತಿಯೆಂದರೆ, ಮಾತನಾಡುವಾಗ ಬರವಣಿಗೆಯ ಭಾಷೆಯನ್ನಾಗಲೀ, ಬರವಣಿಗೆಯಲ್ಲಿ ಆಡುಭಾಷೆಯನ್ನಾಗಲೀ ಬಳಸುವುದಿಲ್ಲ ಎಂಬುದು. (ಕೆಲವು ಅಪವಾದಗಳು ಇರಲೂ ಸಾಧ್ಯ) ವ್ಯಕ್ತಿನಾಮಗಳು ಭಾಷೆಯ ಘಟಕಗಳಾಗಿರುವುದರಿಂದ, ಭಾಷೆಯ ನಿಯಮಗಳು ವ್ಯಕ್ತಿನಾಮಗಳಿಗೂ ಅನ್ವಯಿಸುತ್ತವೆ. ಈ ಹಿನ್ನಲೆಯಲ್ಲಿ ವ್ಯಕ್ತಿನಾಮಗಳ ಬರಹದ ರೂಪಗಳು ಮತ್ತು ಸಂಬೋಧನೆಯಲ್ಲಿ ಬಳಸಬಹುದಾದ ಸಾಧ್ಯತೆಗಳನ್ನು ಕುರಿತು ಇಲ್ಲಿ ಗಮನಿಸಲಾಗಿದೆ.

'ನಾಮಕರಣ' ಪ್ರಕ್ರಿಯೆ ವೈವಿಧ್ಯಮಯವಾದುದು. ಬ್ರಾಹ್ಮಣರಲ್ಲಿ ತಂದೆ, ಬ್ರಾಹ್ಮಣೇತರರಲ್ಲಿ ಸೋದರತ್ತೆ, ಸೋದರಮಾಮ, ಇಲ್ಲವೆ ಮನೆತನದ ಗುರುಗಳು, ಪುರೋಹಿತರು ಹೆಸರಿಡುವುದು ರೂಢಿ. ಕೆಲವು ಸಮಾಜಗಳಲ್ಲಿ ವ್ಯಕ್ತಿಗೆ ಒಂದೇ ಹೆಸರಿಟ್ಟರೆ, ಇನ್ನು ಕೆಲವು ಸಮಾಜಗಳಲ್ಲಿ ದೇವರನಾಮ, ಹುಟ್ಟಿದ ನಕ್ಷತ್ರಕ್ಕೆ ಸಂಬಂಧಿಸಿದ ಜನ್ಮನಾಮ, ವ್ಯವಹಾರಿಕ ನಾಮ, ನಿಜನಾಮ ಎಂದು ಮೂರು, ಐದು ಹೆಸರುಗಳನ್ನು ಇಡುವ ಸಂಪ್ರದಾಯವೂ ಉಂಟು. ಒಂದೇ ಹೆಸರು ಇದ್ದಲ್ಲಿ ದಾಖಲೆಗಳಲ್ಲಿ ಮತ್ತು ವ್ಯವಹಾರದಲ್ಲಿ ಅದನ್ನೇ ಬಳಸುತ್ತಾರೆ. ಆದರೆ ಒಂದಕ್ಕಿಂತ ಹೆಚ್ಚು ಹೆಸರುಗಳಿರುವಾಗ ದಾಖಲೆಗಳಲ್ಲಿ ಒಂದು ಹೆಸರು ಬಳಕೆಯಲ್ಲಿ ಇನ್ನೊಂದು ಹೆಸರು ಇರಲು ಸಾಧ್ಯ. ದಾಖಲೆಗಳಲ್ಲಿ ಇರುವ ಹೆಸರನ್ನು ವ್ಯವಹಾರಿಕ ಸಂದರ್ಭದಲ್ಲಿ ಬಳಸಬಹುದಾದರೂ, ವ್ಯವಹಾರಿಕ ನಾಮವನ್ನು, ದಾಖಲೆಗಳಲ್ಲಿ ಬಳಸುವಂತೆ ಕಾಣಬರುವುದಿಲ್ಲ. ಇಂಥ ಬಹುನಾಮಗಳ ಬಳಕೆ ಅಧ್ಯಯನ ಯೋಗ್ಯವಾದುದಾಗಿದೆ. ದಾಖಲೆಗಳಲ್ಲಿ ಒಂದು ಹೆಸರು ಮತ್ತು ಬಳಕೆಯಲ್ಲಿ ಬೇರೊಂದು ಹೆಸರು ಇದ್ದರೆ, ಬರೆಹ ರೂಪದ ಹೆಸರಿನ ಬಳಕೆಯ ಆಯಾಮಗಳು ತಿಳಿಯುವುದಿಲ್ಲ. ಇಲ್ಲಿ ಇಂಥ ಬಹುನಾಮಗಳ ಬಳಕೆಯ ಪ್ರಕ್ರಿಯೆಯ ಕಡೆಗೆ ಕೇಂದ್ರೀಕರಿಸಿದೆ, ಹೆಸರಿನ ಬರೆಹದ ರೂಪ ಮತ್ತು ಅದನ್ನು ಬಳಸುವ ರೀತಿ ಬಹಳ ಮುಖ್ಯವಾಗಿದೆ.

ಹೆಸರಿನ ಬರೆಹದ ರೂಪವೆಂದರೆ, ಅದು ಹೆಸರಿನ ರಾಚನಿಕ ಸ್ವರೂಪವೇ ಆಗಿದೆ. ಹೆಸರನ್ನು ದಾಖಲೆಗಳಲ್ಲಿ ದಾಖಲಿಸುವಾಗ ಪೂರ್ಣ ಭಾಗವನ್ನು ಬಳಸುತ್ತೇವೆ. ಉದಾಹರಣೆ ಶಾಲಾ ದಾಖಲಾತಿ, ಪಟ್ಟ-ಪಹಣಿ, ಬ್ಯಾಂಕಿನ ಪತ್ರ ಮುಂತಾದ ಕಡೆಗಳಲ್ಲಿ ಗಮನಿಸಬಹುದು. ಆದರೆ ಸಂಬೋಧನೆಯಲ್ಲಿ ಎರಡು ರೀತಿ ಸಾಧ್ಯ. ಹೆಸರನ್ನು ಯಥಾವತ್ತಾಗಿ ಬಳಸುವುದು ಒಂದು. ಮೊಟಕುಮಾಡಿ ಅರ್ಧ ಹೆಸರನ್ನು ಕರೆಯುವುದು ಇನ್ನೊಂದು. ಸಾಮಾನ್ಯವಾಗಿ ಸಂಬೋಧನೆಯಲ್ಲಿ ಹೆಸರನ್ನು ಪೂರ್ಣವಾಗಿ ಕರೆಯುವುದಕ್ಕಿಂತ ಅರ್ಧಮಾಡಿ ಕರೆಯುವುದೇ ಹೆಚ್ಚು. ಹೀಗೆ ಅರ್ಧಮಾಡಿ ಕರೆಯುವುದು ಕೂಡ ಸನ್ನಿವೇಶ ಹಾಗೂ ಸಂಬಂಧಗಳನ್ನು ಅವಲಂಬಿಸಿರುತ್ತದೆ. ಉದಾಹರಣೆಗೆ ಕೆಲವು ಹೆಸರುಗಳನ್ನು ಗಮನಿಸಬಹುದು.

| ಬರೆಹದ ರೂಪ | ಸಂಬೋಧನ ರೂಪ (ಮೌಖಿಕ) |
|---|---|
| ರಾಮಣ್ಣ | ರಾಮ, ರಾಮು, ರಾಮ್ಯ |
| ರಾಜಣ್ಣ | ರಾಜ, ರಾಜು |
| ಉಮೇಶ್ | ಉಮಾ, ಉಮ್ಮಿ |
| ಮಹಾಂತೇಶ | ಮಾಂತಾ, ಮಾಂತೀ, ಮಾಂತೇಶಿ |
| ನರಸಪ್ಪ | ನರಸು, ನರಸ್ಯಾ |
| ದೇವೇಂದ್ರಪ್ಪ | ದೇವು, ದೇವಪ್ಪ |
| ಕುಮಾರ | ಕುಮೀ, ಕುಮ್ಮಿ |
| ಸುನೀಲ್ | ಸುನ್ನಿ |
| ಮುತ್ತಯ್ಯ | ಮುತ್ತು |
| ಮಲ್ಲಯ್ಯ | ಮಲ್ಲು |
| ಶಂಕರಯ್ಯ | ಶಂಕು, ಶಂಕಿ |
| ರುದ್ರಮುನಿ | ಮುನಿ |
| ಸೋಮಶೇಖರ್ | ಸೋಮು |

ಸ್ತ್ರೀ ಹೆಸರು

| ಬರೆಹದ ರೂಪ | ಸಂಬೋಧನ ರೂಪ (ಮೌಖಿಕ) |
|---|---|
| ರೇಣುಕಮ್ಮ | ರೇಣು, ರೇಕ, ರೇಕಮ್ಮ |
| ಪಂಕಜಾಕ್ಷಿ | ಪಂಕ, ಪಂಕಜ |
| ಲಕ್ಷ್ಮಿ | ಲಕ್ಷ್ಮಿ, ಲಕ್ಕಿ, ಲಚ್ಚಿ, ಲಚ್ಮಿ |
| ಈರಮ್ಮ | ಈರು, ಈರಿ |
| ಹೇಮಾವತಿ | ಹೇಮ, ಹೇಮಿ |

| | |
|---|---|
| ಮೀನಾಕ್ಷಿ | ಮೀನ, ಮೀನು |
| ರೋಹಿಣಿ | ರೋಹಿ, ರೋಹು |
| ಶ್ಯಾಮಲ | ಶ್ಯಾಮು, ಶಾಮಿ |
| ಮಲ್ಲೇಶ್ವರಿ | ಮಲ್ಲಿ, ಮಲ್ಲಿಕಾ |
| ಪುಷ್ಪವತಿ | ಪುಷ್ಪ, ಪುಸ್ಸಿ |
| ಸುಜಾತ | ಸುಜ್ಜಿ, ಸೂಜಿ |
| ಸರೋಜ | ಸರು |
| ಹಸೀನ | ಹಸ್ಸಿ, ಹಸ್ನಾ |
| ಬಾಜಾಬನ್ನಿ | ಬಾಜಾ, ಬಾಜಿ |

ಮೇಲಿನ ಪುರುಷ ಮತ್ತು ಸ್ತ್ರೀ ಹೆಸರುಗಳನ್ನು ಮಾದರಿಗಾಗಿ ತೆಗೆದುಕೊಳ್ಳಲಾಗಿದೆ. ಮೂಲ ರೂಪಗಳು ಸಂಬೋಧನೆಯಲ್ಲಿ ಮೊಟಕಾಗುತ್ತಿದ್ದು, ಆ ಹೆಸರುಗಳಿಗೆ 'ಇ' ಕಾರ ಮತ್ತು 'ಉ' ಕಾರಗಳು ಸೇರುತ್ತವೆ. ಹೆಸರುಗಳನ್ನು ಮೊಟಕುಗೊಳಿಸಿ 'ಇ' ಕಾರ 'ಉ' ಕಾರಗಳನ್ನು ಸೇರಿಸಿ ಕರೆಯುವುದು ಸಾಮಾನ್ಯವಾಗಿ ಪ್ರೀತಿಯಿಂದ ಸಂಬೋಧಿಸುವ ಸಂದರ್ಭದಲ್ಲಿ ಮಾತ್ರ ಎಂಬುದನ್ನು ಗಮನಿಸಬಹುದು. ಮತ್ತು ಹೀಗೆ ಕರೆಯುವುದು ಗ್ರಾಮೀಣ ಪರಿಸರಕ್ಕಿಂತ ನಗರ ಪರಿಸರಗಳಲ್ಲಿ ಹೆಚ್ಚು. ಅಂತ್ಯ '-ಇ', '-ಉ' ಗಳು ಪುರುಷ ಮತ್ತು ಸ್ತ್ರೀಯರ ಹೆಸರುಗಳಿಗೂ ಏಕಪ್ರಕಾರದಲ್ಲಿ ಸೇರುತ್ತವೆ. "-ಉ' ಕಾರವು ಹೆಸರುಗಳಲ್ಲಿ ಕಾಣಸುವುದು ದಕ್ಷಿಣ ಏಷಿಯದ ಭಾಷೆಗಳಲ್ಲೆಲ್ಲ ಉಂಟು ಎಂದು ಡಾ. ಎಮಿನೊ ಅಭಿಪ್ರಾಯಪಡುತ್ತಾರೆ. The Wide-Spread occurence of this suffix- u identifies it as a sociolingustic trait of the South Asain Linguisties area. It could be called pan South Asian ..."[೪] ಈ ಅಭಿಪ್ರಾಯವನ್ನು ಗಮನಿಸಿದರೆ '-ಉ' ಕಾರಾಂತ್ಯದ ಬಳಕೆ ವ್ಯಾಪಕವಾಗಿದೆ ಎಂಬುದು ಇದರಿಂದ ತಿಳಿದುಬರುತ್ತದೆ. ಇತ್ತೀಚಿಗೆ ಗ್ರಾಮೀಣ ಪರಿಸರ ಸಂಬೋಧನೆಯಲ್ಲಿಯೂ 'ಇ', 'ಉ' ಕಾರಾಂತ್ಯಗಳ ಬಳಕೆ ಹೆಚ್ಚು ಕಾಣಸುತ್ತಿದೆ. ಕೆಲವು ಸಂದರ್ಭದಲ್ಲಿ ಗ್ರಾಮೀಣ ಪರಿಸರದ ಅನಕ್ಷರಸ್ಥ ಜನರು ಸಂಬಂಧಸೂಚಕ ಇಲ್ಲವೆ, ವೃತ್ತಿ/ಜಾತಿ ಸೂಚಕ ವಾರ್ಗಿಕಗಳಿಲ್ಲದ ಹೆಸರುಗಳನ್ನು ಏಕವಚನದಲ್ಲಿ ಮುದ್ದು ಹೆಸರುಗಳಾಗಿ ಅಥವಾ ಪ್ರೀತಿ ಹೆಸರುಗಳಾಗಿ ಬಳಸುತ್ತಾರೆ. ಉದಾಹರಣೆಗೆ - ಹನುಮ, ರಾಜ, ಗಂಗ, ಕೃಷ್ಣ, ಬ್ರಹ್ಮ ಇತ್ಯಾದಿ. ಸ್ತ್ರೀ ಹೆಸರು- ಬೋರಿ, ಓಬಿ, ಪಾಪಿ, ದುರುಗಿ, ರಂಗಿ, ಮಾರಿ, ಚನ್ನಿ. ಸಾಮಾನ್ಯವಾಗಿ ಸ್ತ್ರೀ ವ್ಯಕ್ತಿನಾಮಗಳನ್ನು '-ಇ' ಕಾರಾಂತ್ಯಗೊಳಿಸಿ ಸಂಬೋಧಿಸುವುದುಂಟು. ಹೀಗೆ ಸಂಬೋಧಿಸುವುದು ಕೂಡ ಸ್ತ್ರೀಯರನ್ನು, ಸ್ತ್ರೀಯರು ಸಂಬೋಧಿಸುವಾಗ ಈ ಪ್ರಕ್ರಿಯೆ ಅಧಿಕವಾಗಿ ಕಂಡುಬರುತ್ತದೆ.

ವೃತ್ತಿ/ಜಾತಿ ಸೂಚಕ ವಾರ್ಗಿಕಗಳಿಂದ ಅಂತ್ಯಗೊಂಡ ಹೆಸರುಗಳನ್ನು ಎರಡು ರೀತಿಯಲ್ಲಿ ಸಂಬೋಧನೆ ಮಾಡುತ್ತಾರೆ. ಒಂದು, ಹೆಸರಿನ ನಿರ್ದಿಷ್ಟ ಭಾಗವನ್ನು ಮೂಲರೂಪದಲ್ಲಿ ಅಥವಾ ಅದೇ ನಿರ್ದಿಷ್ಟ ಭಾಗಕ್ಕೆ '-ಇ', '-ಉ' ಕಾರಗಳನ್ನು ಸೇರಿಸಿ ಕರೆಯುವುದು. ಎರಡು, 'ವಾರ್ಗಿಕ'ದಿಂದ ಮಾತ್ರ ಸಂಬೋಧಿಸುವುದು. ಉದಾಹರಣೆಗೆ ಕೆಲವು ನಿದರ್ಶನಗಳನ್ನು ನೋಡಬಹುದು.

| ಮೂಲರೂಪ | ನಿರ್ದಿಷ್ಟದ ಬಳಕೆ | ವಾರ್ಗಿಕದ ಬಳಕೆ |
|---|---|---|
| ನಾರಾಯಣಶೆಟ್ಟಿ | ನಾಣಿ, ನಾರಾಣಿ | ಶೆಟ್ಟಿ > ಶೆಟ್ರೆ |
| ವೀರನಗೌಡ | ವೀರು | ಗೌಡ > ಗೌಡ್ರೆ, ಗೌಡ್ |
| ತಿಪ್ಪೇಶಾಚಾರಿ | ತಿಪ್ಪು, ತಿಪ್ಪೇಶಿ | ಆಚಾರಿ > ಆಚಾರ್ರೆ, ಆಚಾರ್ |
| ಮಾರನಾಯಕ | ಮಾರು | ನಾಯಕ > ನಾಯಕರೆ, ನಾಯಕ್ |
| ಮುದುಕಪ್ಪಶಾಸ್ತ್ರಿ | ಮುದ್ದು | ಶಾಸ್ತ್ರಿ > ಶಾಸ್ತ್ರಿಗಳೆ |
| ಸಿದ್ಧಯ್ಯಸ್ವಾಮಿ | ಸಿದ್ದು | ಸ್ವಾಮಿ > ಸ್ವಾಮ್ಯಾರೆ, ಸಾಮಿಗಳೆ |
| ಪರಮೇಶ್ವರ ಪಟೇಲ | ಪಟೇಲ್ | ಪರಮ್ಯಾ, ಪಟೇಲ > ಪಟೇಲ್ರೆ |
| ತಿಪ್ಪಾರೆಡ್ಡಿ | ತಿಪ್ಪು | ರೆಡ್ಡಿ > ರೆಡ್ಡೆರೇ |
| ಗೋವಿಂದಭಟ್ಟ್ | ಗೋವಿ | ಭಟ್ಟ > ಭಟ್‌ರೇ, ಭಟ್ |

ನಿರ್ದಿಷ್ಟ ಭಾಗವನ್ನು ಮೊಟಕುಗೊಳಿಸಿ '-ಇ', '-ಉ' ಕಾರಾಂತ್ಯಗಳನ್ನು ಅಂಟಿಸಿ ಸಂಬೋಧಿಸಿದರೆ, ವಾರ್ಗಿಕಗಳನ್ನು ಮೂಲ ರೂಪದಲ್ಲಿ ಬಳಸುವಂತೆ, ಕೆಲವೊಮ್ಮೆ '-ರೆ' (<ಅವರೆ) '-ಗಳೆ' (<ಅವುಗಳು) ಎಂಬ ಬಹುವಚನ ಗೌರವಸೂಚಕ ಪ್ರತ್ಯಯಗಳನ್ನು ಸೇರಿಸಿ ಬಳಸುತ್ತಾರೆ. 'ಶೆಟ್ಟಿ' ಎಂಬುದು ಬರೆಹದ ರೂಪವಾದರೆ, ಶೆಟ್ರೆ ಎಂಬುದು ಮೌಖಿಕ ರೂಪವಾಗಿದೆ. ಈ ನಿಯಮ ಪಟ್ಟಿಯ ಎಲ್ಲಾ ಹೆಸರುಗಳಿಗೂ ಅನ್ವಯಿಸುತ್ತದೆ. ಗೌಡ, ಆಚಾರಿ, ನಾಯಕ, ಭಟ್ಟ ಎಂಬ ವಾರ್ಗಿಕಗಳನ್ನು -ರ, -ಗಳೆ, ಪ್ರತ್ಯಯಗಳನ್ನು ಅಂಟಿಸಿ ಕರೆಯುವಂತೆ, ಮೂಲರೂಪದ ಅಂತ್ಯಾಕ್ಷರವನ್ನು ವ್ಯಂಜನಾಂತ ಮಾಡಿ ಸಂಬೋಧಿಸಲಾಗುವುದು. ಈ ಸಂಬೋಧನಾ ರೀತಿಗಳು ಗ್ರಾಮೀಣ ಪರಿಸರದ ಅವಿದ್ಯಾವಂತರಿಗಿಂತ ನಗರದ ವಿದ್ಯಾವಂತ ಜನರಲ್ಲಿ ಹೆಚ್ಚು ಬಳಕೆಯಾಗುತ್ತದೆ. ಆತ್ಮೀಯತೆ, ಸಲಿಗೆಗಳಿದ್ದಾಗ ಪ್ರೀತಿಪೂರ್ವಕವಾಗಿ ಈ ರೀತಿ ಸಂಬೋಧಿಸಬಹುದು. ವೃತ್ತಿ/ಜಾತಿವಾಚಿ ವಾರ್ಗಿಕಗಳು ಪುರುಷ ಹೆಸರುಗಳಲ್ಲಿ ಮಾತ್ರ ಕಾಣಬರುತ್ತಿದ್ದು, ಸ್ತ್ರೀಯರಲ್ಲಿ ಕಾಣ ಬರುವುದಿಲ್ಲವಾದಕಾರಣ, ಸ್ತ್ರೀನಾಮ ಸಂಬೋಧನೆಯಲ್ಲಿ ವೃತ್ತಿ/ಜಾತಿ ವಾರ್ಗಿಕಗಳೂ ಬಳಕೆಯಲ್ಲಿರುವುದಿಲ್ಲ.

ಇಲ್ಲಿಯವರೆಗೆ ಹೆಸರಿನ ಬರೆಹದ ರೂಪ (ನಿರ್ದಿಷ್ಟ, ವಾರ್ಗಿಕ ಮಾತ್ರ) ಮತ್ತು ಅದರ ಸಂಬೋಧನಾ ರೂಪದ ಒಂದು ಮಾದರಿಯ ಬಗೆಗೆ ಚರ್ಚಿಸಲಾಗಿದೆ. ಹೆಸರಿನ ಬರೆಹದ ರೂಪಗಳು ಹಲವು ಬಗೆಯವು. ಹೆಸರು ನಿರ್ದಿಷ್ಟ ಅಥವಾ ನಿರ್ದಿಷ್ಟ ಮತ್ತು ವಾರ್ಗಿಕದ ಒಟ್ಟು ಮೊತ್ತವಾಗಿರುತ್ತದೆ. ಹೆಸರುಗಳು ವ್ಯಕ್ತಿಯ ಬಗೆಗಿನ ಇತರೆ ಮಾಹಿತಿಗಳನ್ನು ಅಂಟಿಸಿಕೊಳ್ಳದೆ, ಕೇವಲ ವ್ಯಕ್ತಿಯ ಹೆಸರಿನಿಂದಷ್ಟೇ ಕೂಡಿರುವ ಹೆಸರುಗಳ ಕಡಿಮೆಯೆಂದೇ ಹೇಳಬಹುದು. ಹೆಸರು ಖಾಲಿ ಮೂಲರೂಪ (ನಿರ್ದಿಷ್ಟ ಇಲ್ಲವೆ, ನಿರ್ದಿಷ್ಟ + ವಾರ್ಗಿಕ)ದಲ್ಲಿರುವುದು ತುಂಬಾ ಕಡಿಮೆ. ಪೂರ್ವೋತ್ತರಗಳಲ್ಲಿ ಇತರ ನಾಮಗಳನ್ನು ಹೊಂದಿರುತ್ತದೆ. ತಂದೆ ಹೆಸರು, ಕುಲನಾಮ, ಮನೆತನದ ಹೆಸರು, ಊರಿನ ಹೆಸರು ಮುಂತಾದವುಗಳನ್ನು ಹೆಸರು ಅಂಟಿಸಿಕೊಂಡಿರುತ್ತದೆ. "ವೇದಗಳ ಕಾಲದಲ್ಲಿಯೂ ಒಬ್ಬ ವ್ಯಕ್ತಿಗೆ ಎರಡು ಹೆಸರಿರುತ್ತಿದ್ದವು. ಒಂದು ನಿಜನಾಮ, ಎರಡು ತಂದೆಯ ಅಥವಾ ಗೋತ್ರದ ಹೆಸರು."[೯] "ನಿಜನಾಮದ ಜತೆಗೆ ಸ್ಥಳನಾಮವನ್ನು ಸೇರಿಸುವ ರೂಢಿ ಐತರೇಯ ಬ್ರಾಹ್ಮಣದಲ್ಲಿ ಕಾಣುತ್ತದೆ."[೧೦] ಪ್ರಾಚೀನ ಕಾಲದಲ್ಲಿಯೂ ವ್ಯಕ್ತಿಯ ಹೆಸರಿಗೆ ಇತರ

ನಾಮಗಳು ಅಂಟುತ್ತಿದ್ದು, ಈಗಲೂ ಅದು ಮುಂದುವರೆದು ಬಂದಿರುವುದನ್ನು ಕಾಣಬಹುದು. ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದ ನಾಮರಚನೆ ಮತ್ತು ಸಂಬೋಧನೆಯಲ್ಲಿ ವ್ಯತ್ಯಾಸವಿದೆ. ಉತ್ತರ ಕರ್ನಾಟಕದಲ್ಲಿ ಮೊದಲು ವ್ಯಕ್ತಿಯ ನಿಜನಾಮವಿದ್ದು, ನಂತರ ತಂದೆಯಹೆಸರು, ಕೊನೆಗೆ ಕುಲನಾಮವಿರುತ್ತದೆ. ಸಂಬೋಧನೆಯಲ್ಲಿ ಮೊದಲಿನ ಎರಡು ಹೆಸರುಗಳು ಆದ್ಯಕ್ಷರಗಳಿಂದ ಇಲ್ಲವೆ, ಸಂಬೋಧನೆಯಲ್ಲಿ ಬಳಕೆಯಾಗದೆ, ಕೇವಲ ಕುಲನಾಮದಿಂದಲೇ ಸಂಬೋಧಿಸುವುದುಂಟು. ದಕ್ಷಿಣ ಕರ್ನಾಟಕದಲ್ಲಿ ಹೆಸರಿನ ಪೂರ್ವದಲ್ಲಿ ತಂದೆ, ಊರು, ಜಾತಿ, ಗೋತ್ರ ಮುಂತಾದ ಹೆಸರುಗಳು ಇದ್ದರೂ, ವ್ಯಕ್ತಿಯನ್ನು ನಿಜನಾಮದಿಂದಲೇ ಸಂಬೋಧಿಸುವುದುಂಟು. ಈ ನಿಯಮ ಚಿತ್ರದುರ್ಗ ಪರಿಸರದ ನಾಮಸಂಬೋಧನೆಯಲ್ಲೂ ಕಾಣಬರುತ್ತದೆ.

ಚಿತ್ರದುರ್ಗ ಪರಿಸರದ ನಾಮ ರಚನೆಯ ಸ್ವರೂಪವನ್ನು ಗಮನಿಸಿದರೆ, ಹೆಸರಿನ ಪೂರ್ವೋತ್ತರಗಳಲ್ಲಿ ಯಾವ ಇತರ ನಾಮಗಳು ಸೇರುತ್ತವೆ ಮತ್ತು ಅವುಗಳ ಬರೆಹ ರೂಪ ಮತ್ತು ಸಂಬೋಧನೆಯ ರೂಪಗಳನ್ನು ಇಲ್ಲಿ ಚರ್ಚಿಸಲಾಗುವುದು. ನಾಮಗಳ ಬಳಕೆಯ ಆಧಾರದ ಮೇಲೆ ಈ ರೀತಿ ವರ್ಗೀಕರಿಸಿಕೊಳ್ಳಬಹುದು.

೧. ತಂದೆ ಹೆಸರು + ನಿಜನಾಮ

೨. ಊರ ಹೆಸರು + ತಂದೆ ಹೆಸರು + ನಿಜನಾಮ

೩. ಜಾತಿಹೆಸರು + ತಂದೆಹೆಸರು

೪. ಗೋತ್ರದ ಹೆಸರು + ತಂದೆ ಹೆಸರು

೫. ಕುಲನಾಮ + ತಂದೆ ಹೆಸರು

೬. ಜಾತಿ ಹೆಸರು + ತಂದೆ ಹೆಸರು + ನಿಜನಾಮ ಇತ್ಯಾದಿ.

ಇಲ್ಲಿ ಪ್ರತಿಯೊಂದು ಅಂಶವನ್ನು ಉದಾಹರಣೆಗಳ ಮೂಲಕ ಚರ್ಚಿಸಬಹುದು.

**೧. ತಂದೆಹೆಸರು + ನಿಜನಾಮ (ತಂ + ನಿ)**

| **ಬರೆಹದ ರೂಪ** (ವಿಸ್ತೃತರೂಪ) | **ಸಂಕ್ಷಿಪ್ತರೂಪ** | **ಸಂಬೋಧನರೂಪ** (ಮೌಖಿಕರೂಪ) |
|---|---|---|
| ಬಸವರಾಜಪ್ಪ ಹನುಮಂತರಾವ್ | ಬಿ.(B) ಹನುಮಂತರಾವ್ | ಹನುಮಂತರಾವ್ ಹನುಮಂತ, ಹನುಮಂತಿ, ಹನುಮ |
| ಜಾಲಪ್ಪ ನಾಗರಾಜ | ಜೆ.(J) ನಾಗರಾಜ | ನಾಗು, ನಾಗ, ನಾಗಪ್ಪ, ನಾಗಣ್ಣ, ರಾಜ, ರಾಜು |
| ರಾಮಚಂದ್ರಪ್ಪ ತಿಪ್ಪೇಸ್ವಾಮಿ | ಆರ್.(R) ತಿಪ್ಪೇಸ್ವಾಮಿ | ತಿಪ್ಪೇಶ, ತಿಪ್ಪಯ್ಯ, ತಿಪ್ಪು, ತಿಪ್ಪಣ್ಣ |
| ಆನಂದಾಚಾರಿ ನಾರಾಯಣ | ಎ.(A) ನಾರಾಯಣ | ನಾಣಿ, ನಾರಾಣಿ, ನಾರಣಪ್ಪ |
| ಪರಮೇಶ್ವರಪ್ಪ ಪದ್ಮಮ್ಮ | ಪಿ.(P) ಪದ್ಮಮ್ಮ | ಪದ್ದು, ಪದ್ಮಿ |
| ನಿಜಲಿಂಗಪ್ಪ ಭಾರತಿ | ಎನ್.(N) ಭಾರತಿ | ಭಾರು, ಭಾರತಾ |
| ಸಣ್ಣಬೋಸಯ್ಯ ಕಮಲಮ್ಮ | ಎಸ್.(S) ಕಮಲಮ್ಮ | ಕಮಲ, ಕಮಲಿ, ಕಲಾ, ಕಮ್ಮಿ |
| ಫೀರಾಸಾಬ್ ಫಾತಿಮಾಬಿ | ಪಿ.(P) ಫಾತಿಮಾಬಿ | ಫಾತಿ, ಫಾತು |

ಮೊದಲಿನ ರೂಪ ಅಧಿಕೃತವಾಗಿ ದಾಖಲೆಗಳಲ್ಲಿ ಬಳಕೆಯಾಗುತ್ತದೆ. ಇಲ್ಲಿ ವ್ಯಕ್ತಿಯ ಹೆಸರನ್ನು

ವಿಸ್ತರಿಸಿ ಪೂರ್ಣ ರೂಪದಲ್ಲಿ ಬಳಕೆ ಮಾಡಲಾಗುವುದು. ತಂದೆಯ ಹೆಸರು ಮತ್ತು ವ್ಯಕ್ತಿಯ ಹೆಸರು ಪೂರ್ಣವಾಗಿ ಬಳಸಲ್ಪಟ್ಟಿರುತ್ತದೆ. ಎರಡನೆಯ ಭಾಗದಲ್ಲಿ ತಂದೆಯ ಹೆಸರನ್ನು ಪೂರ್ಣವಾಗಿ ಇಲ್ಲವೆ ಬಿಡಿಸಿ ಬರೆಯದೆ, ಆದ್ಯಕ್ಷರದಿಂದ ಸೂಚಿಸಲಾಗುವುದು. ಆದ್ಯಕ್ಷರವನ್ನು ಸೂಚಿಸುವಾಗಲೂ ಇಂಗ್ಲೀಷ ಅಕ್ಷರಗಳ ಮೂಲಕ ಗುರುತಿಸುವುದೇ ಹೆಚ್ಚು. ಅಧಿಕೃತವಾಗಿ ದಾಖಲೆಗಳನ್ನು ಹೊರತುಪಡಿಸಿ ಇತರ ಪ್ರಸಂಗಗಳಲ್ಲಿ ಈ ರೀತಿ ಬರೆಯುವುದನ್ನು ಕಾಣುತ್ತೇವೆ. ಸಂಬೋಧನೆಯಲ್ಲಿ ತಂದೆಯ ಹೆಸರು ಬರುವುದಿಲ್ಲ. ವ್ಯಕ್ತಿಯ ನಿಜನಾಮವನ್ನು ಮೊಟಕುಗೊಳಿಸಿ ಕರೆಯುವ ರೂಢಿ ಹೆಚ್ಚು. ಒಂದೇ ಹೆಸರಿನ ಹಲವು ವ್ಯಕ್ತಿಗಳಿದ್ದು, ವ್ಯಕ್ತಿಯ ಗುರುತು ಹತ್ತದಿರುವಾಗ ತಂದೆಯ ಹೆಸರು ಬಳಕೆಯಾಗಬಹುದು. ಸಂಬೋಧನೆಯಲ್ಲಿ ತಂದೆಯ ಹೆಸರನ್ನು ಬಳಸುವಾಗ, ಹೆಸರನ್ನು ಆದ್ಯಕ್ಷರಗಳಿಂದಾಗಲೀ, ಮೊಟಕು ಮಾಡಿ ಕರೆಯುವುದಾಗಲಿ ಮಾಡದೆ ಪೂರ್ಣ ಹೆಸರನ್ನೇ ಬಳಸುತ್ತಾರೆ. (ಆನಂದಾಚಾರಿ ಮಗ ನಾರಾಯಣಪ್ಪ, ನಿಜಲಿಂಗಪ್ಪನ ಮಗಳು ಭಾರತಿ) ಸ್ನೇಹವಲಯದಲ್ಲಿ ಕೆಲವೊಮ್ಮೆ ತಂದೆಯ ಹೆಸರು ಆದ್ಯಕ್ಷರಗಳಿಂದ ಕರೆಯಲ್ಪಡಬಹುದು. ತಂದೆಯ ಹೆಸರು ಬಳಕೆಯಾಗುವಂತೆ, ತಾಯಿಯ ಹೆಸರು ಬಳಕೆಯಾಗುವ ಉದಾಹರಣೆಗಳು ಇವೆ. ಇದು ಪುರುಷ ಪ್ರಧಾನ ಸಮಾಜವಾಗಿರುವುದರಿಂದ ತಂದೆಯ ಹೆಸರನ್ನು ಬಳಸುವುದು ವಾಡಿಕೆ. ಆದರೆ, ಪುರುಷ ಪ್ರಧಾನ ಸಮಾಜದ ಸ್ತ್ರೀ ಪ್ರಧಾನ ಕುಟುಂಬಗಳಲ್ಲಿ ತಂದೆಯ ಹೆಸರಿನ ಬದಲಿಗೆ ತಾಯಿಯ ಹೆಸರನ್ನು ಬಳಸುವ ನಿದರ್ಶನಗಳು ದೊರೆಯುತ್ತವೆ. ಅಲ್ಲದೆ ದೇವದಾಸಿ ಮತ್ತು ವೇಶ್ಯೆಯರ ಮಕ್ಕಳ ಹೆಸರಿನಲ್ಲಿ ಹೆಚ್ಚಾಗಿ ತಾಯಿಯ ಹೆಸರನ್ನೇ ಬಳಸಲಾಗುತ್ತಿದೆ. ಸಂಬೋಧನೆಯಲ್ಲಿ ಯಾವುದೇ ವ್ಯತ್ಯಾಸಗಳು ಕಾಣಬರುವುದಿಲ್ಲ. ಇಂಥ ಉದಾಹರಣೆಗಳು ಸ್ತ್ರೀಪ್ರಧಾನ ಸಮಾಜದ ಕುರುಹುಗಳಾಗಿ ಈಗಲೂ ಉಳಿದುಕೊಂಡಿವೆ ಎಂದು ಹೇಳಬಹುದು. ವ್ಯಕ್ತಿಯ ಗೈರು ಹಾಜರಿಯಲ್ಲಿ ತಂದೆಯ ಹೆಸರಿನ ಆದ್ಯಕ್ಷರವನ್ನೂ, ವ್ಯಕ್ತಿಯ ಪೂರ್ಣ ಹೆಸರನ್ನು ಕೆಲವು ಸಂದರ್ಭಗಳಲ್ಲಿ ಬಳಸುವುದುಂಟು. ಉದಾಹರಣೆಗೆ ಎಸ್.ಕಮಲಮ್ಮ, ಪಿ.ಪದ್ಮಮ್ಮ ಇತ್ಯಾದಿ. ಸಾಮಾನ್ಯವಾಗಿ ಸ್ನೇಹ ವಲಯದಲ್ಲಿ ಈ ಬಗೆಯ ಸಂಬೋಧನೆ ಹೆಚ್ಚು ಕಾಣಬರುತ್ತದೆ. (ಇನ್ಷಿಲ್ ಬಳಸಿ ಕರೆಯುವುದು) ಹೆಸರಿನ ಇನ್ಷಿಯಲ್‌ಗಳನ್ನು ಹೆಸರಿನ ಪೂರ್ವದಲ್ಲಿ ಬರೆಯುವಂತೆ ಉತ್ತರ ಭಾಗದಲ್ಲಿಯೂ ಬರೆಯಲಾಗುತ್ತಿದೆ. ಮಾದರಿಗೆ ಕೆಲವು ಹೆಸರುಗಳನ್ನು ನೋಡಬಹುದು.

೨. ಊರ ಹೆಸರು + ತಂದೆ ಹೆಸರು + ನಿಜನಾಮ

| ಬರೆಹದ ರೂಪ (ವಿಸ್ತೃತರೂಪ) | ಸಂಕ್ಷಿಪ್ತರೂಪ | ಸಂಬೋಧನರೂಪ (ಮೌಖಿಕರೂಪ) |
|---|---|---|
| ಓಬನಹಳ್ಳಿ ವೀರಣ್ಣ ಮಂಜುನಾಥ | ಓ.ವಿ. (O.V.) ಮಂಜುನಾಥ | ಮಂಜ, ಮಂಜು |
| ತುರುವನೂರು ರಂಗಪ್ಪ ತಿಮ್ಮಣ್ಣ | ಟಿ.ಆರ್. (T.R.) ತಿಮ್ಮಣ್ಣ | ತಿಮ್ಮ, ತಿಮ್ಮು |
| ದಡಗೂರು ಜಟಂಗಪ್ಪ ಲಕ್ಷ್ಮಣ | ಡಿ.ಜೆ. (D.J.) ಲಕ್ಷ್ಮಣ | ಲಕುಮ, ಲಚ್ಮಣ, ಲಚ್ಚು |
| ಗೋವನಹಳ್ಳಿ ರಂಗಪ್ಪ ಕರಿಯಮ್ಮ | ಜಿ.ಆರ್. (G.R.) ಕರಿಯಮ್ಮ | ಕರಿ, ಕರು |
| ಮ್ಯಾಸರಹಟ್ಟಿ ಪಾಲಯ್ಯ ಮಲ್ಲಮ್ಮ | ಎಂ.ಪಿ. (M.P.) ಮಲ್ಲಮ್ಮ | ಮಲ್ಲಿ, ಮಲ್ಲಿಕಾ |
| ನೇತ್ರನಹಳ್ಳಿ ಓಬಯ್ಯ ದಾಕ್ಷಾಯಿಣಿ | ಎನ್.ಓ. (N.O.) ದಾಕ್ಷಾಯಿಣಿ | ದ್ರಾಕ್ಷಿ, ದಾಸಿ, ದಾಯಿ |

ಸ್ಥಳದ ಹೆಸರನ್ನು ಅಥವಾ ಊರಿನ ಹೆಸರನ್ನು, ಹೆಸರಿನೊಂದಿಗೆ ಬಳಸುವುದು ಅಭಿಮಾನದಿಂದ ಎನ್ನುವುದಾದರೂ, ಇದಕ್ಕೆ ಚಾರಿತ್ರಿಕವಾದ ಮಹತ್ವವಿದೆ. ಮತ್ತು "ಪೂರ್ವಜರು ಗ್ರಾಮನಾಮಗಳನ್ನು ಕುಲನಾಮಗಳನ್ನಾಗಿ ಬಳಸುವ ವಾಡಿಕೆ ಇದೆ. ಮಂಡಿಗೆಯ ಮಾದಿರಾಜ, ಹಾವಿನಾಳ ಕಲ್ಲಯ್ಯ ಇಂತಹ ಪ್ರಾಚೀನ ನಾಮಗಳಲ್ಲಿ ಗ್ರಾಮನಾಮದ ಸೂಚನೆ ಇರುವುದರಿಂದ ಈ ಪದ್ಧತಿ ತಕ್ಕಮಟ್ಟಿಗೆ ಹಳೆಯದೆಂದೇ ಹೇಳಬೇಕು"[೭] ಅದಕ್ಕೊಂದು ಪರಂಪರೆಯಿದೆ. ಯಕ್ಷಗಾನ ಬಯಲಾಟಗಳಲ್ಲಿ ಪಾತ್ರಧಾರಿಗಳು (ವಿಶೇಷವಾಗಿ ಅರಸರು) ತಮ್ಮ ಹೆಸರು ಹೇಳುವಾಗ, ಸ್ಥಳನಾಮವನ್ನು ಸೇರಿಸಿ ಹೇಳುವಂತದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಉತ್ತರ ಕರ್ನಾಟಕದಲ್ಲಿ ಸ್ಥಳದ ಅಥವಾ ಊರಿನ ಹೆಸರು ವ್ಯಕ್ತಿನಾಮದ ಆದಿಯಲ್ಲಿ ಬರದೆ, ಅಂತ್ಯದಲ್ಲಿ ಬಳಕೆಯಾಗುತ್ತದೆ. ದಕ್ಷಿಣ ಕರ್ನಾಟಕದಲ್ಲಿ ಊರಿನ ಹೆಸರು ಸಾಮಾನ್ಯವಾಗಿ ಹೆಸರಿನ ಆದಿಯಲ್ಲಿ ಬಳಕೆಯಾಗುತ್ತದೆ. 'ಕುವೆಂಪು' ಹೆಸರನ್ನು ಇಲ್ಲಿ ಗಮನಿಸಬಹುದು. (ಕುಪ್ಪಳಿ ವೆಂಕಟಪ್ಪ ಪುಟ್ಟಪ್ಪ) (ತಳಕು ಸುಬ್ಬರಾವ್ ವೆಂಕಣ್ಣಯ್ಯ) ಸ್ಥಳದ ಹೆಸರನ್ನು, ಹೆಸರಿನೊಂದಿಗೆ ಸೂಚಿಸಿಕೊಳ್ಳುವುದು ನಗರ ಪ್ರದೇಶಗಳಿಗಿಂತ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚು. ವಿಶೇಷವಾಗಿ ವಿದ್ಯಾವಂತ ಜನರಲ್ಲಿ ಎಂಬುದು ಗಮನಾರ್ಹ.

ಮೊದಲಿನ ರೂಪ ದಾಖಲೆಗಳಲ್ಲಿ ಮಾತ್ರ ಇರುತ್ತದೆ. ಸಂಬೋಧನೆಯಲ್ಲಿ ಯಥಾವತ್ತಾಗಿ ಮೂರು ಹೆಸರುಗಳನ್ನು (ಊರು, ತಂದೆ, ನಿಜನಾಮ) ಕರೆಯುವುದಿಲ್ಲ. ಇತರ ಸನ್ನಿವೇಶಗಳಲ್ಲಿ ಬರೆಯುವಾಗಲೂ ಸಹ ಪೂರ್ಣ ಹೆಸರುಗಳನ್ನು ಬರೆಯದೆ, ಆದ್ಯಕ್ಷರಗಳಿಂದ ಬರೆಯುವುದು ಸಾಮಾನ್ಯ. ಸಂಬೋಧನೆಯಲ್ಲಿ ಊರ ಹೆಸರು ಮತ್ತು ತಂದೆಯ ಹೆಸರನ್ನು ಬಳಸದೆ, ವ್ಯಕ್ತಿಯ ನಿರ್ದಿಷ್ಟ ನಾಮವನ್ನು ಬಳಸುತ್ತಾರೆ. ಕೆಲವು ಸಂದರ್ಭಗಳಲ್ಲಿ ಅರ್ಧಮಾಡಿ ಕರೆಯುವುದೂ ಉಂಟು. ಹೆಚ್ಚುಸಲ ಊರಿನ ಹೆಸರನ್ನು ಹೆಸರಿನ ಜತೆಗೆ ಸೂಚಿಸುವುದು ಇಲ್ಲವೆ ಹೇಳಿಕೊಳ್ಳುವುದು ಒಂದು ಊರಿನಿಂದ ಇನ್ನೊಂದು ಊರಿಗೆ ಬಂದ ಸಂದರ್ಭದಲ್ಲಿ. ಅಲ್ಲಿನ ಜನರೇ ವಲಸೆ ಬಂದ ಜನರನ್ನು ಮೂಲಸ್ಥಳದ ಹೆಸರಿನೊಂದಿಗೆ ಗುರುತಿಸಲು ಮೊದಲು ಮಾಡುವುದರಿಂದ, ಅದರ ಬಳಕೆಗೆ ಜನರೇ ಕಾರಣರಾಗುತ್ತಾರೆ. "ಒಂದು ಊರನ್ನು ಬಿಟ್ಟು ಇನ್ನೊಂದು ಊರಿಗೆ ಹೋದಾಗ ಅಲ್ಲಿ ಅವರ ಕುಲನಾಮದ ಹೆಸರು ಮೊದಲಿನ ಊರಿನದಾಗುತ್ತದೆ. ಉದಾಹರಣೆಗೆ ಬಸಪ್ಪವಾಲಿ ಎಂಬುವವರು ಮೂಲತ: ಬೂದನೂರಿನವರು. ಅವರು ಉದರ ಪೋಷಣೆಗೆ ಯರಗಟ್ಟಿಗೆ ಬಂದರು. ಅವರ ಕುಲನಾಮ 'ವಾಲಿ' ಹಿಂದೆ ಸರಿದು 'ಬೂದನೂರು' ಎಂಬುದೇ ಕುಲನಾಮದಂತೆ ಕೆಲಸ ಮಾಡುತ್ತದೆ. ಬೂದನೂರಿನ ಬಸಪ್ಪ ಎಂದೇ ಅವರನ್ನು ಗುರುತಿಸುವುದುಂಟು."[೮] ಚಿತ್ರದುರ್ಗ ಪರಿಸರದ ವ್ಯಕ್ತಿನಾಮ ಸಂಬೋಧನೆಯಲ್ಲಿ ಸ್ಥಳನಾಮದ ಬಳಕೆ ಕಡಿಮೆಯೆಂದೇ ಹೇಳಬಹುದು. ವ್ಯಕ್ತಿಯ ಗುರುತು ಹತ್ತದಿದ್ದಾಗ ತಂದೆಯ ಹೆಸರನ್ನು ಬಳಸಿ, ಆಗಲೂ ವ್ಯಕ್ತಿಯನ್ನು ಗುರುತಿಸಲು ಆಗದಿದ್ದರೆ, ಅಂಥ ಸಂದರ್ಭದಲ್ಲಿ ಊರಿನ ಹೆಸರನ್ನು ಬಳಸುತ್ತಾರೆ. ಸ್ಥಳದ ಹೆಸರು ದಾಖಲೆಗಳಲ್ಲಿ ಇರಲಿ, ಇಲ್ಲದಿರಲಿ, ಅಂತಿಮವಾಗಿ ವ್ಯಕ್ತಿಯ ಗುರುತು ಮಾಡುವಲ್ಲಿ ನೆರವಿಗೆ ಬರುತ್ತದೆ. ಕೆಲವು ಸಂದರ್ಭಗಳಲ್ಲಿ ತಂದೆಯ ಹೆಸರಿಗಿಂತ ಮುಂಚೆಯೇ ಬಳಕೆಯಾಗಬಹುದು.

ತಂದೆಹೆಸರು + ವ್ಯಕ್ತಿಯ ಹೆಸರು, ಎರಡು ನಾಮಗಳಂತೆ, ಊರ ಹೆಸರು + ವ್ಯಕ್ತಿಯಹೆಸರು, ಈ ಮಾದರಿಯ ಹೆಸರುಗಳೂ ಇರುವುದುಂಟು. ಉದಾಹರಣೆಗೆ ಚಿತ್ರದುರ್ಗ ಪರಿಸರದ ಕೆಲವು ಹೆಸರುಗಳನ್ನು ಇಲ್ಲಿ ಗಮನಿಸಬಹುದು. ದೇವಸಮುದ್ರ ಕುಮಾರಸ್ವಾಮಿ (ಡಿ.ಕುಮಾರಸ್ವಾಮಿ) ಚಳ್ಳಕೆರೆ ತಿಪ್ಪೇಸ್ವಾಮಿ,

ರಾಯಾಪುರದ ಪಾಪನಾಯಕ ಇತ್ಯಾದಿ. ಇಲ್ಲಿಯೂ ಸ್ಥಳದ ಹೆಸರುಗಳನ್ನು ಆದ್ಯಕ್ಷರಗಳಿಂದ ಸೂಚಿಸಲಾಗುವುದು. ಸಂಬೋಧನೆಯಲ್ಲಿ ಹೆಸರನ್ನು ಕುಮಾರ, ಕುಮ್ಮಿ, ತಿಪ್ಪು, ತಿಪ್ಪೇಶ್, ಪಾಪು, ನಾಯಕ ಎಂದು ಕ್ರಮವಾಗಿ ಬಳಸಲಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಊರಿನ ಹೆಸರೂ ಬಳಕೆಯಾಗಬಹುದು. ಇತ್ತೀಚಿಗೆ ಕೆಲವು ಹೆಸರುಗಳಲ್ಲಿ ಊರಿನ ಹೆಸರು ವ್ಯಕ್ತಿನಾಮದ ಉತ್ತರ ಭಾಗದಲ್ಲಿ ಬಳಕೆಯಾಗುತ್ತಿದ್ದು, ವ್ಯಕ್ತಿಯ ನಿಜನಾಮಕ್ಕಿಂತ ಸ್ಥಳನಾಮವೇ ಅಧಿಕೃತ ನಾಮದಂತೆ ಪ್ರಧಾನವಾಗಿ ಬಳಕೆಯಾಗುತ್ತಿದೆ. ಗ್ರಾಮೀಣ ಪರಿಸರದ ಜನರ ಸಂಬೋಧನೆಯಲ್ಲಿ ಇದಕ್ಕೆ ಅನೇಕ ಉದಾಹರಣೆಗಳು ಸಿಗುತ್ತವೆ.

**೩. ಜಾತಿಹೆಸರು + ಹೆಸರು**

ಜಾತಿ ಹೆಸರನ್ನು ಹೆಸರುಗಳಲ್ಲಿ ಹಿಂದಿನಿಂದಲೂ ಬಳಸುತ್ತಾ ಬಂದಿದ್ದಾರೆ. ಹನ್ನೆರಡನೆ ಶತಮಾನದ ವಚನಕಾರರ ಹೆಸರುಗಳನ್ನು ಇಲ್ಲಿ ಉಲ್ಲೇಖಿಸಬಹುದು. ಉದಾರಣೆಗೆ ಡೋಹರ ಕಕ್ಕಯ್ಯ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಿದೇವ, ಹಡಪದ ಹಪ್ಪಣ್ಣ, ಮಾದಾರ ಚನ್ನಯ್ಯ, ಗೊರವರ ಜಿಣ್ಣ ಇತ್ಯಾದಿ. ಆ ಪೂರ್ವದಲ್ಲಿ ಅಂದರೆ ಹನ್ನೆರಡನೆ ಶತಮಾನದ ಪೂರ್ವದಲ್ಲಿ ಜಾತಿ ಹೆಸರು ಹೆಸರುಗಳಲ್ಲಿ ಉಲ್ಲೇಖಗೊಂಡಿರುವುದು ಅಪರೂಪ. ಜಾತಿಯ ಹೆಸರನ್ನು ಹೆಸರುಗಳಲ್ಲಿ ಗುರುತಿಸಿಕೊಂಡಿರುವುದು ಸಾಮಾನ್ಯವಾಗಿ ಕೆಳ ಸಮುದಾಯಗಳು ಮಾತ್ರ ಎಂಬುದು ಗಮನಾರ್ಹ ಸಂಗತಿ. ಅಥವಾ ಮೇಲ್ ಸಮುದಾಯದವರು ಉದ್ದೇಶದಿಂದಲೇ ಹೀಗೆ ದಾಖಲಿಸಿರುವ ಇಲ್ಲವೆ ಸಂಬೋಧಿಸಿರುವ ಸಾಧ್ಯತೆಗಳೂ ಇರಬಹುದು. ಈಗಲೂ ಕೂಡ ಜಾತಿ ಹೆಸರು ಕೆಳಸಮುದಾಯದ ಜನರ ಹೆಸರುಗಳಲ್ಲೇ ಹೆಚ್ಚಾಗಿ ಕಾಣಬರುತ್ತದೆ. ಮತ್ತು ಗ್ರಾಮೀಣ ಪರಿಸರದ ಅನಕ್ಷರಸ್ಥರಲ್ಲಿ ಇದರ ಬಳಕೆ ಜಾಸ್ತಿ. ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ಲಭ್ಯವಾಗಿರುವ ಮಾಹಿತಿಯಿಂದ ಕೆಲವು ಹೆಸರುಗಳನ್ನು ನೋಡಬಹುದು.

| ಬರೆಹದ ರೂಪ (ಮೂಲರೂಪ) | ಸಂಕ್ಷಿಪ್ತರೂಪ | ಸಂಬೋಧನರೂಪ (ಮೌಖಿಕರೂಪ) | ಊರು | ತಾಲೂಕು |
|---|---|---|---|---|
| ಗೊಲ್ಲರ ಸಿರಿಯಣ್ಣ | ಜಿ. (G) ಸಿರಿಯಣ್ಣ | ಸಿರಿ, ಸಿರಿಯ | ಗೋಪನಹಳ್ಳಿ | ಚಳ್ಳಕೆರೆ |
| ಬಡಿಗೇರ ಹನುಮಂತಪ್ಪ | ಬಿ. (B) ಹನುಮಂತಪ್ಪ | ಹನುಮ, ಹನುಮಂತ | ನಾಯ್ಕನಹಟ್ಟಿ | ಚಳ್ಳಕೆರೆ |
| ಮ್ಯಾದರ ಹೂಲೆಪ್ಪ | ಎಂ. (M) ಹೂಲೆಪ್ಪ | ಹುಲಿ, ಹೂಲಿ | ಮಠದ ಕುರುಬರಹಟ್ಟಿ | ಚಿತ್ರದುರ್ಗ |
| ಲಂಬಾಣಿ ಕೂಬ್ಯಾನಾಯ್ಕ | ಎಲ್. (L) ಕೂಬ್ಯಾನಾಯ್ಕ | ಕೂಬ್ಯಾ, ನಾಯ್ಕ | ಗಿಡ್ಡದ ಬೋರಯ್ಯನಹಟ್ಟಿ | ಮೊಳಕಾಲ್ಮೂರು |
| ಗೊರವರ ಭರಮಪ್ಪ | ಜಿ. (G) ಭರಮಪ್ಪ | ಭರಮ, ಬೊಮ್ಮ | ಹೊಳಲ್ಕೆರೆ | ಹೊಳಲ್ಕೆರೆ |
| ಕಿಳ್ಳೇಕ್ಯಾತರ ಮಂಜಣ್ಣ | ಕೆ. (K) ಮಂಜಣ್ಣ | ಮಂಜು, ಮಂಜ | ಹೊಸದುರ್ಗ | ಹೊಸದುರ್ಗ |
| ಮಾದಿಗರ ಭೀಮಪ್ಪ | ಎಂ. (M) ಭೀಮಪ್ಪ | ಭೀಮ ಹಿರಿಯರು ಭೀಮ | ಹಿರಿಯೂರು | ಹಿರಿಯೂರು |
| ಗೌಡರ ವಿರುಪಾಕ್ಷಪ್ಪ | ಜಿ. (G) ವಿರುಪಾಕ್ಷಪ್ಪ | ವಿರು, ವಿರುಪ | ದೇವಸಮುದ್ರ | ಮೊಳಕಾಲ್ಮೂರು |
| ಬುಡಬುಡಕಿ ರಮೇಶ್ | ಬಿ. (B) ರಮೇಶ್ | ರಮ್ಮಿ, ರಮ್ಮು | ಅಮಕುಂದಿ | ಮೊಳಕಾಲ್ಮೂರು |
| ತಳವಾರ ತಿಪ್ಪೇಸ್ವಾಮಿ | ಟಿ. (T) ತಿಪ್ಪೇಸ್ವಾಮಿ | ತಿಪ್ಪು, ತಿಪ್ಪಣ್ಣ, ಸ್ವಾಮಿ | ಕಾಟಪ್ಪನಹಟ್ಟಿ | ಚಳ್ಳಕೆರೆ |
| ಈಡಿಗರ ಪದ್ಮಮ್ಮ | ಇ. (E) ಪದ್ಮಮ್ಮ | ಪದ್ಮು, ಪದ್ಮ, ಪದ್ಮ | ಕಾರ್ತಿಕೇನಹಟ್ಟಿ | ಚಳ್ಳಕೆರೆ |
| ತಳವಾರ ಗಂಗಮ್ಮ | ಟಿ. (T) ಗಂಗಮ್ಮ | ಗಂಗು, ಗಂಗ | ಚಿತ್ರದುರ್ಗ | ಚಿತ್ರದುರ್ಗ |
| ಹರಿಜನ ದುರಗಮ್ಮ | ಹೆಚ್. (H) ದುರುಗಮ್ಮ | ದುರು, ದುರುಗ/ಗಿ | ಚಿತ್ರದುರ್ಗ | ಚಿತ್ರದುರ್ಗ |
| ನೆಮ್ಮಾರ್ ಶಾರದಮ್ಮ | ಎನ್. (N) ಶಾರದಮ್ಮ | ಶಾರು, ಶಾದು | ತುರುವನೂರು | ಚಿತ್ರದುರ್ಗ |
| ಗೌಡರ ಬಸಮ್ಮ | ಜಿ. (G) ಬಸಮ್ಮ | ಬಸು | ತಳಕು | ಚಳ್ಳಕೆರೆ |

ಚಿತ್ರದುರ್ಗ ಪರಿಸರದಲ್ಲಿ ಜಾತಿಯ ಹೆಸರು ಸಾಮಾನ್ಯವಾಗಿ ವ್ಯಕ್ತಿನಾಮದ ಪೂರ್ವದಲ್ಲಿ ಬರುತ್ತದೆ. ಮತ್ತು ದಾಖಲೆಗಳಲ್ಲಿ ಜಾತಿಯ ಹೆಸರನ್ನು ವಿಸ್ತೃತವಾಗಿ ಬರೆಯುತ್ತಾರೆ. ಪಟ್ಟಿಯ ಮೊದಲ ಭಾಗವನ್ನು ಗಮನಿಸಬಹುದು. ಇತರ ಕಡೆಗಳಲ್ಲಿ ವ್ಯಕ್ತಿಯ ಹೆಸರನ್ನು ಪೂರ್ಣವಾಗಿ ಬರೆಯದೆ ಆದ್ಯಕ್ಷರಗಳಿಂದ ಬರೆಯುವುದೇ ಹೆಚ್ಚು ರೂಢಿ. ಪಟ್ಟಿಯ ಎರಡನೆ ಗುಂಪಿನ ಹೆಸರುಗಳಿಂದ ಇದನ್ನು ಸ್ಪಷ್ಟಪಡಿಸಿಕೊಳ್ಳಬಹುದು. ಸಂಬೋಧನೆಯಲ್ಲಿ ಜಾತಿಯ ಹೆಸರು ಬಳಕೆಯಾಗದೆ ನಿರ್ದಿಷ್ಟನಾಮವನ್ನು ಮಾತ್ರ ಸಂಬೋಧಿಸಲಾಗುತ್ತದೆ. ನಿರ್ದಿಷ್ಟ ನಾಮವನ್ನು ಮೂಲರೂಪದಲ್ಲಿದ್ದಂತೆ ಬಳಸದೆ, ತುಂಡುಮಾಡಿ ಕರೆಯುವುದೇ ಹೆಚ್ಚು. ಯಾವ ಹೆಸರುಗಳನ್ನು ಹೇಗೆ ತುಂಡರಿಸಿ ಕರೆಯುತ್ತಾರೆ ಎಂಬುದನ್ನು ಪಟ್ಟಿಯ ಮೂರನೆ ಭಾಗದ ಹೆಸರುಗಳಿಂದ ತಿಳಿಯಬಹುದು. ಬಹಿರಂಗವಾಗಿ ಕೆಲವು ಜಾತಿಯ ಹೆಸರುಗಳನ್ನು ಸಂಬೋಧಿಸುವುದು ನಿಷೇಧವೂ ಇದೆ. ಆ ಹಿನ್ನೆಲೆಯಲ್ಲಿ ಅವುಗಳ ಬಳಕೆ ಸಂಬೋಧನೆಯಲ್ಲಿ ಆಕಸ್ಮಿಕವಾಗಿ ಕಾಣಬರುತ್ತದೆ. ನಗರ ಪ್ರದೇಶಗಳಿಗಿಂತ ಗ್ರಾಮೀಣ ಪರಿಸರದಲ್ಲಿ ಜಾತಿ ಮಡಿವಂತಿಕೆಗಳು ಜಾಸ್ತಿ. ಆದಾಗ್ಯೂ ಜಾತಿಯ ಹೆಸರು ಬಳಕೆಯಾಗುವುದು ಹೆಚ್ಚಾಗಿ ಗ್ರಾಮೀಣದವರ ಸಂಬೋಧನೆಯಲ್ಲಿಯೇ ಎಂಬುದು ಕುತೂಹಲಕರ ಸಂಗತಿ. ವಿದ್ಯಾವಂತ ಹಳ್ಳಿ ಜನ ಅಥವಾ ಸಾಮಾನ್ಯವಾಗಿ ವಿದ್ಯಾವಂತರು, ಹೆಸರನ್ನು ಸಂಬೋಧಿಸುವಾಗ, ವ್ಯಕ್ತಿಯನ್ನು ಗುರುತಿಸುವಲ್ಲಿ ಗೊಂದಲ ಉಂಟಾದರೆ ಜಾತಿಯನ್ನು ನೇರವಾಗಿ ಬಳಸದೆ, ಆದ್ಯಕ್ಷರ (ಇನಿಶಿಯಲ್)ಗಳಿಂದ ಕರೆಯುತ್ತಾರೆ. ಅನಿವಾರ್ಯ ಸಂದರ್ಭದಲ್ಲಿ ಜಾತಿಹೆಸರು ಹೆಸರಿನೊಂದಿಗೆ ಬಳಕೆಯಾಗಬಹುದು. ಜಾತಿಯನ್ನು ನೇರವಾಗಿ ಬಳಸುವಾಗ ವ್ಯಕ್ತಿಯ ಹೆಸರನ್ನು ಪೂರ್ಣವಾಗಿ ಇಲ್ಲವೆ, ಮೊಟಕು ಮಾಡಿಯೂ ಸಂಬೋಧಿಸುವುದನ್ನು ಕಾಣುತ್ತೇವೆ.

ಇತ್ತೀಚಿಗೆ ಕೆಳಸಮುದಾಯಗಳು ತಮ್ಮ ಜಾತಿಯನ್ನು ತಮ್ಮ ಹೆಸರಿನೊಂದಿಗೆ ಸೇರಿಸಿಕೊಳ್ಳುತ್ತಿವೆ. ಸಾರ್ವಜನಿಕವಾಗಿ ಜಾತಿಯನ್ನೇ ಹಿಡಿದು ಸಂಬೋಧಿಸುವುದು ಕೆಲವು ಸಂದರ್ಭಗಳಲ್ಲಿ ಮಾತ್ರ ಸಾಧ್ಯವಾದರೆ, ಇನ್ನು ಕೆಲವು ಸಂದರ್ಭಗಳಲ್ಲಿ ನಿಷೇಧವಾಗಿದೆ. ಹರಿಜನ ಅಥವಾ ಮಾದಿಗರನ್ನು ಜಾತಿ ಹಿಡಿದು ಸಂಬೋಧಿಸುವುದು ಕಾನೂನು ಬಾಹಿರವಾಗಿದೆ. ಇಂಥ ಸನ್ನಿವೇಶಗಳಲ್ಲಿ ಜಾತಿ ಹೆಸರು, ಹೆಸರುಗಳಲ್ಲಿ ಬಳಕೆಯಾಗಿದ್ದರೂ, ನಿರ್ದಿಷ್ಟ ನಾಮವನ್ನು ಮಾತ್ರ ಕರೆಯಲಾಗುವುದು. ಇತ್ತೀಚಿಗೆ ಹರಿಜನ, ಮಾದಿಗ ಎಂಬ ಪದಗಳು ಬಳಕೆಯಿಂದ ಹಿಂದೆ ಸರಿಯುತ್ತಿದ್ದು, ದಾಖಲೆಗಳಲ್ಲಿ 'ಆದಿಕರ್ನಾಟಕ' (A.K.) ಎಂದು ನಮೂದಿಸಲಾಗುತ್ತದೆ. ನಿದರ್ಶನಕ್ಕೆ ಕೆಲವು ಉದಾಹರಣೆಗಳನ್ನು ಗಮನಿಸಬಹುದು.

| | | | |
|---|---|---|---|
| ಆದಿಕರ್ನಾಟಕ ದುರುಗಪ್ಪ | ಎ.ಕೆ. (A.K.) ದುರುಗಪ್ಪ | ದೇವಸಮುದ್ರ | ಮೊಳಕಾಲ್ಮೂರು ತಾ. |
| ಆದಿಕರ್ನಾಟಕ ಹಾಲಪ್ಪ | ಎ.ಕೆ. (A.K.) ಹಾಲಪ್ಪ | ಕವಾಡಿಗರಹಟ್ಟಿ | ಚಿತ್ರದುರ್ಗ |
| ಆದಿಕರ್ನಾಟಕ ಹೊನ್ನೂರಪ್ಪ | ಎ.ಕೆ. (A.K.) ಹೊನ್ನೂರಪ್ಪ | ನಾಯ್ಕನಹಟ್ಟಿ | ಚಳ್ಳಕೆರೆ |
| ಆದಿಕರ್ನಾಟಕ ತಿಮ್ಮಪ್ಪ | ಎ.ಕೆ. (A.K.) ತಿಮ್ಮಪ್ಪ | ಹೊಸದುರ್ಗ | ಹೊಸದುರ್ಗ |

ಚಿತ್ರದುರ್ಗ ಪರಿಸರದಲ್ಲಿ ಕಾಣಬರುವಂತೆ, ಕರ್ನಾಟಕದ ಇತರ ಭಾಗಗಳಲ್ಲಿಯೂ ಈ ಪ್ರಕ್ರಿಯೆ ಚಾಲ್ತಿಯಲ್ಲಿರಬಹುದು. 'ಆದಿಕರ್ನಾಟಕ' ಎಂಬುದು ವಾರ್ಗಿಕವಾಗಿ ಬಳಕೆಯಾದರೂ, ಸಂಬೋಧನೆಯಲ್ಲಿ ಬಳಕೆಯಾಗುತ್ತಿರುವುದು ಕಾಣಬರುವುದಿಲ್ಲ.

### ೪. ಗೋತ್ರದ ಹೆಸರು + ನಿಜನಾಮ

ಭಾರತದಂಥ ಜಾತಿ ಆಧಾರಿತ ಸಾಮಾಜಿಕ ವ್ಯವಸ್ಥೆಯ ವೈವಾಹಿಕ ಸಂಬಂಧಗಳಲ್ಲಿ ಜಾತಿ, ಗೋತ್ರಗಳು ಪ್ರಧಾನ ಪಾತ್ರ ವಹಿಸುತ್ತವೆ. ಜಾತಿ, ಗೋತ್ರಗಳನ್ನು ಸಂಸ್ಕೃತಿಯ ಒಂದು ಅಂಗ ಎಂದು ಭಾವಿಸಿರುವ ಕೆಲವು ಸಮಾಜಗಳು, ಅವುಗಳನ್ನು ತಮ್ಮ ಹೆಸರುಗಳೊಂದಿಗೆ ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದು. ವ್ಯಕ್ತಿನಾಮ ನಿರ್ದೇಶನದಲ್ಲಿ ಈ ಪ್ರಕ್ರಿಯೆ ಈಗಲೂ ಮುಂದುವರೆದಿರುವಂತೆ ಕಾಣುತ್ತದೆ. ಆದರೂ ಇದರ ಬಳಕೆ ಹಿಂದಿಗಿಂತ ಇಂದು ಕಡಿಮೆಯೆಂದೇ ಹೇಳಬಹುದು. ಪ್ರತಿಯೊಂದು ಜಾತಿಯಲ್ಲಿಯೂ ಒಳಪಂಗಡ/ಗೋತ್ರಗಳಿವೆ. ಆದರೆ ಅವುಗಳನ್ನು ಬಳಸಿಕೊಳ್ಳುವುದು ಕಡಿಮೆ ಪ್ರಮಾಣದ ಜನರು. ಅದರಲ್ಲೂ ವಿಶೇಷವಾಗಿ ಅತ್ಯಂತ ಕೆಳ ಮತ್ತು ಅತ್ಯಂತ ಮೇಲಿನ ಸಮುದಾಯಗಳಲ್ಲಿ ಗೋತ್ರಗಳ ಬಳಕೆ ಅಧಿಕವಾಗಿರುವಂತೆ ತೋರುತ್ತದೆ. ಮಧ್ಯಮ ಜಾತಿಗಳಲ್ಲಿ ಬಳಕೆಯಾಗುವುದರ ಬಗೆಗೆ ಕ್ಷೇತ್ರಕಾರ್ಯದಿಂದ ಲಭ್ಯವಿರುವ ಮಾಹಿತಿ ಅತ್ಯಲ್ಪವಾಗಿದೆ. ಈ ಹಿನ್ನೆಲೆಯಲ್ಲಿ ಆ ಬಗೆಗೆ ವಿಶೇಷ ಅಧ್ಯಯನದ ಅಗತ್ಯವಿದೆ.

ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯ ಆಧಾರದ ಮೇಲೆ ಗೋತ್ರದ ಬಳಕೆ ಮತ್ತು ಸಂಬೋಧನೆಯಲ್ಲಿ ಅದರ ಸ್ಥಾನಮಾನವನ್ನು ಕುರಿತು ಹೀಗೆ ಚರ್ಚಿಸಲಾಗುವುದು.

| ಬರೆಹದ ರೂಪ (ಮೂಲರೂಪ) | ಸಂಕ್ಷಿಪ್ತರೂಪ | ಸಂಬೋಧನರೂಪ (ಮೌಖಿಕರೂಪ) | ಊರು | ತಾಲೂಕು | ಜಾತಿ |
|---|---|---|---|---|---|
| ಅಬ್ಬನಾರು ಪಾಪಯ್ಯ | ಎ. (A) ಪಾಪಯ್ಯ | ಪಾಪ, ಪಾಪ್ಪ, ಪಾಪಣ್ಣ | ಚನ್ನಬಸಯ್ಯನಹಟ್ಟಿ | ಚಳ್ಳಕೆರೆ | ನಾಯಕ |
| ಮಲ್ಲೇನಾರು ಕಾಮಯ್ಯ | ಎಂ. (M) ಕಾಮಯ್ಯ | ಕಾಮ, ಕಾಮಣ್ಣ | ತುಮಕೂರ್ಲಹಳ್ಳಿ | ಮೊಳಕಾಲ್ಮೂರು | ನಾಯಕ |
| ಯರಬೋತಲ ಬಸವರಾಜ | ವೈ. (Y) ಬಸವರಾಜ | ಬಸವ, ಬಸು, ರಾಜ | ಹಿರೇಹಳ್ಳಿ | ಚಳ್ಳಕೆರೆ | ನಾಯಕ |
| ನಲಬೋತಲ ತಿಪ್ಪೇಸ್ವಾಮಿ | ಎನ್ . (N) ತಿಪ್ಪೇಸ್ವಾಮಿ | ತಿಪ್ಪ, ತಿಪ್ಪೇಶ್, ಸ್ವಾಮಿ | ಮಠದಹಟ್ಟಿ | ಚಿತ್ರದುರ್ಗ | ನಾಯಕ |
| ಕೀಳತ್ ಜಗನ್ನಾಥ | ಕೆ. (K) ಜಗನ್ನಾಥ | ಜಗ್ಗ, ಜಗ್ಗು, ಜಗನಾ | ನಾಯ್ಕನಹಟ್ಟಿ | ಚಳ್ಳಕೆರೆ | ಲಂಬಾಣಿ |
| ಬುಕ್ಕೀವರ್ ಯಂಕಾ ನಾಯ್ಕ | ಬಿ. (B) ಯಂಕಾನಾಯ್ಕ | ಯಂಕು, ಯಂಕಾ, ನಾಯ್ಕ | ಗಡ್ಡದಬೋರಯ್ಯಗಟ್ಟಿ | ಮೊಳಕಾಲ್ಮೂರು | ಲಂಬಾಣಿ |
| ವಿಸ್ಲಾವತ್ ಮಾನ್ಯಾನಾಯ್ಕ | ವಿ. (V) ಮನ್ಯಾನಾಯ್ಕ | ಮಾನ್ಯ, ಮಾನು | ಹೊಸದುರ್ಗ | ಹೊಸದುರ್ಗ | ಲಂಬಾಣಿ |
| ಹಿಂದೂಮೂರ್ ನಾಗರಾಜ | ಇ. (E) ನಾಗರಾಜ | ನಾಗ, ನಾಗು, ರಾಜ, ರಾಜು | ಹೊಳಲ್ಕೆರೆ | ಹೊಳಲ್ಕೆರೆ | ನೇಕಾರ |
| ಮಾರುತಿ ಯಾಜಿ | ಎಂ. (M) ಯಾಜಿ | ಯಾಜಿ | ಹಿರಿಯೂರು | ಹಿರಿಯೂರು | ಬ್ರಾಹ್ಮಣ |
| ಚಿನ್ನಪಾಟಿ ಗೋವಿಂದರೆಡ್ಡಿ | ಸಿ. (C) ಗೋವಿಂದರೆಡ್ಡಿ | ಗೋವಿ, ಗೋವಿಂದ, ರೆಡ್ಡಿ | ಗುಡ್ಡದರಂಗವ್ವನಹಳ್ಳಿ | ಚಿತ್ರದುರ್ಗ | ರೆಡ್ಡಿ |
| ಅಜ್ಜಿಡ್ಡು ಓಬಮ್ಮ | ಎ. (A) ಓಬಮ್ಮ | ಓಬಿ, ಓಬಮ್ಮ | ರಾಯಾಪುರ | ಮೊಳಕಾಲ್ಮೂರು | ನಾಯಕ |
| ದಾಸರ ಪಾಲಮ್ಮ | ಡಿ. (D) ಪಾಲಮ್ಮ | ಪಾಲಿ, ಪಾಲು, ಪಾಲಮ್ಮ | ನನ್ನಿವಾಳ | ಚಳ್ಳಕೆರೆ | ನಾಯಕ |
| ಪೊನಗುಪಾಟಿ ರಮ್ಮ | ಪಿ. (P) ರಮ್ಮ | ರಮಿ, ರಮ್ಮ | ಚಿತ್ರದುರ್ಗ | ಚಿತ್ರದುರ್ಗ | ರೆಡ್ಡಿ |
| ಕೀಳತ್ ಜಯಶ್ರೀ | ಕೆ. (K) ಜಯಶ್ರೀ | ಜಯ, ಶ್ರೀ | ನಾಯ್ಕನಹಟ್ಟಿ | ಚಳ್ಳಕೆರೆ | ಲಂಬಾಣಿ |
| ಖಿಮಾವತ್ ಕೇಶವಮೂರ್ತಿ | ಕೆ. (K) ಕೇಶವಮೂರ್ತಿ | ಕೇಶವ, ಮೂರ್ತಿ | ಮದಕರಿಪುರ ತಾಂಡ | ಚಿತ್ರದುರ್ಗ | ಲಂಬಾಣಿ |

ಪಟ್ಟಿಯ ಹೆಸರುಗಳನ್ನು ಗಮನಿಸಿದರೆ, ನಿರ್ದಿಷ್ಟ ನಾಮದೊಂದಿಗೆ ಪೂರ್ವಭಾಗದಲ್ಲಿ ಅಂಟಿರುವ ನಾಮಗಳು ಬೇರೆ ಬೇರೆ ಸಮುದಾಯಗಳಲ್ಲಿರುವ ಗೋತ್ರದ ಹೆಸರುಗಳಾಗಿವೆ. ಗೋತ್ರದ ಹೆಸರುಗಳನ್ನು ಸಹ ಆದ್ಯಕ್ಷರಗಳಿಂದ ಸಂಕ್ಷೇಪಮಾಡಿ ಬರೆಯಲಾಗುವುದು. ಇಲ್ಲಿ ಕೂಡ ಸಂಬೋಧನೆಯಲ್ಲಿ ನಿರ್ದಿಷ್ಟ ನಾಮಗಳನ್ನೇ ಬಳಸುತ್ತಾರೆ. ಆದರೆ ಕೆಲವು ಸಂದರ್ಭದಲ್ಲಿ ಹಿರಿಯರು ಗೋತ್ರದ ಹೆಸರುಗಳನ್ನು ಬಳಸಿ ಸಂಬೋಧಿಸುವುದುಂಟು. ಗೋತ್ರದ ಹೆಸರು ವ್ಯಕ್ತಿಯ ಹಾಜರಿಗಿಂತ, ಗೈರು ಹಾಜರಿಯಲ್ಲಿ ಜಾಸ್ತಿ

ಬಳಕೆಯಾಗುತ್ತವೆ. ಇವು ಸಂಬೋಧನೆಯಲ್ಲಿ ಬಳಕೆಯಾಗುವಾಗ, ಬರೆಹದ ಅಥವಾ ಮೂಲರೂಪದಲ್ಲಿ ಇರುವ ಹಾಗೆಯೇ ಬಳಕೆಯಾಗುತ್ತವೆಯೇ ವಿನಃ ನಿರ್ದಿಷ್ಟನಾಮದ ಹಾಗೆ ಸಂಕ್ಷೇಪಮಾಡಿ ಸಂಬೋಧಿಸಿ ಹೇಳಲು ಬರುವುದಿಲ್ಲ. ಉದಾಹರಣೆಗೆ ಮೇಲಿನ ಹೆಸರುಗಳಲ್ಲಿರುವ ಗೋತ್ರ ನಾಮಗಳನ್ನೇ ನೋಡಬಹುದು. ಅಬ್ಬನಾರು, ಮಲ್ಲೇವಾರು, ಕೀಳತ್, ಯರಬೋತಲ, ನಲಬೋತಲ, ಹಿಂದೂಮೂರ್, 'ಯಾಜಿ' ಎಂಬಿವುಗಳನ್ನು ಸಂಬೋಧನೆಯಲ್ಲಿ ಬಳಸುವಾಗಲೂ ಕೂಡ ಮೂಲರೂಪದಲ್ಲಿಯೇ ಬಳಸುತ್ತಿರುವುದು ಗಮನಾರ್ಹ. ಪಟ್ಟಿಯ ಕೊನೆಯ ಹೆಸರು 'ಮಾರುತಿ ಯಾಜಿ', 'ಯಾಜಿ' ಎನ್ನುವುದು ಬ್ರಾಹ್ಮಣರ ಒಂದು ಗೋತ್ರದ ಹೆಸರು. ಬ್ರಾಹ್ಮಣರಲ್ಲಿ ಗೋತ್ರದ ಹೆಸರು ಸಾಮಾನ್ಯವಾಗಿ ಹೆಸರಿನ ಉತ್ತರ ಭಾಗದಲ್ಲಿ ಬಳಕೆಯಾಗುತ್ತಿದ್ದು, ಸಂಬೋಧನೆಯಲ್ಲಿ ಗೋತ್ರದ ಹೆಸರೇ ಪ್ರಧಾನವಾಗಿ ಬಳಕೆಯಾದಂತೆ ಕಾಣಬರುತ್ತಿದೆ. ನಿರ್ದಿಷ್ಟ ನಾಮ ಅಪ್ರಧಾನವಾಗಿರುವುದನ್ನು ಗಮನಿಸಬಹುದು. ಉಳಿದಂತೆ ಬೇರೆ ಹೆಸರುಗಳಲ್ಲಿ ಹೆಸರು ಪ್ರಧಾನವಾಗಿದ್ದು, ಗೋತ್ರದ ಹೆಸರು ಅಪ್ರಧಾನವಾಗಿದೆ. ಗೋತ್ರದ ಹೆಸರು ಕೂಡ ವ್ಯಕ್ತಿಯನ್ನು ಗುರುತಿಸುವಲ್ಲಿ ತುಂಬಾ ಪ್ರಾಮುಖ್ಯತೆಯನ್ನು ವಹಿಸುತ್ತದೆ. ಗೋತ್ರದ ಹೆಸರು ವ್ಯಕ್ತಿಯನ್ನು ಗುರುತಿಸುವಲ್ಲಿ ತಂದೆಯ ಹೆಸರಿನ ನಂತರ ಮೂರನೆಯ ಹೆಸರಾಗಿ ಬಳಕೆಯಾಗುವುದೇ ಹೆಚ್ಚು. ಒಂದು ಗೋತ್ರಕ್ಕೆ ಸೇರಿದ ವ್ಯಕ್ತಿ, ಅದೇ ಗೋತ್ರದ ಇನ್ನೊಬ್ಬ ವ್ಯಕ್ತಿಯನ್ನು ಸಂಬೋಧನೆ ಮಾಡುವಾಗ ಸಾಮಾನ್ಯವಾಗಿ 'ಗೋತ್ರ' ನಾಮದಿಂದ ಕರೆಯುವುದಿಲ್ಲ. ಸಂಬಂಧಪಟ್ಟ ಗೋತ್ರವನ್ನು ಸ್ವತಃ ಕರೆಯಬಾರದು ಎಂಬ ಭಾವನೆ ಮತ್ತು ಹಾಗೆ ಸಂಬೋಧಿಸುವುದು ಸೂಕ್ತವಲ್ಲ ಎಂಬುದು ಇದರ ನಿಷೇಧಕ್ಕೆ ಮುಖ್ಯ ಕಾರಣವಾಗಿರಬಹುದು. ಸ್ತ್ರೀಯರಲ್ಲಿ 'ಗೋತ್ರ'ದ ಹೆಸರುಗಳ ಬಳಕೆ ಕಡಿಮೆಯಿದ್ದಂತೆ ತೋರುತ್ತದೆ.

**೫. ಕುಲನಾಮ + ನಿಜನಾಮ**

'ಕುಲನಾಮ' ಸಾಮಾನ್ಯವಾಗಿ ಉತ್ತರ ಕರ್ನಾಟಕದ ಹೆಸರುಗಳಲ್ಲಿ ಕೊನೆಗೆ ಬಳಕೆಯಾದರೆ, ದಕ್ಷಿಣ ಕರ್ನಾಟಕದ ಹೆಸರುಗಳಲ್ಲಿ ಪೂರ್ವಭಾಗದಲ್ಲಿ ಬಳಕೆಯಾಗುತ್ತದೆ. ವಾಸ್ತವವಾಗಿ ದಕ್ಷಿಣಕರ್ನಾಟಕದಲ್ಲಿ ಕುಲನಾಮಗಳ ಬಳಕೆ ಕಡಿಮೆಯೆಂದೇ ಹೇಳಬಹುದು. ಇದಕ್ಕೆ ಚಿತ್ರದುರ್ಗ ಪರಿಸರ ಹೊರತಲ್ಲ. ಚಿತ್ರದುರ್ಗ ಪರಿಸರದ ಕೆಲವು ಹೆಸರುಗಳಲ್ಲಿ ಕುಲನಾಮಗಳು ಕಾಣಬಂದರು, ಹೆಸರಿನ ಪೂರ್ವಭಾಗದಲ್ಲಿರುತ್ತದೆ ಎಂಬುದು ಮುಖ್ಯ ಸಂಗತಿಯಾಗಿದೆ. ಇದರ ಬಳಕೆಯು ಕೂಡ ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ ಎನ್ನುವುದು ಗಮನಾರ್ಹ. ಉತ್ತರ ಕರ್ನಾಟಕದಲ್ಲಿ ವ್ಯಕ್ತಿಯ ನಿಜನಾಮಕ್ಕಿಂತ ಕುಲನಾಮವೇ ಪ್ರಧಾನವಾಗಿದ್ದು, ಸಂಭೋಧನೆಯಲ್ಲೂ ಕುಲನಾಮವೇ ಬಳಕೆಯಾಗುತ್ತದೆ. ಇದು ಉತ್ತರ ದಕ್ಷಿಣ ಕರ್ನಾಟಕದ ನಾಮ ಸಂಬೋಧನೆಯಲ್ಲಿ ಕಾಣಬರುವ ಮುಖ್ಯ ವ್ಯತ್ಯಾಸವಾಗಿದೆ. "ಕುಲನಾಮಗಳು ಕರ್ನಾಟಕದ ಉತ್ತರ ಮತ್ತು ದಕ್ಷಿಣ ಭಾಗಗಳಲ್ಲಿ ಬೇರೆ ಬೇರೆ ರೀತಿಯಾಗಿ ಬಳಕೆಯಾಗುತ್ತವೆ. ಉದಾಹರಣೆಗೆ ಶಿ.ಶಿ.ಬಸವನಾಳರು ದಕ್ಷಿಣದಲ್ಲಿದ್ದರೆ, ಬಿ.ಎಸ್.ಶಿವಲಿಂಗಪ್ಪ ಅಥವಾ ಬಿ.ಶಿವಲಿಂಗಪ್ಪ ಆಗುತ್ತಿದ್ದರು. ದಕ್ಷಿಣದ ಎಂ.ಚಿದಾನಂದಮೂರ್ತಿ ಮಠದ ಆಗುತ್ತಿದ್ದರು"[*] ಎಂಬುದು ಉತ್ತರ ಮತ್ತು ದಕ್ಷಿಣ ಕರ್ನಾಟಕದ ನಾಮರಚನೆಯ ಸ್ವರೂಪ ಮತ್ತು ಸಂಬೋಧನ ರೀತಿಯನ್ನು ಸ್ಪಷ್ಟಪಡಿಸುತ್ತದೆ. ಮತ್ತು ಕುಲನಾಮಗಳ ಬಳಕೆಯ ರೀತಿಯೂ ತಿಳಿದುಬರುತ್ತದೆ. ಅಲ್ಲದೆ ಕುಲನಾಮ ಮತ್ತು ನಿಜನಾಮಗಳ ಪ್ರಾಮುಖ್ಯತೆಯನ್ನು

ಇಲ್ಲಿ ಕಂಡುಕೊಳ್ಳಬಹುದು. ಕ್ಷೇತ್ರಕಾರ್ಯದಿಂದ ಲಭ್ಯವಾದ ಮಾಹಿತಿಯ ಆಧಾರದ ಮೇಲೆ ಚಿತ್ರದುರ್ಗ ಪರಿಸರದಲ್ಲಿರುವ ಕುಲನಾಮಗಳ ಬಗೆ ಮತ್ತು ಅವುಗಳ ಬಳಕೆಯ ಸಾಧ್ಯತೆಗಳನ್ನು ಕುರಿತು ಇಲ್ಲಿ ಚರ್ಚಿಸಬಹುದು.

| ಬರೆಹದ ರೂಪ (ಮೂಲರೂಪ) | ಸಂಕ್ಷಿಪ್ತರೂಪ | ಸಂಬೋಧನರೂಪ (ಮೌಖಿಕರೂಪ) |
| --- | --- | --- |
| ಪಟೇಲ್ ಪಾಪನಾಯಕ | ಪಿ. (P) ಪಾಪನಾಯಕ | ಪಾಪನಾಯಕ / ನಾಯಕ / ಪಟೇಲ್ |
| ಗೊಂಚಿಕಾರ ತಿಪ್ಪೇಸ್ವಾಮಿ | ಜಿ. (G) ತಿಪ್ಪೇಸ್ವಾಮಿ | ತಿಪ್ಪ, ತಿಪ್ಪೇಶಿ |
| ಮಠದ ರುದ್ರಯ್ಯ | ಎಂ. (M) ರುದ್ರಯ್ಯ | ರುದ್ರ, ರುದ್ರಯ್ಯ |
| ಗೌಡ್ರ ಬಸಣ್ಣ | ಜಿ. (G) ಬಸಣ್ಣ | ಬಸು, ಬಸವ, ಬಸ್ಯ |
| ಪಂಡಿತ ಸಾದಾಗೋವಿಂದರೆಡ್ಡಿ | ಪಿ. (P) ಸಾದಾಗೋವಿಂದರೆಡ್ಡಿ | ಗೋವಿಂದ, ರೆಡ್ಡಿ, ಗೋವಿಂದರೆಡ್ಡಿ |
| ಪಾಳೆಯಗಾರ ಸೂರನಾಯಕ | ಪಿ. (P) ಸೂರನಾಯಕ | ಸೂರಯ್ಯ, ಸೂರನಾಯಕ/ನಾಯಕ |
| ಗೌಡರ್ ಪಾಪಮ್ಮ | ಜಿ. (G) ಪಾಪಮ್ಮ | ಪಾಪವ್ವ, ಪಾಪಮ್ಮ, ಪಾಪ, ಪಾಪು, ಪಾಪಿ |

ಚಿತ್ರದುರ್ಗ ಪರಿಸರದ ಹೆಸರುಗಳಲ್ಲಿ ಕುಲನಾಮ ಹೆಸರಿನ ಪೂರ್ವದಲ್ಲಿ ಬಳಕೆಯಾಗುತ್ತಿದ್ದು, ದಾಖಲೆಗಳಲ್ಲಿ ಮಾತ್ರ ಅದರ ಬಳಕೆ ಇರುತ್ತದೆ. ಪಟ್ಟಿಯ ಮೊದಲ ಭಾಗದ ಹೆಸರುಗಳನ್ನು ಗಮನಿಸಬಹುದು. ಇತರ ಸಂದರ್ಭಗಳಲ್ಲಿ ಕುಲನಾಮಗಳು ಹೆಸರಿನ ಜೊತೆ ಬಳಕೆಯಾಗುವಾಗ ಪೂರ್ಣರೂಪದಲ್ಲಿ ಬಳಕೆಯಾಗದೆ, ಮೊದಲಕ್ಷರದಿಂದ ಮಾತ್ರ ಸೂಚಿಸಿ ಬರೆಯುವುದು ಇಲ್ಲಿಯ ವೈಶಿಷ್ಟ್ಯ. ನಿರ್ದಿಷ್ಟ ನಾಮವನ್ನು ಮಾತ್ರ ಪೂರ್ಣರೂಪದಲ್ಲಿ ಬಳಸುವುದುಂಟು. ಸಂಬೋಧನೆಯಲ್ಲಿ ಕುಲನಾಮವು ಬಳಕೆಯಾಗದೆ ಹೆಸರು ಮಾತ್ರ ಬಳಕೆಯಾಗುತ್ತದೆ. ಚಿತ್ರದುರ್ಗ ಪರಿಸರದ ವ್ಯಕ್ತಿನಾಮ ಸಂಬೋಧನೆಯಲ್ಲಿ 'ಕುಲನಾಮ'ಗಳು, ವಿಶೇಷ ಸಂದರ್ಭಗಳಲ್ಲಿ ಮಾತ್ರ ಬಳಕೆಯಾಗುತ್ತವೆ. ಅಲ್ಲದೆ ಸಂಬೋಧನೆಯಲ್ಲಿ ಬರೀ ಕುಲನಾಮಗಳಿಂದ ಸಂಬೋಧಿಸುವುದಿಲ್ಲ. ಇದು ಉತ್ತರ ಕರ್ನಾಟಕದಲ್ಲಿ ಸಾಧ್ಯ. ಕುಲನಾಮಗಳ ಜೊತೆಗೆ ವ್ಯಕ್ತಿಯ ಹೆಸರನ್ನು ಸೇರಿಸಿ ಸಂಬೋಧಿಸಲಾಗುವುದು. ಮೇಲಿನ ಹೆಸರುಗಳನ್ನೇ ನಿದರ್ಶನಕ್ಕೆ ತೆಗೆದುಕೊಂಡರೂ ಬರೆಹದ ರೂಪದಲ್ಲಿರುವ ಹೆಸರುಗಳನ್ನು ಸಂಬೋಧನೆಯಲ್ಲಿ ಯಥಾವತ್ತಾಗಿ ಬಳಸುವುದುಂಟು. ಕುಲನಾಮವನ್ನು ಹೊರತುಪಡಿಸಿ ಬರೀ ಹೆಸರನ್ನು ಯಥಾವತ್ತಾಗಿ ಸಂಬೋಧಿಸುವಂತೆ ಸಂಕ್ಷೇಪ ಮಾಡಿಯೂ ಸಂಬೋಧಿಸಲಾಗುವುದು. ಈ ಕುಲನಾಮಗಳಲ್ಲಿ ಗೌಡ, ಪಟೇಲ, ಗೊಂಚಿಕಾರ ಎಂಬಿವು ಮೂಲತಃ ಪದವಿ ಸೂಚಕಗಳಾಗಿರುವುದರಿಂದ ಕೆಳಜಾತಿಯವರು ಮೇಲ್ಜಾತಿಯವರನ್ನು ಸಂಬೋಧಿಸುವಾಗ ಗೌರವಸೂಚಕವಾಗಿ ಈ ಪದಗಳಿಂದ ಸಂಬೋಧಿಸುವುದುಂಟು.

೬. ವೃತ್ತಿ ಹೆಸರು + ತಂದೆ ಹೆಸರು + ನಿಜನಾಮ

ವೃತ್ತಿ ಹೆಸರು ಮತ್ತು ತಂದೆಯ ಹೆಸರು, ವ್ಯಕ್ತಿಯ ಹೆಸರಿನಲ್ಲಿ ಬಳಕೆಯಾಗುವುದು ಚಿತ್ರದುರ್ಗ ಪರಿಸರದಲ್ಲಿ ಒಂದು ಸಾಮಾನ್ಯ ನಿಯಮ. ಆದರೆ ವೃತ್ತಿ ಹೆಸರು ಮತ್ತು ತಂದೆ ಹೆಸರು ಒಟ್ಟಿಗೆ ಒಂದೇ ಹೆಸರಿನೊಂದಿಗೆ ಬಳಕೆಯಾಗುವುದು ವಿಶೇಷ. ನಿದರ್ಶನಕ್ಕೆ ಕೆಲವು ಉದಾಹರಣೆಗಳನ್ನು ನೋಡಬಹುದು.

| ಬರೆಹದ ರೂಪ (ಮೂಲರೂಪ) | ಸಂಕ್ಷಿಪ್ತರೂಪ | ಸಂಬೋಧನರೂಪ (ಮೌಖಿಕರೂಪ) |
|---|---|---|
| ಗೌಡರ ತಿಪ್ಪೇಸ್ವಾಮಿ ವಿರುಪಾಕ್ಷಪ್ಪ<br>ಪಟೇಲ್ ನಾಗಪ್ಪ ಕುಮಾರ್<br>ಆವುಲು (ಹಸು) ಓಬಯ್ಯ ಆನಂದ<br>ಮ್ಯಾಕಲು (ಮೇಕೆ) ಪಾಪಯ್ಯ ಚಂದ್ರಶೇಖರ್ | ಜಿ.ಟಿ. (G.T.) ವಿರುಪಾಕ್ಷಪ್ಪ<br>ಪಿ.ಎನ್. (P.N.) ಕುಮಾರ್<br>ಎ.ಓ. (A.O.) ಆನಂದ<br>ಎಂ.ಪಿ. (M.P.) ಚಂದ್ರಶೇಖರ್ | ವಿರುಪಾಕ್ಷಿ, ಗೌಡ್ರೆ, ಜಿ.ಟಿ.ವಿ.<br>ಕುಮ್ಮಿ, ಕುಮಾರ್<br>ಆನಂದ್, ನಂದಾ<br>ಚಂದ್ರು/ಶೇಖರ್ |

ಮೇಲಿನ ಹೆಸರುಗಳಲ್ಲಿ ಮೊದಲು ಕುಲನಾಮ, ನಂತರ ತಂದೆಯ ಹೆಸರು, ಕೊನೆಯಲ್ಲಿ ವ್ಯಕ್ತಿಯ ಹೆಸರಿದೆ. ದಾಖಲೆಗಳಲ್ಲಿ ಈ ಮೂರು ಹೆಸರುಗಳನ್ನು ಬಿಡಿಸಿ ಬರೆಯಲಾಗುವುದು. ಸಂಕ್ಷೇಪಿಸಿ ಬರೆಯುವಾಗ ಕುಲನಾಮ ಮತ್ತು ತಂದೆಯ ಹೆಸರನ್ನು ಮೊದಲಕ್ಷರವನ್ನು ಇಂಗ್ಲಿಶ್ ಭಾಷೆಯ ಆದ್ಯಕ್ಷರಗಳ ಮೂಲಕ ಗುರುತಿಸಿ ವ್ಯಕ್ತಿಯ ಹೆಸರನ್ನು ಯಥಾವತ್ತಾಗಿ ಬಳಸಲಾಗುತ್ತದೆ. ಇಲ್ಲಿ ಹೆಸರು ಎರಡು ಇನ್ಸಿಲ್‌ಗಳನ್ನು ಒಳಗೊಂಡಿರುತ್ತದೆ. ಸಾಮಾನ್ಯ ಸಂಬೋಧನೆಯಲ್ಲಿ ಕುಲನಾಮ ಮತ್ತು ತಂದೆಯ ಹೆಸರು ಬಳಕೆಯಾಗದೆ, ಹೆಸರು ಮಾತ್ರ ಸಂಬೋಧಿಸಲ್ಪಡುತ್ತದೆ. ಹೆಸರನ್ನು ಪೂರ್ಣ ರೂಪದಲ್ಲಿ ಬಳಸುವಂತೆ, ಸಂಕ್ಷೇಪ ಮಾಡಿಯೂ ಬಳಸುವುದುಂಟು. ಕೆಲವು ಸಂದರ್ಭಗಳಲ್ಲಿ ಕುಲನಾಮವೂ ಬಳಕೆಯಾಗುತ್ತದೆ. ಇಲ್ಲಿ ತಂದೆ ಹೆಸರು ಇದ್ದರೂ ಸಹ ಕುಲನಾಮ ವ್ಯಕ್ತಿಯ ಹೆಸರಿನೊಂದಿಗೆ ನೇರವಾಗಿ ಬಳಕೆಯಾಗುತ್ತದೆ. ಉದಾಹರಣೆಗೆ - ಗೌಡರ ವಿರೂಪಾಕ್ಷಪ್ಪ, ಪಟೇಲ್ ಕುಮಾರ್, ಆವುಲು ಆನಂದ್, 'ಮ್ಯಾಕಲು ಚಂದ್ರಶೇಖರ್' ಇತ್ಯಾದಿ. ಇಂಥ ಕಡೆ ತಂದೆಯ ಹೆಸರಿನ ಬಳಕೆ ಪ್ರಧಾನವಾಗಿರದೆ ತೀರಾ ಅನಿವಾರ್ಯ ಸಂದರ್ಭಗಳಲ್ಲಿ ಕ್ವಚಿತ್ತಾಗಿ ಬಳಸಲ್ಪಡಬಹುದು.

ಆವುಲು (ಹಸು) ಮ್ಯಾಕಲು (ಮೇಕೆ) ಈ ಕುಲನಾಮಗಳು ಚಿತ್ರದುರ್ಗ ಪರಿಸರದ ನಾಯಕರಲ್ಲಿ ಹೆಚ್ಚು ಕಂಡುಬರುತ್ತಿದ್ದು ಅವು ಆ ಜನಾಂಗದ ವೃತ್ತಿಯ ಕುರುಹುಗಳಾಗಿವೆ. ಚಿತ್ರದುರ್ಗ ಪರಿಸರದ ನಾಯಕರ ಮಾತೃಭಾಷೆ ತೆಲುಗು ಆಗಿರುವುದರಿಂದ, ಅವರ ಕುಲನಾಮಗಳು ತೆಲುಗು ಭಾಷೆಯಲ್ಲಿಯೇ ಬಳಸಲ್ಪಡುತ್ತವೆ. ಇದು ಆ ಸಮುದಾಯದ ಒಟ್ಟಾರೆ ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುತ್ತವೆ. ಆ ಸಮುದಾಯದ ಮೂಲನೆಲೆಯ ಬಗೆಗೆ ಜಿಜ್ಞಾಸೆಗಳಿವೆ. ಆ ಕಾರಣಕ್ಕಾಗಿ ಭಾಷಿಕ ಹಿನ್ನೆಲೆಯಲ್ಲಿ ಅಧ್ಯಯನ ಮಾಡಬೇಕಾದ ಅವಶ್ಯಕತೆಯಿದೆ. ಇದೇ ರೀತಿ ಸ್ಥಳವಾಚಿ, (ಮೇಗಳಮನೆ, ಕಟ್ಟೆಮನೆ, ಊರುಬಾಗಿಲುಮನೆ) ವೃತ್ತಿವಾಚಿ: ಮ್ಯಾದರು, ಕೊರಚರು (ಇವು ಜಾತಿವಾಚಿಗಳಾದರೂ ವೃತ್ತಿವಾಚಿಗಳೂ ಹೌದು) ವಸ್ತುವಾಚಿಃ ಅಕ್ಕಿ, ರಾಗಿ ಮುಂತಾದವುಗಳು ಕುಲನಾಮಗಳಂತೆ ಬಳಕೆಯಾಗುತ್ತವೆ. ಇವುಗಳ ಬಗೆಗೆ ಹೆಚ್ಚಿನ ಅಧ್ಯಯನದ ಅವಶ್ಯಕತೆಯಿದೆ.

ಹೆಸರಿನ 'ಬರೆಹದ ರೂಪ' ಸಂಬೋಧನೆಯಲ್ಲಿ ಸಂಕ್ಷಿಪ್ತವಾಗಿ ಬಳಕೆಯಾಗುತ್ತದೆ. ಹೀಗೆ ಸಂಕ್ಷೇಪ ಮಾಡಿ ಕರೆಯುವುದರ ಮೂಲ ಉದ್ದೇಶ ಸೌಲಭ್ಯಕಾಂಕ್ಷೆ ಇರಬಹುದು. ಮತ್ತು ಪ್ರೀತಿ, ಆತ್ಮೀಯತೆಗಳೂ ಕೂಡ ಕಾರಣವಾಗಿರಬಹುದು. ಇಲ್ಲಿ ಚಿತ್ರದುರ್ಗ ಪರಿಸರದ ಹೆಸರುಗಳ ರಚನೆ ಮತ್ತು ಸಂಬೋಧನೆಯ ಕೆಲವು ಮುಖ್ಯ ಪ್ರಭೇದಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಇದೇ ರೀತಿ ಬರೆಹದ ರೂಪವನ್ನು ಬೇರೆ ಬೇರೆ ವಿಧದಲ್ಲಿ ಸಂಬೋಧಿಸಬಹುದಾದ ಸಂಕ್ರಮಣ ಪ್ರದೇಶಗಳು ಇರಲೂ ಸಾಕು. ಪ್ರತ್ಯೇಕ

ಅಧ್ಯಯನದ ಮೂಲಕ ಈ ಬಗೆಯ ವೈಶಿಷ್ಟ್ಯಗಳನ್ನು ಗುರುತಿಸಬಹುದು. ಔಪಚಾರಿಕ ನೆಲೆಯಲ್ಲಿ ಹೆಸರುಗಳು ಬರೆಹದ ರೀತಿಯಲ್ಲಿಯೇ ಬಳಕೆಯಾದರೆ, ಅನೌಪಚಾರಿಕ ನೆಲೆಗಳಲ್ಲಿ ಬರೆಹರೂಪಕ್ಕಿಂತ ಭಿನ್ನವಾದ ಹಲವು ಬೇರೆ ಬೇರೆ ಸಂಕ್ಷೇಪ ರೂಪಗಳಿಂದ ಸಂಬೋಧಿಸುವುದು ಸಾಮಾನ್ಯ ಪ್ರಕ್ರಿಯೆಯಾಗಿದೆ.

## ೪.೩ ಉಲ್ಲೇಖದ ನೆಲೆಗಳು

ವ್ಯಕ್ತಿ ಎದುರಿಗೆ ಇರುವಾಗ ಸಹಜವಾಗಿಯೆ ಗೌರವದಿಂದ ಸಂಬೋಧನೆ ಮಾಡುತ್ತಾರೆ. ಇದು ಸಂಬೋಧನೆಯಲ್ಲಿ ಕಾಣಬರುವ ಸಾಮಾನ್ಯ ನಿಯಮ. ವ್ಯಕ್ತಿಯ ಗೈರುಹಾಜರಿಯಲ್ಲಿ ಹೆಸರಿನ ಬಳಕೆಯನ್ನು ಎರಡು ರೀತಿಯಲ್ಲಿ ಮಾಡಬಹುದು. ಒಂದು ಗೌರವಸೂಚಕದಿಂದ. ಎರಡು ಏಕವಚನದಿಂದ. ಹೆಸರಿನ ನಿರ್ದಿಷ್ಟ ಭಾಗದೊಂದಿಗೆ ಗೌರವಸೂಚಕ ಪದಗಳನ್ನು ಹಚ್ಚಿ ಕರೆಯುವುದು ಗೌರವ ಸಂಬೋಧನೆಯಾದರೆ, ಗೌರವ ಸೂಚಕ ಪದಗಳನ್ನು ಹಚ್ಚದೆ, ನಿರ್ದಿಷ್ಟಭಾಗದಿಂದ ಕರೆಯುವುದು ಅಥವಾ ಹೆಸರನ್ನು ಮೊಟಕುಮಾಡಿ ಕರೆಯುವುದು ಏಕವಚನ ಸಂಬೋಧನೆಯೆನಿಸುತ್ತದೆ. ವ್ಯಕ್ತಿ ಎದುರಿನಲ್ಲಿದ್ದಾಗ ಹೆಸರಿನಿಂದ ಕರೆಯುವುದು ಹೆಸರಿನ ನೇರ ಸಂಬೋಧನೆಯಾದರೆ, ವ್ಯಕ್ತಿಯ ಅನುಪಸ್ಥಿತಿಯಲ್ಲಿ ಹೆಸರಿನಿಂದ ಕರೆಯುವುದು ಹೆಸರಿನ ಪರೋಕ್ಷ ಸಂಬೋಧನೆಯಾಗಿದೆ. ಪರೋಕ್ಷ ಸಂಬೋಧನೆಯಲ್ಲಿ ಹೆಸರು ವ್ಯಕ್ತಿಯ ಗೈರು ಹಾಜರಿಯಲ್ಲಿ ಬಳಸಲ್ಪಡುವುದರಿಂದ, ಇದನ್ನು 'ಉಲ್ಲೇಖ' ಎಂದು ಗುರುತಿಸಿಕೊಳ್ಳಲಾಗಿದೆ. ವ್ಯಕ್ತಿಯ ಹೆಸರನ್ನು ಹಲವಾರು ಸಂದರ್ಭಗಳಲ್ಲಿ ಬಳಸುತ್ತೇವೆ. ಹೀಗೆ ಎಲ್ಲಾ ಸಂದರ್ಭಗಳಲ್ಲಿ ಬಳಸುವುದೆಲ್ಲವೂ ಉಲ್ಲೇಖವಾಗುವುದಿಲ್ಲ. ವ್ಯಕ್ತಿಯ ಗೈರುಹಾಜರಿಯಲ್ಲಿ ಬಳಸಿದಾಗ ಮಾತ್ರ ಉಲ್ಲೇಖವಾಗುತ್ತದೆ. ಹೆಸರುಗಳನ್ನು ಉಲ್ಲೇಖ ಮಾಡುವಾಗ ಎಲ್ಲರೂ ಒಂದೇ ರೀತಿಯಲ್ಲಿ ಮಾಡುವುದಿಲ್ಲ. ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಮಾಡಬಹುದು. ಆದುದರಿಂದ ವ್ಯಕ್ತಿನಾಮಗಳ ಉಲ್ಲೇಖ' ವಿಶಿಷ್ಟವೂ ಆಗಿರುವಂತೆ, ವೈವಿಧ್ಯಮಯವೂ ಆಗಿದೆ.

ವ್ಯಕ್ತಿನಾಮ 'ಉಲ್ಲೇಖ'ವನ್ನು ಮುಖ್ಯವಾಗಿ ಔಪಚಾರಿಕ ಮತ್ತು ಅನೌಪಚಾರಿಕ ಎಂಬ ಎರಡು ಭಾಗಗಳನ್ನು ಮಾಡಿಕೊಂಡು, ಆ ಎರಡೂ ಭಿನ್ನ ನೆಲೆಗಳಲ್ಲಿ ಹೆಸರುಗಳು ಯಾವ ರೀತಿಯಾಗಿ ಉಲ್ಲೇಖಿಸಲ್ಪಡುತ್ತವೆ ಎಂಬುದನ್ನು ಪ್ರಸ್ತುತ ಸಂದರ್ಭದಲ್ಲಿ ಚರ್ಚಿಸಲಾಗುವುದು.

**ಔಪಚಾರಿಕ ಸಂಬೋಧನೆಯಲ್ಲಿ ಹೆಸರಿನ ಉಲ್ಲೇಖ**

ಔಪಚಾರಿಕ ನೆಲೆಯಲ್ಲಿ ವ್ಯಕ್ತಿಗೆ ಗೌರವ ಕೊಡುವುದು ಒಂದು ದೃಷ್ಟಿಯಲ್ಲಿ ಕಡ್ಡಾಯವಾಗಿರುತ್ತದೆ ಎಂದು ಹೇಳಬಹುದು. ಇಲ್ಲಿ ವ್ಯಕ್ತಿಗೆ ಮರ್ಯಾದೆ ನೀಡಿ ಸಂಬೋಧನೆ ಮಾಡುತ್ತಾರೆ. ವ್ಯಕ್ತಿಯ ಹೆಸರನ್ನು ಸಂಬೋಧನೆ ಮಾಡುವಾಗ, ಪೂರ್ವೋತ್ತರಗಳಲ್ಲಿ ಗೌರವಸೂಚಕ ಪದಗಳನ್ನು ಅಂಟಿಸಿ ಪೂರ್ಣ ಹೆಸರಿನಿಂದ ಸಂಬೋಧಿಸುವುದುಂಟು. ಉದಾಹರಣೆಗೆ ಕೆಲವು ಹೆಸರುಗಳನ್ನು ನೋಡಬಹುದು.

ಶ್ರೀಮಾನ್ ತಿಪ್ಪೇಸ್ವಾಮಿಯವರು
ಜಗದ್ಗುರು ಶಿವಮೂರ್ತಿ ಶರಣರು
ಶ್ರೀಯುತ ಬೋರಯ್ಯನವರು
ಶ್ರೀಮತಿ ಓಬಮ್ಮನವರು
ಕುಮಾರಿ ಜಯಲಕ್ಷ್ಮಿಯವರು - ಇತ್ಯಾದಿ

ಮೇಲಿನ ಹೆಸರುಗಳಲ್ಲಿ ಆದಿ ಮತ್ತು ಅಂತ್ಯದಲ್ಲಿ ಗೌರವ ಸೂಚಕ ಪದಗಳು ಸೇರಿ ಸಂಬೋಧಿಸಿರುವುದು ತಿಳಿದುಬರುತ್ತದೆ. ಕೆಲವು ಸಂದರ್ಭಗಳಲ್ಲಿ ಹೆಸರಿನ ಉತ್ತರ ಭಾಗದಲ್ಲಿ ಮಾತ್ರ ಗೌರವಸೂಚಕ ಪದಗಳು ಸೇರುವುದುಂಟು. ಔಪಚಾರಿಕ ನೆಲೆಯಲ್ಲಿ ವ್ಯಕ್ತಿಯ ಎದುರಿಗೆ ಹೆಸರನ್ನು ಸಂಬೋಧಿಸುವುದು ಹಾಗೂ ಗೈರುಹಾಜರಿಯಲ್ಲಿ ಹೆಸರನ್ನು ಉಲ್ಲೇಖಿಸುವುದು, ಎರಡೂ ಒಂದೇ ಆಗಿರುತ್ತದೆ. ವ್ಯಕ್ತಿ ಉಪಸ್ಥಿತರಿರುವಾಗ ಗೌರವದಿಂದ ಸಂಬೋಧನೆ ಮಾಡುವಂತೆ, ವ್ಯಕ್ತಿಯ ಅನುಪಸ್ಥಿತಿಯಲ್ಲಿಯೂ ಅದೇ ರೀತಿ ಗೌರವದಿಂದ ಉಲ್ಲೇಖ ಮಾಡುತ್ತಾರೆ. ಆದಕಾರಣ ಔಪಚಾರಿಕ ನೆಲೆಯಲ್ಲಿ ಸಂಬೋಧನೆ ಮತ್ತು ಉಲ್ಲೇಖಗಳ ನಡುವೆ ಯಾವುದೇ ವ್ಯತ್ಯಾಸ ಕಾಣಬರುವುದಿಲ್ಲ. ಔಪಚಾರಿಕ ನೆಲೆ ಸಂಬೋಧನೆಯ ಉದಾಹರಣೆಗಳು, 'ಉಲ್ಲೇಖ'ದ ಉದಾಹರಣೆಗಳೂ ಆಗಿರುತ್ತವೆ ಎಂಬುದು ಗಮನಾರ್ಹ.

### ೪.೩.೧ ಅನೌಪಚಾರಿಕ ನೆಲೆ

ಔಪಚಾರಿಕ ನೆಲೆಯಲ್ಲಿ ವ್ಯಕ್ತಿಯ ಹೆಸರಿನ ಬಗೆಗೆ ಇರುವ ನಿಯಮ, ನಂಬಿಕೆಗಳು, ಅನೌಪಚಾರಿಕ ನೆಲೆಯಲ್ಲಿ ಇರುವುದಿಲ್ಲ ಎಂದು ಹೇಳಬಹುದು. ಆದುದರಿಂದ ವ್ಯಕ್ತಿನಾಮದ ಉಲ್ಲೇಖವು ತುಂಬಾ ಮುಕ್ತವಾಗಿರುತ್ತದೆ. ಕಿರಿಯ ವಯಸ್ಸಿನವರು-ಹಿರಿಯ ವಯಸ್ಸಿನವರನ್ನು, ಕೆಳಜಾತಿಯವರು-ಮೇಲ್ಜಾತಿಯವರನ್ನು, ಕೆಳವರ್ಗದವರು-ಮೇಲ್ವರ್ಗದವರನ್ನು, ಕೆಳದರ್ಜೆಯ ಅಧಿಕಾರಿ- ಮೇಲ್ದರ್ಜೆಯ ಅಧಿಕಾರಿಯನ್ನು, ಶಿಷ್ಯ-ಗುರುಗಳನ್ನು, ಗಂಡಸರು-ಹೆಂಗಸರನ್ನು, ಹೆಂಗಸರು-ಗಂಡಸರನ್ನು ಹೆಸರಿನಿಂದ ಕರೆಯಬಹುದು. ಅಥವಾ ಗೌರವದಿಂದಲೂ ಕರೆಯಬಹುದು. ಅಲ್ಲದೆ ಅಡ್ಡಹೆಸರು, ಕುಲನಾಮ, ಮುದ್ದುಹೆಸರು - ಇತ್ಯಾದಿ ಬೇರೆ ಬೇರೆ ಹೆಸರುಗಳಿಂದ ಕರೆಯುವ ಸಾಧ್ಯತೆಗಳು ಇರುತ್ತವೆ. ನಿದರ್ಶನಕ್ಕೆ ಕೆಲವು ಮಾದರಿಗಳನ್ನು ಇಲ್ಲಿ ಗಮನಿಸಬಹುದು.

ಅನೌಪಚಾರಿಕ ನೆಲೆಗಳಲ್ಲಿ ವ್ಯಕ್ತಿಯನ್ನು ಉಲ್ಲೇಖಿಸುವ ಬಗೆ -

ಹೆಸರನ್ನು ಗೌರವಸೂಚಕವಾಗಿ ಸಂಬೋಧಿಸುವುದು (ಉಲ್ಲೇಖಿಸುವುದು)

| ಮೂಲರೂಪ | ಸಂಬೋಧನರೂಪ |
|---|---|
| ಬಸವರಾಜ > | ಬಸವರಾಜಣ್ಣ |
| ನಿಂಗಪ್ಪ > | ನಿಂಗಪ್ಪಣ್ಣ |
| ಗೋವಿಂದ > | ಗೋವಿಂದಣ್ಣ |
| ಹನುಮಂತಮ್ಮ > | ಹನುಮಂತಕ್ಕ |
| ಗೌರಮ್ಮ > | ಗೌರಮ್ಮಕ್ಕ |
| ಶಕುಂತಲ > | ಶಕುಂತಲಕ್ಕ |

ಹೆಸರನ್ನು ಸಂಬೋಧಿಸುವಾಗ, ಹೆಸರಿನ ಕೊನೆಗೆ ಅಣ್ಣ, ಅಕ್ಕ ಗೌರವ ಪ್ರತ್ಯಯಗಳನ್ನು ಸೇರಿಸಿ ಗೌರವದಿಂದ ಸಂಬೋಧನೆ ಮಾಡಬಹುದು. ವ್ಯಕ್ತಿಯ ಗೈರು ಹಾಜರಿಯಲ್ಲಿಯೂ ಗೌರವ ಸೂಚಕಗಳನ್ನು

ಬಳಸಿ, ಹೆಸರನ್ನು ಸಂಬೋಧಿಸುವುದು ಸಾಮಾನ್ಯವಾಗಿ ಕಿರಿಯರು ಹಿರಿಯರನ್ನು ಸಂಬೋಧಿಸುವಾಗ ಮಾತ್ರ. ಇದು ಹಿರಿಯರ ಬಗೆಗೆ ಕಿರಿಯರಿಗಿರುವ ಗೌರವ ಭಾವನೆಯನ್ನು ಸೂಚಿಸುತ್ತದೆ. ವ್ಯಕ್ತಿಯ ಅನುಪಸ್ಥಿತಿಯಲ್ಲಿ 'ಅಣ್ಣ', 'ಅಕ್ಕ' ಗೌರವ ಸೂಚಕಗಳು (ಬಂಧುಸೂಚಕ ವಾರ್ಗಿಕಗಳು) ಮಾತ್ರ ಬಳಕೆಯಾಗುತ್ತಿದ್ದು, ಉಳಿದ ಗೌರವ ಸೂಚಕಗಳು ಬಳಕೆಯಾದಂತೆ ತೋರುವುದಿಲ್ಲ.

**ಹೆಸರಿನಿಂದ ಸಂಬೋಧಿಸುವುದು (ಉಲ್ಲೇಖಿಸುವುದು)**

ಉದಾಹರಣೆಗೆ : ಸುರೇಶ್ ಗೌಡ
ತಿಪ್ಪಯ್ಯ
ದೇವೇಂದ್ರಪ್ಪ
ಮುರುಗೇಶ್
ಚಳ್ಳೇರಮ್ಮ
ಗಂಗಮ್ಮ
ಸುಶೀಲಮ್ಮ - ಇತ್ಯಾದಿ

ಸಾಮಾನ್ಯವಾಗಿ ಹಿರಿಯರು, ಸ್ನೇಹಿತರು ಕರೆಯುವಾಗ ಹೀಗೆ ಹೆಸರನ್ನು ನೇರವಾಗಿ ಬಳಸುವುದು ಹೆಚ್ಚಾಗಿ ಕಾಣಬರುತ್ತದೆ.

**ಏಕವಚನದಿಂದ ಸಂಬೋಧಿಸುವುದು**

ಉದಾಹರಣೆಗೆ :

| ಮೂಲರೂಪ | ಸಂಬೋಧನ ರೂಪ |
|---|---|
| ಮಾರಪ್ಪ | ಮಾರ, ಮಾರ್ಗ |
| ಸೂರಯ್ಯ | ಸೂರ, ಸೂರ್ಗ |
| ಬಸವರಾಜ | ಬಸವ |
| ನಾಗರಾಜ | ನಾಗ |
| ಶಾರದಮ್ಮ | ಶಾರದ |
| ಅನ್ನಪೂರ್ಣಮ್ಮ | ಅನ್ನಪೂರ್ಣ |
| ರೇಣುಕಮ್ಮ | ರೇಣುಕ |
| ಭಾಗ್ಯಮ್ಮ | ಭಾಗ್ಯ |
| ನೇತ್ರಾವತಿ | ನೇತ್ರ |

ವ್ಯಕ್ತಿಯ ಗೈರು ಹಾಜರಿಯಲ್ಲಿ ಹೆಸರನ್ನು ಮೊಟಕುಗೊಳಿಸಿ ಏಕವಚನದಿಂದ ಕರೆಯುವುದು ಸಾಮಾನ್ಯ. ಹೆಚ್ಚಾಗಿ ಹಿರಿಯರು, ಸ್ನೇಹಿತರು ಈ ರೀತಿ ಸಂಬೋಧನೆ ಮಾಡುವುದು ಕಾಣಬರುತ್ತದೆ.

ಇನಿಶಿಯಲ್‌ಗಳಿಂದ (Initiols) ಸಂಬೋಧನೆ ಮಾಡುವುದು

ಕೆಲವು ಸಂದರ್ಭಗಳಲ್ಲಿ ವ್ಯಕ್ತಿಯನ್ನು ಸಂಬೋಧಿಸುವಾಗ ಅಂದರೆ ಉಲ್ಲೇಖಿಸುವಾಗ, ಹೆಸರಿನಿಂದ ಕರೆಯದೆ, 'ಇನ್ಷಿಯಲ್'ಗಳ ಮೂಲಕವೇ ಸಂಬೋಧನೆ ಮಾಡುವುದನ್ನು ಗಮನಿಸಬಹುದು. ಉದಾಹರಣೆಗೆ

| ಮೂಲಹೆಸರು | ಸಾಮಾನ್ಯ ಬಳಕೆ | ವಿಶೇಷ ಸಂಬೋಧನೆ (ಇನ್ಷಿಯಲ್‌ನಿಂದ ಕರೆಯುವುದು) |
|---|---|---|
| ಗೌಡ್ರು ತಿಪ್ಪೇಸ್ವಾಮಿ ವಿರುಪಾಕ್ಷಪ್ಪ | ಜಿ.ಟಿ.ವಿರುಪಾಕ್ಷಪ್ಪ | ಜಿ.ಟಿ.ವಿ. (G.T.V.) |
| ಸಣ್ಣ ಬೋಸಯ್ಯ ಮಲ್ಲಿಕಾರ್ಜುನ | ಎಸ್.ಬಿ.ಮಲ್ಲಿಕಾರ್ಜುನ | ಎಸ್.ಬಿ.ಎಂ. (S.B.M.) |
| ರಾಂಪುರ ಅಶ್ವಿನಿ | ಆರ್.ಅಶ್ವಿನಿ | ಆರ್.ಎ. (R.A.) |
| ಗೋಡ್ನ ಸಣ್ಣ ಓಬಯ್ಯ | ಜಿ.ಸಣ್ಣ ಓಬಯ್ಯ | ಜಿ.ಎಸ್ . (G.S.) |
| ನಾರಾಯಣರೆಡ್ಡಿ ಗೋವಿಂದರೆಡ್ಡಿ | ಎನ್.ಗೋವಿಂದರೆಡ್ಡಿ | ಎನ್.ಜಿ. (N.G.) |
| ಮಲ್ಲಯ್ಯ ಪದ್ಮಾವತಿ | ಎಂ.ಪದ್ಮಾವತಿ | ಎಂ.ಪಿ. (M.P.) |

ಹೆಸರಿನ ಜತೆಯಲ್ಲಿ ತಂದೆ, ಊರು, ಗಂಡ, ವಂಶ, ಗೋತ್ರ ಮುಂತಾದ ವಿಷಯಗಳನ್ನು ಅಂಟಿಸಿಕೊಳ್ಳುವುದು ಸಾಮಾನ್ಯ ರೂಢಿ. ಇವುಗಳನ್ನು ಬಿಡಿಸಿ ಬರೆಯದೆ ಆದ್ಯಕ್ಷರಗಳ ಮೂಲಕ ಅಂದರೆ 'ಇನ್ಷಿಯಲ್ 'ಗಳ ಮೂಲಕ ಸೂಚಿಸಿ ಹೆಸರನ್ನು ಬಳಸಲಾಗುವುದು. ಆದರೆ ಕೆಲವು ವಿಶೇಷ ಸಂದರ್ಭಗಳಲ್ಲಿ ವ್ಯಕ್ತಿಯನ್ನು ಹೆಸರಿನ 'ಇನ್ಷಿಯಲ್'ಗಳ ಮೂಲಕ ಮಾತ್ರ ಸಂಬೋಧಿಸುವುದುಂಟು. ಹೀಗೆ ಹೆಸರನ್ನು ಸಂಕ್ಷಿಪ್ತವಾಗಿ ಕರೆಯುವುದು ಹೆಚ್ಚಾಗಿ ಸ್ನೇಹಿತ ವಲಯದಲ್ಲಿ ಮಾತ್ರ ಎಂಬುದನ್ನು ತಿಳಿಯಬಹುದು.

ಮುದ್ದು ಹೆಸರಿನಿಂದ ಕರೆಯುವುದು

ಇಲ್ಲಿ ಮುದ್ದು ಹೆಸರು ಎಂದರೆ, ನಿಜನಾಮವನ್ನು ಮೊಟಕುಗೊಳಿಸಿ 'ಅಂತ್ಯ' '-ಉ', '-ಇ' ಕಾರ್ಯಾಂತಗಳಿಂದ ಸಂಬೋಧಿಸುವುದೇ ಆಗಿದೆ. ಉದಾಹರಣೆಗೆ

| ಮೂಲಹೆಸರು | ಸಂಬೋಧನ ರೂಪ |
|---|---|
| ರಾಮಣ್ಣ | ರಾಮು |
| ನಾರಾಯಣ | ನಾಣಿ |
| ವೆಂಕಟೇಶ | ವೆಂಕಿ/ಎಂಟು |
| ಜನಾರ್ಧನ | ಜಾನಿ |
| ಯಶೋಧಮ್ಮ | ಯಶು |
| ಹೇಮಲತ | ಹೇಮ |
| ಮೀನಾಕ್ಷಿ | ಮೀನಾ |

ವ್ಯಕ್ತಿಯ ಉಪಸ್ಥಿತಿಯಲ್ಲಿ ಮುದ್ದು ಹೆಸರಿನಿಂದ ಕರೆಯುವುದು ಜಾಸ್ತಿ. ಅದೇ ರೀತಿ ವ್ಯಕ್ತಿಯ ಅನುಪಸ್ಥಿತಿಯಲ್ಲಿಯೂ ಕೆಲವು ಸಂದರ್ಭಗಳಲ್ಲಿ ಮುದ್ದು ಹೆಸರಿನಿಂದ ಸಂಬೋಧಿಸಲಾಗುವುದು. ಹೀಗೆ ಕರೆಯುವುದು ಸಹ ಹೆಚ್ಚಾಗಿ ಸ್ನೇಹಿತರು ಮತ್ತು ಆಪ್ತ ವಲಯದವರು ಮಾತ್ರ.

**'ಕುಲನಾಮ'ದಿಂದ ಸಂಬೋಧನೆ ಮಾಡುವುದು**

ವ್ಯಕ್ತಿಯನ್ನು ಗುರುತಿಸುವಲ್ಲಿ ಕುಲನಾಮಗಳು ಮುಖ್ಯ ಪಾತ್ರ ವಹಿಸುತ್ತವೆ. ವ್ಯಕ್ತಿಯ ಹೆಸರಿನ ಜತೆ ಕುಲನಾಮ ಸೇರಿದ್ದು, ಸಂಬೋಧನೆಯಲ್ಲಿ ಹೆಸರಿನ ಜೊತೆ ಅಥವಾ ಪ್ರತ್ಯೇಕವಾಗಿ ಬಳಕೆಯಾಗುತ್ತಿದ್ದರೆ, ವ್ಯಕ್ತಿಯ ಗೈರು ಹಾಜರಿಯಲ್ಲಿ ಹೆಸರನ್ನು ಬಳಸದೆ, 'ಕುಲನಾಮದಿಂದ'ಲೇ ಸಂಬೋಧನೆ ಮಾಡುವುದನ್ನು ಕಾಣಬಹುದು. ಉದಾಹರಣೆಗೆ

| **ಮೂಲಹೆಸರು** | **ಸಂಬೋಧನ ರೂಪ** |
|---|---|
| ಉರುಕ್ ಬೋಸಯ್ಯ | 'ಉರುಕ್ ' |
| 'ಕಂಪಲ್ಲಿ' ಬೋರಯ್ಯ | 'ಕಂಪಲ್ಲಿ' |
| 'ನೀರಗಂಟಿ' ಪಾಪಣ್ಣ | 'ನೀರಗಂಟಿ' |
| 'ಚನ್ನಪಾಟಿ' ರಾಧ | ಚನ್ನಪಾಟಿ |
| 'ಕೋಟಿ' ಹೇಮಲತ | 'ಕೋಟಿ' |

ಮೇಲಿನ ಪಟ್ಟಿಯ ಹೆಸರುಗಳಲ್ಲಿ 'ಉರುಕ್', ಕಂಪಲ್ಲಿ, ನೀರಗಂಟಿ, ಚನ್ನಪಾಟಿ, 'ಕೋಟಿ' ಎಂಬಿವುಗಳು ಕುಲನಾಮಗಳಾಗಿ ಬಳಕೆಯಾಗಿದ್ದು, ಸಂಬೋಧನೆಯಲ್ಲಿ ಹೆಸರಿನ ಜೊತೆಗೆ ಸಂಬೋಧಿಸಲ್ಪಡುತ್ತಿವೆ. ವ್ಯಕ್ತಿ ಉಪಸ್ಥಿತರಿಲ್ಲದೆ ಇರುವಾಗ ಆ ವ್ಯಕ್ತಿಯನ್ನು ಕುರಿತು ಮಾತನಾಡುವಾಗ ಹೆಸರನ್ನು ಕೈಬಿಟ್ಟು ಕೇವಲ ಕುಲನಾಮದಿಂದ ಸಂಬೋಧನೆ ಮಾಡುವುದುಂಟು. ಕುಲನಾಮದ ಸಂಬೋಧನೆಯು ಕೂಡ ಹೆಚ್ಚಾಗಿ ಸ್ನೇಹಿತರು ಮತ್ತು ಆಪ್ತವಲಯಗಳಲ್ಲಿ ಮಾತ್ರವೇ ಕಾಣಬರುತ್ತದೆ.

**ಅಡ್ಡ ಹೆಸರಿನಿಂದ ಸಂಬೋಧಿಸುವುದು**

ಚಿತ್ರದುರ್ಗ ಪರಿಸರದಲ್ಲಿ ಅಡ್ಡಹೆಸರಿನ ಸಂಬೋಧನೆಯ ಬಗೆಗೆ ಭಿನ್ನಾಭಿಪ್ರಾಯಗಳಿವೆ. ಆದುದರಿಂದ ಅಡ್ಡಹೆಸರು ವ್ಯಕ್ತಿಯ ಹಾಜರಿಗಿಂತ ಗೈರು ಹಾಜರಿಯಲ್ಲಿ ಹೆಚ್ಚು ಪ್ರಯೋಗವಾಗುತ್ತದೆ. ಅಡ್ಡಹೆಸರು ಮುಖ್ಯವಾಗಿ ವ್ಯಕ್ತಿಯ ಶಾರೀರಿಕ ದೌರ್ಬಲ್ಯಗಳನ್ನು ಇಲ್ಲವೆ ವ್ಯಕ್ತಿಯ ಯಾವುದೋ ದೋಷವನ್ನು ಸೂಚಿಸುವಂತಹದ್ದಾಗಿರುತ್ತದೆ. ಆ ಕಾರಣಕ್ಕಾಗಿ ವ್ಯಕ್ತಿ ಎದುರಿಗೆ ಇರುವಾಗ ಅಡ್ಡಹೆಸರನ್ನು ಬಳಸುವುದಿಲ್ಲ. ಚಿತ್ರದುರ್ಗ ಪರಿಸರದ ಅಡ್ಡಹೆಸರುಗಳ ಸ್ವರೂಪವನ್ನು ತಿಳಿಯಲು ನಿದರ್ಶನಕ್ಕೆ ಕೆಲವು ಉದಾಹರಣೆಗಳನ್ನು ಇಲ್ಲಿ ಗಮನಿಸಬಹುದು.

| ನಿಜನಾಮ | ಅಡ್ಡಹೆಸರು |
|---|---|
| ಸಿದ್ದಪ್ಪ | ಬಡಗಿ (ಎತ್ತರವಾಗಿರುವುದರಿಂದ, ತೆಳ್ಳಗೆ ಇರುವುದರಿಂದ) |
| ಭೀಮಣ್ಣ | 'ವಕೀಲ' (ಹೆಚ್ಚು ಮಾತನಾಡುವುದರಿಂದ) |
| ನಾಗರಾಜ | 'ಸ್ಪೆಕ್ಸ್' (ಚಾಳೀಸು ಹಾಕುವುದರಿಂದ) |
| ರಮ್ಯ | 'ಬಜ್ಜು' (ದಪ್ಪಗೆ ಇರುವುದರಿಂದ) |
| ಸುಶೀಲ | 'ಡಾಂಬರ್' (ಕಪ್ಪಗೆ ಇರುವುದರಿಂದ) |
| ಹೇಮಲತ | 'ಚೋಟು' (ಕುಳ್ಳಗೆ ಇರುವುದರಿಂದ) |

ಮೇಲೆ ಸೂಚಿಸಿರುವ ವ್ಯಕ್ತಿಗಳನ್ನು ಗೈರು ಹಾಜರಿಯಲ್ಲಿ ಹೆಸರಿನಿಂದ ಕರೆಯುವಂತೆ ಅಡ್ಡ ಹೆಸರಿನಿಂದಲೂ ಕರೆಯಬಹುದು. ಅಡ್ಡಹೆಸರುಗಳನ್ನು ಹಿರಿಯರು, ಸಮವಯಸ್ಕರು (ಸ್ನೇಹಿತರು) ಹೆಚ್ಚಾಗಿ ಬಳಸುತ್ತಾರೆ. ಆದರೆ ವ್ಯಕ್ತಿಯ ಗೈರು ಹಾಜರಿಯಲ್ಲಿ ಯಾರು ಬೇಕಾದರೂ ಕರೆಯಬಹುದು. ವೈಮನಸ್ಸು ಇರುವವರು (ಶತೃಗಳು) ಹೆಸರಿನಿಂದ ಕರೆಯಲು ಇಷ್ಟಪಡದೆ, ಅಡ್ಡಹೆಸರಿನಿಂದ ಕರೆಯುವುದೇ ಹೆಚ್ಚು.

### ಪದನಾಮ, ಹೆಸರು ಮತ್ತು ಪದನಾಮದಿಂದ ಕರೆಯುವುದು

ಗೈರು ಹಾಜರಿಯಲ್ಲಿ ವ್ಯಕ್ತಿಯನ್ನು ಸಂಬೋಧಿಸುವಾಗ ವ್ಯಕ್ತಿಯ ಹೆಸರಿನ ಜೊತೆ, ವ್ಯಕ್ತಿ ಕೈಗೊಂಡಿರುವ ಪದನಾಮವನ್ನು ಸೇರಿಸಿ ಸಂಬೋಧಿಸುವುದುಂಟು. ಮತ್ತು ಕೆಲವೊಮ್ಮೆ ವ್ಯಕ್ತಿಯ ಹೆಸರನ್ನು ಬಳಸದೆ, ಪದನಾಮದಿಂದ ಮಾತ್ರ ಸಂಬೋಧಿಸಲಾಗುವುದು. ಉದಾಹರಣೆಗೆ -

| ಮೂಲಹೆಸರು | ಪದನಾಮ | ಸಂಬೋಧನೆ - ೧ | ಸಂಬೋಧನೆ - ೨ |
|---|---|---|---|
| ಬಸವರಾಜ | ಮೇಷ್ಟ್ರು (ಶಿಕ್ಷಕ) | ಬಸವರಾಜ ಮೇಷ್ಟ್ರು | ಮೇಷ್ಟ್ರು |
| ರಾಜಣ್ಣ | ಪ್ರಿನ್ಸಿಪಾಲರು | ರಾಜಣ್ಣ ಪ್ರಿನ್ಸಿಪಾಲ್ | ಪ್ರಿನ್ಸಿಪಾಲ್ |
| ಮಂಜಣ್ಣ | ಡಾಕ್ಟರ್ | ಮಂಜಣ್ಣ ಡಾಕ್ಟ್ರು | ಡಾಕ್ಟ್ರು |
| ಹೇಮಲತ | ನರ್ಸ್ | ಹೇಮಲತ ನರ್ಸ್ | ನರ್ಸ್ |
| ರುಕ್ಮಿಣಿ | ಸಿಸ್ಟರ್ | ರುಕ್ಮಿಣಿ ಸಿಸ್ಟರ್ | ಸಿಸ್ಟರ್ |
| ಜಾನಕಿ | ಟೀಚರ್ | ಜಾನಕಿ ಟೀಚರ್ | ಟೀಚರ್ |

ಕೆಲವು ಸಂದರ್ಭದಲ್ಲಿ ಪದನಾಮವನ್ನು ಮೊದಲಿಗೆ ಹೇಳಿ ನಂತರ ವ್ಯಕ್ತಿಯ ಹೆಸರನ್ನು ಬಳಸುವುದೂ ಸಾಧ್ಯ. ಸ್ನೇಹಿತರ ಮತ್ತು ಹಿರಿಯರ ಸಂಬೋಧನೆಯಲ್ಲಿ ಹೀಗೆ ಹೆಸರು ಮತ್ತು ಪದನಾಮಗಳನ್ನು ಬಳಸುವುದು ಹೆಚ್ಚಾಗಿ ಕಂಡುಬರುತ್ತದೆ.

### ಹೆಸರಿನೊಂದಿಗೆ ಬಂಧುತ್ವವನ್ನು ಸೂಚಿಸಿ ಕರೆಯುವುದು

ಸಂಬೋಧನೆಯಲ್ಲಿ ವ್ಯಕ್ತಿಯ ಹೆಸರನ್ನು ಹೇಳಿ ಕೊನೆಗೆ ಬಂಧುತ್ವ ಸೂಚಕವನ್ನು ಸೇರಿಸಲಾಗುವುದು. ಸಾಮಾನ್ಯವಾಗಿ ಒಂದೇ ಬಂಧುತ್ವದ ಹಲವು ಜನರಿದ್ದಾಗ, ಗೊಂದಲ ನಿವಾರಣೆಗಾಗಿ ಈ ರೀತಿ

ಸಂಬೋಧಿಸುವುದುಂಟು. ಉದಾಹರಣೆಗೆ : ಈರಣ್ಣ ತಾತ

ತಿಪ್ಪಯ್ಯ ಮಾವ

ರುದ್ರಪ್ಪ ಅಣ್ಣ

ಕಾಮಾಕ್ಷಿ ಅಕ್ಕ

ಮಂಜಮ್ಮ ಅತ್ತೆ - ಇತ್ಯಾದಿ.

ಹೀಗೆ ಹೆಸರಿನೊಂದಿಗೆ ಬಂಧುತ್ವಸೂಚಕ ಪದಗಳನ್ನು ಅಂಟಿಸಿ ಕರೆಯುವುದು ಸಾಮಾನ್ಯವಾಗಿ ಕೌಟುಂಬಿಕ ಸಂಬಂಧಗಳಲ್ಲಿ ಮಾತ್ರ. ಹೀಗಾಗಿ ಈ ಬಗೆಯ ಸಂಬೋಧನೆಗೆ ತುಂಬಾ ಮಿತಿಗಳಿರುತ್ತವೆ.

**ಸ್ಥಳ ಮತ್ತು ಸಂಬಂಧವಾಚಿ ಎರಡನ್ನೂ ಸೇರಿಸಿ ಕರೆಯುವುದು**

ಇಲ್ಲಿ ವ್ಯಕ್ತಿಯ ಹೆಸರನ್ನು ಕರೆಯದೆ, ವ್ಯಕ್ತಿ ವಾಸವಾಗಿರುವ ಸ್ಥಳದ ಹೆಸರಿಗೆ ಬಂಧುತ್ವ ಸೂಚಕವನ್ನು ಸೇರಿಸಿ ಸಂಬೋಧಿಸುತ್ತಾರೆ. ಉದಾಹರಣೆಗೆ : ಚಳ್ಳೇರಿ ಮಾವ

(ಚಿತ್ರದುರ್ಗ) ದುರ್ಗದ ಅತ್ತೆ

ರಾಯಾಪುರದ ಅಜ್ಜ

ಮೊಳಕಾಲ್ಮೂರು ತಾತ - ಇತ್ಯಾದಿ.

ಮತ್ತೆ ಕೆಲವು ವೇಳೆ 'ಸಣ್ಣ', 'ದೊಡ್ಡ' ಎಂಬ ವಿಶೇಷಣಗಳಿಗೆ ಬಂಧುತ್ವಸೂಚಕಗಳನ್ನು ಅಂಟಿಸಿ ಸಂಬೋಧಿಸಲಾಗುವುದು. ಉದಾಹರಣೆಗೆ : ದೊಡ್ಡಮಾವ = ಸಣ್ಣಮಾವ

ದೊಡ್ಡ ಅತ್ತೆ = ಸಣ್ಣ ಅತ್ತೆ

ದೊಡ್ಡ ಅಳಿಯ = ಸಣ್ಣ ಅಳಿಯ

ದೊಡ್ಡ ಅಕ್ಕ = ಸಣ್ಣ ಅಕ್ಕ

ಈ ಸಂಬೋಧನೆಗಳು ಬಂಧುತ್ವಗಳ ಮಧ್ಯೆ ಮಾತ್ರ ನಡೆಯುತ್ತಿದ್ದು ಇತರರೊಂದಿಗೆ ನಡೆಯುವುದಿಲ್ಲ. ಅನೌಪಚಾರಿಕ ನೆಲೆಗಳಲ್ಲಿ ವ್ಯಕ್ತಿಯನ್ನು ಉಲ್ಲೇಸುವಾಗ, ವ್ಯಕ್ತಿ ಗೈರುಹಾಜರಿ ಇರುವುದರಿಂದ ಯಾರು, ಎಲ್ಲಿ, ಹೇಗೆ ಕರೆಯುತ್ತಾರೆ ಎಂಬುದನ್ನು ನಿರ್ದಿಷ್ಟವಾಗಿ ಗುರುತಿಸುವುದು ಕಷ್ಟಕರ. ಆ ಸನ್ನಿವೇಶದಲ್ಲಿ ಸಂಬೋಧನೆ ಅಥವಾ ಉಲ್ಲೇಖಿಸಬಹುದಾದ ಕೆಲವು ಸಾಧ್ಯತೆಗಳನ್ನು ಮಾತ್ರ ಗುರುತಿಸುವ ಪ್ರಯತ್ನ ಮಾಡಿದೆ.

## ೪.೪ ಕುಟುಂಬ - ಕುಟುಂಬೇತರ

ವ್ಯಕ್ತಿನಾಮ ಸಂಬೋಧನೆಯ ಹಲವು ಆವರಣಗಳಲ್ಲಿ ಕುಟುಂಬ-ಕುಟುಂಬೇತರ ಆವರಣವೂ ಒಂದು. ಕುಟುಂಬ ಸಮಾಜದ ಅತ್ಯಂತ ಚಿಕ್ಕ ಘಟಕ. ಒಂದು ಭಾಷಾ ಸಮುದಾಯದಲ್ಲಿ ವಾಸಿಸುವ ತಂದೆ-ತಾಯಿ, ಮಕ್ಕಳು, ಮೊಮ್ಮಕ್ಕಳು ಈ ಸಂಬಂಧಗಳ ಗುಂಪಿಗೆ ಕುಟುಂಬ ಎಂದು ಕರೆಯುವುದುಂಟು. ಇದು ಕುಟುಂಬದ ಸಾಮಾನ್ಯ ಪರಿಕಲ್ಪನೆ. ಪ್ರಸ್ತುತ ಅಧ್ಯಾಯದಲ್ಲಿ 'ಕುಟುಂಬ' ಎಂಬುದನ್ನು ವಿಶಾಲ ಅರ್ಥದಲ್ಲಿ ಪರಿಭಾವಿಸಲಾಗಿದೆ. ಅಜ್ಜ, ಅಜ್ಜಿ, ಅತ್ತೆ, ಮಾವ, ಸೊಸೆ, ನಾದಿನಿ, ಅಳಿಯ, ಭಾವ, ಭಾಮೈದುನ ಮುಂತಾದ

ಸಂಬಂಧಗಳು ಕುಟುಂಬದ ಪರಿಧಿಯೊಳಗೆ ಒಳಗೊಳ್ಳುತ್ತವೆ. ಮೇಲೆ ಸೂಚಿಸಿರುವ ಕುಟುಂಬದ ಸಂಬಂಧಗಳ ನಡುವೆ ನಡೆಯುವ ಪರಸ್ಪರ ವ್ಯಕ್ತಿನಾಮ ಸಂಬೋಧನೆಯನ್ನು, ಕೌಟುಂಬಿಕ ಪರಿಸರದ ಸಂಬೋಧನೆ ಎಂದು ಕರೆಯಬಹುದು. ಕುಟುಂಬೇತರ ಪರಿಸರದ ಸಂಬೋಧನೆ ಇದಕ್ಕೆ ಹೊರತಾದುದು. ಕುಟುಂಬಕ್ಕೆ ತನ್ನದೇ ಆದ ಸಾಮಾಜಿಕ ಜವಾಬ್ದಾರಿಗಳಿವೆ. ಕುಟುಂಬದ ಸದಸ್ಯರ ಸರ್ವತೋಮುಖ ಬೆಳವಣಿಗೆಯಲ್ಲಿ ಕುಟುಂಬದ ಪಾತ್ರ ಮಹತ್ವದ್ದಾಗಿದೆ.

ಮನೆ ಅಥವಾ ಕುಟುಂಬ ಹೆಸರಿನ ಉಗಮದ ಸ್ಥಾನವಾಗಿರುವಂತೆ ಬಳಕೆಯ ಸ್ಥಾನವೂ ಆಗಿದೆ. ನಾಮದ ಉಗಮದ ಬಗೆಗೆ ಮತ್ತು ಸಂಬೋಧನೆಯ ಸುತ್ತಮುತ್ತ ಕೆಲವು ನಂಬಿಕೆ ಮತ್ತು ನಿಷೇಧಗಳಿವೆ. ಪಾರಂಪರಿಕವಾಗಿ ಬೆಳೆದು ಬಂದಿದ್ದ ಈ ನಂಬಿಕೆಗಳು, ಆಧುನೀಕರಣದ ಪ್ರಭಾವದಿಂದ ಬಿಟ್ಟು ಹೋಗಿದ್ದು, ವ್ಯಕ್ತಿನಾಮ ಸಂಬೋಧನೆಯಲ್ಲಿ ಅನೇಕ ಹೊಸ ಬೆಳವಣಿಗೆಗಳು ಸೃಷ್ಟಿಯಾಗಿವೆ. ಕುಟುಂಬ ಮತ್ತು ಕುಟುಂಬೇತರ ಪರಿಸರಗಳಲ್ಲಿ ಸಂಬಂಧಗಳ ಹಿನ್ನೆಲೆಯಲ್ಲಿ ಹೆಸರುಗಳನ್ನು ಹೇಗೆ ಕರೆಯುತ್ತಾರೆ ಎಂಬುದರ ಕುರಿತು ಇಲ್ಲಿ ಚರ್ಚಿಸಲಾಗಿದೆ.

**ಗಂಡ - ಹೆಂಡತಿ**

ಗಂಡ-ಹೆಂಡತಿಯರು ಪರಸ್ಪರ ಮಾತನಾಡುವಾಗ ಪರಸ್ಪರರು ಹೆಸರನ್ನು ಹಚ್ಚಿ ಕರೆಯುವುದಿಲ್ಲ. ಗಂಡ, ಹೆಂಡತಿಯ ಹೆಸರನ್ನು ಕರೆಯಬಹುದಾದರೂ, ಹೆಂಡತಿ, ಗಂಡನ ಹೆಸರನ್ನು ಕರೆಯುವಂತಿಲ್ಲ. ಒಂದು ವೇಳೆ ಗಂಡನ ಹೆಸರನ್ನು ಕರೆದರೆ, ಗಂಡನ ಆಯುಷ್ಯ ಕಡಿಮೆಯಾಗುತ್ತದೆ ಎಂಬ ನಂಬಿಕೆಯಿದೆ. ಈ ನಂಬಿಕೆ ಕನ್ನಡ ಭಾಷಾ ಸಮುದಾಯದಲ್ಲಿ ಮಾತ್ರವಲ್ಲ, ಜಗತ್ತಿನ ಬಹುತೇಕ ಸಮಾಜಗಳಲ್ಲಿ ಈ ನಂಬಿಕೆ ಇದೆ. ಗಂಡನ ಹೆಸರನ್ನು ಕರೆಯದೆ ನಿಷೇಧಗೊಳಿಸಿರುವುದರ ಹಿಂದೆ ಪುರುಷಪ್ರಧಾನ ಸಮಾಜ ವ್ಯವಸ್ಥೆಯ ಧ್ವನಿ ಅಡಗಿರಬಹುದು. ಅಲ್ಲದೆ ಈ ಸಮಾಜದಲ್ಲಿ ಗಂಡು ಶ್ರೇಷ್ಠ, ಹೆಣ್ಣು ಕನಿಷ್ಠ ಎಂಬ ಭಾವನೆಗಳೂ ಇವೆ. ಆ ಹಿನ್ನೆಲೆಯಲ್ಲಿ ಗೌರವಸೂಚಕವಾಗಿ ಹೆಂಡತಿ, ಗಂಡನ ಹೆಸರನ್ನು ಕರೆಯದೆ ಇರಲೂಬಹುದು.

"ಲೋಕಕಿಲ್ಲದ ಮಗಳು ಯಾಕ್ಹುಟ್ತ್ರೆ ತಾಯಮ್ಮ<br>ಲೋಕಾದ ಬಾಳು ನಮಗಿಲ್ಲ | ತಾಯಮ್ಮ<br>ಅಟ್ಟಿ ಬಡಿರಮ್ಮ ಅಡವಿಗೆ"

ಜನಪದ ಲೋಕದ ಹೆಣ್ಣು ಮಗಳೊಬ್ಬಳು ಹೆಣ್ಣುಮಗುವಿನ ಜನನಕ್ಕೆ ತೋರುತ್ತಿರುವ ಅನಾದರ ಈ ತ್ರಿಪದಿಯಲ್ಲಿ ವ್ಯಕ್ತವಾಗುತ್ತದೆ. ಮಾಣಿಕ್ಯದಂಥ ಮಗನನ್ನೇ ಬಯಸುವ ಸಮಾಜಕ್ಕೆ 'ಹೆಣ್ಣು ಹುಟ್ಟಿದರೆ ಹುಣ್ಣು', ಸುಮಾರು ಮೂರು ದಶಕಗಳ ಹಿಂದೆ ಮೂವರು ಹೆಣ್ಣುಮಕ್ಕಳನ್ನೇ ಹೊಂದಿದ್ದ ಕುಟುಂಬವೊಂದು ಮೂರನೆಯ ಮಗುವಿಗೆ ಇಟ್ಟಿದ್ದ ಹೆಸರು ಸಾಕಮ್ಮ ಎಂದರೆ ಮತ್ತೆ ಹೆಣ್ಣು ಹುಟ್ಟುವುದು ಬೇಡ ಎಂದು. ಆ ಮಗುವನ್ನು ಸಾಕು ಸಾಕು ಎಂದೇ ಅನ್ವರ್ಥಕವಾಗಿ ಕರೆಯುತ್ತಿದ್ದರು. ಹೆಣ್ಣಿನ ಜನನದ ಬಗೆಗಿನ ಅಸಹನೆ ಹೆಸರು ಇಡುವುದರಲ್ಲಷ್ಟೇ ಆಗ ವ್ಯಕ್ತವಾಗುತ್ತಿತ್ತು."[೧೦] ಪ್ರಸ್ತುತ ಸಮಾಜದಲ್ಲಿ ಹೆಣ್ಣಿಗೆ ನೀಡಲಾಗಿರುವ ಸ್ಥಾನಮಾನ, ಹೆಸರು ಇಡುವುದರಲ್ಲಿ ಕರೆಯುವುದರಲ್ಲಿನ ಸ್ವಾತಂತ್ರ್ಯವನ್ನು ಮೇಲಿನ ಸಂದರ್ಭ ಸ್ಪಷ್ಟಪಡಿಸುತ್ತಿದೆ.

ಗಂಡ ಹೆಂಡತಿಯ ಹೆಸರನ್ನು ಕರೆಯುವಾಗ ಹೆಸರನ್ನು ಮೂಲರೂಪದಲ್ಲಿ ಅಂದರೆ, ಪೂರ್ಣ ಹೆಸರನ್ನು ಕರೆಯುವುದಿಲ್ಲ. ಬದಲಿಗೆ ಹೆಸರನ್ನು ಮೊಟಕುಗೊಳಿಸಿ, ಅರ್ಧ ಹೆಸರಿನಿಂದ ಕರೆಯುವಂಥದ್ದು ಸಾಮಾನ್ಯ ಪದ್ಧತಿಯಾಗಿದೆ. ಹೀಗೆ ಮೊಟಕು ಮಾಡಿ ಕರೆಯುವುದರ ಹಿಂದೆ ಸಾಂಪ್ರದಾಯಿಕ ನಂಬಿಕೆಗಳು ಇರುವಂತೆ, ಹೆಂಡತಿಯ ಮೇಲಿನ ಪ್ರೀತಿಯೂ ಕಾರಣವಾಗಿರಬಹುದು.

ಸಂಬೋಧನೆಯ ಮಾದರಿಗಳನ್ನು ಸ್ಪಷ್ಟಪಡಿಸಿಕೊಳ್ಳಲು ನಿದರ್ಶನಕ್ಕೆ ಕೆಲವು ಉದಾಹರಣೆಗಳನ್ನು ಗಮನಿಸಬಹುದು.

| ಹೆಸರಿನ ಮೂಲರೂಪ | ಸಂಬೋಧನರೂಪ |
|---|---|
| ಯಶೋಧಮ್ಮ | ಯಶು, ಯಶೋಧ |
| ಸರೋಜಮ್ಮ | ಸರು, ಸರೋಜ |
| ಹೇಮಾವತಿ | ಹೇಮಾ, ಹೇಮಿ |
| ಶಿವಮ್ಮ | ಶಿವಿ |
| ಬೋರಮ್ಮ | ಬೋರಿ |
| ಪಾಪಮ್ಮ | ಪಾಪಿ |
| ದುರುಗಮ್ಮ | ದುರು, ದುರುಗ |
| ಹೊನ್ನೂರಮ್ಮ | ಹೊನ್ನಿ, ಹೊನ್ನಾ |
| ತಿಪ್ಪಮ್ಮ | ತಿಪ್ಪಿ |
| ನೀಲಮ್ಮ | ನೀಲ, ನೀಲಿ, ನೀಲು |
| ಮಲ್ಲಮ್ಮ | ಮಲ್ಲಿ, ಮಲ್ಲಿಕಾ |
| ಓಬಮ್ಮ | ಓಬಿ |

ಇಲ್ಲಿ ಹೆಸರಿನ ವಾರ್ಗಿಕ ಭಾಗವನ್ನು ಸಂಪೂರ್ಣವಾಗಿ ಕೈಬಿಟ್ಟು ನಿರ್ದಿಷ್ಟ ಭಾಗವನ್ನು ಇಲ್ಲವೆ ಹೆಸರಿನ ಒಟ್ಟು ಘಟಕದ ಒಂದು ಭಾಗಕ್ಕೆ '-ಇ' '-ಉ' ಕಾರಾಂತ್ಯಗಳನ್ನು ಸೇರಿಸಿ ಬಳಸಲಾಗುತ್ತದೆ. ಮತ್ತು ಕೆಲವು ಸಂದರ್ಭಗಳಲ್ಲಿ ನಿರ್ದಿಷ್ಟ ಘಟಕದ ಭಾಗವನ್ನು ಯಥಾವತ್ತಾಗಿಯೂ ಕರೆಯಬಹುದು. ಹೀಗೆ ಹೆಸರನ್ನು ಮೊಟಕುಮಾಡಿ ಪ್ರೀತಿಯಿಂದ ಕರೆಯುವಂಥದ್ದು, ಗಂಡ ಹೆಂಡತಿ ಇಬ್ಬರೇ ಇದ್ದಾಗ ಮಾತ್ರ. ಮನೆಯ ವಾತಾವರಣದಲ್ಲಿ ಸ್ವಲ್ಪ ಮಟ್ಟಿಗೆ ಬಳಕೆಯಾಗಬಹುದು. ಇತರ ಬೇರೆ ಸಂದರ್ಭಗಳಲ್ಲಿ ಹೆಸರಿಂದ ಕರೆಯುವುದು ಅಷ್ಟಾಗಿ ಕಾಣಬರುವುದಿಲ್ಲ.

ಕೆಲವು ಗಂಡಂದಿರು ಹೆಂಡತಿಯ ನಿಜನಾಮವನ್ನು ಕರೆಯದೆ ಬೇರೊಂದು ಹೆಸರಿನಿಂದ ಕರೆಯುತ್ತಾರೆ. ಹೀಗೆ ಹೊಸ ಹೆಸರಿನಿಂದ ಕರೆಯುವುದು ವಿದ್ಯಾವಂತ ಉದ್ಯೋಗಸ್ಥ ಕುಟುಂಬಗಳಲ್ಲಿ ಹೆಚ್ಚು. ಕ್ಷೇತ್ರಕಾರ್ಯದಲ್ಲಿ ದೊರೆತಿರುವ ಕೆಲವು ಉದಾಹರಣೆಗಳನ್ನು ಇಲ್ಲಿ ಹೆಸರಿಸಬಹುದು. ನಾಗರಾಜ ಎಂಬುವವರ ಹೆಂಡತಿಯ ಹೆಸರು 'ಗಂಗಮ್ಮ'. ಅವರು ತಮ್ಮ ಹೆಂಡತಿಯನ್ನು 'ಗಂಗು', 'ಗಂಗಾ' ಎಂದು ಕರೆಯದೆ, 'ಪ್ರೀತಿ' ಎಂಬ ಬೇರೆ ಹೆಸರಿನಿಂದ ಕರೆಯುತ್ತಾರೆ. (ಯರ್ರೇನಹಳ್ಳಿ, ಮೊಳಕಾಲ್ಮೂರು - ತಾಲೂಕು) ತಿಪ್ಪೇಸ್ವಾಮಿ

ಎಂಬುವವರ ಹೆಂಡತಿಯ ಹೆಸರು 'ಮಹಾದೇವಮ್ಮ' ಆದರೆ ಹೆಂಡತಿಯನ್ನು 'ವಸಂತ' ಎಂಬ ಹೆಸರಿನಿಂದ ಕರೆಯುತ್ತಾರೆ. ಹೀಗೆ ಬೇರೆ ಹೆಸರನ್ನು ಕರೆಯುವುದಕ್ಕೆ ಹಲವಾರು ಕಾರಣಗಳು ಇರುತ್ತವೆ. ಹೆಸರು ಹಳೆಯದಾಗಿದ್ದು, ಇಷ್ಟವಾಗದೆ ಇದ್ದರೆ ಬೇರೆ ಹೆಸರಿಂದ ಕರೆಯುವುದುಂಟು. ಇದು ಸಂಸಾರದಲ್ಲಿನ ಅನ್ಯೋನ್ಯತೆಯನ್ನು ಸೂಚಿಸುತ್ತದೆ.

ಹೆಸರು ಉದ್ದವಾಗಿರುವಾಗ ಮೊಟಕುಗೊಳಿಸಿ ಅಂತ್ಯ -ಇ, -ಉ' ಕಾರಗಳನ್ನು ಸೇರಿಸಿ ಸಂಬೋಧಿಸುವಂತೆ, ಹೆಸರು ಸಂಕ್ಷಿಪ್ತವಾಗಿದ್ದಲ್ಲಿ, ನೇರವಾಗಿ ಹೆಸರನ್ನೇ ಕರೆಯಬಹುದು. 'ಗೀತ', 'ರೂಪ', 'ಕಾವ್ಯ', 'ವಾಣಿ', 'ಸೀತ', 'ಲಕ್ಷ್ಮೀ' ಮುಂತಾದ ಹೆಸರುಗಳನ್ನು ಯಥಾವತ್ತಾಗಿಯೇ ಕರೆಯಬಹುದು. ಪೂರ್ಣವಾಗಿ ಮತ್ತು ನೇರವಾಗಿ ಸಂಬೋಧಿಸಲ್ಪಡುವ ಹೆಸರುಗಳು ಸಂಬಂಧವಾಚಿ ವಾರ್ಗಿಕಗಳನ್ನು ಹೊಂದಿರುವುದಿಲ್ಲ ಎಂಬುದು ಗಮನಾರ್ಹ ಸಂಗತಿ. ಗ್ರಾಮೀಣ ಪರಿಸರದ ಮಹಿಳೆಯರ ಹೆಸರುಗಳು ಸಾಮಾನ್ಯವಾಗಿ ಸಂಬಂಧವಾಚಿ ವಾರ್ಗಿಕಗಳಿಂದ ಅಂತ್ಯಗೊಂಡಿರುತ್ತವೆ. ಇಂಥ ಸಂದರ್ಭದಲ್ಲಿ ಗಂಡನು ಹೆಂಡತಿಯ ಹೆಸರನ್ನು ಪೂರ್ಣವಾಗಿ ಕರೆಯುವುದಿಲ್ಲ. ಅದು ಸಾಮಾಜಿಕವಾಗಿ ನಿಷೇಧಿಸಲ್ಪಟ್ಟಿದೆ. ಆ ಕಾರಣಕ್ಕಾಗಿ ಹೆಸರುಗಳನ್ನು ಇದ್ದ ರೂಪದಲ್ಲಿಯೇ ಕರೆಯದೆ, ಮೊಟಕು ಮಾಡಿ ಕರೆಯುತ್ತಾರೆ. ಉದಾಹರಣೆಗೆ-

| ಪೂರ್ಣರೂಪ | ಸಂಬೋಧನಾರೂಪ |
|---|---|
| ಬೋರಮ್ಮ | ಬೋರಿ |
| ಸೂರಮ್ಮ | ಸೂರಿ |
| ಮಲ್ಲಮ್ಮ | ಮಲ್ಲಿ |
| ಪಾಪಮ್ಮ | ಪಾಪಿ |
| ಪಾಲಮ್ಮ | ಪಾಲಿ |
| ಬೊಮ್ಮಕ್ಕ | ಬೊಮ್ಮಿ |
| ಓಬವ್ವ | ಓಬಿ |
| ದುರುಗವ್ವ | ದುರುಗಿ |

ಹೆಸರಿನ ಕೊನೆಯಲ್ಲಿರುವ ಸಂಬಂಧವಾಚಿ ವಾರ್ಗಿಕಗಳನ್ನು ಕೈಬಿಟ್ಟು ನಿರ್ದಿಷ್ಟ ಭಾಗವನ್ನು 'ಇ' ಕಾರಾಂತ್ಯಗೊಳಿಸಿ ಸಂಬೋಧಿಸಲಾಗುವುದು. 'ಇ' ಕಾರಾಂತ್ಯ ಮಾಡಿ ಸಂಬೋಧಿಸದೆ ಹಾಗೆಯೇ ಸಂಬೋಧಿಸಿದರೆ, ಪುಲ್ಲಿಂಗ ಸೂಚಕಾರ್ಥವನ್ನು ನೀಡುತ್ತವೆ.

ಹೆಂಡತಿ ಹೆಸರನ್ನು ಸಂಬೋಧಿಸುವ ವಿಧಾನದಲ್ಲಿ ಗ್ರಾಮೀಣ ಮತ್ತು ನಗರ ಹಾಗೂ ಅನಕ್ಷರಸ್ಥ ಮತ್ತು ಅಕ್ಷರಸ್ಥರ ನಡುವೆ ಕೆಲವು ಸೂಕ್ಷ್ಮ ವ್ಯತ್ಯಾಸಗಳು ಇರುವುದನ್ನು ಗಮನಿಸಬಹುದು. ವಿದ್ಯಾವಂತರಿಗಿಂತ ಅವಿದ್ಯಾವಂತರಲ್ಲಿ ನಗರ ಪರಿಸರದವರಿಗಿಂತ ಗ್ರಾಮೀಣ ಪರಿಸರದವರಲ್ಲಿ ಮಹಿಳೆಯ ಬಗೆಗೆ ಹೆಚ್ಚು ಭೇದ ಭಾವಗಳಿವೆ. ಅವರು ಸಂಸಾರದಲ್ಲಿ ಎಷ್ಟೇ ಅನ್ಯೋನ್ಯವಾಗಿ ಇದ್ದರೂ ಗಂಡು ಮೇಲು ಹೆಣ್ಣು ಕೀಳು ಎಂಬುದು ಗ್ರಾಮೀಣ ಪರಿಸರದ ಅವಿದ್ಯಾವಂತ ಪುರುಷರ ಸಾಮಾನ್ಯ ಮನೋಧರ್ಮ. ಇದು ಪುರುಷ ಪ್ರಧಾನ ಸಮಾಜದ ಬಹುಪ್ರಧಾನ ನಂಬಿಕೆಯೂ ಆಗಿದೆ. ಈ ಹಿನ್ನೆಲೆಯಲ್ಲಿ ಹೆಣ್ಣನ್ನು ಅಥವಾ ಹೆಂಡತಿಯನ್ನು ಸಂಬೋಧಿಸುವಾಗ,

ಗೌರವಕ್ಕೆ ಬದಲು ಹೆಸರನ್ನು ಮೊಟಕುಗೊಳಿಸಿ ಏಕವಚನದಿಂದ ಕರೆಯುತ್ತಾರೆ. ಅಲ್ಲದೆ ಇವರ ಸಂಬೋಧನೆಯಲ್ಲಿ ದರ್ಪದ ಧ್ವನಿಯೂ ಅಡಗಿರುತ್ತದೆ. ವಿದ್ಯಾವಂತ ಸ್ತ್ರೀ-ಪುರುಷರ ನಡುವೆ ಅಂದರೆ ಗಂಡ-ಹೆಂಡತಿ ಮಧ್ಯೆ ಅಂತರಗಳು ಇರುವುದಿಲ್ಲವೆಂದಲ್ಲ. ಅವಿದ್ಯಾವಂತರಿಗೆ ಹೋಲಿಕೆ ಮಾಡಿದರೆ ವಿದ್ಯಾವಂತ ಗಂಡ-ಹೆಂಡತಿಯರ ನಡುವೆ ಅಂತರಗಳು ಕಡಿಮೆಯೆಂದೇ ಹೇಳಬಹುದು. ಸಮಾನ ಸ್ಥಾನಮಾನ, ಗೌರವಗಳನ್ನು ಹೊಂದಿರುವ ಎಷ್ಟೋ ಜನ ಗಂಡ ಹೆಂಡತಿಯರು ಪರಸ್ಪರ ನೇರ ಸಂಬೋಧನೆಯಲ್ಲಿ ಹೆಸರಿನಿಂದಲೇ ಕರೆಯುತ್ತಾರೆ. ಇದರಲ್ಲಿ ಲಿಂಗಭೇದಗಳು ಕಡಿಮೆ ಇದ್ದು, ಪ್ರೀತಿ, ಆತ್ಮೀಯತೆ ಮತ್ತು ಗೌರವದ ಭಾವನೆಗಳು ಅಡಗಿರುತ್ತವೆ. ಇದು ಭವಿಷ್ಯದ ಸಮಾನ ಸಾಮಾಜಿಕ ವ್ಯವಸ್ಥೆಯ ಮುನ್ಸೂಚನೆಯಾಗಿರಬಹುದು. ಮಾದರಿಗಾಗಿ ಕೆಲವು ನಿದರ್ಶನಗಳನ್ನು ನೋಡಬಹುದು.

| ಮೂಲರೂಪ | ಅನಕ್ಷರಸ್ಥರ ಸಂಬೋಧನೆ | ಅಕ್ಷರಸ್ಥರ ಸಂಬೋಧನೆ |
|---|---|---|
| ಬೊಮ್ಮಕ್ಕ | ಬೊಮ್ಮಿ | ಭಾಮ, ಭಂವಿ |
| ಸೀತಮ್ಮ | ಸೀತಿ | ಸೀತಾ |
| ಗೌರಮ್ಮ | ಗೌರಿ | ಗೌರ, ಗರಿ |
| ಮಂಜುಳ | ಮಂಜಿ | ಮಂಜು |
| ವೀರಮ್ಮ | ವೀರಿ | ವಿರು, ವೀರಾ |
| ಸಾಂತಮ್ಮ | ಸಾಂತಿ | ಸಾತಿ, ಸಾತು |
| ಗಂಗಮ್ಮ | ಗಂಗಿ | ಗಂಗು, ಗಂಗಾ |
| ನೀಲಮ್ಮ | ನೀಲಿ | ನೀಲಾ, ನೀಲು |
| ಭಾಗ್ಯಮ್ಮ | ಭಾಗ್ಗಿ (ಭಾಗ್ಯ) | ಭಾಗ್ಯ, ಭಾಗು |
| ಜಯಮ್ಮ | ಜಯಿ | ಜಯ |
| ಪದ್ಮಮ್ಮ | ಪದ್ದಿ, ಪೆದ್ದಿ | ಪದ್ದು |
| ನಿಂಗಮ್ಮ | ನಿಂಗಿ | ನಿಂಗು, ನಿಂಗಾ |
| ಚನ್ನಮ್ಮ | ಚನ್ನಿ | ಚನ್ನು, ಚಿನ್ನು |

ಮೇಲಿನ ಈ ಉದಾರಹಣೆಗಳ ಮೂಲಕ ಒಂದೇ ಹೆಸರನ್ನು ಅಕ್ಷರಸ್ಥ ಮತ್ತು ಅನಕ್ಷರಸ್ಥ ಪುರುಷರು (ಅಂದರೆ ಗಂಡಂದಿರು) ಸಂಬೋಧಿಸಬಹುದಾದ ಸಾಧ್ಯತೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಸಾಮಾನ್ಯವಾಗಿ ಅನಕ್ಷರಸ್ಥ ಪುರುಷರು ಹೆಂಡತಿ ಹೆಸರನ್ನು ಕರೆಯುವಾಗ, ಹೆಸರಿನ ನಿರ್ದಿಷ್ಟ ಭಾಗವನ್ನು ಅಂತ್ಯ '-ಇ' ಕಾರಗೊಳಿಸಿ ಏಕವಚನದಿಂದ ಸಂಬೋಧಿಸಿದರೆ, ಅಕ್ಷರಸ್ಥ ಪುರುಷರು ಅಂತ್ಯ '-ಉ' ಕಾರಗೊಳಿಸಿ ಪ್ರೀತಿಯಿಂದ ಸಂಬೋಧಿಸುವುದುಂಟು. ಅನಕ್ಷರಸ್ಥರ ಸಂಬೋಧನೆಯಲ್ಲಿ ತಿರಸ್ಕಾರದ ಧ್ವನಿ ಇದ್ದರೆ, ಅಕ್ಷರಸ್ಥರ ಸಂಬೋಧನೆಯಲ್ಲಿ ಆತ್ಮೀಯತೆ ಮತ್ತು ಗೌರವದ ಧ್ವನಿ ಇರುವುದನ್ನು ಗಮನಿಸಬಹುದಾಗಿದೆ. ಅನಕ್ಷರಸ್ಥರ ಹಾಗೆ ಅಕ್ಷರಸ್ಥರ ಇಬ್ಬರಲ್ಲೂ ಕೂಡ ಕೆಲವೊಮ್ಮೆ ಅಂತ್ಯ '-ಇ' ಕಾರಗೊಳಿಸಿ ಸಂಬೋಧಿಸುವುದು ಕಾಣಬರುತ್ತದೆ. ಆದರೆ ಅನಕ್ಷರಸ್ಥರ ಸಂಬೋಧನೆಯ ಹಿಂದೆ ಇರುವ ತಿರಸ್ಕಾರದ ಧ್ವನಿ, ಅಕ್ಷರಸ್ಥರ

ಸಂಬೋಧನೆಯಲ್ಲಿ ಇರುವುದಿಲ್ಲ ಎಂಬುದು ಕುತೂಹಲಕರವಾದ ಸಂಗತಿಯಾಗಿದೆ. ಬದಲಾಗಿ ಪ್ರೀತಿ, ಗೌರವದ ಭಾವನೆಗಳೇ ಈ ಬಗೆಯ ಸಂಬೋಧನೆಗೆ ಪ್ರೇರಣೆಯಾಗಿರಬಹುದಾದ ಸಾಧ್ಯತೆಗಳನ್ನು ಅಲ್ಲಗಳೆಯಲಾಗುವುದಿಲ್ಲ. ಅಲ್ಲದೆ ಅಕ್ಷರಸ್ಥರು ಹೇಗೆ ಸಂಬೋಧಿಸಿದರೂ ಅದೊಂದು ಆಧುನಿಕ ಜೀವನ ಶೈಲಿಯ ಮಾದರಿಯೆನಿಸಬಹುದು. ಸಾಮಾನ್ಯವಾಗಿ ಅಕ್ಷರಸ್ಥರಲ್ಲಿ ಸ್ತ್ರೀಗೆ ಗೌರವ ಕೊಟ್ಟು ಸಂಬೋಧಿಸುವುದನ್ನು ಕಾಣಬಹುದು. ಅಕ್ಷರಸ್ಥರಾದರೂ, ಅನಕ್ಷರಸ್ಥರಾದರೂ ಎಲ್ಲಾ ಸಾಮಾಜಿಕ ಪರಿಸರಗಳಲ್ಲೂ ಹೆಂಡತಿಯನ್ನು ಹೆಸರಿನಿಂದ ಸಂಬೋಧಿಸುವುದಿಲ್ಲ. ಈ ಸಂಬೋಧನೆಗೆ ತುಂಬಾ ಮಿತಿಗಳಿವೆ. ಹೆಚ್ಚಾಗಿ ಕೌಟುಂಬಿಕ ಮತ್ತು ಗಂಡ-ಹೆಂಡತಿ ಇಬ್ಬರೆ ಇರುವಾಗ ಈ ಪ್ರಕ್ರಿಯೆ ಅಧಿಕವಾಗಿ ಕಾಣಬರುತ್ತದೆ.

ಇಂದು ಕಾಲ ಬದಲಾಗಿದೆ. ಸಮಾಜದಲ್ಲಿ ಗಂಡು-ಹೆಣ್ಣಿನ ಬಗೆಗಿದ್ದ ಅಂತರದ ಭಾವನೆಗಳು ಕಡಿಮೆಯಾಗಿದ್ದು, ಇಬ್ಬರೂ ಸಮಾನರು ಎಂಬ ಭಾವನೆ ಮೂಡುತ್ತಿದೆ. ಇಂದು ಎಲ್ಲಾ ರಂಗಗಳಲ್ಲೂ ಹೆಣ್ಣು ಪುರುಷನಷ್ಟೇ ಸಮರ್ಥವಾಗಿ ಕಾರ್ಯನಿರ್ವಹಿಸುತ್ತಿರುವುದನ್ನು ಗಮನಿಸಬಹುದು. ಇದಲ್ಲದೇ ಗಂಡು-ಹೆಣ್ಣಿನ ಸಂಬೋಧನೆಯಲ್ಲಿಯೂ ಕ್ರಾಂತಿಕಾರಿ ಬದಲಾವಣೆಗಳಾಗಿವೆ. ಹಿಂದೆ ಹೆಂಡತಿ ಗಂಡನ ಎದುರು ನಿಂತು ಮಾತನಾಡುವುದು, ಗಂಡನ ಹೆಸರನ್ನು ಕರೆಯುವುದು ನಿಷೇಧಿಸಲ್ಪಟ್ಟಿತ್ತು. ಆದರೆ ಇಂದು ಆ ವ್ಯವಸ್ಥೆ ನಿಧಾನವಾಗಿ ಕ್ಷೀಣಿಸುತ್ತಿದೆ. ಹೆಂಡತಿ ಕೂಡ ತನ್ನ ಗಂಡನ ಹೆಸರನ್ನು ಸಂಬೋಧಿಸುವುದು ಆಧುನಿಕ ಸಮಾಜದ ಬೆಳವಣಿಗೆಯೆಂದೇ ಹೇಳಬಹುದು. ಗ್ರಾಮೀಣ ಪರಿಸರದ ಅನಕ್ಷರಸ್ಥ ಕುಟುಂಬಗಳಲ್ಲಿ ಈಗಲೂ ಕೂಡ ಗಂಡನ ಹೆಸರನ್ನು ಹೆಂಡತಿ ಕರೆಯುವುದಿಲ್ಲ. ನಗರ ಪರಿಸರದ ಇಲ್ಲವೆ, ಗ್ರಾಮೀಣ ಪರಿಸರದ ಅಕ್ಷರಸ್ಥ ಕೆಲವು ಕುಟುಂಬಗಳಲ್ಲಿ ಮಾತ್ರ ಹೆಂಡತಿ ಗಂಡನ ಹೆಸರನ್ನು ಕರೆಯುವಂಥದ್ದನ್ನು ಕಾಣಬಹುದು. ಇದು ಸಮಾನ ಸಾಮಾಜಿಕ ವ್ಯವಸ್ಥೆಯ ಕುರುಹು ಆಗಬಹುದು. ಸ್ತ್ರೀಯರು ಸಹ ಪುರುಷರ ಹಾಗೆ, ಗಂಡನ ಹೆಸರನ್ನು ಕರೆಯುವಾಗ ಪೂರ್ಣ ಹೆಸರಿನಿಂದ ಕರೆಯುವುದಿಲ್ಲ. ಸಾಮಾನ್ಯವಾಗಿ ಹೆಸರನ್ನು ಮೊಟಕುಮಾಡಿ ಮುದ್ದಾಗಿ ಕರೆಯುತ್ತಾರೆ. ಕೆಲವು ಉದಾಹರಣೆಗಳನ್ನು ಗಮನಿಸಬಹುದು.

| ಮೂಲರೂಪ | ಸಂಬೋಧನಾರೂಪ | |
|---|---|---|
| ರಾಮಣ್ಣ | ರಾಮು | |
| ಮಂಜುನಾಥ | ಮಂಜು | |
| ಪ್ರಭಾಕರ | ಪ್ರಭು | |
| ಸೋಮಶೇಖರ | ಸೋಮು | |
| ರವಿಶಂಕರ | ರವಿ | |
| ಉಮಾಪತಿ | ಉಮಾ, ಉಮು | |
| ಶ್ರೀನಿವಾಸ | ಶೀನು | |
| ಚಂದ್ರಪ್ಪ | ಚಂದ್ರು | - ಇತ್ಯಾದಿ |

ಅಕ್ಷರಸ್ಥ ಕೆಲವು ಕುಟುಂಬಗಳಲ್ಲಿ ಗಂಡ-ಹೆಂಡಿರು ಮುಕ್ತವಾಗಿ ಪರಸ್ಪರರನ್ನು ಹೆಸರು ಹಚ್ಚಿ ಕರೆಯುತ್ತಾರಾದರೂ, ಎಲ್ಲಾ ಸಂದರ್ಭಗಳಲ್ಲಿಯೂ ಕರೆಯುವುದಿಲ್ಲ. ಮನೆಯಲ್ಲಿ ಹೆಸರಿನಿಂದ ಕರೆದರೂ,

ಮನೆಯ ಹೊರಗಡೆ ಸಾಮಾನ್ಯವಾಗಿ ಹೆಸರಿನಿಂದ ಕರೆಯುವುದಿಲ್ಲ. ಬದಲಿಗೆ ಏನೇ, ರೀ, ಎಂದು ಪ್ರಾತಿನಿಧಿಕ ಪದಗಳ ಮೂಲಕ ಸಂಬೋಧಿಸುತ್ತಾರೆ. ಅಕ್ಷರಸ್ಥ ಅಥವಾ ವಿದ್ಯಾವಂತ ಮಹಿಳೆ ತನ್ನ ಗಂಡನನ್ನು ಹೆಸರಿಡಿದು ಕರೆಯುವ ವರ್ತನೆಯನ್ನು ಗ್ರಾಮೀಣ ಪರಿಸರದ ಸಾಂಪ್ರದಾಯಿಕ ಮಹಿಳೆ ಒಪ್ಪುವುದಿಲ್ಲ. ಹೆಣ್ಣಿನ ಈ ವರ್ತನೆಯ ಬಗೆಗೆ ಹೆಣ್ಣೇ ದೂಷಣೆ ಮಾಡುತ್ತಾಳೆ. ಮುಂದೊಂದುದಿನ ಗ್ರಾಮೀಣ ಪರಿಸರದ ಹೆಣ್ಣು ಕೂಡ ಗಂಡನನ್ನು ಹೆಸರಿಡಿದು ಕರೆದರೆ ಆಶ್ಚರ್ಯ ಪಡಬೇಕಾಗಿಲ್ಲ.

**ಅಣ್ಣ : ಅಕ್ಕ : ತಮ್ಮ : ತಂಗಿ : (ಸಹೋದರ, ಸಹೋದರಿಯರು)**

ಸಾಮಾನ್ಯವಾಗಿ ಒಡಹುಟ್ಟಿದವರಲ್ಲಿ ಹಿರಿಯವ 'ಅಣ್ಣ'ನಾದರೆ, ಹಿರಿಯವಳು 'ಅಕ್ಕ' ಆಗುತ್ತಾಳೆ. ಕಿರಿಯವ ತಮ್ಮನಾದರೆ, ಕಿರಿಯವಳು ತಂಗಿಯಾಗುತ್ತಾಳೆ. ಚಿಕ್ಕಪ್ಪ/ಚಿಕ್ಕಮ್ಮ, ದೊಡ್ಡಪ್ಪ/ದೊಡ್ಡಮ್ಮನವರ ಮಕ್ಕಳಿಗೂ ಈ ಸಂಬಂಧಗಳು ಅನ್ವಯಿಸುತ್ತವೆ. ಭಾರತೀಯ ಸಮಾಜದಲ್ಲಿ ಹಿರಿಯರು ಕಿರಿಯರನ್ನು ಹೆಸರಿಡಿದು ಕರೆಯಬಹುದು. ಕಿರಿಯರು ಹಿರಿಯರನ್ನು ಹೆಸರಿಡಿದು ಕರೆಯುವಂತಿಲ್ಲ. ಹಿರಿಯ ಸಹೋದರ-ಸಹೋದರಿಯರು, ಕಿರಿಯಸಹೋದರ-ಸಹೋದರಿಯರನ್ನು ಹೆಸರಿನಿಂದ (ಸಂಬೋಧಿಸಬಹುದು) ಸಂಬೋಧಿಸುತ್ತಾರೆ. ಕಿರಿಯ ಸಹೋದರ-ಸಹೋದರಿಯರು, ಹಿರಿಯ ಸಹೋದರ-ಸಹೋದರಿಯರನ್ನು ಹೆಸರಿನಿಂದ ಸಂಬೋಧಿಸುವುದಿಲ್ಲ. ಕಿರಿಯ ಸಹೋದರ, ಸಹೋದರಿ ಹಿರಿಯವನನ್ನು 'ಅಣ್ಣಾ' ಎಂಬ ಬಂಧುಸೂಚಕದೊಡನೆ ಸಂಬೋಧಿಸಿದರೆ, ಹಿರಿಯವಳನ್ನು 'ಅಕ್ಕಾ' ಎಂಬ ಬಂಧುಸೂಚಕದೊಡನೆ ಸಂಬೋಧಿಸುವುದುಂಟು. 'ಅಣ್ಣ', 'ಅಕ್ಕ', 'ತಮ್ಮ', 'ತಂಗಿ' ಈ ಪದಗಳು ಕೌಟುಂಬಿಕ ಪರಿಸರದ ಸಹೋದರ ಸಹೋದರಿಯರನ್ನು ಸಂಬೋಧಿಸುವಲ್ಲಿ ಬಂಧುಸೂಚಕ ಅರ್ಥದಲ್ಲಿಯೂ, ಕುಟುಂಬೇತರರ ಸಂಬೋಧನೆಯಲ್ಲಿ ಗೌರವಸೂಚಕ ಅರ್ಥದಲ್ಲಿಯೂ ಬಳಕೆಯಾಗುತ್ತವೆ. ಕೆಲವು ಸಮುದಾಯಗಳಲ್ಲಿ ತಂದೆಗೆ 'ಅಣ್ಣ' ಎಂದು ಕರೆಯುವುದುಂಟು. ಚಿತ್ರದುರ್ಗ ಪರಿಸರದಲ್ಲಿ ಬ್ರಾಹ್ಮಣರು ಮತ್ತು ಕುರುಬರು (ಕೆಲವರು ಮಾತ್ರ) ತಂದೆಗೆ 'ಅಣ್ಣಾ' ಎಂದು ಕರೆಯುತ್ತಾರೆ. ಒಂದು ಭಾಷಾ ಸಮುದಾಯದಲ್ಲಿ ಒಂದು ಸಂಬಂಧಸೂಚಕ ಪದ ಭಿನ್ನಜಾತಿ ನೆಲೆಗಳಲ್ಲಿ ವಿಭಿನ್ನ ಸಂಬಂಧಗಳನ್ನು ಸೂಚಿಸುವುದು ತುಂಬಾ ವೈಶಿಷ್ಟ್ಯವೆನಿಸುತ್ತದೆ. ಇಂಥ ಅಂಶಗಳು ನಾಮಾಧ್ಯಯನದ ಬಗೆಗೆ ಕುತೂಹಲವನ್ನುಂಟು ಮಾಡುತ್ತವೆ.

ಹಿರಿಯ ಸಹೋದರ-ಸಹೋದರಿಯರು, ಕಿರಿಯ ಸಹೋದರ-ಸಹೋದರಿಯರನ್ನು ಸಂಬೋಧಿಸುವಾಗ ಹೆಸರಿಡಿದು ಕರೆಯುತ್ತಾರೆ. ಹೀಗೆ ಹೆಸರಿಡಿದು ಕರೆಯುವಾಗ ಹೆಸರನ್ನು ಮೊಟಕುಗೊಳಿಸಿ ಮುದ್ದಾಗಿಯೂ ಕರೆಯುವುದುಂಟು. ಕೆಲವು ಹೆಸರುಗಳನ್ನು ಉದಾಹರಣೆಗೆ ಗಮನಿಸಬಹುದು.

| ಮೂಲರೂಪ | ಸಾಮಾನ್ಯ ಸಂಬೋಧನೆ | ಪ್ರೀತಿಯ ಸಂಬೋಧನೆ |
|---|---|---|
| ತಿಮ್ಮಣ್ಣ | ತಿಮ್ಮ, ತಿಮ್ಮು | ತಿಮ್ಮು |
| ಗಂಗಾಧರ | ಗಂಗ, ಗಂಗಾಧರ | ಗಂಗು |
| ಶಿವಲಿಂಗಪ್ಪ | ಶಿವಲಿಂಗ | ಶಿವು |
| ನಾಗಪ್ಪ | ನಾಗ | ನಾಗು |
| ರಂಗಪ್ಪ | ರಂಗ | ರಂಗು, ರಗು |

| | | |
|---|---|---|
| ಚನ್ನಯ್ಯ | ಚನ್ನ, ಚನ್ನ | ಚನ್ನು |
| ನಿಂಗವ್ವ | ನಿಂಗವ್ವ | ನಿಂಗು, ನಿಂಗಾ |
| ರೇಣುಕಮ್ಮ | ರೇಣುಕ | ರೇಣು, ರೇಕಾ |
| ಗಿರಿಜಮ್ಮ | ಗಿರಿಜ | ಗಿರಿ, ಗಿಜ |
| ಸುಲೋಚನಮ್ಮ | ಸುಲೋಚನ | ಸುಲು |
| ವಿಶಾಲಾಕ್ಷಿ | ವಿಶಾಲ | ವಿಶು, ವಿಶಾಲು |

ಕಿರಿಯ ಸಹೋದರ-ಸಹೋದರಿಯರು, ಹಿರಿಯ ಸಹೋದರ-ಸಹೋದರಿಯರನ್ನು ಹೆಸರಿನಿಂದ ಕರೆಯದೆ ಸಂಬಂಧಸೂಚಕ ಪದಗಳಿಂದ ಸಂಬೋಧಿಸುತ್ತಾರೆ. ಒಬ್ಬರಿಗಿಂತ ಹೆಚ್ಚು ಜನ ಸಹೋದರ, ಸಹೋದರಿಯರಿದ್ದಾಗ ಈ ಸಂಬಂಧ ಸೂಚಕಗಳ ಬಳಕೆ ಗೊಂದಲವನ್ನುಂಟು ಮಾಡಬಹುದು. ಅಂಥ ಸಂದರ್ಭದಲ್ಲಿ ಸಣ್ಣ (ಸಣ್ಣಣ್ಣ, ಸಣ್ಣಕ್ಕ), ದೊಡ್ಡ (ದೊಡ್ಡಣ್ಣ, ದೊಡ್ಡಕ್ಕ), ನಡುಕುಲು (ನಡುವುಲಣ್ಣ, ನಡುವುಲಕ್ಕ), ಹಿರಿಯ (ಹಿರಿಯಣ್ಣ, ಹಿರಿಯಕ್ಕ), ಕಿರಿಯ (ಕಿರಿಯಣ್ಣ, ಕಿರಿಯಕ್ಕ) ಎಂಬ ವಿಶೇಷಣಗಳಿಂದ ಸಂಬೋಧಿಸುತ್ತಾರೆ. ಮತ್ತೆ ಕೆಲವು ಸಂದರ್ಭಗಳಲ್ಲಿ ಹೆಸರಿನಿಂದಲೂ ಸಂಬೋಧಿಸುವುದುಂಟು. ಅಂಥ ಸನ್ನಿವೇಶಗಳಲ್ಲಿ ಹೆಸರಿನ ಕೊನೆಗೆ 'ಅಣ್ಣ', 'ಅಕ್ಕ' ವಾರ್ಗಿಕಗಳನ್ನು ಸೇರಿಸಿ ಕರೆಯುತ್ತಾರೆ. ಹೆಸರನ್ನು ಮೊಟಕುಮಾಡಿ ಮುದ್ದಾಗಿ ಕರೆಯುವುದಾಗಲೀ, ಏಕವಚನದಿಂದ ಕರೆಯುವುದಾಗಲೀ ಕಾಣಬರುವುದಿಲ್ಲ. ಉದಾಹರಣೆಗೆ

| ಮೂಲರೂಪ | ಸಂಬೋಧನಾರೂಪ |
|---|---|
| ಜಂಬಯ್ಯ | ಜಂಬಣ್ಣ/ಜಂಬಯ್ಯಣ್ಣ |
| ಬಸಪ್ಪ | ಬಸಣ್ಣ/ಬಸಪ್ಪಣ್ಣ |
| ಗೋವಿಂದಪ್ಪ | ಗೋವಿಂದಣ್ಣ/ಗೋವಿಂದಪ್ಪಣ್ಣ |
| ತಿಮ್ಮಣ್ಣ | ತಿಮ್ಮಣ್ಣ/ತಿಮ್ಮಣ್ಣಣ್ಣ |
| ಕುಮಾರ | ಕುಮಾರಣ್ಣ |
| ತಿಪ್ಪೇಶ | ತಿಪ್ಪೇಶಣ್ಣ |
| ಶಿವಮ್ಮ | ಶಿವಕ್ಕ/ಶಿವಮ್ಮಕ್ಕ |
| ಗಂಗವ್ವ | ಗಂಗಕ್ಕ/ಗಂಗವ್ವಕ್ಕ |
| ತಿಪ್ಪಕ್ಕ | ತಿಪ್ಪಕ್ಕ/ತಿಪ್ಪಕ್ಕಕ್ಕ |
| ನಿರ್ಮಲ | ನಿರ್ಮಲಕ್ಕ |
| ವಾಣಿ | ವಾಣ್ಯಕ್ಕ |

ಮೇಲಿನ ಪಟ್ಟಿಯ ಹೆಸರುಗಳ ಸಂಬೋಧನಾ ವಿಧಾನವನ್ನು ಗಮನಿಸಿದಾಗ ಹೆಸರಿನ ಕೊನೆಗೆ 'ಅಣ್ಣ', 'ಅಕ್ಕ' ವಾರ್ಗಿಕಗಳನ್ನು ಹಚ್ಚಿ ಸಂಬೋಧಿಸುವುದು ಗಮನಕ್ಕೆ ಬರುತ್ತದೆ. ಹೆಸರು ಸಂಬಂಧ ಸೂಚಕ ವಾರ್ಗಿಕಗಳಿಂದ (ಅಯ್ಯ, ಅಣ್ಣ, ಅಪ್ಪ, ಅಮ್ಮ, ಅವ್ವ, ಅಕ್ಕ) ಅಂತ್ಯಗೊಂಡಿದ್ದರೆ, ಅಂಥ ಸಂದರ್ಭದಲ್ಲಿ ಹೆಸರಿನ ಜತೆಗಿರುವ ವಾರ್ಗಿಕವನ್ನು ಬಿಟ್ಟು ಅಣ್ಣ, ಅಕ್ಕ ವಾರ್ಗಿಕಗಳನ್ನು ಸೇರಿಸಿ ಸಂಬೋಧಿಸಬಹುದಾದರೂ ಹಾಗೆ ಸಂಬೋಧಿಸುವುದರಿಂದ ಏಕವಚನದಿಂದ ಸಂಬೋಧಿಸಿದಂತಾಗುತ್ತದೆ. ಆದುದರಿಂದ ಸಂಬಂಧವಾಚಿ

ಪ್ರತ್ಯಯಗಳನ್ನು ಕೈಬಿಡದೆ ಅವುಗಳಿಗೆ 'ಅಣ್ಣ' 'ಅಕ್ಕ' ಎಂಬ ಬಂಧುವಾಚಿಗಳನ್ನು ಸೇರಿಸಿ ಸಂಬೋಧಿಸುವುದುಂಟು. ಈ ರೀತಿ ಕರೆಯುವುದು ಗೌರವವಾಚಿ ಸಂಬೋಧನೆಯಾಗಿರುತ್ತದೆ ಎಂಬುದು ಜನರ ಸಾಮಾನ್ಯ ತಿಳುವಳಿಕೆಯಾಗಿದೆ. ಈ ಸಂಬೋಧನೆಯಲ್ಲಿ ಪ್ರೀತಿಗಿಂತ, ಗೌರವಭಾವನೆ ಇರುತ್ತದೆ. ಕಿರಿಯ ಸಹೋದರ-ಸಹೋದರಿಯರು, ಹಿರಿಯ ಸಹೋದರ-ಸಹೋದರಿಯರಿಗೆ ಗೌರವ ಕೊಡುವ ವಾತಾವರಣ ಗ್ರಾಮೀಣ ಪರಿಸರದಲ್ಲಿ ಜೀವಂತವಾಗಿದೆ. ಹೆಸರಿಡಿದು ಕರೆಯದೆ ಸಂಬಂಧಸೂಚಕ ಪದಗಳಿಂದ ಸಂಬೋಧಿಸುವಂಥದ್ದು ಹಳ್ಳಿಗಳಲ್ಲಿ ಈಗಲೂ ರೂಢಿಯಲ್ಲಿದೆ. ಆದರೆ ನಗರ ಪ್ರದೇಶದ ಅಕ್ಷರಸ್ಥ ಕೆಲವು ಕುಟುಂಬಗಳಲ್ಲಿ ಈ ಸಂಬಂಧಗಳು ಮಾಯವಾಗುತ್ತಿವೆ. ಅಣ್ಣ ಮತ್ತು ಅಕ್ಕನವರು, ತಮ್ಮ ತಂಗಿಯವರನ್ನು ಹೆಸರಿನಿಂದ ಸಂಬೋಧಿಸುವಂತೆ ತಮ್ಮ ಮತ್ತು ತಂಗಿಯವರು, ಅಣ್ಣ, ಅಕ್ಕನವರನ್ನು ಹೆಸರಿನಿಂದ ಸಂಬೋಧಿಸುತ್ತಾರೆ. ಸಾಮಾನ್ಯವಾಗಿ ಇಂಥ ಕಡೆ ಮುದ್ದು ಹೆಸರಿನಿಂದ ಸಂಬೋಧಿಸುವುದೇ ಹೆಚ್ಚಾಗಿ ಕಾಣಬರುತ್ತದೆ.

**ತಂದೆ : ತಾಯಿ-ಮಕ್ಕಳು**

ತಂದೆ ತಾಯಿಯವರು ಮಕ್ಕಳನ್ನು ಹೆಸರಿನಿಂದ ಕರೆಯುತ್ತಾರೆ. ಆದರೆ ಮಕ್ಕಳು ತಂದೆ ತಾಯಿಯವರನ್ನು ಹೆಸರಿನಿಂದ ಸಂಬೋಧಿಸುವುದಿಲ್ಲ. ಅಪ್ಪ/ಅಯ್ಯ, ಅಮ್ಮ/ಅವ್ವ ಎಂಬ ಸಂಬಂಧಸೂಚಕ ಪದಗಳಿಂದ ಸಂಬೋಧಿಸುವುದುಂಟು. ತಂದೆ ತಾಯಿಯವರಿಗೆ ಮಕ್ಕಳೆಂದರೆ ಪ್ರಾಣ, ಜೀವ. ಆದುದರಿಂದ ಮಕ್ಕಳನ್ನು ಕರೆಯುವಾಗ ಮುದ್ದು ಹೆಸರಿನಿಂದ ಕರೆಯುವುದು ಹೆಚ್ಚು. ಇದು ಗ್ರಾಮೀಣ ಪರಿಸರಕ್ಕಿಂತ ನಗರ ಪರಿಸರದಲ್ಲಿ ಜಾಸ್ತಿ. ಹಳ್ಳಿಜನರು ಮಕ್ಕಳನ್ನು ಕರೆಯುವಾಗ ಹೆಸರನ್ನು ಮೂಲರೂಪದಲ್ಲಿ ಬಳಸಿ ಕರೆಯುವಂತೆ, ಏಕವಚನದಿಂದಲೂ ಸಂಬೋಧಿಸುತ್ತಾರೆ. ಕೆಲವು ಉದಾಹರಣೆಗಳನ್ನು ಇಲ್ಲಿ ಗಮನಿಸಬಹುದು.

| ಮೂಲರೂಪ (ನಗರ) | ಅಕ್ಷರಸ್ಥರ ಸಂಬೋಧನೆ | ಮೂಲರೂಪ (ಗ್ರಾಮೀಣ) | ಅನಕ್ಷರಸ್ಥರ ಸಂಬೋಧನೆ |
|---|---|---|---|
| ಮಧುಸೂಧನ | ಮಧು | ಕೆಂಚಪ್ಪ | ಕೆಂಚ, ಕೆಂಚ್ಯಾ |
| ಮುರಳೀಧರ | ಮುರುಳಿ, ಮುರು | ಬೋರಪ್ಪ | ಬೋರ, ಬೋರ್ಗ |
| ಜನಾರ್ಧನ | ಜಾನಿ | ತಿಮ್ಮಣ್ಣ | ತಿಮ್ಮ, ತಿಮ್ಗ |
| ಕೃಷ್ಣಕುಮಾರ | ಕೀಟು, ಕಿಟ್ಟು, ಕಿಟ್ಟಿ | ಕುಬೇಂದ್ರ | ಕುಬೇಂದ್ರ, ಕೂಬ್ಯಾ |
| ತಿರುಮಾಲಾಚಾರ್ಯ | ತಿರು, ತಿಮ್ಮ | ನುಂಕಪ್ಪ | ನುಂಕ |
| ನಾರಾಯಣರೆಡ್ಡಿ | ನಾಣಿ | ಮೈಲಾರಪ್ಪ | ಮೈಲಾರ, ಮೈಲಾರಿ |
| ಮಮತ | ಮಮ್ಮಿ | ತಿಪ್ಪಕ್ಕ | ತಿಪ್ಪಕ್ಕ, ತಿಪ್ಪವ್ವ, ತಿಪ್ಪಿ |
| ರೋಹಿಣಿ | ರೋಹಿ | ಕೊಲ್ಲಮ್ಮ | ಕೊಲ್ಲಕ್ಕ, ಕೊಲ್ಲವ್ವ |
| ಕವಿತಾ | ಕವಿ | ಮಾರಕ್ಕ | ಮಾರಕ್ಕ, ಮಾರಿ |
| ಕಲ್ಪನಾ | ಕಲ್ಪಾ | ಹನುಮಕ್ಕ | ಹನುಮಕ್ಕ |
| ವೇದಾವತಿ | ವೇದ | ರಾಮಕ್ಕ | ರಾಮಕ್ಕ, ರಾಮಿ |

ನಗರ ಪರಿಸರದ ಅಕ್ಷರಸ್ಥ ಜನರು ತಮ್ಮ ಮಕ್ಕಳನ್ನು ಸಂಬೋಧಿಸುವಾಗ ಹೆಸರನ್ನು ಪೂರ್ಣ ರೂಪದಲ್ಲಿ ಕರೆಯದೆ ಮೊಟಕುಮಾಡಿ ಕರೆಯುತ್ತಾರೆ. ಹೆಸರನ್ನು ಮೊಟಕುಮಾಡಿ ಕರೆದರೆ ಮಾತ್ರ ಪ್ರೀತಿ ತೋರಿದಂತಾಗುತ್ತದೆ ಎಂಬ ನಂಬಿಕೆಯೂ ನಮ್ಮ ಸಮಾಜದಲ್ಲಿ ಇದ್ದಂತಿದೆ. ಅದಕ್ಕಾಗಿ ಹೆಚ್ಚು ಪ್ರೀತಿ ಸೂಚಿಸಲು ಮೊಟಕುಗೊಳಿಸಿ ಕರೆಯುತ್ತಿರಬಹುದು. ಸೌಲಭ್ಯಾಕಾಂಕ್ಷೆ ಇದಕ್ಕೆ ಇನ್ನೊಂದು ಕಾರಣವೂ ಆಗಿರಬಹುದು. ನಗರ ಪರಿಸರದಲ್ಲಿ ಹೆಸರುಗಳನ್ನು ಮುದ್ದಿನಿಂದ ಕರೆಯುವಾಗ '-ಇ', '-ಎ' ಕಾರಗಳನ್ನು ಹಚ್ಚಿ ಕರೆಯುವುದು ಸಾಮಾನ್ಯ. ಗ್ರಾಮೀಣ ಪರಿಸರದ ಸಂಬೋಧನೆಯಲ್ಲಿ ಅಂತ್ಯ '-ಇ', '-ಉ' ಕಾರಗಳು ಬಳಕೆಯಾಗುವುದು ಕಡಿಮೆ. ಮೂಲ ಹೆಸರಿನ ನಿರ್ದಿಷ್ಟ ಭಾಗವನ್ನಷ್ಟೇ ಕರೆಯುತ್ತಿರುವುದು ಹೆಚ್ಚು ಕಾಣಬರುತ್ತದೆ. ಮತ್ತು ಅಂತ್ಯ '-ಗ' ಪ್ರತ್ಯಯವನ್ನು ಅಂಟಿಸಿ ಸಂಬೋಧಿಸುವುದುಂಟು. ಸಂಬೋಧನೆಯಲ್ಲಿ ಹೆಸರಿನ ಕೊನೆಗೆ ಬಳಕೆಯಾಗುವ '-ಗ', 'ಮಗ' ಶಬ್ದದಿಂದ ಬಂದಿರಬಹುದೆಂದು ಡಾ. ಚಿದಾನಂದಮೂರ್ತಿಯವರು ಅಭಿಪ್ರಾಯಪಡುತ್ತಾರೆ. ವಿಷಯದ ವಿಶ್ಲೇಷಣೆಗೆ ಮೇಲಿನ ಪಟ್ಟಿಯ ಹೆಸರುಗಳನ್ನು ಮಾದರಿಗಾಗಿ ಬಳಸಿಕೊಳ್ಳಲಾಗಿದೆ.

ತಂದೆ, ತಾಯಿಗಳು ಮಕ್ಕಳನ್ನು ಸಂಬೋಧಿಸುವಾಗ ಹೆಸರನ್ನು ಮೊಟಕುಗೊಳಿಸಿ ಮುದ್ದಾಗಿ ಕರೆಯುವಂತೆ, ಪ್ರೀತಿಯಿಂದ ಬೇರೆ ಹೆಸರಿನಿಂದಲೂ ಸಂಬೋಧಿಸುವುದುಂಟು. ಉದಾಹರಣೆಗೆ ಪುಟ್ಟ, ಪುಟ್ಟಿ, ಚಿನ್ನ, ಚಿನ್ನಿ, ಬಾಬು, ಅಪ್ಪಾಜಿ, ಬೇಬಿ ಇತ್ಯಾದಿ. ಪ್ರೀತಿಗಾಗಿ ಕರೆಯಲ್ಪಡುವ ಇಂಥ ಹೆಸರುಗಳು ಹಾಗೆಯೇ ಮುಂದುವರೆದು, ಅಧಿಕೃತ ನಾಮಗಳಾಗಿ ಶಾಶ್ವತವಾಗಿ ಉಳಿಯಬಹುದು. ಪುಟ್ಟಕ್ಕ, ಪುಟ್ಟಣ್ಣ, ಚಿನ್ನಮ್ಮ, ಚಿನ್ನಯ್ಯ, ಬಾಬಣ್ಣ, ಬೇಬಿ, ಅಪ್ಪಾಜಿ ಈ ಹೆಸರುಗಳು ವ್ಯಕ್ತಿಗೆ ಪ್ರೀತಿಯಿಂದ ಹುಟ್ಟಿಕೊಂಡು, ಅಧಿಕೃತ ನಾಮಗಳಾಗಿ ಮುಂದುವರೆದಿರಬಹುದು. ಇಂಥ ಸಂದರ್ಭದಲ್ಲಿ ವ್ಯಕ್ತಿಯ ನಿಜನಾಮ ಮರೆಯಾಗಿ ಹೋಗುತ್ತದೆ. ಕೌಟುಂಬಿಕ ಪರಿಸರದಲ್ಲಿ ಮಾತ್ರ ಸಂಬೋಧನೆಗೊಳ್ಳುತ್ತಿದ್ದ ಹೆಸರು ಎಲ್ಲರಿಂದಲೂ ಸಂಬೋಧಿಸಲ್ಪಡುತ್ತದೆ.

ಮಕ್ಕಳಿಗೆ ಹಿರಿಯರ ಹೆಸರನ್ನು ಇಡುವುದು ಒಂದು ಪರಂಪರೆ. ಇಂಥ ಸಂದರ್ಭದಲ್ಲಿ ಕೆಲವು ಸಾಂಪ್ರದಾಯಿಕ ಕುಟುಂಬಗಳಲ್ಲಿ ಹೆಸರಿಡಿದು ಕರೆಯುವುದಿಲ್ಲ. ಒಂದು ವೇಳೆ ಹಾಗೆ ಕರೆದರೆ ಹಿರಿಯರಿಗೆ ಅಗೌರವ ತೋರಿದಂತಾಗುತ್ತದೆ ಎಂಬ ನಂಬಿಕೆ. ಆದುದರಿಂದ ಸಣ್ಣವ, ಸಣ್ಣಾಕಿ, ದೊಡ್ಡವ, ದೊಡ್ಡಾಕಿ ಎಂಬ ವಿಶೇಷಣಗಳಿಂದ ಸಂಬೋಧಿಸುವುದೂ ಉಂಟು. ಇವೇ ಹೆಸರುಗಳಿಂದ ಕರೆಯುವುದು ರೂಢಿಯಾಗಿ ಸಣ್ಣಯ್ಯ, ಸಣ್ಣಪ್ಪ, ಸಣ್ಣಮ್ಮ, ಸಣ್ಣಕ್ಕ, ದೊಡ್ಡಯ್ಯ, ದೊಡ್ಡಕ್ಕ ಎಂಬ ಹೆಸರುಗಳು ಶಾಶ್ವತವಾಗಿ ಉಳಿಯಬಹುದು. ಈ ಪ್ರಕ್ರಿಯೆ ಸಾಮಾನ್ಯವಾಗಿ ಗ್ರಾಮೀಣ ಪರಿಸರದ ಅನಕ್ಷರಸ್ಥ ಮನೆತನಗಳಲ್ಲಿ ಹೆಚ್ಚು ಕಾಣಬರುತ್ತಿದ್ದು, ನಗರ ಪರಿಸರದಲ್ಲಿ ಇದು ತೀರಾ ವಿರಳವೆಂದೇ ಹೇಳಬಹುದು.

**ಅಜ್ಜ : ಅಜ್ಜಿ : ಮೊಮ್ಮಕ್ಕಳು**

ಮೊಮ್ಮಕ್ಕಳು ಅಜ್ಜ-ಅಜ್ಜಿಯವರನ್ನು ಹೆಸರಿನಿಂದ ಕರೆಯುವುದಿಲ್ಲ. ಅಜ್ಜ (ತಾತ) ಅಜ್ಜಿ (ಅವ್ವ) ಎಂಬ ಬಂಧುಸೂಚಕಗಳಿಂದ ಸಂಬೋಧಿಸುವುದುಂಟು. ಅಜ್ಜ-ಅಜ್ಜಿಯರು ಮೊಮ್ಮಕ್ಕಳನ್ನು ಹೆಸರಿನಿಂದ

ಸಂಬೋಧಿಸುತ್ತಾರೆ. ವಾತ್ಸಲ್ಯದಿಂದ ಕೆಲವರು ಮುದ್ದು ಹೆಸರಿನಿಂದಲೂ ಕರೆಯುವುದನ್ನು ಕಾಣಬಹುದು. ಅಜ್ಜ ಅಜ್ಜಿಯರ ಹೆಸರನ್ನು ಮೊಮ್ಮಕ್ಕಳಿಗೆ ಇಡುವುದು ನಮ್ಮ ಸಮಾಜದಲ್ಲಿ ಒಂದು ಸಂಪ್ರದಾಯ. ಆಗ ಆ ಮಕ್ಕಳನ್ನು ಇತರರು ಸಂಬೋಧಿಸುವಾಗ (ಕೌಟುಂಬಿಕ ಪರಿಸರದಲ್ಲಿ ಮಾತ್ರ) ಗೌರವಸೂಚಕವಾಗಿ 'ಅಜ್ಜ', 'ಅಜ್ಜಿ' ಪ್ರತ್ಯಯಗಳನ್ನು ಅಂತ್ಯದಲ್ಲಿ ಸೇರಿಸಿ ಸಂಬೋಧಿಸಲಾಗುವುದು. "ಕೆಲವು ಸಂದರ್ಭದಲ್ಲಿ ಹಿರಿಯರ ಹೆಸರಿನ ಕೊನೆಗೆ ಗೌರವಾರ್ಥಕವಾಗಿ 'ಅಜ್ಜ' ರೂಪ ಸೇರುವುದುಂಟು."[೧೮] ಮಾದರಿಗೆ ಕೆಲವು ಹೆಸರುಗಳನ್ನು ನೋಡಬಹುದು.

| ಮೂಲರೂಪ | ಸಂಬೋಧನರೂಪ |
|---|---|
| ನಾಗಪ್ಪ | ನಾಗಪ್ಪಜ್ಜ |
| ತಿಪ್ಪಯ್ಯ | ತಿಪ್ಪಜ್ಜ/ತಿಪ್ಪಯ್ಯಜ್ಜ |
| ಹನುಮಂತಪ್ಪ | ಹನುಮಜ್ಜ/ಹನುಮಂತಜ್ಜ/ಹನುಮಂತಪ್ಪಜ್ಜ |
| ಶರಣಪ್ಪ | ಶರಣಪ್ಪಜ್ಜ |
| ಶಂಕರಮ್ಮ | ಶಂಕರಮ್ಮಜ್ಜಿ |
| ಓಬಮ್ಮ | ಓಬಮ್ಮಜ್ಜಿ/ಓಬಜ್ಜಿ |
| ಗೌರಮ್ಮ | ಗೌರಮ್ಮಜ್ಜಿ/ಗೌರಜ್ಜಿ |
| ಮಲ್ಲಮ್ಮ | ಮಲ್ಲಮ್ಮಜ್ಜಿ/ಮಲ್ಲಜ್ಜಿ |
| ಭೀಮವ್ವ | ಭೀಮವ್ವಜ್ಜಿ/ಭೀಮಜ್ಜಿ - ಇತ್ಯಾದಿ |

ಕೆಲವು ಹೆಸರುಗಳಲ್ಲಿ 'ಮುತ್ತ್ಯಾ' ಎಂಬುದು ಅಜ್ಜ'ಗೆ ಸಂವಾದಿಯಾಗಿ ಬಳಕೆಯಾಗುತ್ತದೆ. ಉದಾಹರಣೆಗೆ ಬೋರಮುತ್ತಿ (ಮುತ್ತ್ಯಾ) ಪಾಪಮುತ್ತಿ, ಓಬಮುತ್ತಿ ಇತ್ಯಾದಿ. ಚಿತ್ರದುರ್ಗ ಪರಿಸರದಲ್ಲಿ ನಾಯಕರ ಹೆಸರುಗಳಲ್ಲಿ ಮಾತ್ರ ಈ ವಾರ್ಗಿಕಗಳು ಬಳಕೆಯಾಗುತ್ತಿವೆ.

ಭಾರತೀಯ ಸಮಾಜದಲ್ಲಿ ಕಿರಿಯರು ಹಿರಿಯರ ಹೆಸರನ್ನು ಕರೆಯುವುದಿಲ್ಲ. ಹಿರಿಯರ ಹೆಸರನ್ನು ಅಂದರೆ ಅಜ್ಜ, ಅಜ್ಜಿಯರ ಹೆಸರನ್ನು ಮೊಮ್ಮಕ್ಕಳಿಗೆ ಇಟ್ಟಾಗಲೂ ಈ ನಿಯಮವನ್ನು ಕೆಲವು ಸಂದರ್ಭಗಳಲ್ಲಿ ಪಾಲಿಸುವುದುಂಟು. ಅಜ್ಜ, ಅಜ್ಜಿಯ ಹೆಸರನ್ನು ಮೊಮ್ಮಕ್ಕಳಿಗೆ ಇಟ್ಟಾಗ, ಆ ಹೆಸರುಗಳಿಂದ ಮಕ್ಕಳನ್ನು ಕರೆಯುವುದಿಲ್ಲ. ಕಾರಣ ಹಾಗೆ ಕರೆಯುವುದು ಹಿರಿಯರಿಗೆ ಅಗೌರವ ತೋರಿದಂತಾಗುತ್ತದೆ ಎಂಬ ನಂಬಿಕೆ. ಅಂಥ ಸಂದರ್ಭದಲ್ಲಿ ಪುಟ್ಟ, ಪುಟ್ಟಿ, ಚಿನ್ನ, ಅಪ್ಪಾಜಿ, ಬಾಬು, ಬೇಬಿ ಇತ್ಯಾದಿ ಇತರ ಬೇರೆ ಹೆಸರುಗಳಿಂದ ಕರೆಯುತ್ತಿರುತ್ತಾರೆ. ಮತ್ತು ಅಜ್ಜಯ್ಯ, ಅಜ್ಜಪ್ಪ, ಅಜ್ಜಣ್ಣ, ಮುದುಕಪ್ಪ, ಮುದಕಯ್ಯ, ತಾತಣ್ಣ, ತಾತಯ್ಯ, ಅಜ್ಜಮ್ಮ, ಅಜ್ಜಕ್ಕ, ಮುದುಕಮ್ಮ ಎಂಬ ಹೆಸರುಗಳಿಂದಲೂ ಸಂಬೋಧಿಸುತ್ತಾರೆ. ಬಹುಶಃ ಈ ಹೆಸರುಗಳು ಬಳಕೆಗೆ ಈ ನಂಬಿಕೆಯೇ ಮೂಲ ಕಾರಣವಾಗಿರಬಹುದು. 'ಅಜ್ಜ-ಅಜ್ಜಿ'ಯರು ಮಾತ್ರ ಮೊಮ್ಮಕ್ಕಳನ್ನು ಈ ಹೆಸರುಗಳಿಂದ ಕರೆಯದೆ ಕುಟುಂಬದ ಎಲ್ಲಾ ಸದಸ್ಯರು ಕರೆಯುತ್ತಾರೆ. 'ಅಜ್ಜ' ತೀರಿಹೋಗಿದ್ದು, ಅಜ್ಜಿ ಬದುಕಿರುವಾಗಲೇ ಮೊಮ್ಮಕ್ಕಳಿಗೆ ಅಜ್ಜನ ಹೆಸರನ್ನು ಇಟ್ಟರೆ 'ಅಜ್ಜಿ' ಆ ಹೆಸರಿನಿಂದ ಕರೆಯುವುದಿಲ್ಲ.

ಹೆಂಡತಿ ಗಂಡನ ಹೆಸರನ್ನು ಕರೆಯಬಾರದು ಎಂಬ ನಂಬಿಕೆ. ಆಗ, ಅಜ್ಜಪ್ಪ, ಅಜ್ಜಣ್ಣ, ತಾತಯ್ಯ ಮುಂತಾದ ನಾಮಗಳಿಂದ ಸಂಬೋಧಿಸುವುದುಂಟು. "ತೀರಿಹೋದ ಅಜ್ಜನ ಹೆಸರನ್ನು ಮೊಮ್ಮಗನಿಗೆ ಇಟ್ಟಾಗ ಅವನನ್ನು ಅಜ್ಜಪ್ಪ ಎಂದು ಕರೆಯುವುದುಂಟು"[೧೨] ಆಗ ಮಕ್ಕಳಿಗೆ ಇಡಲಾಗಿದ್ದ ಹಿರಿಯರ ಹೆಸರು ಮರೆಯಾಗಿ ಇದೇ ಹೆಸರು ಪ್ರಚಲಿತಕ್ಕೆ ಬರಬಹುದು. ಆಗ ಅಜ್ಜ-ಅಜ್ಜಿ ಮನೆಯವರು ಮಾತ್ರವಲ್ಲ, ಇತರ ಜನರೂ ಇದೇ ಹೆಸರಿನಿಂದ ಸಂಬೋಧಿಸುತ್ತಾರೆ.

'ಅಜ್ಜಿ' ತೀರಿಕೊಂಡು, ಅಜ್ಜ ಜೀವಂತವಾಗಿದ್ದಾಗ, 'ಅಜ್ಜಿ'ಯ ಹೆಸರನ್ನು ಮೊಮ್ಮಗಳಿಗೆ ಇಟ್ಟರೆ, 'ಅಜ್ಜ' ಹೆಸರಿನಿಂದ ಸಂಬೋಧನೆ ಮಾಡಬಹುದು. ಇಲ್ಲಿ ಇತರ ನಾಮಗಳಿಂದ ಕರೆಯುವ ಪ್ರಸಂಗವಾಗಲೀ, ನಿಷೇಧಗಳಾಗಲೀ ಇರುವುದಿಲ್ಲ. ಅಜ್ಜ, ಅಜ್ಜಿ, ಮೊಮ್ಮಕ್ಕಳ ನಡುವಿನ ಈ ಸಂಬೋಧನೆಯ ನಿಯಮಗಳು ಅಥವಾ ನಂಬಿಕೆಗಳು ಗ್ರಾಮೀಣ ಪರಿಸರದ ಸಂಪ್ರದಾಯಸ್ಥ ಕುಟುಂಬಗಳಲ್ಲಿ ಮಾತ್ರ ಹೆಚ್ಚಾಗಿ ಕಾಣಬರುತ್ತವೆ. ಆಧುನೀಕರಣದ ಪ್ರಭಾವದಿಂದಾಗಿ ಸಂಬೋಧನೆಯ ಪ್ರಕ್ರಿಯಲ್ಲಿದ್ದ ನಂಬಿಕೆಗಳು ದೂರ ಸರಿಯುತ್ತಿದ್ದು, ಸಂಬೋಧನಾ ಪರಿಸರ ಸರಳೀಕರಣಗೊಂಡಿದೆ ಎಂದು ಹೇಳಬಹುದು.

**ಅತ್ತೆ : ಮಾವ, ಸೊಸೆ : ಅಳಿಯ**

ಅತ್ತೆ-ಮಾವನವರು, ಅಳಿಯ-ಸೊಸೆಯಂದಿರನ್ನು ಹೆಸರಿನಿಂದ ಸಂಬೋಧಿಸಿದರೆ, ಅತ್ತೆ, ಮಾವಂದಿರನ್ನು, ಅಳಿಯ ಸೊಸೆಯಂದಿರು ಬಂಧುವಾಚಕಗಳಿಂದ ಸಂಬೋಧಿಸುವುದುಂಟು. ಅತ್ತೆ, ಮಾವ ಮತ್ತು ಅಳಿಯ ಸೊಸೆಯರ ನಡುವೆ ವಿನೋದ ಸಂಬಂಧಗಳು ಹೆಚ್ಚಿರುತ್ತವೆ. (ಮನೆ ಅಳಿಯ, ಮನೆ ಸೊಸೆಯರ ನಡುವೆ ವಿನೋದ ಸಂಬಂಧಗಳು ಇರುವುದಿಲ್ಲ) ಈ ಸಲಿಗೆಯ ಭಾವನೆಯಿಂದ ಅತ್ತೆ-ಮಾವ, ಅಳಿಯ-ಸೊಸೆಯರನ್ನು ಸಂಬೋಧಿಸುವಾಗ, ಹೆಸರನ್ನು ವಿರೂಪಮಾಡಿ ಕರೆಯುವುದು, ಏಕವಚನದಿಂದ ಕರೆಯುವುದಲ್ಲದೆ, ಕೆಲವೊಮ್ಮೆ ಅಡ್ಡಹೆಸರಿನಿಂದಲೂ ಸಂಬೋಧಿಸುವುದನ್ನು ಕಾಣಬಹುದು. ಹೀಗೆ ಕರೆಯುವುದು ಕೂಡ ಕುಟುಂಬದ ಸದಸ್ಯರು ಇರುವಾಗ ಮಾತ್ರ. ಹೊರಗಿನವರು ಇದ್ದಾಗ ಸಾಮಾನ್ಯವಾಗಿ ಹೆಸರಿನಿಂದ ಕರೆಯುತ್ತಾರೆ. ಅತ್ತೆ-ಮಾವ, ಅಳಿಯ-ಸೊಸೆಯರ ನಡುವಿನ ಈ ವಿನೋದ ಸಂಬಂಧಗಳು ನಗರ ಪ್ರದೇಶಕ್ಕಿಂತ ಗ್ರಾಮೀಣ ಪರಿಸರದಲ್ಲಿ ಹೆಚ್ಚು. ವಿಶೇಷವಾಗಿ ವಿದ್ಯಾವಂತರಿಗಿಂತ ಅವಿದ್ಯಾವಂತರ ನಡುವೆ ಜಾಸ್ತಿ ಇದ್ದು, ಅವರ ನಡುವಿನ ಸಂಬೋಧನೆಯಲ್ಲಿ ಇದನ್ನು ಹೆಚ್ಚು ಕಾಣಬಹುದು.

**ಅತ್ತಿಗೆ :**

ಅಣ್ಣನ ಹೆಂಡತಿಗೆ ಅತ್ತಿಗೆ ಎಂದು ಕರೆಯುತ್ತಾರೆ. ಅತ್ತಿಗೆ ತಾಯಿ ಸಮಾನ ಎಂಬುದು ಕೆಲವರ ಭಾವನೆ. ಆದುದರಿಂದ ಅತ್ತಿಗೆಗೆ ವಿಶೇಷ ಗೌರವಾದರಗಳನ್ನು ನೀಡುವುದುಂಟು. 'ಅತ್ತಿಗೆ' ಎನಿಸಿದವರು ಗಂಡನಮನೆಯಲ್ಲಿ ಯಾರನ್ನೂ ಹೆಸರಿನಿಂದ ಸಂಬೋಧಿಸುವುದಿಲ್ಲ. ತನ್ನ ಗಂಡನ ಅಣ್ಣಂದಿರನ್ನು ಭಾವ, ಮಾವ/ಮಾಮ ಎಂಬ ಬಂಧುವಾಚಿ ಗೌರವ ಪದಗಳಿಂದಲೂ, ಗಂಡನ ತಮ್ಮಂದಿರನ್ನು 'ಅಣ್ಣ' ಎಂಬ ಬಂಧುವಾಚಿ ಗೌರವ ಪದದಿಂದಲೂ ಸಂಬೋಧಿಸುತ್ತಾರೆ. ಇದು ಕೌಟುಂಬಿಕ ಪರಿಸರದಲ್ಲಿ ಪರಸ್ಪರರಿಗೆ

ನೀಡುವ ಮರ್ಯಾದೆಯ ಸಂಕೇತವೂ, ಸಂಬಂಧದ ಸೂಚನೆಯೂ ಆಗಿದ್ದರೂ, ಲೈಂಗಿಕ ಮನೋಭಾವನೆಯನ್ನು ದೂರು ಮಾಡುವುದು. ಈ ಸಂಬೋಧನೆಯ ಹಿಂದೆ ಇರಬಹುದಾದ ಸಂಗತಿಯನ್ನು ಅಲ್ಲಗಳೆಯಲಾಗುವುದಿಲ್ಲ.

**ಕುಟುಂಬೇತರ ಸಂಬೋಧನೆ**

ಕೌಟುಂಬಿಕ ಪರಿಸರದ ಬಂಧುವರ್ಗದವರನ್ನು ಹೊರತುಪಡಿಸಿ ಇತರ ಜನವರ್ಗಗಳ ಸಂಬೋಧನೆಯನ್ನು ಕುಟುಂಬೇತರ ಸಂಬೋಧನೆ ಎಂದು ಕರೆಯಬಹುದು. ಇದನ್ನು ಇನ್ನೊಂದು ಪರಿಭಾಷೆಯಲ್ಲಿ ಹೇಳುವುದಾದರೆ, ಮನೆಯ ಹೊರಗಿನವರ ಸಂಬೋಧನೆ ಕುಟುಂಬೇತರ ಸಂಬೋಧನೆ. ಈ ಸಂಬೋಧನೆಯಲ್ಲಿ ಸ್ವಜಾತಿ ಬಂಧುಗಳು ಮಾತ್ರವಲ್ಲ ಅನ್ಯಜಾತಿ, ಅನ್ಯ ಧರ್ಮದವರೂ ಇರುತ್ತಾರೆ. ಮತ್ತು ಗುರುವರ್ಗ, ಅಧಿಕಾರವರ್ಗ, ಸ್ನೇಹವರ್ಗ, ಹಿರಿಯರು, ಕಿರಿಯರು ಮುಂತಾದ ಬೇರೆ ಬೇರೆ ವರ್ಗದವರಿದ್ದು, ಬೇರೆ ಬೇರೆ ರೀತಿಯಿಂದ ಸಂಬೋಧಿಸುವುದರಿಂದ ಈ ಪರಿಸರದ ಸಂಬೋಧನೆಯು ತುಂಬಾ ವೈವಿಧ್ಯಮಯವಾಗಿದೆ. ಸಂಬೋಧನೆಯಲ್ಲಿ ನಿಕಟತ್ವ ಮಹತ್ತರವಾದ ಪಾತ್ರ ವಹಿಸುತ್ತದೆ. ವ್ಯಕ್ತಿ ಹೆಚ್ಚು ನಿಕಟತ್ವದಿಂದ ಇದ್ದಾಗ ಗುರುಗಳು, ಅಧಿಕಾರಿಗಳು, ಹಿರಿಯರು, ಹೆಸರಿನಿಂದ ಕರೆಯುವಂತೆ, ಮುದ್ದು ಹೆಸರಿನಿಂದಲೂ ಕರೆಯಬಹುದು. ಇನ್ನೂ ಹೆಚ್ಚು ಸಲಿಗೆ ಇದ್ದಾಗ, ಅಡ್ಡ ಹೆರಿನಿಂದಲೂ ಕರೆಯುವುದುಂಟು. ಆದರೆ ಬಹುತೇಕವಾಗಿ ಹಿರಿಯರು ಹೆಸರಿನಿಂದ ಕರೆದರೆ, ಕಿರಿಯರು, ಬಂಧುವಾಚಕ ಇಲ್ಲವೆ ಸೂಚಿತ ಬಂಧುವಾಚಕದೊಡನೆ ಹೆಸರನ್ನು ಕರೆಯುತ್ತಾರೆ. ಸ್ನೇಹಿತರು ಹೆಸರಿನಿಂದ ಕರೆಯುತ್ತಾರಾದರೂ, ಹೆಚ್ಚಾಗಿ ಮುದ್ದು ಹೆಸರಿನಿಂದ ಕರೆಯುವುದು ರೂಢಿ. ಕೌಟುಂಬಿಕ ಪರಿಸರದ ಸಂಬೋಧನೆಯಲ್ಲಿ ಪಾರಂಪರಿಕ ನಂಬಿಕೆಗಳು ಇರುವ ಹಾಗೆ, ಕುಟುಂಬೇತರ ಪರಿಸರದ ಸಂಬೋಧನೆಯಲ್ಲಿ ಇರುವುದಿಲ್ಲ. ಕುಟುಂಬೇತರ ಸಂಬೋಧನೆಯಲ್ಲಿ ಯಾರು ಹೇಗೆ ಕರೆಯುತ್ತಾರೆಂಬುದನ್ನು ಒಂದು ಸಂಭವನೀಯ ಪಟ್ಟಿಯ ಮೂಲಕ ಹೀಗೆ ತೋರಿಸಬಹುದು.

| ಮೂಲರೂಪ | ಗುರುವರ್ಗ | ಅಧಿಕಾರವರ್ಗ | ಸ್ನೇಹವರ್ಗ | ಹಿರಿಯರು | ಕಿರಿಯರು |
|---|---|---|---|---|---|
| ಭೀಮಪ್ಪ | ಭೀಮಪ್ಪ | ಭೀಮಪ್ಪ | ಭೀಮ/ಭೀಮು | ಭೀಮ, ಭೀಮ್ಯ | ಭೀಮಣ್ಣ |
| ಯರಿಸ್ವಾಮಿ | ಯರಿಸ್ವಾಮಿ | ಯರಿಸ್ವಾಮಿ | ಯರಿ/ಸ್ವಾಮಿ | ಯರ್ಗ, ಯರಿ, ಸ್ವಾಮಿ | ಯರಿಸ್ವಾಮ್ಯಣ್ಣ |
| ಶರಣಪ್ಪ | ಶರಣ, ಶರಣಪ್ಪ | ಶರಣಪ್ಪ | ಶರು, ಶರಣು | ಶರಣ | ಶರಣಣ್ಣ |
| ಬೊಮ್ಮಣ್ಣ | ಬೊಮ್ಮಣ್ಣ | ಬೊಮ್ಮಣ್ಣ | ಬ್ರಹ್ಮ, ಬೊಮ್ಮ | ಬೊಮ್ಮ | ಬೊಮ್ಮಣ್ಣಣ್ಣ |
| ಸೋಮಪ್ಪ | ಸೋಮು, ಸೋಮಪ್ಪ | ಸೋಮಪ್ಪ | ಸೋಮು | ಸೋಮ | ಸೋಮಣ್ಣ |
| ತಿಮ್ಮಪ್ಪ | ತಿಮ್ಮಪ್ಪ | ತಿಮ್ಮಪ್ಪ | ತಿಮ್ಮು | ತಿಮ್ಮ, ತಿಮ್ಗ | ತಿಮ್ಮಣ್ಣ |
| ಗಂಗಮ್ಮ | ಗಂಗಮ್ಮ | ಗಂಗಮ್ಮ | ಗಂಗು | ಗಂಗಿ | ಗಂಗಮ್ಮಕ್ಕ |
| ಬಸಮ್ಮ | ಬಸಮ್ಮ | ಬಸಮ್ಮ | ಬಸು | ಬಸಿ | ಬಸಮ್ಮಕ್ಕ |
| ಸುಬ್ಬಲಕ್ಷ್ಮಮ್ಮ | ಸುಬ್ಬಲಕ್ಷ್ಮಿ | ಸುಬ್ಬಲಕ್ಷ್ಮಿ | ಸುಬ್ಬ/ಲಕ್ಕಿ, ಲಚ್ಚಿ | ಸುಬ್ಬಿ | ಸುಬ್ಬಕ್ಕ/ಲಕ್ಷ್ಮಕ್ಕ |
| ಮಾರಕ್ಕ | ಮಾರಕ್ಕ | ಮಾರಕ್ಕ | ಮಾರು | ಮಾರಿ | ಮಾರಕ್ಕ |
| ಭಾಗ್ಯಮ್ಮ | ಭಾಗ್ಯ/ಭಾಗ್ಯಮ್ಮ | ಭಾಗ್ಯಮ್ಮ | ಭಾಗ್ಯ, ಭಾಗು | ಭಾಗ್ಯ, ಭಾಗ್ಗೀ | ಭಾಗ್ಯಕ್ಕ |

ಗುರುವರ್ಗ ಮತ್ತು ಅಧಿಕಾರವರ್ಗ, ವ್ಯಕ್ತಿಯ ಹೆಸರನ್ನು ಪೂರ್ಣರೂಪದಲ್ಲಿ ಸಂಬೋಧಿಸುತ್ತಾರೆ. ನಿಕಟತ್ವ ಜಾಸ್ತಿ ಇದ್ದಾಗ ಹೆಸರನ್ನು ಮೊಟಕುಮಾಡಿ ಕರೆಯಬಹುದು. ಮತ್ತು ಮುದ್ದು ಹೆಸರುಗಳಿಂದಲೂ ಸಂಬೋಧಿಸಬಹುದು. ಇದು ಅಧಿಕಾರವರ್ಗಕ್ಕಿಂತ ಗುರುವರ್ಗದವರ ಸಂಬೋಧನೆಯಲ್ಲಿ ಹೆಚ್ಚು ಕಾಣಬರುತ್ತದೆ. ಸ್ನೇಹಿತರು ಹೆಸರಿನಿಂದ ಕರೆಯಬಹುದಾದರೂ (ಪೂರ್ಣಹೆಸರಿನಿಂದ), ಹೆಚ್ಚು ಆತ್ಮೀಯತೆಯಿದ್ದಾಗ ಮುದ್ದಿನಿಂದ ಕರೆಯುವುದೇ ಹೆಚ್ಚು. ಅಂದರೆ ಹೆಸರನ್ನು ಮೊಟಕುಗೊಳಿಸಿ '-ಉ' ಕಾರಾಂತ್ಯಗೊಳಿಸಿ ಸಂಬೋಧಿಸುತ್ತಾರೆ. ಹಿರಿಯರು ನೇರವಾಗಿ ಹೆಸರಿನಿಂದಲೂ, ಹೆಸರನ್ನು ಅಂತ್ಯ '-ಇ' ಕಾರಾಂತ್ಯಗೊಳಿಸಿಯೂ ಸಂಬೋಧಿಸುತ್ತಾರೆ. (ಪುರುಷ ಹೆಸರುಗಳಲ್ಲಿ ಅಂತ್ಯ 'ಅ' ಕಾರ ಮತ್ತು ಸ್ತ್ರೀ ಹೆಸರುಗಳಲ್ಲಿ ಅಂತ್ಯ '-ಇ' ಕಾರ ಕೆಲವು ಕಡೆ ಏಕವಚನದ ಧ್ವನಿಯನ್ನು ನೀಡುತ್ತದೆ) ಕಿರಿಯರು ಸಾಮಾನ್ಯವಾಗಿ 'ಅಣ್ಣ' ಮತ್ತು 'ಅಕ್ಕ' ಗೌರವಸೂಚಕ ಪ್ರತ್ಯಯಗಳನ್ನು ಹೆಸರಿನ ಕೊನೆಯಲ್ಲಿ ಹಚ್ಚಿ ಸಂಬೋಧಿಸುತ್ತಾರೆ.

ಸಂಬೋಧನೆಯ ಸಾಮಾನ್ಯ ನಿಯಮಗಳ ಸ್ಪಷ್ಟನೆಗಾಗಿ ಮೇಲಿನ ಹೆಸರುಗಳನ್ನು ಮಾದರಿಗಾಗಿ ಬಳಸಿಕೊಳ್ಳಲಾಗಿದೆ. ಒಂದು ಹೆಸರನ್ನು ಇತರ ಬೇರೆ ಬೇರೆ ವರ್ಗಗಳು, ಸಂಬೋಧಿಸುವ ಸಾಮಾನ್ಯಕ್ರಮವನ್ನು ಮಾತ್ರ ಇಲ್ಲಿ ಸೂಚಿಸಲಾಗಿದೆ. ವಾಸ್ತವವಾಗಿ ಈ ಸಂಬೋಧನೆಯಲ್ಲಿ ಯಾರು, ಯಾವಾಗ, ಹೇಗೆ ಸಂಬೋಧಿಸುತ್ತಾರೆಂದು ನಿಕರವಾಗಿ ಹೇಳುವುದು ಕಷ್ಟ.

## ೪.೫ ಸಾಮಾಜಿಕ ಆವರಣಗಳು : ಜಾತಿ : ವರ್ಗ

ಭಾರತೀಯ ಸಮಾಜ ಜಾತಿ ಮತ್ತು ವರ್ಗ ಆಧಾರಿತ, ಏಣಿಶ್ರೇಣಿ ವ್ಯವಸ್ಥೆಯನ್ನು ಹೊಂದಿದೆ. ಪರಿಣಾಮವಾಗಿ ಬೇರೆ ಬೇರೆ ಜಾತಿ, ವರ್ಗಗಳು ಬೇರೆ ಬೇರೆ ಸ್ಥಾನಮಾನಗಳನ್ನು ಪಡೆದಿವೆ. ಪರಸ್ಪರರ ನಡುವಿನ ಭಾಷಾ ಬಳಕೆ ಮತ್ತು ವ್ಯಕ್ತಿನಾಮ ಸಂಬೋಧನೆ, ಆಯಾ ವರ್ಗಗಳ ಸ್ಥಾನಮಾನಗಳಿಗೆ ಅನುಗುಣವಾಗಿ ಅಭಿವ್ಯಕ್ತವಾಗುತ್ತಿರುತ್ತದೆ. "ಒಂದು ಭಾಷಾ ಸಮುದಾಯದ ಭಾಷಿಕರ ವಯಸ್ಸು, ಲಿಂಗ, ಜಾತಿ ಇಂತಹ ಸಾಮಾಜಿಕ ಅಂಶಗಳು ಆ ಭಾಷೆಯ ರಚನಾತ್ಮಕ ಅಂಶಗಳ ಬದಲಾವಣೆಗೆ (ಧ್ವನಿ, ಪದ, ವಾಕ್ಯ) ಕಾರಣವಾಗುತ್ತದೆ."[೧೩] ಬ್ರಾಹ್ಮಣರು ಸಾಮಾಜಿಕವಾಗಿ ಉನ್ನತ ಸ್ಥಾನಮಾನವನ್ನು ಪಡೆದವರಾಗಿದ್ದರೆ, ಹರಿಜನರು ಸಾಮಾಜಿಕವಾಗಿ ಅತ್ಯಂತ ಕೆಳ ಸ್ಥಾನಮಾನವನ್ನು ಪಡೆದವರಾಗಿದ್ದಾರೆ. ಈ ಕಾರಣದಿಂದ ಸಹಜವಾಗಿಯೇ ಈ ಎರಡೂ ಜಾತಿಗಳ ನಡುವೆ ಸಂಬೋಧನೆಯಲ್ಲಿ ಭಿನ್ನತೆಗಳಿವೆ. ವ್ಯಕ್ತಿನಾಮ ಸಂಬೋಧನೆಯು ಪರಸ್ಪರ ವ್ಯಕ್ತಿಗಳ ಮಧ್ಯದ ಭಾಂದವ್ಯವನ್ನು ಸೂಚಿಸುತ್ತಿರುವುದರಿಂದ ವ್ಯಕ್ತಿನಾಮ ಸಂಬೋಧನೆಯ ಮೂಲಕ, ಸಮಾಜದ ಅಂತರ್ ಸಂಬಂಧಗಳನ್ನು ಗ್ರಹಿಸಬಹುದು. "ಹಲವು ಭಾಷಾ ವರ್ಗಗಳಿರುವ ಭಾಷಾಸಮಾಜದಲ್ಲಿ ನಾಮ ಬಳಕೆಯನ್ನು ನೋಡುವುದರಿಂದ ಆ ಸಮಾಜದ ಪ್ರಾಬಲ್ಯ, ಅನನ್ಯತೆ, ವ್ಯಕ್ತಿ ವ್ಯಕ್ತಿಗಳ ನಡುವಿನ ಸಂಬಂಧಗಳನ್ನು ತಿಳಿಯಬಹುದಾಗಿದೆ."[೧೪] ಭಾರತೀಯ ಧರ್ಮಗಳಲ್ಲಿ ಸಮಾಜದ ನಾಲ್ಕು ವರ್ಗಗಳಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ. ಇವರು ಎಂಥ ಹೆಸರುಗಳನ್ನು ಪಡೆಯಬೇಕು ಮತ್ತು ಯಾವ ವರ್ಗ ಇನ್ನೊಂದು ವರ್ಗವನ್ನು ಹೇಗೆ ಸಂಬೋಧಿಸಬೇಕು ಎಂಬುದರ ಬಗೆಗೆ ಸೂಚನೆಗಳಿವೆ. ಹೀಗಾಗಿ ವ್ಯಕ್ತಿನಾಮ ಸಂಬೋಧನೆಯ ಅಸಮಾನತೆಗೆ, ವೈವಿಧ್ಯತೆಗೆ, ಜಾತಿ ವರ್ಗಗಳು

ಮೂಲಕಾರಣಗಳಾಗಿವೆ ಎಂಬುದು ಸ್ಪಷ್ಟವಾಗುತ್ತದೆ. "ಬ್ರೌನ್ ಮತ್ತು ಫೋರ್ಡ್ (Hymes : ೧೯೬೪ b) ಅಮೇರಿಕನ್ ಸಮಾಜದ ವ್ಯಾಪಾರಸಂಸ್ಥೆಯಲ್ಲಿ ಕಾರ್ಯ ನಿರ್ವಾಹಕರು ಸಂಶೋಧನ ಕ್ರಮವನ್ನು ಅನುಸರಿಸುವುದರ ಬಗ್ಗೆ ನಡೆಸಿದ ಅಧ್ಯಯನಕ್ಕೆ 'ಎರ್ವಿನ್ ಟ್ರಿಪ್' ವಿವರಣೆ ಕೊಡುತ್ತಾ ವಯಸ್ಸಿನ ವ್ಯತ್ಯಾಸ, ಉದ್ಯೋಗ ಹಾಗೂ ಶ್ರೇಣಿಯಲ್ಲಿ ಕಂಡುಬರುವ ವ್ಯತ್ಯಾಸವೇ ನಾಮ ಸಂಬೋಧನೆಗಳ ವೈಚಿತ್ರಕ್ಕೆ ಕಾರಣವಾಗಿರುತ್ತದೆ. ಗಾಢ ಸಂಬಂಧವು ಹಲವಾರು ನಾಮಗಳನ್ನು ಬಳಸುವಲ್ಲಿ ಪಾತ್ರವನ್ನು ವಹಿಸುತ್ತದೆ ಎಂದು ಹೇಳುತ್ತಾನೆ."[೧೯] ಹಲವು ಸಾಮಾಜಿಕ ಸ್ತರ ವಿನ್ಯಾಸಗಳಿಂದ ಕೂಡಿರುವ ಸಮಾಜದಲ್ಲಿ ನಾಮ ಸಂಬೋಧನೆಯು ಹಲವು ಸಾಮಾಜಿಕ ಪರಿಸರಗಳಲ್ಲಿ ನಿಷೇಧಿತ ವಿಷಯವಾಗಿದೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಹಲವು ಜಾತಿ, ವರ್ಗಗಳಿಗೆ ಸೇರಿದ, ಬಹು ಭಾಷಾ ಸಮೂಹಗಳಿವೆ. ಪರಸ್ಪರ ವರ್ಗಗಳು ಸಾಮಾಜಿಕ ಸ್ಥಾನಮಾನಗಳಿಗೆ ಅನುಗುಣವಾಗಿ ಸಂಬೋಧಿಸುವ, ವ್ಯಕ್ತಿನಾಮ ಸಂಬೋಧನಾ ಸ್ವರೂಪವನ್ನು ಇಲ್ಲಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

ಸಾಮಾಜಿಕ ಸ್ತರವಿನ್ಯಾಸದಲ್ಲಿ ಜಾತಿ ಮತ್ತು ವರ್ಗಗಳು ಪ್ರಧಾನ ರೂಪಗಳಾಗಿವೆ. ಸಾಮಾಜಿಕ ವರ್ಗವು ಸಮಾಜದ ಅಥವಾ ಸಮುದಾಯದ ಒಂದು ಅಂಗವಾಗಿದ್ದು, ಆರ್ಥಿಕ ಸಂಪತ್ತಿನ ಆಧಾರದ ಮೇಲೆ ಇತರ ಅಂಗಗಳಿಂದ ಬೇರೆಯಾಗಿರುತ್ತದೆ. ಜಾತಿಯು ಕೂಡ ಸಾಮಾಜಿಕ ವರ್ಗದಂತೆ ಸಾಮಾಜಿಕ ವ್ಯವಸ್ಥೆಯಾಗಿದೆ. ಸಾಮಾಜಿಕ ಜಾತಿ, ವರ್ಗಗಳಲ್ಲಿ ಮೇಲು-ಕೀಳು ಎಂಬ ತಾರತಮ್ಯ ಭಾವನೆ ಇರುತ್ತದೆ. ಬ್ರಾಹ್ಮಣರು ಉನ್ನತ ಶ್ರೇಣಿಗೆ ಸೇರಿದರೆ, ಹರಿಜನರು ಕೆಳ ಶ್ರೇಣಿಗೆ ಸೇರುತ್ತಾರೆ. ಆದುದರಿಂದ ಹರಿಜನರು ಬ್ರಾಹ್ಮಣರನ್ನು ಹೆಸರಿನಿಂದ ಸಂಬೋಧನೆ ಮಾಡುವಂತಿಲ್ಲ. ನಿಷೇಧಿಸಲ್ಪಟ್ಟಿದೆ. ಗ್ರಾಮೀಣ ಪರಿಸರದಲ್ಲಿ ಈ ಪದ್ಧತಿ ಈಗಲೂ ಮುಂದುವರೆದಿರುವುದನ್ನು ಗಮನಿಸಬಹುದು. (ಹೊಸ ತಲೆಮಾರಿನವರಿಗಿಂತ, ಹಳೆಯ ತಲೆಮಾರಿನವರಲ್ಲಿ ಈ ನಂಬಿಕೆ ಹೆಚ್ಚು ಕಾಣಬರುತ್ತದೆ) ಒಂದು ವೇಳೆ ಹೆಸರಿನಿಂದ ಸಂಬೋಧಿಸಿದರೆ, ಅಂಥವರಿಗೆ ಹಿಂದೆ ಉಗ್ರ ಶಿಕ್ಷೆ ವಿಧಿಸಲಾಗುತ್ತಿತ್ತು. (ಹೆಚ್ಚಾಗಿ ನಾಲಿಗೆ ಸೀಳಲಾಗುತ್ತಿತ್ತು) ಇದು ನಾಮ ಸಂಬೋಧನಾ ವ್ಯವಸ್ಥೆಯ ಸಂಕೀರ್ಣತೆಯನ್ನೂ ಮತ್ತು ಅದಕ್ಕಿರುವ ಸಾಮಾಜಿಕ ಆಯಾಮಗಳನ್ನು ಸ್ಪಷ್ಟಪಡಿಸುತ್ತದೆ.

ಸಾಮಾಜಿಕವಾಗಿ ಜಾತಿ ಮತ್ತು ವರ್ಗಗಳ ನಡುವೆ ನಾಮ ಸಂಬೋಧನೆಯು ಭಿನ್ನವಾಗಿರುತ್ತದೆ. ಅಲ್ಲದೆ ಜಾತಿ-ಜಾತಿಗಳ ಮಧ್ಯೆ ಹಾಗೂ ವರ್ಗ-ವರ್ಗಗಳ ಮಧ್ಯೆ ತುಂಬಾ ವ್ಯತ್ಯಾಸಗಳಿವೆ. ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ನಾಮ ಸಂಬೋಧನೆಯ ಸಾಮಾಜಿಕ ಆಯಾಮಗಳನ್ನು ಇಲ್ಲಿ ವಿವರವಾಗಿ ಚರ್ಚಿಸಲಾಗುವುದು.

### ೪.೫.೧ ಮೇಲ್ಜಾತಿ - ಕೆಳಜಾತಿ

ಸಾಮಾನ್ಯವಾಗಿ ಮೇಲ್ಜಾತಿಗಳು-ಮೇಲ್ಜಾತಿಗಳ ಜತೆ, ಕೆಳಜಾತಿಗಳು-ಕೆಳಜಾತಿಗಳ ಜತೆ ಹೆಚ್ಚಾಗಿ ಸಂಬಂಧವನ್ನು ಬೆಳೆಸುವುದುಂಟು. ಪರಸ್ಪರ ಸಮಾನ ಜಾತಿಗಳ ನಡುವೆ ಸಮಾನ ಗೌರವ, ಸ್ಥಾನಮಾನಗಳು ಇರುತ್ತವೆ. ಮೇಲ್ಜಾತಿಯವರ ಹಬ್ಬ, ಉತ್ಸವ, ಆಚರಣೆಗಳಲ್ಲಿ ಮೇಲ್ಜಾತಿಯವರೇ (ಸಮಾನ ಜಾತಿಗಳು) ಹೆಚ್ಚಾಗಿ ಪಾಲ್ಗೊಳ್ಳುತ್ತಾರೆ. ಅದೇ ರೀತಿ ಕೆಳಜಾತಿಯವರ ಹಬ್ಬ, ಉತ್ಸವ, ಆಚರಣೆಗಳಲ್ಲಿ ಕೆಳಜಾತಿಯವರು

ಹೆಚ್ಚಾಗಿ ಪಾಲ್ಗೊಳ್ಳುತ್ತಾರೆ. ಸಾಮಾಜಿಕವಾಗಿ ಮೇಲ್ಜಾತಿಯವರಾದ ಬ್ರಾಹ್ಮಣರು, ನಂತರದ ಶ್ರೇಣಿಯ ಮೇಲ್ಜಾತಿಗಳಾದ ಲಿಂಗಾಯತ ಮತ್ತು ಒಕ್ಕಲಿಗರ ಮಧ್ಯೆ ಅನ್ಯೋನ್ಯ ಸಂಬಂಧಗಳು ಇರುತ್ತವೆ. ಇಬ್ಬರ ಮಧ್ಯೆ ಸಮಾನ ಗೌರವಗಳೂ ಇರುತ್ತವೆ. ಸಂಬೋಧನೆಯಲ್ಲಿಯೂ ಪರಸ್ಪರರು ಗೌರವಕೊಟ್ಟು ಕರೆಯುತ್ತಾರೆ. ಇವರು ಏಕವಚನದಿಂದ ಸಂಬೋಧಿಸುವುದು ತೀರಾ ಕಡಿಮೆಯೆಂದೇ ಹೇಳಬಹುದು. ಬ್ರಾಹ್ಮಣರು, ಲಿಂಗಾಯತ ಮತ್ತು ಒಕ್ಕಲಿಗರನ್ನು ಹೆಸರಿನಿಂದ ಕರೆಯುವಂತೆ, ಲಿಂಗಾಯತ ಮತ್ತು ಒಕ್ಕಲಿಗರೂ, ಬ್ರಾಹ್ಮಣರನ್ನು ಹೆಸರಿನಿಂದ ಕರೆಯುತ್ತಾರೆ. ಸಾಮಾನ್ಯವಾಗಿ ಹೆಸರಿಡಿದು ಸಂಬೋಧಿಸುವಾಗ, ಹೆಸರಿನ ಅಂತ್ಯದಲ್ಲಿ ಗೌರವಸೂಚಕ ಪದವನ್ನು ಸೇರಿಸಿ ಕರೆಯುತ್ತಾರೆ. ಉದಾಹರಣೆಗೆ ಬಸಪ್ಪರೇ, ಶಿವಪ್ಪರೇ, ಕೃಷ್ಣಮೂರ್ತಿಗಳೇ (ಕೃಷ್ಣಮೂರ್ತಿಯವರೆ), ಲಿಂಗನಗೌಡರೇ, ಕೇಶವಭಟ್ಟರೆ, ಶಿವಮ್ಮರೆ, ಗಂಗಮ್ಮರೆ, ಭೀಮಮ್ಮರೆ ಇತ್ಯಾದಿ. ಇಲ್ಲಿ ಪ್ರತಿ ಹೆಸರಿನ ಕೊನೆಗೆ 'ರೆ' ಎಂಬ ಗೌರವಸೂಚಕ ಪ್ರತ್ಯಯ ಬಳಕೆಯಾಗುತ್ತದೆ. ('ರೆ' ಎಂಬುದು 'ಅವರು' ಎಂಬುದರ ಸವಕಳಿ ರೂಪ.) ಕೆಲವು ಸಂದರ್ಭಗಳಲ್ಲಿ ಹೆಸರನ್ನು ಕರೆಯದೆ, ಬರೀ ವೃತ್ತಿ/ಜಾತಿ ಸೂಚಕ ಪದಗಳಿಂದ ಸಂಬೋಧಿಸುವುದುಂಟು. (ವೃತ್ತಿ/ಜಾತಿ ಸೂಚಕಗಳು, ಹೆಸರಿನ ವಾರ್ಗಿಕ ಘಟಕಗಳೂ ಆಗಿರಬಹುದು) ಉದಾಹರಣೆಗೆ ಬ್ರಾಹ್ಮಣರು, ಲಿಂಗಾಯತ, ಒಕ್ಕಲಿಗರನ್ನು ಕರೆಯುವಾಗ, ಗೌಡ್ರೆ, ಪಟೇಲ್ ರೇ, ಗೊಂಚಿಕಾರ್‍ರೇ, ಇತ್ಯಾದಿಯಾಗಿ ಕರೆದರೆ, ಲಿಂಗಾಯತ ಮತ್ತು ಒಕ್ಕಲಿಗರು, ಬ್ರಾಹ್ಮಣರನ್ನು ಶಾಸ್ತ್ರಿಗಳೇ, ರಾಯರೆ, ಪುರೋಹಿತರೆ, ಭಟ್ಟರೆ, ಶಾನುಭೋಗರೆ, ಅರ್ಚಕರೆ ಇತ್ಯಾದಿಯಾಗಿ ಕರೆಯುತ್ತಾರೆ. ಲಿಂಗಾಯತ ಮತ್ತು ಒಕ್ಕಲಿಗ ಹಾಗೂ ಬ್ರಾಹ್ಮಣರನ್ನು ಸಂಬೋಧಿಸುವಾಗ ಬಳಕೆಯಾಗುವ ವೃತ್ತಿ/ಜಾತಿ ಸೂಚಕ ಪದಗಳು ಆಯಾ ಜಾತಿಗಳಿಗೆ ನಿರ್ದಿಷ್ಟವಾಗಿರುವುದು ಸಂಬೋಧನೆಯಿಂದ ಸ್ಪಷ್ಟವಾಗುತ್ತದೆ.

ಸಾಮಾಜಿಕವಾಗಿ ನಾಯಕ, ಲಂಬಾಣಿ, ಭೋವಿ, ಹರಿಜನ (ಮಾದಿಗ) ಕೊರಚ ಮುಂತಾದ ಜಾತಿಗಳು, ಕೆಳಜಾತಿಗಳು ಎಂದು ಪರಿಗಣಿಸಲ್ಪಟ್ಟಿವೆ. ನಾಯಕ, ಲಂಬಾಣಿ, ಭೋವಿ, ಕೊರಚ, ಈ ನಾಲ್ಕು ಸಮುದಾಯಗಳ ನಡುವಿನ ಸಂಬೋಧನೆ ಒಂದು ಬಗೆಯದಾದರೆ, 'ಹರಿಜನ' ಸಮುದಾಯದೊಂದಿಗಿನ ಸಂಬೋಧನೆ ಇನ್ನೊಂದು ಬಗೆಯದಾಗಿದೆ. ನಾಯಕ, ಲಂಬಾಣಿ, ಭೋವಿ, ಕೊರಚ ಸಮುದಾಯಗಳು ಪರಸ್ಪರರನ್ನು ಗೌರವದಿಂದ ಸಂಬೋಧನೆ ಮಾಡುತ್ತಾರೆ. ಪರಸ್ಪರ ಒಬ್ಬರಿಗೊಬ್ಬರು ಹೆಸರಿನಿಂದ ಕರೆಯುತ್ತಾರೆ. ಇಲ್ಲಿ ಹೆಸರನ್ನು ಬಳಸುವಾಗ ಗೌರವಸೂಚಕವಾಗಿ ಯಾವುದೇ ವೃತ್ತಿ/ಜಾತಿ ಸೂಚಕ ಪದಗಳು ಬಳಕೆಯಾಗುವುದಿಲ್ಲ. 'ನಾಯಕ'ರನ್ನು ಕೆಲವು ಪ್ರದೇಶಗಳಲ್ಲಿ ಗೌಡ, ಪಟೇಲ ಎಂದು ಕರೆಯುವುದು ಕಾಣಬರುತ್ತದೆ. ಅಲ್ಲದೆ ಪಾಳೆಯಗಾರರ ವಂಶಸ್ಥರನ್ನು, ಮೇಲ್ಜಾತಿಯವರೂ ಕೂಡ ಗೌರವದಿಂದಲೇ ಸಂಬೋಧನೆ ಮಾಡುತ್ತಾರೆ. ಈ ನಾಲ್ಕು ಸಮುದಾಯಗಳು ಹರಿಜನರನ್ನು ಹೆಸರಿನಿಂದ (ಏಕವಚನದಿಂದ) ಸಂಬೋಧಿಸುತ್ತಾರೆ. (ಭರಮಪ್ಪ > ಭರಮ, ಹೊನ್ನೂರಪ್ಪ > ಹೊನ್ನೂರ್ಗ) ಆದರೆ ಹರಿಜನರು ಈ ಸಮುದಾಯದವರನ್ನು ಹೆಸರಿನಿಂದ ಕರೆಯುವುದಿಲ್ಲ. ಬದಲಿಗೆ, ಗೌಡ, ಸಾಹುಕಾರ, ಗೊಂಚಿಕಾರ, ಸಾಹುಕಾತಿ (ತಿ) ಗೊಂಚಿಕಾತಿ (ತಿ) ಗೌಡಸಾನಿ ಮುಂತಾಗಿ ಗೌರವಸೂಚಕ ಪದಗಳಿಂದ ಸಂಬೋಧಿಸುವುದುಂಟು. ಒಂದು ವೇಳೆ ಹೆಸರಿಂದ ಕರೆದರೆ, ಜನ ವಕ್ರದೃಷ್ಟಿಯಿಂದ ನೋಡುತ್ತಾರೆ.

ಮೇಲ್ಜಾತಿಯವರು ಕೆಳಜಾತಿಯವರನ್ನು ಕರೆಯುವಾಗ ಏಕವಚನದಿಂದ ಕರೆದರೆ, ಕೆಳಜಾತಿಯವರು, ಮೇಲ್ಜಾತಿಯವರನ್ನು ಗೌರವದಿಂದ ಕರೆಯುತ್ತಾರೆ. ಮೇಲ್ಜಾತಿಯ ಕಿರಿಯ ವಯಸ್ಸಿನವರು ಕೆಳಜಾತಿಯ ಹಿರಿಯ ವಯಸ್ಸಿನವರನ್ನು ಏಕವಚನದಿಂದ ಸಂಬೋಧಿಸುತ್ತಾರೆ!. ಆದರೆ ಕೆಳಜಾತಿಯ ಹಿರಿಯವಯಸ್ಸಿನವರು ಮೇಲ್ಜಾತಿಯ ಕಿರಿಯ ವಯಸ್ಸಿನವರನ್ನು ಏಕವಚನದಿಂದ ಕರೆಯುವಂತಿಲ್ಲ. ಕರೆಯುವುದಿಲ್ಲ. ಗೌರವದಿಂದಲೇ ಸಂಬೋಧಿಸುತ್ತಾರೆ. ಮೇಲ್ಜಾತಿಯ ಹಿರಿಯ ಮತ್ತು ಕಿರಿಯ ವಯಸ್ಸಿನವರಿಗೆ, ಕೆಳಜಾತಿಯ ಹಿರಿಯ ವಯಸ್ಸಿನವರು ಸಮಾನ ಗೌರವವನ್ನು ಕೊಡಬೇಕಾಗುತ್ತದೆ. ಕೆಳಜಾತಿಯವರು ಮೇಲ್ಜಾತಿಯವರನ್ನು ಸಂಬೋಧಿಸುವಾಗ ತಂದೆಗೆ 'ಗೌಡ' ಸಾಹುಕಾರ ಎಂದೂ, ತಾಯಿಗೆ ಗೌಡತಿ, ಸಾಹುಕಾರ್ತಿ ಎಂದು ಕರೆಯುತ್ತಾರೆ. ಇವರ ತಮ್ಮಂದಿರಿಗೆ ಅಥವಾ ಮಕ್ಕಳಿಗೆ 'ಸಣ್ಣಗೌಡ', 'ಸಣ್ಣಸಾಹುಕಾರ', 'ಸಣ್ಣಗೌಡತಿ', 'ಸಣ್ಣ ಸಾಹುಕಾರ್ತಿ' ಎಂದು ಕರೆಯುತ್ತಾರೆ. ಚಿತ್ರದುರ್ಗ ಪರಿಸರದಲ್ಲಿ ನಾಯಕ, ಲಂಬಾಣಿ, ಬೋವಿ, ಕೊರಚ ಸಮುದಾಯಗಳಿಗಿಂತ, ಇದು ಹರಿಜನರ ಸಂಬೋಧನೆಯಲ್ಲಿ ಹೆಚ್ಚು ವ್ಯಾಪಕವಾಗಿ ಕಾಣಬರುತ್ತದೆ. ಸಮಾಜದ ಕೆಳ, ಮಧ್ಯಮ ಜಾತಿಗಳು, ಸಮಾಜದ ಮೇಲ್ಜಾತಿಯವರಾದ ಬ್ರಾಹ್ಮಣ, ಲಿಂಗಾಯತ, ಒಕ್ಕಲಿಗರನ್ನು ಗೌರವದಿಂದ ಸಂಬೋಧನೆ ಮಾಡಿದರೆ, ಬ್ರಾಹ್ಮಣ, ಲಿಂಗಾಯತ, ಒಕ್ಕಲಿಗರು -ಇತರ ಕೆಳಸಮುದಾಯಗಳನ್ನು ಸಾಮಾನ್ಯವಾಗಿ ಏಕವಚನದಿಂದ ಕರೆಯುತ್ತಾರೆ. ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಹಿರಿಯರು ಕಿರಿಯರನ್ನು ಏಕವಚನದಿಂದ ಅಥವಾ ಹೆಸರಿಡಿದು ಕರೆದರೆ, ಕಿರಿಯರು ಹಿರಿಯರನ್ನು ಗೌರವದಿಂದ ಕರೆಯುತ್ತಾರೆ. ಎಂಬ ತತ್ವಕ್ಕೆ ನಮ್ಮ ಸಮಾಜದ ಒಳಗೆ ವೈರುಧ್ಯಗಳೂ ಇವೆ ಎಂಬುದು ಗಮನಾರ್ಹ. ಮೇಲ್ಜಾತಿಯವರು ಕೆಳಜಾತಿಯವರನ್ನು, ಕೆಳಜಾತಿಯವರು ಮೇಲ್ಜಾತಿಯವರನ್ನು ಯಾವ ರೀತಿ ಸಂಬೋಧಿಸುತ್ತಾರೆ ಎಂಬುದನ್ನು ಕೆಲವು ಹೆಸರುಗಳ ಮೂಲಕ ಚರ್ಚಿಸಬಹುದು.

**ಕೆಳಜಾತಿಯವರ ಹೆಸರನ್ನು ಮೇಲ್ಜಾತಿಯವರು ಸಂಬೋಧಿಸುವ ಕ್ರಮ**

| ಮೂಲಹೆಸರು | ಹಿರಿಯರು/ಕಿರಿಯರು |
|---|---|
| ನಿಂಗಪ್ಪ | ನಿಂಗ, ನಿಂಗ್ಯಾ |
| ಮಾರಪ್ಪ | ಮಾರ, ಮಾರ್ಗ |
| ದುರುಗಪ್ಪ | ದುರುಗ |
| ಮಲಿಯಪ್ಪ | ಮಲಿಯ |
| ಕೊಲ್ಲಾರಪ್ಪ | ಕೊಲ್ಲಾರ/ರಿ, ಕೊಲ್ಲಾರ್ಗ, ಕೊಲ್ಲ |
| ಗಾಳೆಮ್ಮ | ಗಾಳಿ |
| ಕೆಂಚಮ್ಮ | ಕೆಂಚಿ |
| ಓಬಮ್ಮ | ಓಬಿ |
| ಎಲ್ಲಮ್ಮ | ಎಲ್ಲಿ |
| ದುರುಗಮ್ಮ | ದುರುಗಿ |
| ನಿಂಗಮ್ಮ | ನಿಂಗಿ |

ಈ ಪಟ್ಟಿಯ ಹೆಸರುಗಳನ್ನು ಗಮನಿಸಿದಾಗ ಕೆಲವು ಸೂಕ್ಷ್ಮ ಸಂಗತಿಗಳು ಅನಾವರಣಗೊಳ್ಳುತ್ತವೆ. ಕೆಳಜಾತಿಯವರ ಹೆಸರು ಮೇಲ್ಜಾತಿಯವರ ಸಂಬೋಧನೆಯಲ್ಲಿ ಅರ್ಧ ನಾಮ ಮಾತ್ರ ಬಳಕೆಯಾಗುತ್ತದೆ. ಮೇಲ್ಜಾತಿಯವರು ಕೆಳಜಾತಿಯವರ ಹೆಸರುಗಳನ್ನು ಸಂಬೋಧಿಸುವಾಗ, ಹೆಸರಿನ ಅಂತ್ಯದಲ್ಲಿರುವ ಗೌರವಸೂಚಕ ವಾರ್ಗಿಕಗಳನ್ನು ಕರೆಯುವುದಿಲ್ಲ. (ಪುರುಷ ಗೌರವವಾಚಿ - ಅಯ್ಯ, ಅಪ್ಪ, ಅಣ್ಣ, ಸ್ತ್ರೀ ಗೌರವವಾಚಿ, ಅಮ್ಮ, ಅವ್ವ, ಅಕ್ಕ) ಹೀಗೆ ಗೌರವವಾಚಿಗಳನ್ನು ಸೇರಿಸಿ ಪೂರ್ಣ ಹೆಸರಿನಿಂದ ಕರೆಯುವುದು ನಿಷೇಧಿಸಲ್ಪಟ್ಟಿದೆ. ಏಕೆಂದರೆ ಪೂರ್ಣ ಹೆಸರಿನಿಂದ ಕರೆದರೆ ಗೌರವದಿಂದ ಸಂಬೋಧನೆ ಮಾಡಿದಂತಾಗುತ್ತದೆ. ಶೂದ್ರರು ಅಥವಾ ಕೆಳಜಾತಿಯವರು ಸಮಾಜದಲ್ಲಿ ಗೌರವ ಪಡೆದುಕೊಳ್ಳುವುದಕ್ಕೆ ಅನರ್ಹರು ಎಂಬುದು ಮೇಲ್ಜಾತಿಯವರಲ್ಲಿರುವ ಒಂದು ನಂಬಿಕೆ. ಗೌರವ ಕೊಡಬಾರದೆಂಬ ಉದ್ದೇಶವೂ ಇವರಲ್ಲಿರುತ್ತದೆ. ಆ ಕಾರಣಕ್ಕಾಗಿ ಮೇಲ್ಜಾತಿಯವರ ಸಂಬೋಧನೆಯಲ್ಲಿ ಅಂದರೆ ಕೆಳಜಾತಿಯವರ ಹೆಸರುಗಳಲ್ಲಿ ವಾರ್ಗಿಕಗಳು ಬಳಕೆಯಾಗುವುದಿಲ್ಲ. ಸಂಬೋಧನೆಯಲ್ಲಿ ಮಾತ್ರವಲ್ಲ, ಬರವಣಿಗೆಯಲ್ಲೂ ಸಹ ಹಿಂದೆ ಕೆಳಜಾತಿಯವರ ಹೆಸರುಗಳಲ್ಲಿ ವಾರ್ಗಿಕಗಳು ಬಳಕೆ ಆಗುತ್ತಿರಲಿಲ್ಲ. ಇದಕ್ಕೆ ಶಾಸನ, ಕಾವ್ಯ, ಕಥೆ, ಕಾದಂಬರಿಗಳಲ್ಲಿ ಬರುವ ಕೆಳಜಾತಿಗಳ ಪಾತ್ರಗಳ ಹೆಸರುಗಳನ್ನು ಗಮನಿಸಬಹುದು. ಹಿಂದೆ ಗೌರವ ಸೂಚಕ ಪದಗಳು ಮೇಲ್ಜಾತಿಯವರ ಹೆಸರುಗಳಲ್ಲಿ ಮಾತ್ರ ಕಾಣಬರುತ್ತಿದ್ದು, ಅವುಗಳ ಬಳಕೆ, ಮೇಲ್ಜಾತಿಯವರಿಗೆ ಮಾತ್ರ ಮೀಸಲಾಗಿತ್ತು. ಮೇಲ್ಜಾತಿಯವರನ್ನು ಇತರ ಮೇಲ್ಜಾತಿಯವರು ಸಂಬೋಧಿಸುವಾಗ ಮಾತ್ರ ಬಳಕೆಯಾಗುತ್ತಿದ್ದವು. ಆ ಕಾರಣಕ್ಕಾಗಿ, ಕೆಳಜಾತಿಯವರ ಹೆಸರುಗಳಲ್ಲಿ ವಾರ್ಗಿಕಗಳನ್ನು ಅಂದರೆ ಗೌರವಸೂಚಕ ಪದಗಳನ್ನು ಬಳಸುವುದು ನಿಷೇಧಿಸಲ್ಪಟ್ಟಿತ್ತು ಎಂಬುದು ಚರಿತ್ರೆಯಿಂದ ತಿಳಿದುಬರುತ್ತದೆ. ಆ ಕಾರಣಕ್ಕಾಗಿ ಕೆಳಜಾತಿಗಳ ಹೆಸರುಗಳು ಬರೀ ನಿರ್ದಿಷ್ಟಗಳಿಂದ ಮಾತ್ರ ರಚನೆಯಾಗಿರುತ್ತಿದ್ದವು. ಮೇಲಿನ ಉದಾಹರಣೆಗಳಲ್ಲಿ ಪ್ರಸ್ತುತ ದಾಖಲೆಗಳಲ್ಲಿ ಹೆಸರು, ವಾರ್ಗಿಕಗಳಿಂದ ಕೂಡಿದ್ದರೂ ಸಂಬೋಧನೆಯಲ್ಲಿ ಬಿಟ್ಟು ಹೋಗಿರುವುದನ್ನು ಗಮನಿಸಬಹುದು. ಪುರುಷ ಹೆಸರುಗಳನ್ನು ಅಂತ್ಯ -ಅ, -ಯ, (ನಿಂಗ್ಯಾ) -ಗ ಕಾರಾಂತ್ಯಗೊಳಿಸಿ ಸಂಬೋಧಿಸಿದರೆ, ಸ್ತ್ರೀ ಹೆಸರುಗಳನ್ನು '-ಇ' ಕಾರಾಂತ್ಯ ಮಾಡಿ ಏಕವಚನದಿಂದ ಸಂಬೋಧಿಸುತ್ತಾರೆ. ಮತ್ತು ಸಂಬೋಧನೆ ಮಾಡುವಾಗ ಪುರುಷ ಹೆಸರಿನ ಆದಿ, ಅಂತ್ಯದಲ್ಲಿ ಲೇ, ಲೋ, ಏನೋ, ಬಾರಲೇ, ಬಾರಲೋ ಎಂಬ ಪದಗಳನ್ನು ಸೇರಿಸಿ ಸಂಬೋಧಿಸಿದರೆ (ಲೇ-ದುರುಗ, ಲೋ-ದುರುಗ, ಏನೋ-ದುರುಗ, ಬಾರಲೇ-ದುರುಗ, ಬಾರಲೋ-ದುರುಗ, ದುರುಗ-ಲೇ, ದುರುಗ-ಲೋ, ದುರುಗ-ಏನೋ, ದುರುಗ-ಬಾರಲೇ, ದುರುಗ ಬಾರೊಲೋ) ಸ್ತ್ರೀ ಹೆಸರಿನ ಆದಿ ಅಂತ್ಯದಲ್ಲಿ ಲೇ, ಲೋ, ಏನೇ, ಬಾರೆ - ಮುಂತಾದ ಪದಗಳನ್ನು ಸೇರಿಸಿ ಸಂಬೋಧಿಸುತ್ತಾರೆ. (ಲೇ-ಗಾಳಿ, ಲೋ-ಗಾಳಿ, ಏನೇ-ಗಾಳಿ, ಬಾರೆ-ಗಾಳಿ, ಗಾಳಿ-ಲೇ, ಗಾಳಿ-ಲೋ, ಗಾಳಿ-ಏನೇ, ಗಾಳಿ-ಬಾರೆ). ವ್ಯಕ್ತಿನಾಮ ಸಂಬೋಧನೆಯಲ್ಲಿ ಬಳಕೆಯಾಗುವ ಈ ಪದಗಳು, ಸಂಬೋಧನೆಯಲ್ಲಿ ವ್ಯಕ್ತಿಯನ್ನು ಗಮನ ಸೆಳೆಯುವುದಕ್ಕೆ ಬಳಕೆಯಾಗುವಂತ ಪದಗಳು. ಆದರೂ ಈ ಪದಗಳು ಅಗೌರವ ಸೂಚಕ ಪದಗಳಾಗಿದ್ದು, ವ್ಯಕ್ತಿ ನಾಮ ಸಂಬೋಧನೆಯಲ್ಲಿ ಈ ಪದಗಳನ್ನು ಬಳಸುವುದು, ವ್ಯಕ್ತಿಯನ್ನು ಅಗೌರವದಿಂದ ಕರೆದಂತಾಗುತ್ತದೆ. 'ಅಯ್ಯಾ ಎಂದರೆ ಸ್ವರ್ಗ', ಎಲವೋ ಎಂದರೆ 'ನರಕ' ಎಂಬ ಬಸವಣ್ಣನವರ ವಚನದ ಸಾಲನ್ನು ಇಲ್ಲಿ ಉಲ್ಲೇಖಿಸಬಹುದು. ಮೇಲ್ಜಾತಿಯವರು ಕೆಳಜಾತಿಯವರನ್ನು ಕಾಣುವ ಬಗೆಯನ್ನು ವ್ಯಕ್ತಿನಾಮ ಸಂಬೋಧನೆಯಿಂದ ತಿಳಿಯಬಹುದು. ಕೆಲವು ಸಂದರ್ಭದಲ್ಲಿ ಹೆಸರನ್ನು ಬಳಸದೆ ಕೇವಲ ಸಂಬೋಧನ (ಲೇ, ಬಾರೋ, ಏನೇ - ಇತ್ಯಾದಿ) ಪದಗಳಿಂದಲೂ ಸಂಬೋಧಿಸುತ್ತಾರೆ.

ಕೆಳಜಾತಿಯವರು ಮೇಲ್ಜಾತಿಯವರನ್ನು ಸಂಬೋಧಿಸುವಾಗ, ಮೇಲ್ಜಾತಿಯವರ ಹೆಸರನ್ನು ಕರೆಯುವಂತಿಲ್ಲ. ಕೆಳಜಾತಿಯವರು ಮೇಲ್ಜಾತಿಯವರ ಹೆಸರನ್ನು ಕರೆಯುವುದು ಸಮಾಜ ಬಾಹಿರವಾದುದು. ನಿಷೇಧಿಸಲ್ಪಟ್ಟ ವಿಚಾರ .ಆ ಕಾರಣದಿಂದ ಮೇಲ್ಜಾತಿಯವರನ್ನು ಸಂಬೋಧನೆ ಮಾಡುವಾಗ ಗೌರವ ಸೂಚಕ ಪ್ರತ್ಯಯಗಳನ್ನು ಉಪಯೋಗಿಸಿ ಸಂಬೋಧಿಸುವುದನ್ನು ಕಾಣುತ್ತೇವೆ. ಉದಾಹರಣೆಗೆ -

ಪುರುಷರನ್ನು ಸಂಬೋಧಿಸುವಾಗ ಬಳಸುವ ಪದಗಳು -

ಧಣಿ - ಧಣಿಗಳೆ, ಧಣ್ಯಾರೆ

ಗೌಡ - ಗೌಡ್ರ

ಸಾಹುಕಾರ - ಸಾಹುಕಾರ್ರೇ

ಗೊಂಚಕಾರ - ಗೊಂಚಿಕಾರ್ರೇ

ಬುದ್ಧಿ - ಬುದ್ಧಿಗಳೆ, ಬುದ್ದ್ಯಾರೆ

ಸ್ವಾಮಿ - ಸ್ವಾಮ್ಯಾರ್ರೇ, ಸ್ವಾಮಿಗಳೆ

ಒಡೆಯ - ಒಡೆಯರ್ರೇ

ಅಯ್ಯ - ಅಯ್ಯನವರೆ, ಐಯ್ಯನವರೆ

ದೇವರು - ದೇವರೇ, ದ್ಯಾವ್ರೇ

ಸ್ತ್ರೀಯರನ್ನು ಸಂಬೋಧಿಸುವಾಗ ಬಳಸುವ ಪದಗಳು -

ಗೌಡತಿ - ಗೌಡಸಾನಿ

ಗೊಂಚಕಾತಿ (ರ್ತಿ)

ಸಾಹುಕಾತಿ (ರ್ತಿ) (ಸೌಕಾತಿ)

ಅವ್ವನವರೆ

ಅಮ್ಮಾವರೆ, ಅಮ್ಮನವರೆ

ಅಕ್ಕವರೆ, ಅಕ್ಕನವರೆ

ಅಮ್ಮಣ್ಣಿ - ಇತ್ಯಾದಿ

ವ್ಯಕ್ತಿ ಎದುರಿಗೆ ಇದ್ದಾಗ ಗೌರವಸೂಚಕ ಪದಗಳಿಂದ ಮಾತ್ರ ಸಂಬೋಧಿಸುತ್ತಾರೆ. ವ್ಯಕ್ತಿಯ ಅನುಪಸ್ಥಿತಿಯಲ್ಲಿ ಹೆಸರನ್ನು ಬಳಸುವ ಪ್ರಸಂಗ ಬಂದಾಗ, ಹೆಸರನ್ನು ಬಳಸಿದರೂ ಸಹ ಕೊನೆಯಲ್ಲಿ ಗೌರವಸೂಚಕ ಪ್ರತ್ಯಯಗಳನ್ನು ಬಳಸುವುದು ಕಡ್ಡಾಯವಾಗಿರುತ್ತದೆ ಅಥವಾ ಕಡ್ಡಾಯವಾಗಿ ಬಳಸುತ್ತಾರೆ. ಉದಾಹರಣೆಗೆ, ಪ್ರಕಾಶ್ ಗೌಡ್ರು, ಹಂಪಣ್ಣ ಗೊಂಚಿಕಾರ, ತಿಪ್ಪಣ್ಣ ಸಾಹುಕಾರ - ಇತ್ಯಾದಿ. ಇಲ್ಲವೆ, ಸಣ್ಣ, ಧಣಿ, ದೊಡ್ಡಧಣಿ, ಸಣ್ಣಗೊಂಚಿಕಾರ, ದೊಡ್ಡಗೊಂಚಿಕಾರ - ಇತ್ಯಾದಿ. ಹೆಸರಿನ ಸ್ಥಾನದಲ್ಲಿ ವಿಶೇಷಣಗಳನ್ನು ಬಳಸಿಯೂ ಸಂಬೋಧಿಸುವುದುಂಟು. ಗೌರವ ಸೂಚಕ ಪದಗಳಿಂದ ಸಂಬೋಧನೆ ಮಾಡುವಾಗ, ವಿಧೇಯತೆ ಮತ್ತು ಹೆಚ್ಚು ಗೌರವಸೂಚಕವಾಗಿ ಬಹುವಚನ ಸೂಚಕ ಪ್ರತ್ಯಯಗಳನ್ನು ಅಂಟಿಸಿ ಕರೆಯುವುದುಂಟು.

### ೪.೫.೨ ಮೇಲ್ವರ್ಗ - ಕೆಳವರ್ಗ

ಭಾರತೀಯ ಸಾಮಾಜಿಕ ವ್ಯವಸ್ಥೆಗೆ 'ಜಾತಿ' ಬಹುಪ್ರಧಾನ ಕಾರಣವಾಗಿದೆ. ಇದರ ಒಳಗೆ ಆರ್ಥಿಕ ಆಧಾರಿತ ಸಮಾಜವೊಂದು ಪ್ರತ್ಯೇಕ ವರ್ಗವಾಗಿ ನಿರ್ಮಾಣಗೊಂಡಿದೆ. ಜಾತಿ ಆಧಾರಿತ ಸಾಮಾಜಿಕ ವ್ಯವಸ್ಥೆಗಿಂತ ಇದು ತೀರಾ ಭಿನ್ನವಾಗಿರುತ್ತದೆ. ಬಹುತೇಕವಾಗಿ ಈ ಸಮಾಜದ ನಿಯಮಗಳು, ಆರ್ಥಿಕ ಆಧಾರಿತ ವರ್ಗಗಳಿಗೆ ಅನ್ವಯವಾಗುವುದಿಲ್ಲ. ಇದು ಒಟ್ಟು ಸಮಾಜದ ಮೇಲೆ ಪರಿಣಾಮವನ್ನುಂಟು ಮಾಡಿರುತ್ತದೆ. ಈ ಹಿನ್ನೆಲೆಯಲ್ಲಿ ವ್ಯಕ್ತಿನಾಮ ಸಂಬೋಧನೆಯನ್ನು ಜಾತಿ ವ್ಯವಸ್ಥೆ ಮತ್ತು ಆರ್ಥಿಕ ವ್ಯವಸ್ಥೆಯಿಂದ ಪ್ರತ್ಯೇಕಿಸಿ ನೋಡಬೇಕಾದ ಅಗತ್ಯವಿದೆ. 'ಜಾತಿ'ಯಂತೆ 'ಆರ್ಥಿಕ' ಕಾರಣವು ವ್ಯಕ್ತಿನಾಮ ಸಂಬೋಧನೆಗೆ ಹೇಗೆ ಕಾರಣವಾಗುತ್ತದೆ ಎಂಬುದನ್ನು ಗುರುತಿಸುವುದು ಅತ್ಯಂತ ಮುಖ್ಯವಾಗಿದೆ. ಆ ಕಾರಣಕ್ಕಾಗಿ ಆರ್ಥಿಕತೆಯ ಆಧಾರದ ಮೇಲೆ 'ಮೇಲ್ವರ್ಗ' ಮತ್ತು 'ಕೆಳವರ್ಗ' ಎಂದು ಎರಡು ವರ್ಗಗಳನ್ನು ಮಾಡಿಕೊಳ್ಳಲಾಗಿದೆ. ಆರ್ಥಿಕವಾಗಿ ಶ್ರೀಮಂತವಾಗಿರುವವರನ್ನು 'ಮೇಲ್ವರ್ಗ' ಎಂದೂ, ಆರ್ಥಿಕವಾಗಿ ದುರ್ಬಲರಾಗಿರುವವರನ್ನು 'ಕೆಳವರ್ಗ'ವೆಂದೂ ಗುರುತಿಸಿಕೊಂಡಿದೆ. ಸಾಮಾಜಿಕ ವರ್ಗದಲ್ಲಿ ವ್ಯಕ್ತಿಯ ಜಾತಿಗಿಂತ ವ್ಯಕ್ತಿಯ ಅಂತಸ್ತು (ಆರ್ಥಿಕ ಸಬಲತೆ) ಬಹಳ ಮುಖ್ಯವಾಗುತ್ತದೆ. ಇದರ ಆಧಾರದ ಮೇಲೆ ಸಂಬೋಧನ ವಿಧಾನ ನಿರ್ಧರಿಸಲ್ಪಡುವುದುಂಟು. ಸಮಾಜದಲ್ಲಿ ಒಂದು ಜಾತಿ ಇತರ ಸಮಾನ ಜಾತಿಗಳೊಡನೆ ಹೆಚ್ಚಾಗಿ ಸಂಬಂಧ ಬೆಳೆಸುವಂತೆ, ಸಾಮಾಜಿಕ ವರ್ಗವೂ ಕೂಡ ಸಮಾನ ವರ್ಗದ ಜನರೊಡನೆ ಹೆಚ್ಚು ಸಂಬಂಧವನ್ನು ಬೆಳೆಸುತ್ತದೆ. "ಶ್ರೀಮಂತರು ಶ್ರೀಮಂತರ ಜೊತೆಗೆ, ಬಡವರು ಬಡವರ ಜೊತೆಗೆ ಹೆಚ್ಚಾಗಿ ಸಂಬಂಧ ಬೆಳೆಸುವುದುಂಟು."[೧೬] ಕೆಳವರ್ಗ-ಕೆಳವರ್ಗದ ನಡುವೆ, ಮೇಲ್ವರ್ಗ-ಮೇಲ್ವರ್ಗದ ನಡುವೆ ಸಾಮಾಜಿಕ ಸಂಬಂಧಗಳು ಏರ್ಪಡುವುದರಿಂದ, ಪರಸ್ಪರರನ್ನು ಗೌರವದಿಂದ ಕಾಣುತ್ತಾರೆ. ಪರಿಣಾಮವಾಗಿ ವ್ಯಕ್ತಿನಾಮ ಸಂಬೋಧನೆಯಲ್ಲಿ ಕೆಲವು ಬದಲಾವಣೆಗಳು ಘಟಿಸುತ್ತವೆ. ಮೇಲ್ವರ್ಗ, ಮೇಲ್ವರ್ಗದವರನ್ನು, ಕೆಳವರ್ಗ, ಕೆಳವರ್ಗದವರನ್ನು ಪರಸ್ಪರರು ಗೌರವದಿಂದ ಸಂಬೋಧನೆ ಮಾಡುವುದುಂಟು. "ಒಂದೇ ಸಮುದಾಯಕ್ಕೆ ಸೇರಿದ ಭಾಷಿಕರು ಅವರವರ ಸ್ಥಾನಮಾನಕ್ಕೆ ತಕ್ಕಂತೆ ಸಂಬೋಧನೆಯ ರೀತಿಯಲ್ಲಿ ವ್ಯತ್ಯಾಸವುಂಟು. ಉದಾ: ಲಿಂಗಾಯತರು ತಮ್ಮ ಸಮುದಾಯಕ್ಕೆ ಸೇರಿದ ಸ್ಥಿತಿವಂತ ಲಿಂಗಾಯತರ ಮಕ್ಕಳನ್ನು ಗೌರವದಿಂದ ಸಂಬೋಧಿಸುವುದುಂಟು."[೧೭] ಮೇಲ್ವರ್ಗದವರು ಕೆಳವರ್ಗದವರನ್ನು ಏಕವಚನದಿಂದ (ನಿರ್ದಿಷ್ಟ ಹೆಸರನ್ನು ಮಾತ್ರ ಕರೆಯುವುದು) ಕರೆದರೆ, ಕೆಳವರ್ಗದವರು ಮೇಲ್ವರ್ಗದವರನ್ನು ಗೌರವದಿಂದ ಸಂಬೋಧಿಸುತ್ತಾರೆ." ಮೇಲ್ವರ್ಗದ ಕಿರಿಯ ವಯಸ್ಸಿನವರು ಕೆಳವರ್ಗದ ಹಿರಿಯರನ್ನು ಏಕವಚನದಿಂದ ಕರೆಯುವುದುಂಟು. ಹಾಗೆಯೇ ಕೆಳವರ್ಗದ ಹಿರಿಯರು ಮೇಲ್ವರ್ಗದ ಕಿರಿಯ ವಯಸ್ಸಿನವರನ್ನು ಗೌರವದಿಂದ ಕರೆಯುವುದುಂಟು." (ಡಾ. ಎಸ್.ಎಸ್.ಅಂಗಡಿ, ಸಂಬಂಧವಾಚಕಗಳು ಮತ್ತು ಸಂಬೋಧನೆಗಳು, ಪು. ೧೫) ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದ ಕೆಳಜಾತಿಯರು (ನಾಯಕ, ಹರಿಜನ, ಬೋವಿ, ಲಂಬಾಣಿ, ಕೊರಚ ಇತ್ಯಾದಿ) ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ಮೇಲ್ಜಾತಿಯವರನ್ನು (ಬ್ರಾಹ್ಮಣ, ಲಿಂಗಾಯತ, ಒಕ್ಕಲಿಗ ಇತ್ಯಾದಿ) ಸಾಮಾನ್ಯವಾಗಿ ಹೆಸರಿನಿಂದ ಕರೆಯುತ್ತಾರೆ. ಮತ್ತು ಕೆಲವು ಸಂದರ್ಭಗಳಲ್ಲಿ ಗೌರವದಿಂದಲೂ ಸಂಬೋಧಿಸುವುದುಂಟು. ಅಂದರೆ ಕೆಳಜಾತಿಯವರು ಮೇಲ್ಜಾತಿಯವರನ್ನು, ಮೇಲ್ಜಾತಿಯವರು

ಕೆಳಜಾತಿಯವರನ್ನು ಹೆಸರಿನಿಂದ ಸಂಬೋಧಿಸುವಂತೆ ಎರಡು ವರ್ಗದವರು ಹೆಸರಿನ ಕೊನೆಗೆ ಗೌರವ ಸೂಚಕ ಪದಗಳನ್ನು ಹಚ್ಚಿ ಕರೆಯುತ್ತಿರುವುದನ್ನು ಕಾಣುತ್ತೇವೆ. ಉದಾಹರಣೆಗೆ

| ಮೂಲಹೆಸರು | ಕೆಳವರ್ಗದ ಕೆಳಜಾತಿ ಸಂಬೋಧನೆ | ಮೂಲಹೆಸರು | ಕೆಳವರ್ಗದ ಮೇಲ್ಜಾತಿ ಸಂಬೋಧನೆ |
|---|---|---|---|
| ನಾರಾಯಣ | ನಾರಾಯಣ/ನಾರಾಯಣಪ್ಪ | ಚಿತ್ರಯ್ಯ | ಚಿತ್ರಯ್ಯ, ಚಿತ್ರಪ್ಪ |
| ಕೃಷ್ಣಮೂರ್ತಿ | ಕೃಷ್ಣಮೂರ್ತಿ, ಕೃಷ್ಣಪ್ಪ | ಪೋತಪ್ಪ | ಪೋತಪ್ಪ, ಪೋತಣ್ಣ |
| ರಾಘುವೇಂದ್ರರಾವ್ | ರಾಘುವೇಂದ್ರ | ಪಾಪಣ್ಣ | ಪಾಪಣ್ಣ, ಪಾಪಯ್ಯ |
| ವೆಂಕನಗೌಡ | ವೆಂಕಣ್ಣ, ವೆಂಕನಗೌಡ | ಭೀಮಯ್ಯ | ಭೀಮ, ಭೀಮಣ್ಣ |
| ತಿಮ್ಮನಗೌಡ | ತಿಮ್ಮಣ್ಣ, ತಿಮ್ಮನಗೌಡ | ಫಕೀರಪ್ಪ | ಫಕೀರ, ಫಕೀರಪ್ಪ |
| ಪಾರ್ವತಮ್ಮ | ಪಾರ್ವತಮ್ಮ/ಪಾರ್ವತಕ್ಕ | ತಿಮ್ಮಕ್ಕ | ತಿಮ್ಮಕ್ಕ |
| ಜಾನಕಮ್ಮ | ಜಾನಕಮ್ಮ | ದೇವೀರಮ್ಮ | ದೇವಮ್ಮ, ದೇವೀರಮ್ಮ |
| ಲಕ್ಷ್ಮಿದೇವಿ | ಲಕ್ಷ್ಮಿದೇವಿ/ಲಕ್ಷ್ಮಿ, ಲಕ್ಷ್ಮಕ್ಕ | ಎಲ್ಲಮ್ಮ | ಎಲ್ಲಮ್ಮ |
| ಮುರಿಗೆಮ್ಮ | ಮುರಿಗೆಮ್ಮ/ಮುರಿಗಕ್ಕ | ಹೊನ್ನಮ್ಮ | ಹೊನ್ನಮ್ಮ |

ಸಂಬೋಧನೆಯ ವಿವಿಧ ಆಯಾಮಗಳು ಅಭಿವ್ಯಕ್ತವಾಗುವುದು ಸಮಾನ ವರ್ಗ, ಜಾತಿ ನೆಲೆಯಲ್ಲಿ ಎಂಬುದು ಗಮನಾರ್ಹ.

ಶಿಕ್ಷಣ, ಅಂತಸ್ತು, ಅಧಿಕಾರ - ಇವುಗಳಿಂದ ಸಮಾಜದಲ್ಲಿ ವ್ಯಕ್ತಿಯ ಸ್ಥಾನಮಾನ ಹೆಚ್ಚುತ್ತದೆ. ಪರಿಣಾಮವಾಗಿ ವ್ಯಕ್ತಿಯ ಜಾತಿ ಮುಖ್ಯವಾಗುವುದಿಲ್ಲ. ಪ್ರಸ್ತುತದ ಸ್ಥಿತಿಗತಿಗಳು ಮುಖ್ಯವಾಗುತ್ತವೆ. ಆಗ ಸಹಜವಾಗಿಯೇ ಜನರು ಗೌರವದಿಂದ ಕಾಣುತ್ತಾರೆ. ಅಂಥವರನ್ನು ಸಂಬೋಧಿಸುವಾಗ, ಗೌರವದಿಂದ ಸಂಬೋಧಿಸುವುದುಂಟು. ''ಶಿಕ್ಷಣ, ವೃತ್ತಿ, ಅಧಿಕಾರ ಮುಂತಾದ ಸಾಮಾಜಿಕ ಸ್ಥಾನಮಾನಗಳ ಮೇಲೇರುವಿಕೆಯಿಂದ ಹೆಸರಿನ (ಇವುಗಳ) ಬಳಕೆಯ ಮಾದರಿಗಳು ಬದಲಾಗುತ್ತಾ ಹೋಗುವುದನ್ನು ಕಾಣಬಹುದು.''[೧೮] ವ್ಯಕ್ತಿನಾಮ ಸಂಬೋಧನೆಯಲ್ಲಿ ಜಾತಿ, ವಯಸ್ಸುಗಳು ಮುಖ್ಯವಾಗಿರುವಂತೆ, ಆರ್ಥಿಕ ಸ್ಥಿತಿ-ಗತಿಗಳು ಕೂಡ ಮುಖ್ಯ ಎಂಬುದು ಮೇಲಿನ ಉಲ್ಲೇಖದಿಂದ ಸ್ಪಷ್ಟವಾಗುತ್ತದೆ. ಈ ಹಿನ್ನಲೆಯಲ್ಲಿ ಕೆಳವರ್ಗ ಮತ್ತು ಮೇಲ್ವರ್ಗಗಳ ನಡುವಿನ ಸಂಬೋಧನ ವಿಧಾನವನ್ನು ಇಲ್ಲಿ ಚರ್ಚಿಸಲಾಗುವುದು. ಮೇಲ್ವರ್ಗದ ಮೇಲ್ಜಾತಿಯವರು, ಕೆಳವರ್ಗದ ಕೆಳಜಾತಿ ಮತ್ತು ಮೇಲ್ಜಾತಿಯವರನ್ನು ಹಾಗೂ ಮೇಲ್ವರ್ಗದ ಕೆಳಜಾತಿಯವರು, ಕೆಳವರ್ಗದ ಕೆಳಜಾತಿ ಮತ್ತು ಮೇಲ್ಜಾತಿಯವರನ್ನು ಏಕವಚನದಿಂದಲೂ, ಹೆಸರಿನಿಂದಲೂ ಕರೆಯುತ್ತಾರೆ. ಇವರ ಸಂಬೋಧನೆಯಲ್ಲಿ ಯಾವುದೇ ಗೌರವ ಸೂಚಕ ಪದಗಳು ಬಳಕೆಯಾಗುವುದಿಲ್ಲ. ಆದರೆ ಕೆಳವರ್ಗದ, ಕೆಳಜಾತಿ ಮತ್ತು ಮೇಲ್ಜಾತಿಯವರು, ಮೇಲ್ವರ್ಗದ ಕೆಳಜಾತಿ ಮತ್ತು ಮೇಲ್ಜಾತಿಯವರನ್ನು ಸಂಬೋಧಿಸುವಾಗ ಗೌರವದಿಂದ ಸಂಬೋಧನೆ ಮಾಡುತ್ತಾರೆ. ಕೆಳಜಾತಿಯವರು, ಮೇಲ್ಜಾತಿಯವರ ಹೆಸರನ್ನು ಸಂಬೋಧಿಸುವುದು ನಿಷೇಧವಾಗಿರುವಂತೆ, ಕೆಳವರ್ಗದ ಕೆಳಜಾತಿ ಮತ್ತು ಮೇಲ್ಜಾತಿಯವರು, ಮೇಲ್ವರ್ಗದ ಕೆಳಜಾತಿಯವರನ್ನು ಹೆಸರಿಡಿದು ಕರೆಯುವುದೂ ನಿಷೇಧವಾಗಿದೆ. ನಮ್ಮ ಸಾಮಾಜಿಕ ಸಂದರ್ಭದಲ್ಲಿ ಮೇಲ್ಜಾತಿಯವರು ಕೆಳಜಾತಿಯವರನ್ನು ಹೆಸರಿನಿಂದ, ಏಕವಚನದಿಂದ, ಅರ್ಧಹೆಸರಿನಿಂದ ಕರೆಯಬಹುದಾದರೂ ಕೆಳಜಾತಿಯವರು ಮೇಲ್ಜಾತಿಯವರನ್ನು ಹಾಗೆ ಕರೆಯುವಂತಿಲ್ಲ. ಮೇಲ್ವರ್ಗದ ಕೆಳಜಾತಿಯವರು ಕೆಳವರ್ಗದ ಮೇಲ್ಜಾತಿಯವರನ್ನು ಏಕವಚನದಿಂದ ಕರೆಯಬಹುದು. ಆದರೆ

ಮೇಲ್ಜಾತಿಯವರು, ಕೆಳವರ್ಗದ ಕೆಳಜಾತಿಯವರನ್ನು ಹಾಗೆ ಕರೆಯುವುದಿಲ್ಲ. ಗೌರವದಿಂದ ಸಂಬೋಧನೆ ಮಾಡುತ್ತಾರೆ. ಕೆಲವು ಸಂದರ್ಭಗಳಲ್ಲಿ ನೇರವಾಗಿ ಹೆಸರನ್ನು ಕರೆಯುವುದು ಸಹ ನಿಷೇಧವಾಗಿದೆ. ಮೇಲಿನ ಪಟ್ಟಿಯ ಹೆಸರುಗಳನ್ನು ಗಮನಿಸಿದರೆ ಕೆಳವರ್ಗದ, ಕೆಳಜಾತಿಗಳು (ಹರಿಜನ, ಭೋವಿ, ನಾಯಕ, ಲಂಬಾಣಿ, ಕೊರಚ) ಕೆಳವರ್ಗದ ಮೇಲ್ಜಾತಿಯವರು (ಬ್ರಾಹ್ಮಣ, ಲಿಂಗಾಯತ, ಒಕ್ಕಲಿಗ) ಪರಸ್ಪರರನ್ನು ಹೆಸರಿನಿಂದ ಸಂಬೋಧಿಸುತ್ತಾರೆ. ಮೇಲ್ಜಾತಿಯವರು ಕೆಳಜಾತಿಯವರನ್ನು ಹೆಸರಿಡಿದು ಕರೆಯುವುದು ಸಾಮಾನ್ಯವಾದರೆ, ಕೆಳಜಾತಿಯವರು, ಮೇಲ್ಜಾತಿಯವರನ್ನು ಹೆಸರಿಡಿದು ಕರೆಯುವಂಥದ್ದು ವಿಶೇಷವಾಗಿದೆ. ಸಾಮಾಜಿಕವಾಗಿ ಕೆಳಜಾತಿ ಮತ್ತು ಮೇಲ್ಜಾತಿಗಳ ನಡುವೆ ತುಂಬಾ ಅಂತರಗಳು ಇದ್ದರೂ, ಆರ್ಥಿಕವಾಗಿ ಇಬ್ಬರ ಜೀವನ ಮಟ್ಟದಲ್ಲಿ ವ್ಯತ್ಯಾಸವೇನೂ ಇರುವುದಿಲ್ಲ. ವರ್ಗ ನೆಲೆಯಲ್ಲಿ ಇಬ್ಬರು ಸಮಾನರಾಗಿರುವುದರಿಂದ ಪರಸ್ಪರರನ್ನು ಹೆಸರಿಡಿದು ಕರೆಯಲು ಸಾಧ್ಯವಾಗಿದೆ. ಕೆಳಜಾತಿಯವರು ಮೇಲ್ಜಾತಿಯವರ ಹೆಸರನ್ನು ಕರೆಯುವಾಗ ಗೌರವಸೂಚಕ ಪದಗಳನ್ನು (ಬಂಧುಸೂಚಕ ವಾರ್ಗಿಕ) ಸೇರಿಸಿ ಪೂರ್ಣ ಹೆಸರನ್ನು ಕರೆಯುವಂತೆ, ಮೇಲ್ಜಾತಿಯವರು ಕೆಳಜಾತಿಯವರನ್ನು ಕರೆಯುವಾಗಲೂ ಗೌರವಸೂಚಕವಾಗಿ ಪೂರ್ಣ ಹೆಸರನ್ನು ಕರೆಯುತ್ತಾರೆ. ಇಲ್ಲಿನ ಉದಾಹರಣೆಗಳು ಒಂದು ಮಾದರಿಯಾಗಿದ್ದು, ಕೆಲವು ಅಪವಾದಗಳೂ ಇರಬಹುದು.

ಮೇಲ್ವರ್ಗದ ಕೆಳಜಾತಿಯವರು, ಮೇಲ್ಜಾತಿಯವರನ್ನು, ಮೇಲ್ಜಾತಿಯವರು ಕೆಳಜಾತಿಯವರನ್ನು ಸಂಬೋಧನೆ ಮಾಡುವಾಗ ಗೌರವದಿಂದ ಸಂಬೋಧನೆ ಮಾಡುವುದುಂಟು. ಆರ್ಥಿಕವಾಗಿ ಮುಂದುವರೆದ ಅಥವಾ ಪ್ರಬಲರಾದ ಮೇಲ್ಜಾತಿಯವರನ್ನು ಆರ್ಥಿಕವಾಗಿ ಮುಂದುವರೆದ ಕೆಳಜಾತಿಯವರು ಹೆಸರಿನಿಂದ ಗೌರವ ಸೂಚಕವಾಗಿ ಸಂಬೋಧನೆ ಮಾಡುವಂತೆ, ಆರ್ಥಿಕವಾಗಿ ಮುಂದುವರೆದ ಕೆಳಜಾತಿಯವರನ್ನು, ಆರ್ಥಿಕವಾಗಿ ಮುಂದುವರೆದ ಮೇಲ್ಜಾತಿಯವರೂ, ಹೆಸರಿನಿಂದ ಗೌರವಸೂಚಕವಾಗಿ ಸಂಬೋಧನೆ ಮಾಡುತ್ತಾರೆ. ಆರ್ಥಿಕ ನೆಲೆಯಲ್ಲಿ ವ್ಯಕ್ತಿಯ ಸಾಮಾಜಿಕ ನೆಲೆ ಮುಖ್ಯವಾಗಿ, ಶಿಕ್ಷಣ, ಅಧಿಕಾರ ಪ್ರಧಾನವಾಗುತ್ತದೆ. ಇಲ್ಲಿಯ ಸಂಬೋಧನೆಗೆ ಜಾತಿ ಮುಖ್ಯವಾಗುವುದಿಲ್ಲ. ಆರ್ಥಿಕವಾಗಿ ಮೇಲ್ಜಾತಿ ಮತ್ತು ಕೆಳಜಾತಿ ಒಂದೇ ಆಗುವುದರಿಂದ ಪರಸ್ಪರರನ್ನು ಗೌರವದಿಂದ ಕರೆಯಲಾಗುವುದು. ಕೆಲವು ಸಲ ಮೇಲ್ವರ್ಗದವರು ವ್ಯಕ್ತಿಯ ಹೆಸರನ್ನು ಸಂಬೋಧಿಸುವಾಗ ಅಂತ್ಯದಲ್ಲಿ ಗೌರವಸೂಚಕ ಪದಗಳನ್ನು ಬಳಸುತ್ತಾರೆ. (ಶಿವಮೂರ್ತಿಗಳೆ, ರಾಮಣ್ಣನವರೆ, ಸೂರಯ್ಯನವರೆ, ಭೈಯ್ಯಣ್ಣನವರೆ, ಜಂಬಕ್ಕನವರೆ, ಶಿವಗಂಗಮ್ಮನವರೆ - ಇತ್ಯಾದಿ) ಅಲ್ಲದೆ ವ್ಯಕ್ತಿಯ ಪದನಾಮಗಳಿಂದಲೂ ಸಂಬೋಧಿಸುವುದುಂಟು. (ಮೇಷ್ಟ್ರೇ, ಪೋಲೀಸರೇ, ಡಾಕ್ಟರೇ ಇತ್ಯಾದಿ) ಕೆಲವೊಮ್ಮೆ ಹೆಸರನ್ನು ಬಳಸದೆ, ಸಾಹೇಬರೇ, ಸಾರ್ ಎಂದಷ್ಟೇ ಕರೆಯಲಾಗುವುದು. ಭಾರತೀಯ ಸಮಾಜದಲ್ಲಿ ಕೆಳಜಾತಿಯವರು, ಮೇಲ್ಜಾತಿಯವರನ್ನು ಗೌರವದಿಂದ ಸಂಬೋಧನೆ ಮಾಡುವಂಥದ್ದು ಸಾಮಾನ್ಯ ವಿಚಾರ. ಆದರೆ ಮೇಲ್ಜಾತಿಯವರು ಕೆಳಜಾತಿಯವರನ್ನು ಗೌರವದಿಂದ ಸಂಬೋಧನೆ ಮಾಡುವುದು ವಿಶೇಷವೆನಿಸುತ್ತದೆ. ಪ್ರಸ್ತುತದ ಒಟ್ಟು ಸಂದರ್ಭವನ್ನು ಒಂದು ನಿದರ್ಶನದ ಮೂಲಕ ಸ್ಪಷ್ಟಪಡಿಸಿಕೊಳ್ಳಬಹುದು.

ಹರಿಜನ ಸಮುದಾಯಕ್ಕೆ ಸೇರಿದ 'ದುರುಗಪ್ಪ' ಎಂಬುವವರು ಉನ್ನತ ವ್ಯಾಸಂಗ ಪಡೆದು, ಉನ್ನತ ಹುದ್ದೆಯನ್ನು ಅಲಂಕರಿಸಿದರೆ, (ಐ.ಎ.ಎಸ್. ಅಧಿಕಾರಿಯಾಗುತ್ತಾನೆಂದು ಭಾವಿಸೋಣ) ಆಗ, 'ದುರುಗಪ್ಪ'

ಅವರನ್ನು ಸಮಾಜದ ಎಲ್ಲಾ ಜಾತಿ, ವರ್ಗದವರು ಗೌರವದಿಂದ ಸಂಬೋಧನೆ ಮಾಡುತ್ತಾರೆ. ಕೆಳವರ್ಗಕ್ಕೆ ಸೇರಿದ ಬ್ರಾಹ್ಮಣ, ಲಿಂಗಾಯತ ಮುಂತಾದ ಮೇಲ್ಜಾತಿಯವರು 'ದುರುಗಪ್ಪ' ಅವರನ್ನು ಹೆಸರಿನಿಂದ ಕರೆಯದೆ ಸಾಹೇಬ್ರೇ, ಸಾರ್, ಸ್ವಾಮಿ ಮುಂತಾದ ಗೌರವಸೂಚಕ ಸಂಬೋಧನೆಗಳನ್ನು ಬಳಸಿ ಕರೆಯುತ್ತಾರೆ. ಸಮಾನ ಸ್ಥಿತಿವಂತ ಜನರು ಮೇಲ್ಜಾತಿ, ಕೆಳಜಾತಿಯವರಾದರೂ, 'ದುರುಗಪ್ಪ' ಅವರನ್ನು, 'ದುರುಗೇಶ್', 'ದುರುಗಣ್ಣ' ಎಂದು ಹೆಸರಿನ ಮೂಲಕ ಗೌರವಸೂಚಕವಾಗಿ ಕರೆಯಬಹುದು. ಅದೇ ರೀತಿ ಹೆಸರನ್ನು ಕರೆಯದೆ ಪದನಾಮ ಮತ್ತು ಗೌರವಸೂಚಕ ಸಂಬೋಧನೆಗಳಿಂದಲೂ ಕರೆಯಬಹುದು. ಹೆಚ್ಚು ಸಲಿಗೆ, ಆತ್ಮೀಯತೆಗಳು ಇದ್ದಾಗ ಹೆಸರಿನಿಂದಲೂ (ಏಕವಚನದಿಂದಲೂ ದುರುಗ) ಕರೆಯಬಹುದು. ಅದೇ ರೀತಿ 'ದುರುಗಪ್ಪ' ಅವರು ಕೆಳವರ್ಗದ ಬ್ರಾಹ್ಮಣ, ಲಿಂಗಾಯತ, ಒಕ್ಕಲಿಗ ಮುಂತಾದ ಮೇಲ್ಜಾತಿಯ ಜನರನ್ನು ಏಕವಚನದಿಂದ ಕರೆಯಬಹುದು. (ರಾಮಪ್ಪ > ರಾಮ, ಕೃಷ್ಣಯ್ಯ > ಕೃಷ್ಣ) ಮೇಲ್ವರ್ಗದ, ಹರಿಜನ, ಕೊರಚ, ಲಂಬಾಣಿ, ಭೋವಿ, ನಾಯಕ ಮುಂತಾದ ಕೆಳಜಾತಿಯವರನ್ನು ಗೌರವದಿಂದ ಸಂಬೋಧನೆ ಮಾಡಬಹುದು. ಮತ್ತು ಹೆಚ್ಚು ಪರಿಚಿತರಾಗಿದ್ದಲ್ಲಿ ಹೆಸರಿನಿಂದಲೂ ಕರೆಯುತ್ತಾರೆ. ಇಲ್ಲಿ ಬಹಳ ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ, ವ್ಯಕ್ತಿನಾಮ ಸಂಬೋಧನೆಯಲ್ಲಿ ಆರ್ಥಿಕ ಸ್ಥಿತಿಗಳು ಪ್ರಧಾನ ಪಾತ್ರ ವಹಿಸುತ್ತವೆ. ವ್ಯಕ್ತಿನಾಮ ಸಂಬೋಧನೆಯ ವೈಚಿತ್ರ್ಯಕ್ಕೆ ವಯಸ್ಸು, ಜಾತಿ ಮತ್ತು ಸಾಮಾಜಿಕ ಸ್ಥಾನಮಾನ ಈ ಮೊದಲಾದ ಅಂಶಗಳು ಬಹುಮುಖ್ಯ ಕಾರಣಗಳಾಗಿವೆ.

ಕೆಳವರ್ಗ ಮತ್ತು ಮೇಲ್ವರ್ಗದವರ ನಡುವಿನ ಸಂಬೋಧನೆಯ ಸ್ವರೂಪವನ್ನು ಕೆಲವು ದೃಷ್ಟಾಂತಗಳ ಮೂಲಕ ಚರ್ಚಿಸಬಹುದು.

ಕೆಳವರ್ಗದವರು ಮೇಲ್ವರ್ಗದವರನ್ನು ಸಂಬೋಧಿಸುವ ಕ್ರಮ :

| ಮೂಲಹೆಸರು | ಕೆಳವರ್ಗದ ಕೆಳಜಾತಿ/ಮೇಲ್ಜಾತಿ ಸಂಬೋಧನೆ |
|---|---|
| ಭೀಮನಗೌಡ | ಭೀಮಣ್ಣಾರೇ, ಭೀಮನಗೌಡ್ರೇ, ಗೌಡ್ರೇ |
| ಜಂಬಯ್ಯಸ್ವಾಮಿ | ಜಂಬಣ್ಣಾರೇ, ಜಂಬಯ್ಯಸ್ವಾಮ್ಯಾರೇ, ಸ್ವಾಮ್ಯಾರೇ, ಜಂಬಯ್ಯ ಸ್ವಾಮಿಗಳೆ, ಸ್ವಾಮಿಗಳೆ |
| ವೀರಣ್ಣ | ವೀರಣ್ಣಾರೇ |
| ಹಣುಮಪ್ಪ | ಹಣುಮಪ್ಪಣ್ಣಾ, ಹಣುಮಣ್ಣಾ, ಹಣುಮಣ್ಣಾರೇ, ಹಣುಮಪ್ಪರೇ |
| ಸುಬ್ಬಾರೆಡ್ಡಿ | ಸುಬ್ಬಾರೆಡ್ಡಿಯವರೆ, ಸುಬ್ಬಣ್ಣಾರೇ, ರೆಡ್ಡ್ಯಾರೇ |
| ಶ್ರೀನಿವಾಸಭಟ್ | ಶ್ರೀನಿವಾಸ ಭಟ್ ರೇ, ಭಟ್ ರೇ |
| ನಾಗಮ್ಮ | ನಾಗಮ್ಮಾರೇ, ನಾಗಮ್ಮಕ್ಕ |
| ರುದ್ರಮ್ಮ | ರುದ್ರಮ್ಮಾರೇ, ರುದ್ರಮ್ಮಕ್ಕ |
| ಬಸಮ್ಮ | ಬಸಮ್ಮಾರೇ, ಬಸಮ್ಮಕ್ಕ |
| ನಿಂಗಮ್ಮ | ನಿಂಗಮ್ಮಾರೇ. ನಿಂಗಮ್ಮಕ್ಕ |
| ಶಾರದ | ಶಾರದಮ್ಮಾರೇ. ಶಾರದಕ್ಕಾರೇ |

ಮೇಲಿನ ಪಟ್ಟಿಯ ಹೆಸರುಗಳನ್ನು ಗಮನಿಸಿದರೆ, ಕೆಳವರ್ಗದವರು ಮೇಲ್ವರ್ಗದವರನ್ನು ಸಂಬೋಧಿಸುವಾಗ, ಹೆಸರಿನ ಕೊನೆಗೆ ಗೌರವಸೂಚಕ ಪದಗಳನ್ನು ಅಂಟಿಸಿ ಗೌರವಸೂಚಕವಾಗಿ ಕರೆಯುತ್ತಾರೆ. ಸ್ತ್ರೀ ಮತ್ತು ಪುರುಷ ಇಬ್ಬರ ಹೆಸರುಗಳಿಗೂ ಗೌರವಸೂಚಕ ಪದಗಳು ಸೇರುತ್ತವೆ. ಕೆಲವು ಸಂದರ್ಭಗಳಲ್ಲಿ

ಹೆಸರನ್ನು ಕರೆಯದೆ ಬರೀ ಗೌರವ ಸೂಚಕ ಪದಗಳಿಂದಲೂ ಕರೆಯುತ್ತಾರೆ. ಗೌರವ ಸೂಚಕ ಪದಗಳನ್ನು ಬಳಸುವಾಗಲೂ ಕೆಲವು ಸೂಕ್ಷ್ಮತೆಗಳಿವೆ. ಕೆಳವರ್ಗದ ಕೆಳ ಜಾತಿಯವರು ಮೇಲ್ವರ್ಗದ ಮೇಲ್ಜಾತಿಯವರನ್ನು ಸಂಬೋಧಿಸುವಾಗ ಗೌಡ, ಪಟೇಲ, ಶಾನುಭೋಗ, ಶಾಸ್ತ್ರಿ, ಗೊಂಚಿಕಾರ, ಗೌಡತಿ, ಗೊಂಚಿಕಾರ (ತಿ) ಎಂಬ ಪದಗಳನ್ನು ಬಳಸಿದರೆ, ಮೇಲ್ವರ್ಗದ ಕೆಳಜಾತಿಯವರನ್ನು ಸಂಬೋಧಿಸುವಾಗ ಸಾಮಾನ್ಯವಾಗಿ ಮೇಲಿನ ಈ ಪದಗಳನ್ನು ಬಳಸುವುದಿಲ್ಲ. 'ಧಣಿ', 'ಸಾಹುಕಾರ' ಎಂಬುದಾಗಿ ಮಾತ್ರ ಉಪಯೋಗಿಸುತ್ತಾರೆ. ಕೆಳವರ್ಗದ 'ನಾಯಕ' ಜನಾಂಗದವರು, ಮೇಲ್ವರ್ಗದ ನಾಯಕ ಅಥವಾ ಮಾದಿಗ ಜನಾಂಗದವರನ್ನು 'ಗೌಡ', 'ಪಟೇಲ' ಎಂದು ಕರೆಯುವಂಥದ್ದು ಕಾಣಬರುವುದಿಲ್ಲ. ಅದೇ ರೀತಿ ಕೆಳವರ್ಗದ ಮೇಲ್ಜಾತಿಯವರು ಮೇಲ್ವರ್ಗದ ಮೇಲ್ಜಾತಿಯವರನ್ನು ಮತ್ತು ಕೆಳಜಾತಿಯವರನ್ನು ಸಂಬೋಧಿಸುವಾಗ ವೃತ್ತಿ/ಜಾತಿಸೂಚಕ ಗೌರವ ಪದಗಳನ್ನು ಸಾಮಾನ್ಯವಾಗಿ ಉಪಯೋಗಿಸುವುದಿಲ್ಲ. ಸಾಹುಕಾರ, ಧಣಿ, ಸಾಹೇಬ್ರೆ, ಸರ್ ಎಂಬಿತ್ಯಾದಿ ಪದಗಳಿಂದ ಕರೆಯುವುದನ್ನು ಗಮನಿಸಬಹುದು.

ಮೇಲ್ವರ್ಗದವರು ಕೆಳವರ್ಗದವರನ್ನು ಸಂಬೋಧಿಸುವ ಕ್ರಮ :

| ಕೆಳವರ್ಗದ ಹೆಸರು (ಕೆಳವರ್ಗದ - ಕೆಳಜಾತಿ ಮತ್ತು ಮೇಲ್ಜಾತಿ) | ಮೇಲ್ವರ್ಗದ ಸಂಬೋಧನೆ (ಮೇಲ್ವರ್ಗದ - ಕೆಳಜಾತಿ ಮತ್ತು ಮೇಲ್ಜಾತಿ) |
|---|---|
| ಪರಮೇಶ್ವರಪ್ಪ | ಪರಮೇಶ, ಪರಮೇಶಿ |
| ಬಸವರಾಜ | ಬಸವ |
| ಗಂಗನಗೌಡ | ಗಂಗ, ಗೌಡ |
| ವೀರಭದ್ರಪ್ಪ | ವೀರಭದ್ರ, ವೀರಭದ್ರಿ, ಭದ್ರಿ |
| ಹನುಮಂತಪ್ಪ | ಹನುಮಂತ, ಹನುಮಂತಿ, ಹನುಮ |
| ಗೋಪಾಲಶಾಸ್ತ್ರಿ | ಗೋಪಾಲ, ಶಾಸ್ತ್ರಿ |
| ಯಶೋಧಮ್ಮ | ಯಶೋಧ |
| ರಾಧಮ್ಮ | ರಾಧ, ರಾಧಿ |
| ಸೂರಮ್ಮ | ಸೂರಿ |
| ಪಾರ್ವತಮ್ಮ | ಪಾರ್ವತಿ |

ಮೇಲ್ವರ್ಗದ ಕೆಳಜಾತಿ ಮತ್ತು ಮೇಲ್ಜಾತಿಯವರು, ಕೆಳವರ್ಗದ, ಕೆಳಜಾತಿ ಮತ್ತು ಮೇಲ್ಜಾತಿಯವರನ್ನು ಸಂಬೋಧಿಸುವಾಗ ಗೌರವದಿಂದ ಸಂಬೋಧಿಸದೆ, ಏಕವಚನದಿಂದ ಸಂಬೋಧಿಸುತ್ತಾರೆ. ಅಂದರೆ ಹೆಸರಿಡಿದು ಕರೆಯುವಾಗ ಹೆಸರಿನ ಪೂರ್ವೋತ್ತರಗಳಲ್ಲಿ ಯಾವುದೇ ಗೌರವವಾಚಿ ಪದಗಳನ್ನು ಅಂಟಿಸಿ ಕರೆಯದೆ, ಹೆಸರಿನ ಕೊನೆಗೆ ಇರಬಹುದಾದ ಗೌರವವಾಚಿ ವಾರ್ಗಿಕಗಳನ್ನು ಕೈಬಿಟ್ಟು, ನಿರ್ದಿಷ್ಟ ಭಾಗದಿಂದ, ಇಲ್ಲವೆ ನಿರ್ದಿಷ್ಟ ಭಾಗವನ್ನು '-ಇ' ಕಾರಾಂತ್ಯಗೊಳಿಸಿ ಸಂಬೋಧಿಸುವುದು, ಪ್ರಸ್ತುತ ಸಂಬೋಧನೆಯಲ್ಲಿ ಕಾಣಬರುವ ಸಾಮಾನ್ಯ ಲಕ್ಷಣವಾಗಿದೆ. ಹೆಚ್ಚಾಗಿ ಸ್ತ್ರೀಯರಿಗಿಂತ, ಪುರುಷರನ್ನು ಏಕವಚನದಿಂದ ಸಂಬೋಧನೆ ಮಾಡುವುದು ಕಾಣಬರುತ್ತದೆ.

ಈತನಕದ ಚರ್ಚೆಯಲ್ಲಿ ಬಳಸಿಕೊಂಡಿರುವ ಉದಾಹರಣೆಗಳು (ಹೆಸರುಗಳು) ಅಧಿಕೃತ ಮತ್ತು ಅಂತಿಮವಲ್ಲ. ಸಮಾಜದ ಜಾತಿ ಮತ್ತು ವರ್ಗಗಳ ನಡುವಿನ ಸಂಬೋಧನೆಯ ಸಾಮಾನ್ಯ ನಿಯಮಗಳ ಕುರಿತು ಮಾತ್ರ ಚರ್ಚಿಸಿದೆ. ಪ್ರಸ್ತುತ ನಿಬಂಧದಲ್ಲಿ ನಿರೂಪಿತವಾಗಿರುವ ಸಂಬೋಧನ ನಿಯಮಗಳಿಗೆ, ವೈರುಧ್ಯಗಳೂ ಇರಬಹುದು. ಸಾಮಾಜಿಕ ವ್ಯವಸ್ಥೆ ಹಿಂದೆಗಿಂತ ಇಂದು ಬೇರೆಯಾಗಿದೆ. ಜಾತಿ ವ್ಯವಸ್ಥೆಯಲ್ಲಿ ಶಿಥಿಲತೆ ಉಂಟಾಗಿದೆ. ಕೆಳಜಾತಿಗಳು ಪಾರಂಪರಿಕ ವೃತ್ತಿಗಳನ್ನು ಕೈಬಿಟ್ಟು ಹೆಚ್ಚು ಆದಾಯ ಬರುವ ಪರ್ಯಾಯ ವೃತ್ತಿಗಳನ್ನು ಕೈಗೊಂಡಿದ್ದಾರೆ. ಸಾಂಪ್ರದಾಯಿಕ ಸಮಾಜದಲ್ಲಿ 'ಜಾತಿ' ಬಗೆಗಿನ ಮನೋಭಾವನೆಗಳು ಬದಲಾಗಿದ್ದು, ಪರಸ್ಪರರನ್ನು ಸಮೀಪದಿಂದ ಕಾಣುತ್ತಾರೆ. ಆರ್ಥಿಕವಾಗಿ, ಶೈಕ್ಷಣಿಕವಾಗಿ ಮುಂದುವರೆಯುತ್ತಿರುವ ಕೆಳಜಾತಿಗಳು ಸಮಾಜದಲ್ಲಿ ಸಮಾನತೆಯನ್ನು ಪಡೆಯುವ ಪ್ರಯತ್ನ ಮಾಡುತ್ತಿದ್ದಾರೆ. ಜಾತಿ-ಜಾತಿಗಳ ನಡುವಿನ ಅಂತರಗಳು ಕಡಿಮೆಯಾಗುತ್ತಿದ್ದು, ವ್ಯಕ್ತಿನಾಮ ಸಂಬೋಧನೆಯಲ್ಲಿದ್ದ ನಂಬಿಕೆಗಳು ಕ್ರಮೇಣ ಕಡಿಮೆಯಾಗುತ್ತಿವೆ. ಪರಿಣಾಮವಾಗಿ ಶಿಕ್ಷಣ ಪಡೆದ ಮೇಲ್ಜಾತಿ, ಕೆಳಜಾತಿಯವರು ಪರಸ್ಪರ ಸಮಾನ ಗೌರವದಿಂದ ಕರೆಯುವಂಥದ್ದನ್ನು ಇಂದು ಕಾಣಬಹುದು. ಸ್ವಲ್ಪಮಟ್ಟಿಗೆ ಗ್ರಾಮೀಣ ಪರಿಸರದಲ್ಲಿ, ವ್ಯಕ್ತಿನಾಮ ಸಂಬೋಧನೆಯ ಬಗೆಗಿನ ನಂಬಿಕೆಗಳು ಈಗಲೂ ಮುಂದುವರೆಯುತ್ತಿವೆ ಎಂಬುದನ್ನು ಅಲ್ಲಗಳೆಯಲಾಗದು.

### ೪.೬ ಸಾಂಸ್ಕೃತಿಕ ಸಂದರ್ಭ

ಮಾನವ ಜೀವನದಲ್ಲಿ ನಡೆಯುವ ಹದಿನಾರು ಸಂಸ್ಕಾರಗಳಲ್ಲಿ ಮದುವೆ ಸಂಸ್ಕಾರವೂ ಒಂದು. 'ಮದುವೆ' ಎಂಬುದು ವಧೂ-ವರರು ಸತಿ-ಪತಿಗಳಾಗಿ ಒಂದಾಗುವಂಥ ಒಂದು ಸಾಮಾಜಿಕ ಒಪ್ಪಂದವಾಗಿದ್ದರೂ ಸಾಂಸ್ಕೃತಿಕವಾಗಿ ತುಂಬಾ ಮಹತ್ವವನ್ನು ಪಡೆದುಕೊಂಡಿದೆ. ಮದುವೆ ಸಂದರ್ಭದಲ್ಲಿ ಆಯಾ ಸಮುದಾಯಗಳ, ನಂಬಿಕೆ-ಸಂಪ್ರದಾಯಗಳಿಗೆ ಅನುಗುಣವಾಗಿ ಹಲವು ಆಚರಣಾ ಪದ್ಧತಿಗಳು ರೂಢಿಯಲ್ಲಿರುತ್ತವೆ. 'ಹೆಸರು ಹೇಳುವ ಶಾಸ್ತ್ರ' ಇಂಥ ಆಚರಣಾ ಪದ್ಧತಿಗಳಲ್ಲಿ ಒಂದಾಗಿದೆ. ಇದು ಪ್ರಾಚೀನ ಕಾಲದಿಂದಲೂ ಬೆಳೆದುಬಂದ ಆಚರಣೆಯಾಗಿದೆ. ಅಲ್ಲದೆ ಎಲ್ಲಾ ಸಮುದಾಯಗಳಲ್ಲಿ ಕಾಣಬರುವ ಸಾಮಾನ್ಯ ಪದ್ಧತಿಯಾಗಿದ್ದು, ತುಂಬಾ ಸ್ವಾರಸ್ಯಕರವೂ, ಕುತೂಹಲವೂ ಆದುದಾಗಿದೆ.

ನವದಂಪತಿಗಳಾಗಿ ಹಸೆಮಣೆ ಏರುವ ವಧೂ-ವರರು, ಪರಸ್ಪರರ ಹೆಸರನ್ನು ಸಾರ್ವಜನಿಕವಾಗಿ ಹೇಳುವುದುಂಟು. ಮದುವೆಯಲ್ಲಿ ಹೆಸರು ಹೇಳುವುದು, ಕೇಳುವುದು ಪ್ರಾರಂಭವಾದುದು. ಬಾಳಿನುದ್ದಕ್ಕೂ ವಿವಿಧ ಪ್ರಸಂಗಗಳಲ್ಲಿ ಮುಂದುವರೆಯುವುದು. ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಗಂಡ ಹೆಂಡತಿ ಹೆಸರು ಹೇಳುವುದು ಮತ್ತು ಹೆಂಡತಿ ಗಂಡನ ಹೆಸರು ಹೇಳುವುದು ಒಂದು ಪರಂಪರೆಯಾಗಿ ಬೆಳೆದು ಬಂದಿದೆ. ಈ ಹೆಸರು ಹೇಳುವ ಪದ್ಧತಿ ಭೌಗೋಳಿಕವಾಗಿ ಮತ್ತು ಸಾಮಾಜಿಕವಾಗಿ ಎಲ್ಲಾ ಪರಿಸರಗಳಲ್ಲಿ ಒಂದೇ ಆಗಿರದೆ, ವೈವಿಧ್ಯಮಯವಾಗಿದೆ. ಕೆಲವು ಸಮುದಾಯಗಳಲ್ಲಿ ಪರಸ್ಪರರು ನೇರವಾಗಿ ಹೆಸರು ಹೇಳುವುದು ಕಂಡುಬಂದರೆ, ಮತ್ತೆ ಕೆಲವು ಸಮುದಾಯಗಳಲ್ಲಿ ಒಡಪು ಹೇಳಿ ಅಥವಾ 'ಒಡಪುಗಟ್ಟಿ' ಹೆಸರು ಹೇಳುವುದು ಕಾಣಬರುತ್ತದೆ. ಕಿತ್ತೂರು ಕರ್ನಾಟಕ ಪರಿಸರದಲ್ಲಿ ಹೆಚ್ಚಾಗಿ ಒಡಪು ಹೇಳಿ, ಹೆಸರು ಹೇಳುವ ಸಂಪ್ರದಾಯ ಕಾಣಬಂದರೆ, ಮೈಸೂರು ಕರ್ನಾಟಕ ಪರಿಸರದಲ್ಲಿ, ನೇರವಾಗಿ ಹೆಸರು ಮಾತ್ರ ಹೇಳುವುದರ ಜೊತೆಗೆ

ಒಡಪುಗಟ್ಟಿ ಹೆಸರು ಹೇಳುವ ಸಂಪ್ರದಾಯವೂ ಕೊಂಚಮಟ್ಟಿಗೆ ಕಾಣಬರುತ್ತದೆ. ಒಡಪುಗಟ್ಟಿ ಹೆಸರು ಹೇಳುವ ಸಂಪ್ರದಾಯ ಮೈಸೂರು ಕರ್ನಾಟಕ ಪರಿಸರದಲ್ಲಿ ಕಿತ್ತೂರು ಕರ್ನಾಟಕದ ಪರಿಸರದಷ್ಟು ದಟ್ಟವಾಗಿ ಕಾಣಬರದಿದ್ದರೂ, ಕೆಲವು ಸಮುದಾಯಗಳಲ್ಲಿ ಬಳಕೆಯಲ್ಲಿದೆ ಎಂಬುದು ಗಮನಾರ್ಹ ಸಂಗತಿ. ಚಿತ್ರದುರ್ಗ ಪರಿಸರವು, ಕಿತ್ತೂರು ಮತ್ತು ಮೈಸೂರು ಕರ್ನಾಟಕಗಳ ಸಂಸ್ಕೃತಿಯನ್ನು ಒಟ್ಟಿಗೆ ಮೈಗೂಡಿಸಿಕೊಂಡ, ಸಂಕೀರ್ಣ ಸಂಸ್ಕೃತಿಯನ್ನು ಇಲ್ಲಿ ಕಾಣಬಹುದಾಗಿದೆ. ಚಿತ್ರದುರ್ಗ ಪರಿಸರದಲ್ಲಿ ಒಡಪುಗಟ್ಟಿ ಹೆಸರು ಹೇಳುವ ಸಂಪ್ರದಾಯ ಆರ್ಯರಿಗಿಂತ ದ್ರಾವಿಡರಲ್ಲಿ ಅಧಿಕ ಪ್ರಮಾಣದಲ್ಲಿ ರೂಢಿಯಲ್ಲಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದ ಸಂಗತಿಯಾಗಿದೆ. ಹೀಗೆ ಪರಸ್ಪರರು ಹೆಸರು ಹೇಳುವಂಥದ್ದು ಭಾಷಿಕ ದೃಷ್ಟಿಯಿಂದ ಮಾತ್ರವಲ್ಲದೆ, ಸಾಮಾಜಿಕ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ತುಂಬಾ ಮಹತ್ವವನ್ನು ಪಡೆದುಕೊಳ್ಳುತ್ತದೆ. ಪ್ರಸ್ತುತ ಭಾಗದಲ್ಲಿ ಚಿತ್ರದುರ್ಗ ಪರಿಸರದಲ್ಲಿ ಕಾಣಬರುವ ಹೆಸರಿನ ಬಳಕೆಯ ವಿಧಾನ ಹಾಗೂ ಭಾಷಿಕ ಮತ್ತು ಸಾಮಾಜಿಕ ಆಯಾಮಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಮುಹೂರ್ತದ ಅಥವಾ ಅಕ್ಷತೆಯ ಮುನ್ನಾದಿನ ವಧೂ-ವರರಿಗೆ ಅಭ್ಯಂಗ ಸ್ನಾನ ಮಾಡಿಸಿ, ಅರಿಸಿಣ ಹಚ್ಚುವುದು ಒಂದು ಮುಖ್ಯ ಪದ್ಧತಿ. ಅರಿಸಿಣ ಹಚ್ಚಿದ ನಂತರ ಸುಮಂಗಲೆಯರು ವಧೂ-ವರರಿಗೆ ಆರತಿಯೆತ್ತುವರು. ಆರತಿಯಾದ ಮೇಲೆ ವರನು ತನ್ನ ವಧುವಿನ ಹೆಸರನ್ನೂ ವಧು ತನ್ನ ವರನ ಹೆಸರನ್ನೂ ಹೇಳುವುದುಂಟು. ಇದು ಹೆಚ್ಚಾಗಿ ಮೇಲ್ಜಾತಿ ಮತ್ತು ಮೇಲ್ವರ್ಗಗಳಲ್ಲಿ ಕಂಡುಬರುವ ಸಂಪ್ರದಾಯವಾಗಿದೆ. ಕೆಳಜಾತಿಗಳಲ್ಲಿ ಸಾಮಾನ್ಯವಾಗಿ ವಧು-ವರರು ಹೊಸ್ತಿಲು ದಾಟುವ ಸಂದರ್ಭದಲ್ಲಿ ಹೆಸರು ಹೇಳಿ ಒಳ ಹೋಗುತ್ತಾರೆ.

ವಿಶೇಷವಾಗಿ ಮದುವೆಯಲ್ಲಿ ವಧೂ-ವರರ ಹೆಸರನ್ನು ಹೇಳಿಸುವುದು, ಪ್ರಾಯಶಃ ಆ ದಂಪತಿಗಳ ಹೆಸರು ಎಲ್ಲರಿಗೂ ಪರಿಚಯವಾಗಲಿ ಎಂಬ ಆಶಯ ಇರಬೇಕು. ವಧೂ-ವರರು ಪರಸ್ಪರರ ಹೆಸರನ್ನು ಹೇಳುವಾಗ ಹೇಗೆ ಬೇಕೋ ಹಾಗೆ ಹೇಳುವಂತಿಲ್ಲ. ಇದಕ್ಕೆ ಸಾಮಾಜಿಕವಾದ ನಿಯಂತ್ರಣಗಳು ಇರುವುದು ಗಮನಾರ್ಹ. ವಧು ಅಥವಾ ಗಂಡನು, ವರನ ಅಥವಾ ಹೆಂಡತಿ ಹೆಸರು ಹೇಳುವಾಗ ಸ್ತ್ರೀ ಬಂಧುಸೂಚಕ ವಾರ್ಗಿಕಗಳಾದ 'ಅಮ್ಮ', 'ಅವ್ವ', 'ಅಕ್ಕ' ಪ್ರತ್ಯಯಗಳನ್ನೂ, ವರ ಅಥವಾ ಹೆಂಡತಿ, ವಧು ಅಥವಾ ಗಂಡನ ಹೆಸರು ಹೇಳುವಾಗ ಪುರುಷ ಬಂಧುಸೂಚಕ ವಾರ್ಗಿಕಗಳಾದ ಅಯ್ಯ, ಅಪ್ಪ, 'ಅಣ್ಣ' ಪ್ರತ್ಯಯಗಳನ್ನು ಹೆಸರಿನ ಕೊನೆಗೆ ಸೇರಿಸಿ ಹೇಳುವುದು ನಿಷೇಧಿಸಲ್ಪಟ್ಟಿರುತ್ತದೆ. ಈ ಪ್ರತ್ಯಯಗಳನ್ನು ಹೆಸರಿನ ಕೊನೆಗೆ ಅಂಟಿಸಿ ಬಳಸಿದರೆ ಮಾತಾ ಪಿತೃ ಮತ್ತು ಸಹೋದರ ಸಂಬಂಧ ಸೂಚಕಗಳಾಗುತ್ತವೆ ಎಂಬುದು ಜನರ ನಂಬಿಕೆ. ಇದರಿಂದ ವೈವಾಹಿಕ ಸಂಬಂಧದ ಸ್ವರೂಪವನ್ನು ಇಲ್ಲಿ ತಿಳಿಯಬಹುದಾಗಿದೆ.

ಉದಾಹರಣೆಗೆ ಕೆಲವು ಹೆಸರುಗಳನ್ನು ಗಮನಿಸಬಹುದು.

| 'ಅ' ಗುಂಪು | 'ಬ' ಗುಂಪು |
|---|---|
| ಮಲ್ಲಯ್ಯ | ಗೌರಮ್ಮ |
| ದುರುಗಣ್ಣ | ಮಲ್ಲಮ್ಮ |
| ಹನುಮಂತಪ್ಪ | ಬಸಮ್ಮ |
| ಓಬಯ್ಯ | ಓಬವ್ವ |
| ಮಾರಣ್ಣ | ಪಾಲವ್ವ |
| ನಿಂಗಣ್ಣ | ತಿಮ್ಮವ್ವ |
| ಪಾಲಯ್ಯ | ತಿಮ್ಮಕ್ಕ |
| ಬೋರಪ್ಪ | ಹನುಮಕ್ಕ |

- ಇತ್ಯಾದಿ

ಮೇಲಿನ 'ಅ' ಪಟ್ಟಿಯ ಹೆಸರುಗಳು ಪುರುಷಸೂಚಕವೂ ಮತ್ತು 'ಬ' ಪಟ್ಟಿಯ ಹೆಸರುಗಳು ಸ್ತ್ರೀಸೂಚಕ ಹೆಸರುಗಳಾಗಿದ್ದು, ಎರಡೂ ಗುಂಪಿನ ಹೆಸರುಗಳಲ್ಲಿ ಆಯಾ ವರ್ಗವನ್ನು ಸೂಚಿಸುವ ಸಂಬಂಧಸೂಚಕ ವಾರ್ಗಿಕಗಳು ಇವೆ. ಈ ಹೆಸರುಗಳನ್ನು ಅಥವಾ ಈ ಬಗೆಯ ಹೆಸರುಗಳನ್ನು ವಧೂ-ವರರು ಪರಸ್ಪರ ಹೆಸರು ಹೇಳುವಾಗ ಹೆಸರಿನ ಯಥಾರೂಪವನ್ನು ಬಳಸುವಂತಿಲ್ಲ. ಇಂಥ ಹೆಸರುಗಳನ್ನು ಇದ್ದ ರೀತಿಯಲ್ಲಿಯೇ ಬಳಸುವಂಥದ್ದು ಭಾರತೀಯ ಸಂಸ್ಕೃತಿಯಲ್ಲಿ ನಿಷೇಧಿಸಲ್ಪಟ್ಟ ಸಂಗತಿಯಾಗಿದೆ. ಏಕೆಂದರೆ ಅಯ್ಯ, ಅಪ್ಪ ವಾರ್ಗಿಕಗಳಿಂದ ಪಿತೃಸಂಬಂಧವೂ, ಅಣ್ಣ ವಾರ್ಗಿಕದಿಂದ ಭ್ರಾತೃ ಸಂಬಂಧವೂ ಹಾಗೂ ಅಮ್ಮ, ಅವ್ವ ವಾರ್ಗಿಕಗಳಿಂದ ಮಾತೃ ಸಂಬಂಧವೂ ಹಾಗೂ ಅಕ್ಕ ವಾರ್ಗಿಕದಿಂದ ಸಹೋದರಿ ಸಂಬಂಧ ವ್ಯಕ್ತವಾಗುತ್ತಿರುವುದು ಇವುಗಳ ನಿಷೇಧಕ್ಕೆ ಮುಖ್ಯ ಕಾರಣವಾಗಿರಬೇಕು. ಈ ಕಾರಣಕ್ಕಾಗಿಯೇ ಹೆಸರಿನ ಸಂಬೋಧನೆಯಲ್ಲಿ ಕೆಲವು ಪರ್ಯಾಯ ಮಾರ್ಪಾಟುಗಳನ್ನು ಮಾಡಿಕೊಳ್ಳಲಾಗಿದೆ. ಹೆಂಡಂದಿರು ಗಂಡನ ಹೆಸರು ಹೇಳುವಾಗ ರಾಯ, ದೊರೆ, ಒಡೆಯ, ಸಾಹೇಬ, ಗೌಡ, ರೆಡ್ಡಿ, ಶೆಟ್ಟಿ ಮುಂತಾದ ಪದಗಳನ್ನು ಹೆಸರಿನ ಕೊನೆಗೆ ಗೌರವ ಅಥವಾ ಮರ್ಯಾದೆ ಸೂಚಕವಾಗಿ ಸೇರಿಸಿ ಹೇಳಿದರೆ, ಪುರುಷರು ಹೆಂಡಂದಿರ ಹೆಸರುಗಳನ್ನು ಹೇಳುವಾಗ ಯಾವುದೇ ಗೌರವಸೂಚಕಗಳನ್ನು ಬಳಸದೆ, ನಿರ್ದಿಷ್ಟ ನಾಮವನ್ನು ಮೊಟಕುಗೊಳಿಸಿ ಇಲ್ಲವೆ ವಿರೂಪಗೊಳಿಸಿ ಹೇಳುವುದನ್ನು ಗಮನಿಸಬಹುದು. ಇಲ್ಲಿ ಬಳಕೆಯಾಗುವ ರಾಯ, ದೊರೆ, ಒಡೆಯ, ಗೌಡ, ಶೆಟ್ಟಿ, ಸಾಹೇಬ ಪದಗಳು, ಪ್ರಭುತ್ವಶಾಹಿ ಸಂಸ್ಕೃತಿಯನ್ನು ಮೇಲ್ಜಾತಿ ಶ್ರೀಮಂತ ಸಮುದಾಯಗಳನ್ನು ಹೆಸರಿಸುತ್ತವೆ. ಹೀಗಾಗಿ ಹೆಸರು ಹೇಳುವ ಈ ಪದ್ಧತಿ ಮೊದಲು ಮೇಲ್ಜಾತಿ ಮತ್ತು ಮೇಲ್ವರ್ಗದವರಲ್ಲಿ ಬಳಕೆಯಲ್ಲಿದ್ದುದರ ಸೂಚನೆಯನ್ನು ಇವು ಸೂಚಿಸುತ್ತಿರಬಹುದು. ನಿದರ್ಶನಕ್ಕೆ ಕೆಲವು ಉದಾಹರಣೆಗಳನ್ನು ನೋಡಬಹುದು.

ಸ್ತ್ರೀಯರು ಪುರುಷರ (ಗಂಡನ) ಹೆಸರನ್ನು ಸಂಬೋಧಿಸುವ ವಿಧಾನ -

ಎಳ್ಳ ಹೂವಿನಸೀರೆ, ಬೆಳ್ಳಿಕಾಲುಂಗರ
ಒಳ್ಳ್ಯಾವರ ಮಗಳಂತ ಹೊಳ್ಳೊಳ್ಳಿ ನೋಡುತಾನ
ಮಹದೇವರಾಯ (ಮಹದೇವಪ್ಪ...)

ಚೆಚ್ಚಿ ಬಿತ್ತ್ಯಾನ ಚೆಲ್ಲಾಟ ಮಾಡತಾನ
ಭತ್ತಾ ಬಿತ್ತ್ಯಾನ ಬರಾಟ ಮಾಡತಾನ
ದೀಪ ಆರಸತಾನ ಧಿಮಾಕ ಮಾಡತಾನ
ಹುವ್ವಿನಂತ ಹುಡುಗಿನ ಕಂಡ ಹುಡುಗಾಟಕಿ
ಮಾಡತಾನ ರಾಮು ಸಾಹೇಬ (ರಾಮಯ್ಯ)

ಗುಂಗರಕೂದಲ ಬಂಗಾರ ಬೋತಲ
ರಂಗ ಮಂಚದ ಮ್ಯಾಲ
ರಂಬೀನ ರಮಸತಾನ ವೀರಾರೆಡ್ಡಿ (ವೀರಣ್ಣ)

ಹಾಲ ಮ್ಯಾಗಿನಿ ಕೆನಿ
ಹವಳ ಮುತ್ತಿನ ಗೊನಿ
ಇಜಾಪುರ ಸಕ್ರಿ, ಗೋದಿ ಬಕ್ರಿ
ತಾಟಕ ನೂರ ಬಾಳಿ ಎಲಿ
ಊಟಕ ನೂರ ಉಪ್ಪಿನಕಾಯಿ
ಊಟ ಮಾಡ ಅಂದ್ರ
ಗಜಗಿನ ಆಟ ಆಡತಾನ ಶಿವನಗೌಡ್ರು (ಶಿವನಗೌಡ)

ನೀರಿಗಿ ಹೋಗುವ ರಂಬಿ ನೋಡ
ರಂಬಿ ತಲೆಮ್ಯಾಗಿನ ಸಿಂಬಿ ನೋಡ
ಸಿಂಬಿ ಮ್ಯಾಗಿನ ಕೊಡ ನೋಡ
ಕೊಡದ ಮ್ಯಾಗಿನ ಟೊಂಗಿ ನೋಡ
ಟೊಂಗಿ ಮ್ಯಾಗಿನ ಟಿಸಲ ನೋಡ
ಟಿಸಲ ಮ್ಯಾಗಿನ ಎಲಿ ನೋಡ
ಎಲಿಮ್ಯಾಗ ಕುತ್ತ ನೆಲ ನೋಡತಾನ
ಬಸವರಾಜ ಶೆಟ್ಟಿ (ಬಸವರಾಜ)

ಅಣ್ಣಾಕಟ್ಟ್ಯಾನ ಅಡಕಿ ಮನಿ
ತಮ್ಮ ಕಟ್ಟ್ಯಾನ ಕಿಡಕಿಮನಿ
ತಮ್ಮಾವ ಕಟ್ಟ್ಯಾನ ಸಿಂಗಾರಮನಿ
ಸಿಂಗಾರ ಮನ್ಯಾಗ ಕೂತು
ಬಂಗಾರ ತೂಗುತಾನ
ನಾಗರಾಜ ಒಡೆಯ (ನಾಗರಾಜ)

ಕೊಂಡ್ಲಳ್ಳಿ ಸಂತೆಗೋಗಿ

ಕಾಗಿನ ಸೀರಿ ತರ್ತೀನಂತ

ಸುಳ್ ಹೇಳಿ ಮಳ್ ಮಾಡತಾನ

ಓಬರಾಯ (ಓಬಯ್ಯ)

ಪುರುಷರು (ಗಂಡಂದಿರು) ಹೆಂಡಂದಿರ ಹೆಸರನ್ನು ಹೇಳುವ ವಿಧಾನ

ಹರಕ ತೆವಿ ಮುರಕ ಕೊಣಮಗಿ

ರೊಟ್ಟಿ ಬರವಲ್ಲವಂತ

ಹೊಟ್ಟೊಟ್ಟಿ ಬಡಕೋತಾಳ ಕಮಲಿ (ಕಮಲಮ್ಮ)

ಎಪ್ಪತ್ತ ರೂಪ್ಯೆ ಎಮ್ಮಿ

ಇಪ್ಪತ್ತ ರೂಪ್ಯೆ ತೆಮಿಗಿ

ಚಪ್ಪರದಾಗ ಎಮ್ಮಿ

ಚಪ್ಪರಸಿ ಹಿಂಡತಾಳ ಪಾಲಿ (ಪಾಲಮ್ಮ)

ಸಿಟ್ಟಿಗಿ ಬಂದ ಬಡಿಲಾಕ ಎದ್ದರ

ಸಟ್ಟನ ಬಂದ ಕಾಲ ಹಿಡಿತಾಳ ಬೋರಿ (ಬೋರಮ್ಮ)

ಹಸರ ಸೀರಿ ಹನ್ನೆರ್ಡ್ನ ನಿರಗಿ

ಹಸನ ಬರವಲ್ದಂತ

ಬೀಸಿ ಬೀಸಿ ಒಗೀತಾಳ ಶಿವಿ (ಶಿವಮ್ಮ)

ಹತ್ತ ಮಳಾ ದಡಸೀರಿ

ಐದು ಮಳಾ ಕರಿಸೀರಿ

ಸರವತ್ತಿನಾಗ ಎದ್ದ

ಸರಗಿ ಬೇಡತಾಳ ತಿಪ್ಪಿ (ತಿಪ್ಪಮ್ಮ)

ಮೇಲಿನ ಎರಡೂ ವರ್ಗದ ಒಡಪುಗಳಲ್ಲಿ ವ್ಯಕ್ತಗೊಂಡಿರುವ ವ್ಯಕ್ತಿನಾಮಗಳನ್ನು ಗಮನಿಸಿದರೆ, ಪುರುಷ ಹೆಸರಿನ ಕೊನೆಗೆ ಗೌರವಸೂಚಕ ಪ್ರತ್ಯಯಗಳು ಅಂಟಿದ್ದು, ಇದು ಪ್ರಸ್ತುತ ಸಮಾಜದಲ್ಲಿ ಪುರುಷ ಸ್ಥಾನಮಾನವನ್ನು ಸೂಚಿಸಿದರೆ, ಸ್ತ್ರೀ ಹೆಸರಿನ ಕೊನೆಗೆ ಯಾವುದೇ ಗೌರವ ಪ್ರತ್ಯಯ ಸೇರದೆ, ನಿರ್ದಿಷ್ಟ ಭಾಗವನ್ನು 'ಇ' ಕಾರಾಂತ್ಯಗೊಳಿಸಿ ಅಥವಾ ವಿರೂಪಗೊಳಿಸಿ ಏಕವಚನದಿಂದ ಸಂಬೋಧಿಸುವಂಥದ್ದು ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಹೆಣ್ಣಿನ ಸ್ಥಾನಮಾನವನ್ನು ಸೂಚಿಸುತ್ತದೆ. ಪುರುಷ ಹೆಸರುಗಳಲ್ಲಿ ಗೌರವಸೂಚಕ ಪ್ರತ್ಯಯಗಳಾಗಿ ಬಳಕೆಯಾಗುವ ಶೆಟ್ಟಿ, ಗೌಡ ಎಂಬ ಪದಗಳು, ಸಾಮಾಜಿಕ ವರ್ಗಗಳನ್ನು

ಸೂಚಿಸುವ ಪ್ರತ್ಯೇಕ ಪದಗಳಾಗಿದ್ದರೂ, ಈ ಸಮುದಾಯಗಳು ಸಾಮಾಜಿಕವಾಗಿ ಉನ್ನತ ಸ್ಥಾನಮಾನವನ್ನು ಪಡೆದುಕೊಂಡಿರುವುದರಿಂದ, ಆ ಜಾತಿಸೂಚಕ ಪದಗಳನ್ನು ಇಲ್ಲಿ ಗೌರವಸೂಚಕಗಳಾಗಿ ಬಳಸಲಾಗಿದೆ.

'ರಾಯ', 'ದೊರೆ', 'ಒಡೆಯ' ಎಂಬ ಗೌರವ ಸೂಚಕಗಳು ಸಾಮಾನ್ಯವಾಗಿ ಎಲ್ಲಾ ಸಮಾಜಗಳಲ್ಲಿ ಬಳಕೆಯಲ್ಲಿರುವುದು ಕಂಡುಬರುತ್ತದೆ. ಆದರೆ ಜಾತಿಸೂಚಕ ಪದಗಳು ಆಯಾ ಸಮುದಾಯಗಳಲ್ಲಿ ಮಾತ್ರ ಹೆಚ್ಚು ಬಳಕೆಯಲ್ಲಿರುವುದು ಗಮನಾರ್ಹ. ಹುದ್ದೆ, ವೃತ್ತಿ/ಜಾತಿಸೂಚಕ ಪದಗಳು ಗೌರವಸೂಚಕಗಳಾಗಿ ಬಳಕೆಯಾಗುವಂತೆ 'ಮಾವ/ಮಾಮ ಎಂಬ ಸಂಬಂಧಸೂಚಕ ಪ್ರತ್ಯಯವೂ ಕೂಡ ಇಲ್ಲಿ ಗೌರವಸೂಚಕವಾಗಿ ಬಳಸಲ್ಪಡುತ್ತದೆ. (ಉದಾಹರಣೆಗೆ ಮಲ್ಲಯ್ಯ > ಮಲ್ಲಮಾವ, ಬೈಯ್ಯಣ್ಣ > ಬೈಯ್ಯಮಾವ ಇತ್ಯಾದಿ) ಹೀಗೆ ಹೆಸರಿನ ಕೊನೆಗೆ ಮಾವ/ಮಾಮ ಎಂದು ಬಳಸುವಂಥದ್ದು ಚಿತ್ರದುರ್ಗ ಪರಿಸರದಲ್ಲಿ ಹೆಚ್ಚಾಗಿ ತಳ ಸಮಾಜಗಳಲ್ಲಿ ಮಾತ್ರ ಕಾಣಬರುತ್ತಿದ್ದು ಮೇಲ್ಜಾತಿಗಳಲ್ಲಿ ಕಾಣಬಂದಂತೆ ತೋರುವುದಿಲ್ಲ.

ಪ್ರಸ್ತುತ ಸಾಮಾಜಿಕ ವ್ಯವಸ್ಥೆ ಹಿಂದೆಗಿಂತ ಇಂದು ಬದಲಾಗಿದೆ. ನಾಮಕರಣ ಮೊದಲು ಮಾಡಿಕೊಂಡು ನಾಮ ಸಂಬೋಧನೆಯವರೆಗೂ ಜನರಿಗಿದ್ದ ನಂಬಿಕೆಗಳಲ್ಲಿ ಅನೇಕ ಸುಧಾರಣೆಗಳು ಆಗಿವೆ. ಕೆಲವು ದಶಕ ಅಥವಾ ಶತಮಾನಗಳ ಹಿಂದೆ ಹೆಸರು ಸಾಮಾನ್ಯವಾಗಿ ನಿರ್ದಿಷ್ಟ ಮತ್ತು ವಾರ್ಗಿಕ ಎಂಬ ಎರಡು ಘಟಕಗಳಿಂದ ಕೂಡಿರುತ್ತಿತ್ತು. ವಾರ್ಗಿಕಗಳಲ್ಲಿ ಭಾಗಶಃ ಸಂಬಂಧಸೂಚಕ ವಾರ್ಗಿಕಗಳೇ ಇರುತ್ತಿದ್ದವು. ಆದರೆ ಇಂದು ವಾರ್ಗಿಕಗಳನ್ನು ಕೈಬಿಟ್ಟು ಕೇವಲ ನಿರ್ದಿಷ್ಟ ಘಟಕಗಳನ್ನು ಮಾತ್ರ ಹೆಸರಾಗಿ ಪಡೆಯುವಂಥ ರೂಢಿ ಹೆಚ್ಚಾಗುತ್ತಿದೆ. ಮದುವೆ ಸಮಾರಂಭಗಳಲ್ಲಿ ವಧು, ವರನ ಹೆಸರನ್ನು ವಿರೂಪ, ವ್ಯಂಗ್ಯ, ಏಕವಚನದಿಂದ ಹೇಳುವುದು ಹಾಗೂ ವರ, ವಧುವಿನ ಹೆಸರನ್ನು ಹೇಳುವಾಗ, ಹೆಸರು ಹೇಳಿ ಕೊನೆಗೆ ಯಾವುದಾದರು ಗೌರವಸೂಚಕ ಪ್ರತ್ಯಯಗಳನ್ನು ಸೇರಿಸಿ ಹೇಳುವಂಥ ಪದ್ಧತಿ ಇಂದು ಮರೆಯಾಗುತ್ತಿದೆ. ಬದಲಾಗಿ ವಧೂ-ವರರು ಪರಸ್ಪರರ ಹೆಸರನ್ನು ಯಾವುದೇ ಸಂಕೋಚವಿಲ್ಲದೆ, ನೇರವಾಗಿ ಮತ್ತು ಮುದ್ದಾಗಿ ಹೇಳುವಂಥದ್ದನ್ನು ಗಮನಿಸಬಹುದು. ಈ ಎಲ್ಲಾ ಬದಲಾವಣೆಗಳಿಗೆ ಆಧುನೀಕರಣ ಪ್ರಭಾವ ಕಾರಣವಾಗಿದೆ ಎಂದು ಹೇಳಬಹುದು.

ವ್ಯಕ್ತಿನಾಮಗಳು ಒಂದು ಕಾಲದ ಪ್ರಾತಿನಿಧಿಕ ಅಂಶಗಳಾಗಿ ಕಂಡುಬರುತ್ತವೆ. ಪರಿವರ್ತನಶೀಲ ಗುಣವನ್ನು ಮೈಗೂಡಿಸಿಕೊಂಡಿರುವ ವ್ಯಕ್ತಿನಾಮಗಳು ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದಿವೆ. ಭಾಷಿಕವಾಗಿ, ಸಾಮಾಜಿಕವಾಗಿ ಪ್ರತ್ಯೇಕತೆಯನ್ನು ಸೂಚಿಸುವಂತೆ, ಒಂದು ಕಾಲಘಟ್ಟದ ನಿರ್ಣಾಯಕ ಅಂಶಗಳಾಗಿಯೂ ಕಾರ್ಯ ನಿರ್ವಹಿಸುತ್ತವೆ. ಅದೇ ರೀತಿ ವ್ಯಕ್ತಿನಾಮಗಳ ಬಳಕೆ ಕೂಡ. ಪ್ರಾಚೀನ ಕಾಲದ ಸಮಾಜದಲ್ಲಿ ವ್ಯಕ್ತಿನಾಮ ಸಂಬೋಧನೆಯ ಬಗ್ಗೆ ಇದ್ದ ನಂಬಿಕೆಗಳು, ಅರ್ವಾಚೀನ ಸಮಾಜದಲ್ಲಿ ಬದಲಾಗಿವೆ. ಹೆಂಡತಿ ಗಂಡನನ್ನು, ಸೊಸೆ, ಅತ್ತೆಮಾವಂದಿರನ್ನು, ಶೂದ್ರರು (ಕೆಳಜಾತಿಯವರು) ಬ್ರಾಹ್ಮಣರನ್ನು ಹೆಸರಿಡಿದು ಕರೆಯುವುದು ನಿಷೇಧಿಸಲ್ಪಟ್ಟಿತ್ತು. ಬ್ರಾಹ್ಮಣರು ಶೂದ್ರರ ಹೆಸರನ್ನು ಕರೆಯುವಾಗ ಏಕವಚನದಿಂದ ಕರೆಯುತ್ತಿದ್ದು ಹೆಸರಿನ ಅಂತ್ಯದಲ್ಲಿ ಬಂಧುವಾಚಿ ಗೌರವ ಪ್ರತ್ಯಯಗಳನ್ನು (ವಾರ್ಗಿಕ) ಬಳಸುವುದು ಸಮಾಜ ಬಾಹಿರವಾಗಿತ್ತು. ಆದರೆ ಇಂದು ಈ ನಂಬಿಕೆಗಳಲ್ಲಿ ಸಡಲಿಕೆ ಉಂಟಾಗಿದೆ. ಆ ಕಾರಣಕ್ಕಾಗಿ ವ್ಯಕ್ತಿನಾಮಗಳ ಸಂಬೋಧನೆ ಅಥವಾ ಬಳಕೆಯನ್ನು ಸಾಮಾಜಿಕವಾಗಿ, ಭಾಷಿಕವಾಗಿ ಮಾತ್ರವಲ್ಲದೆ, ಕಾಲದ ದೃಷ್ಟಿಯಿಂದಲೂ ದಾಖಲಿಸಬೇಕಾದ ಅಗತ್ಯವಿದೆ.

### ಅಡಿಟಿಪ್ಪಣಿ

೧. ಡಾ. ಎಸ್.ಎಸ್.ಅಂಗಡಿ, ಸಂಬಂಧವಾಚಕಗಳು ಮತ್ತು ಸಂಬೋಧನೆಗಳು, ೨೦೦೨, ಪು. ೨೧

೨. ಅದೇ, ಪು. ೪೦

೩. ಅದೇ, ಪು. ೪೦

೪. ಉದ್ಧೃತ : ಡಾ. ಎಂ.ಚಿದಾನಂದಮೂರ್ತಿ, ವಾಗರ್ಥ, ೧೯೮೧, ಪು. ೬೨

೫. ದೇಜಗೌ, ಜಾನಪದ ಸೌಂದರ್ಯ, ೧೯೭೭, ಪು. ೯೭

೬. ಅದೇ, ಪು. ೯೭

೭. ಕೆ.ವಿ.ನಾರಾಯಣ (ಸಂ), ವ್ಯಕ್ತಿನಾಮಗಳು: ಸ್ವರೂಪ ಮತ್ತು ವಿಶ್ಲೇಷಣೆ, ೨೦೦೦, ಪು. ೫೭

೮. ಅದೇ, ಪು. ೫೯

೯. ಅದೇ, ಪು. ೫೯

೧೦. ಸುಧಾ (ವಾರಪತ್ರಿಕೆ) ೧, ನವೆಂಬರ್, ೨೦೦೧, ಪು. ೧೫

೧೧. ಡಾ. ಎಸ್.ಎಸ್.ಅಂಗಡಿ, ಸಂಬಂಧವಾಚಕಗಳು ಮತ್ತು ಸಂಬೋಧನೆಗಳು, ೨೦೦೨, ಪು. ೩೬

೧೨. ಅದೇ, ಪು. ೩೬

೧೩. ಅದೇ, ಪು. ೧೩

೧೪. ಎಂ.ಟಿ.ರತಿ. ಕೊಡುಗು ಬಹುಭಾಷಿಕ ಜಿಲ್ಲೆ ಒಂದು ಅಧ್ಯಯನ, ೧೯೯೪, ಪು. ೬೫೨

೧೫. ಉದ್ಧೃತ: ಅದೇ, ಪು. ೭೫೯

೧೬. ಡಾ. ಎಸ್.ಎಸ್.ಅಂಗಡಿ, ಸಂಬಂಧವಾಚಕಗಳು ಮತ್ತು ಸಂಬೋಧನೆಗಳು, ೨೦೦೨, ಪು. ೧೨

೧೭. ಅದೇ, ಪು. ೧೨

೧೮. ಕೆ.ವಿ.ನಾರಾಯಣ (ಸಂ), ವ್ಯಕ್ತಿನಾಮಗಳು: ಸ್ವರೂಪ ಮತ್ತು ವಿಶ್ಲೇಷಣೆ, ೨೦೦೦, ಪು. ೪೮



ಅಧ್ಯಾಯ - ೫

# ವ್ಯಕ್ತಿನಾಮಗಳು : ಸಾಂಸ್ಕೃತಿಕ ದೃಷ್ಟಿಕೋನ

೫. ಪ್ರವೇಶ

೫.೧. ಹೆಸರು ಮತ್ತು ತಾತ್ವಿಕತೆ

೫.೨. ನಾಮಕರಣ

೫.೩. ನಾಮಕರಣ : ನಂಬಿಕೆ

೫.೪. ಹೆಸರು : ನಂಬಿಕೆ

೫.೫. ಹೆಸರು : ಆಯ್ಕೆ

೫.೬. ಹೆಸರು : ಬದಲಾವಣೆ ಪ್ರಕ್ರಿಯೆ

೫.೭. ಅಡ್ಡಹೆಸರು

೫.೮. ಕುಲನಾಮ

ಅಧ್ಯಾಯ - ೫

# ವ್ಯಕ್ತಿನಾಮಗಳು : ಸಾಂಸ್ಕೃತಿಕ ದೃಷ್ಟಿಕೋನ

## ೫. ಪ್ರವೇಶ

ಆರಂಭದ ದಿನಗಳಲ್ಲಿ ಹೆಸರು ವ್ಯಕ್ತಿಯನ್ನು ಗುರುತಿಸುವ ಒಂದು ಭಾಷಾ ಸಾಧನವಾಗಿ ಮಾತ್ರ ಬಳಸಲ್ಪಟ್ಟಿದೆ. ವ್ಯಕ್ತಿಗೆ ಹೆಸರಿನ ಮಹತ್ವ ಗೊತ್ತಾದ ನಂತರದಲ್ಲಿ ಸಾಮಾಜಿಕವಾದ, ಸಾಂಸ್ಕೃತಿಕವಾದ ಆಯಾಮಗಳು ಪ್ರಾಪ್ತವಾಗಿವೆ. ಅಲ್ಲದೆ ಹೆಸರಿನ ಬಗೆಗೆ ಅನೇಕ ನಂಬಿಕೆಗಳು, ಸಂಪ್ರದಾಯಗಳೂ ಬೆಳೆದುಬಂದಿವೆ. ಇದು ಭಾರತೀಯ ದೇಶ ಭಾಷೆಗಳ ವ್ಯಕ್ತಿನಾಮಗಳಿಗೆ ಮಾತ್ರ ಅನ್ವಯಿಸುವ ನಿಯಮವಾಗಿರದೆ, ಜಗತ್ತಿನ ಬಹುತೇಕ ಭಾಷೆಗಳ ವ್ಯಕ್ತಿನಾಮಗಳಿಗೂ ಅನ್ವಯಿಸುತ್ತದೆ. ಹೆಸರು ಮತ್ತು ವ್ಯಕ್ತಿಯ ನಡುವಿನ ಸಂಬಂಧವನ್ನು ಜನರು ಎರಡು ರೀತಿಯಲ್ಲಿ ಪರಿಭಾವಿಸಿದ್ದಾರೆ. ಹೆಸರಿಗು ಮತ್ತು ವ್ಯಕ್ತಿಗು ನೇರವಾದ ಸಂಬಂಧವಿದೆ ಎಂದೂ, ಮತ್ತು ಇಲ್ಲವೆಂದೂ ಜನರಲ್ಲಿ ಏಕಕಾಲಕ್ಕೆ ಎರಡು ಅಭಿಪ್ರಾಯಗಳಿವೆ. ಈ ಭಿನ್ನಾಭಿಪ್ರಾಯಗಳು ಹೆಸರಿನ ಬಗೆಗೆ ಅನೇಕ ನಂಬಿಕೆಗಳಿಗೆ ಎಡೆಮಾಡಿಕೊಟ್ಟಿವೆ. ಪರಿಣಾಮವಾಗಿ ಹೆಸರಿನ ಆಯ್ಕೆ, ಬಳಕೆ, ಬದಲಾವಣೆ ಇತ್ಯಾದಿ ಹಲವು ಆಯಾಮಗಳಿಗೆ ಪ್ರೇರಣೆಯಾಗಿದೆ. ಅಲ್ಲದೆ ಹೆಸರಿನ ವಸ್ತುಸ್ಥಿತಿಯನ್ನು ಜಟಿಲಗೊಳಿಸಿವೆ. ಪ್ರಸ್ತುತ ಅಧ್ಯಾಯ ಈ ಬಗೆಯ ಹಲವು ವಿಷಯಗಳ ಚರ್ಚೆಯನ್ನು ಒಳಗೊಂಡಿದೆ.

ಅಡ್ಡಹೆಸರು ಮತ್ತು ಕುಲನಾಮಗಳು ವ್ಯಕ್ತಿನಾಮದ ಉಪನಾಮಗಳಾಗಿ ಬೆಳೆದುಬಂದಿವೆ. ವ್ಯಕ್ತಿನಾಮದ ಹಾಗೆ ಇವುಗಳ ಉದ್ದೇಶವೂ ವ್ಯಕ್ತಿಯನ್ನು ನಿಖರವಾಗಿ ಗುರುತಿಸುವುದೇ ಆಗಿರುತ್ತದೆ. ಕೆಲವು ಸಂದರ್ಭಗಳಲ್ಲಿ ಕುಲನಾಮಗಳು ವ್ಯಕ್ತಿನಾಮಗಳಿಂತ ಹೆಚ್ಚು ಮಹತ್ವವನ್ನು ಪಡೆದುಕೊಳ್ಳುತ್ತವೆ. ಸಂಸ್ಕೃತಿಯ ಅಧ್ಯಯನದಲ್ಲಿ ಕುಲನಾಮ ಮತ್ತು ಅಡ್ಡಹೆಸರುಗಳು ತುಂಬಾ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತವೆ. ಅಲ್ಲದೆ ಸಮಕಾಲೀನ ಸಂದರ್ಭಗಳಲ್ಲಿ ಕುಲನಾಮ ಮತ್ತು ಅಡ್ಡ ಹೆಸರಿನ ಬಳಕೆಯ ಆಯಾಮಗಳು ಯಾವ ಬಗೆಯವು ಎಂಬುದು ಗಮನಾರ್ಹ ಸಂಗತಿಯಾಗಿದೆ.

ಪ್ರಸ್ತುತ ಸಂದರ್ಭದಲ್ಲಿ ಚಿತ್ರದುರ್ಗ ಪರಿಸರದಲ್ಲಿ ರೂಢಿಯಲ್ಲಿರುವ ನಾಮಕರಣದ ವಿಧಿ ವಿಧಾನ, ಹೆಸರಿನ ಬಗೆಗೆ ಇರುವ ನಂಬಿಕೆ, ಸಂಪ್ರದಾಯ, ಹೆಸರಿನ ಆಯ್ಕೆ ವಿಧಾನ ಹಾಗೂ ಅಡ್ಡಹೆಸರು ಕುಲನಾಮಗಳ ಬಳಕೆ ಮತ್ತು ವೈಶಿಷ್ಟ್ಯವನ್ನು ಪ್ರಸ್ತುತ ಅಧ್ಯಾಯದಲ್ಲಿ ಗಮನಿಸುವ ಪ್ರಯತ್ನಮಾಡಲಾಗಿದೆ.

## ೫.೧. ಹೆಸರು : ತಾತ್ವಿಕತೆ

ನಿಸರ್ಗದ ಸಜೀವ ಮತ್ತು ನಿರ್ಜೀವ ಪ್ರಾಣಿ, ವಸ್ತುಗಳಿಗೆ ಹೆಸರು ಇರುತ್ತದೆ. ಮನುಷ್ಯ, ಪ್ರಾಣಿ, ಪಕ್ಷಿ, ಊರು, ಬೆಟ್ಟ, ಗುಡ್ಡ, ಪರ್ವತ, ನದಿ, ಸಾಗರ, ಭೂಮಿ, ಆಕಾಶ, ಗಿಡ, ಮರ, ಬಳ್ಳಿ, ಹೂವು, ಹಣ್ಣು, ಕಾಯಿ ಮೊದಲಾದವುಗಳಿಗೆ ಕನಿಷ್ಠ ಒಂದು ಹೆಸರು ನಿರ್ದೇಶನವಾಗಿರುತ್ತದೆ. ಅಧ್ಯಯನದ ಅನುಕೂಲಕ್ಕಾಗಿ ಇವುಗಳನ್ನು 'ಮಾನವ ವರ್ಗ' ಮತ್ತು 'ಮಾನವೇತರ ವರ್ಗ' ಎಂದು ಗುರುತಿಸಿಕೊಳ್ಳಬಹುದು. ಸಮಾಜದ ಪ್ರತಿ ಸದಸ್ಯನಿಗೆ ಹೆಸರಿರುತ್ತದೆ. ಪ್ರಾಯಶಃ ಹೆಸರಿರದ ಜೀವಂತವ್ಯಕ್ತಿ ಸಮಾಜದಲ್ಲಿ ಇರಲಾರ. ವ್ಯಕ್ತಿಗೆ ಹೆಸರು ಇರಬೇಕೆಂಬುದು ಸಾಮಾಜಿಕ ಅಗತ್ಯವಾಗಿರುವಂತೆ, ಕಡ್ಡಾಯವೂ ಆಗಿದೆ. ಮಾನವೇತರ ವರ್ಗದಲ್ಲಿ ಹೆಸರಿರದ ಉದಾಹರಣೆಗಳು ಇರಬಹುದೇನೋ? ವ್ಯಕ್ತಿ, ಪ್ರಾಣಿ, ವಸ್ತು ವಿಷಯಗಳಿಗೆ ಹೆಸರೆಂಬುದು ಇರದಿದ್ದರೆ, ವ್ಯವಹಾರವೆಂಬುದು ನಡೆಯುತ್ತಿರಲಿಲ್ಲ. "ಭಾಷೆಯೆಂಬುದೊಂದು ಇರದೆ ಹೋಗಿದ್ದರೆ ಈ ಜಗತ್ತು ಕತ್ತಲಮಯವಾಗಿರುತ್ತಿತ್ತು" ಎಂಬ ದಂಡಿಯ ಮಾತು ಪ್ರಸ್ತುತ ಸಂದರ್ಭದಲ್ಲಿ ಉಲ್ಲೇಖಾರ್ಹವೆನಿಸಿದೆ.

ಹೆಸರು ಮುಖ್ಯವಾಗಿ ಎರಡು ಪ್ರಧಾನ ಅರ್ಥನೆಲೆಗಳನ್ನು ಸೂಚಿಸುತ್ತಿರುತ್ತದೆ. ಒಂದು ವರ್ಗವಾಚಿ. ಎರಡು ಘಟಕವಾಚಿ. ವರ್ಗವಾಚಿ ನಾಮಗಳು ರೂಢ ನಾಮಗಳಾಗಿದ್ದು, ಒಂದು ಸಮೂಹವನ್ನು ಪ್ರತಿನಿಧಿಸಿದರೆ, ಘಟಕವಾಚಿ ನಾಮಗಳು ಅಂಕಿತನಾಮಗಳಾಗಿದ್ದು, ಸಮೂಹದ ಒಂದು ಅಂಗವನ್ನು ಮಾತ್ರ ಪ್ರತಿನಿಧಿಸುತ್ತವೆ. ಮಾನವ, ಪ್ರಾಣಿ, ಬೆಟ್ಟ, ಮರ, ನದಿ, ಸಾಗರ, ಊರು ಮೊದಲಾದವು ವರ್ಗವಾಚಿ ನಾಮಗಳಾದರೆ, ಕೃಷ್ಣ, ಲಕ್ಷ್ಮಿ, ಜಿಂಕೆ, ಸಹ್ಯಾದ್ರಿ, ಶ್ರೀಗಂಧ, ಕಾವೇರಿ, ಫೆಸಿಫಿಕ್ ಮೊದಲಾದವು ಘಟಕವಾಚಿ ನಾಮಗಳಾಗಿವೆ. ವ್ಯಕ್ತಿಹೆಸರು ಘಟಕವಾಚಿಯಾಗಿರುವಂತೆ, ವರ್ಗವಾಚಿಯೂ ಆಗಿರುತ್ತದೆ. ಉದಾಹರಣೆಗೆ 'ತಿಪ್ಪೇಸ್ವಾಮಿ' ಹೆಸರಿನ ವ್ಯಕ್ತಿಗಳು ಒಂದೇ ಪರಿಸರದಲ್ಲಿ ಇಲ್ಲವೆ ಒಂದೇ ಊರಿನಲ್ಲಿ ಹಲವು ಜನರಿರಬಹುದು. ಆಗ 'ತಿಪ್ಪೇಸ್ವಾಮಿ' ಎಂಬುದು ಒಬ್ಬ ಸದಸ್ಯನ ಹೆಸರಾಗಿರುವಂತೆ, ಹಲವು ಸದಸ್ಯರ ಹೆಸರೂ ಆಗಿರುತ್ತದೆ. ಅಂದರೆ ಒಂದು ಗುಂಪನ್ನು ಪ್ರತಿನಿಧಿಸುತ್ತದೆ. ಈ ಹಿನ್ನೆಲೆಯಲ್ಲಿ ಏಕಕಾಲಕ್ಕೆ ಹೆಸರು ಘಟಕವಾಚಿಯೂ, ವರ್ಗವಾಚಿಯೂ ಆಗಿರುತ್ತದೆ ಎಂದು ಹೇಳಬಹುದು.

ಹೆಸರು ಸಮೂಹದಿಂದ ಪ್ರತ್ಯೇಕ ಮಾಡಿ ಗುರುತಿಸುವ ಸಾಧನ. "ವಾಸ್ತವವಾಗಿ ಹೆಸರುಗಳು ಭಾಷೆಯ ರಚನೆಗಳು. ಇತರ ಭಾಷಿಕ ರಚನೆಗಳಿಗೆ ಅನ್ವಯವಾಗುವ ನಿಯಮಗಳು ಹೆಸರುಗಳಿಗೂ ಅನ್ವಯವಾಗುತ್ತವೆ. ಮತ್ತು ಭಾಷೆಯ ಧ್ವನಿ ಸಂಯೋಜನೆಯ ನಿಯಮಗಳು ಹೆಸರುಗಳಲ್ಲಿ ಕಾಣಿಸಿಕೊಳ್ಳುತ್ತವೆ. ಭಾಷೆಯ ಪದಗಳಿಗೆ ಅರ್ಥವಿರುತ್ತದೆ. ಭಾಷಾಶಾಸ್ತ್ರ ಈ ಪದ ಪದಾರ್ಥಗಳ ಸಂಬಂಧವನ್ನು ಯಾದೃಚ್ಛಿಕವೆಂದು ಕರೆಯುತ್ತದೆ. ಹೆಸರುಗಳಿಗೂ ಈ ನಿಯಮಗಳು ಅನ್ವಯಿಸುತ್ತವೆ." ಹಾಗಾದರೆ ಹೆಸರು ಮತ್ತು ವ್ಯಕ್ತಿಯ ನಡುವೆ ಯಾವ

ಸಂಬಂಧವಿದೆ? ಎಂಬ ಪ್ರಶ್ನೆಯನ್ನು ಮಾಡಿಕೊಂಡಾಗ, ನಮ್ಮ ಪೂರ್ವಿಕ ಸಮಾಜಗಳು ಹೆಸರು ಮತ್ತು ವ್ಯಕ್ತಿಯ ಸಂಬಂಧವನ್ನು ದ್ವಂದ್ವಾತ್ಮಕ ರೀತಿಯಲ್ಲಿ ಅನುಸರಿಸುತ್ತ ಬಂದಿವೆ. ವಾಸ್ತವವಾಗಿ ಹೆಸರಿನ ಅರ್ಥಕ್ಕೂ ಮತ್ತು ವ್ಯಕ್ತಿಯ ವ್ಯಕ್ತಿತ್ವಕ್ಕೂ ಯಾವುದೇ ಲಕ್ಷಣ ಸೂಚಕ ಸಂಬಂಧಗಳು ಇರುವುದಿಲ್ಲ. 'ಸಂಪತ್ತು ಕುಮಾರ' ಎಂಬ ಹೆಸರುಳ್ಳ ವ್ಯಕ್ತಿ ಅಗರ್ಭ ಶ್ರೀಮಂತನಾಗಿದ್ದರೆ, ಹೆಸರಿಗು ಮತ್ತು ವ್ಯಕ್ತಿಗು ಪರಸ್ಪರ ಸಂಬಂಧವಿದೆ ಎಂದು ಭಾವಿಸಿವರೆ ತಪ್ಪು ಕಲ್ಪನೆಯೆನಿಸಬಹುದು. ವ್ಯಕ್ತಿಗೆ ಹೆಸರಿನ ಸಂಸ್ಕಾರ ಬಾಲ್ಯದಲ್ಲಿ ನೆರವೇರುವುದು. ಹೆಸರಿಡುವ ಕಾಲಕ್ಕೆ ವ್ಯಕ್ತಿ ಸಣ್ಣವನಿರುವುದರಿಂದ ವ್ಯಕ್ತಿಯ ಗುಣ-ಸ್ವಭಾವಗಳನ್ನು ಹೀಗೆಂದು ನಿರ್ಧರಿಸುವುದು ಕಷ್ಟಸಾಧ್ಯ. ಈ ಕಾರಣದಿಂದಾಗಿ ವ್ಯಕ್ತಿಗೆ ಶಾರೀರಿಕ ಮತ್ತು ಗುಣ, ಸ್ವಭಾವಗಳನ್ನು ಆಧರಿಸಿ ಹೆಸರಿಡುವುದಕ್ಕೆ ಬದಲಾಗಿ, ಇತರ ನಂಬಿಕೆಗಳ ಆಧಾರದ ಮೇಲೆ ಹೆಸರಿಡುವ ಪದ್ಧತಿ ರೂಢಿಯಾಯಿತು. ಪರಿಣಾಮವಾಗಿ ಹೆಸರಿನ ಪದದ ಅರ್ಥಕ್ಕೂ ವ್ಯಕ್ತಿಯ ವ್ಯಕ್ತಿತ್ವಕ್ಕೂ ಯಾವುದೇ ಸಂಬಂಧ ಇರುವುದಿಲ್ಲ. ಹಿಂದೆ ವ್ಯಕ್ತಿಗೆ ಅನ್ವರ್ಥಕ ನಾಮಗಳನ್ನು ಇಡುವ ಪದ್ಧತಿ ರೂಢಿಯಲ್ಲಿತ್ತು. ಆಗ ಹೆಸರಿಗೂ-ವ್ಯಕ್ತಿಗೂ ಸಂಬಂಧವಿರುತ್ತಿತ್ತು. "ಮಗುವಿನ ಗುಣಶೀಲಗಳನ್ನು ಪರಿಶೀಲಿಸಿ ಅವರ ಸ್ವಭಾವಕ್ಕೆ ತಕ್ಕಂತೆ ಹೆಸರಿಡುವ ಸಲುವಾಗಿ ಗ್ರೀಕರು ಮತ್ತು ಪಾರ್ಸಿಗಳು ಮಕ್ಕಳಿಗೆ ತಡವಾಗಿ ನಾಮಕರಣ ಮಾಡುತ್ತಾರೆ"[೨] ಇದು ಪ್ರಾಚೀನ ಕಾಲದ ನಾಮಕರಣ ಪದ್ಧತಿಯ ಕುರುಹಾಗಿ ಕಾಣಬರುತ್ತದೆ. ಉದಾಹರಣೆಗೆ ಕೆಲವು ನಿದರ್ಶನಗಳನ್ನು ಗಮನಿಸಬಹುದು. 'ಹಾಲಪ್ಪ ಕ್ಷೀರಸಾಗರ ಶಯನ' ಹೆಸರುಳ್ಳವರ ಮನೆಯಲ್ಲಿ ಕುಡಿಯಲು ಬೊಗಸೆ ಮಜ್ಜಿಗೆ ಇಲ್ಲ. 'ಸಂಪತ್ತು'ವಿನ ಮನೆಯಲ್ಲಿ ಊಟಕ್ಕೂ ತತ್ವಾರ. ಹೆಸರು ಭೀಮಣ್ಣ ನೋಡಲು ಹಂಚಿಕಡ್ಡಿ. 'ರಾಜಕುಮಾರ' ಹೆಸರಿನವನು ನಿರ್ಗತಿಕನ ಮಗ. ಶಾಂತ - ಸದಾ ಕೋಪಿಷ್ಠಳು. ಲಕ್ಷ್ಮಿ - ಬಿಡಿಕಾಸಿಗೂ ಗತಿ ಇಲ್ಲ. ಹೆಸರು ಮುಕ್ಕಣ, ಇರುವುದು ಎರಡೇ ಕಣ್ಣು. ಷಣ್ಮುಖ - ನಿಗೆ ಇರುವುದು ಒಂದೇ ಮುಖ. ಹೆಸರು ಕರಿಯಪ್ಪ, ನೋಡಲು ಮಾತ್ರ ಬೆಳ್ಳಗೆ ಇರುತ್ತಾನೆ. ಹೆಸರು ಶಾರದ - ವಿದ್ಯೆಯ ಗಂಧವೇ ಗೊತ್ತಿರುವುದಿಲ್ಲ. ಹೆಸರು ವೀಣಾ - ಸಂಗೀತದ ವಾಸನೇ ತಿಳಿದಿರುವುದಿಲ್ಲ. ಮೀನಾಕ್ಷಿ ಹೆಸರುಳ್ಳವಳ ಕಣ್ಣು ಗೋಲಿಗುಂಡು. ಹೆಸರು ವಿಶಾಲಾಕ್ಷಿ, ನೋಡಲು ಮೆಳ್ಳುಗಣ್ಣು. ಸುಮತಿ ಹೆಸರುಳ್ಳವಳು ಮಂದಮತಿ. ಹೆಸರು ತೃಪ್ತಿ, ಸದಾ ಅಸಮಧಾನದಿಂದ ಚಡಪಡಿಸುತ್ತಾಳೆ. ಹೆಸರು ಶಾಂತರಾಜ ನೋಡಿದರೆ ಅತಿ ಕೋಪಿಷ್ಠ. ಚಿರಂಜೀವಿ, ಮೃತ್ಯುಂಜಯ ಹೆಸರಿನವರು ಅಕಾಲ ಮರಣ ಹೊಂದಿದ್ದಾರೆ. ಹೆಸರು ನಾಗವೇಣಿ, ತಲೆಯಲ್ಲಿ ಗೇಣುದ್ದ ಕೂದಲಿಲ್ಲ. ಹೆಸರು ಲಕ್ಷ್ಮೀಪತಿ, ಕೈಯಲ್ಲಿ ಬಿಡಿಕಾಸೂ ಇಲ್ಲ. ಹೆಸರು ಶ್ರೀವಿದ್ಯಾ, ಶಾಲೆಯ ಮೆಟ್ಟಿಲು ಹತ್ತಿರುವುದಿಲ್ಲ. ಮೊದಲಾದ ಹೆಸರುಗಳ ಬಗೆಗಿರುವ ನುಡಿಗಟ್ಟುಗಳನ್ನು ಗಮನಿಸಿದಾಗ, ಹೆಸರು ಮತ್ತು ವ್ಯಕ್ತಿಯ ನಡುವೆ ನಿರ್ದೇಶನಾತ್ಮಕ ಸಂಬಂಧ ಮಾತ್ರ ಇರುವುದು ಸ್ಪಷ್ಟವಾಗುತ್ತದೆ. ನಿಜನಾಮಗಳು ವ್ಯಕ್ತಿಯನ್ನು ವರ್ಣಿಸುವುದಿಲ್ಲ. ಹೆಸರಿಸುತ್ತವೆ. ಕೆಲವು ಅಡ್ಡಹೆಸರುಗಳು ವ್ಯಕ್ತಿಯ ವ್ಯಕ್ತಿತ್ವವನ್ನು ನೇರವಾಗಿ ವರ್ಣಿಸುತ್ತವೆ. 'ಕರಿಯ' ಅಡ್ಡಹೆಸರಿನವರು ಬೆಳ್ಳಗೆ ಇರಲು ಸಾಧ್ಯವೇ ಇಲ್ಲ. 'ಎಳವ' ಅಡ್ಡಹೆಸರಿನವರು 'ಕಾಲುಗಳು' ನೆಟ್ಟಗಿರುವುದೇ ಇಲ್ಲ. ಮೂಗಮ್ಮ ಅಡ್ಡಹೆಸರಿನಗಳು ಮಿತಭಾಷಿಯಾಗಿರುತ್ತಾಳೆ. 'ವಕೀಲ' ಅಡ್ಡಹೆಸರುಳ್ಳವನು ವಾಚಾಳಿಯಾಗಿರುತ್ತಾನೆ. ಹೆಸರಿಗೂ ಮತ್ತು ವ್ಯಕ್ತಿಯ ವ್ಯಕ್ತಿತ್ವಕ್ಕೂ ಯಾವುದೇ ಕಾರ್ಯಕಾರಣ ಸಂಬಂಧ ಇರುವುದಿಲ್ಲ ಎಂದ ಮೇಲೆ, ಕೆಲವು ಹೆಸರುಗಳ ನಿರ್ದೇಶನ ನಿಷಿದ್ಧವಾಗಿರುವುದೇಕೆ? ದುರ್ಯೋಧನ, ರಾವಣ, ದುಶ್ಯಾಸನ, ಕೀಚಕ, ಶಕುನಿ, ನಾರದ, ಧೃತರಾಷ್ಟ್ರ, ಗಾಂಧಾರಿ, ಕುಂತಿ, ದ್ರೌಪದಿ, ಮಂಡೋದರಿ, ಮಂಥರೆ ಮುಂತಾದ ಹೆಸರುಗಳು

ಬಳಕೆಯಲ್ಲಿರುವ ಸಾಧ್ಯತೆ ಕಡಿಮೆ. ಅಂದರೆ ಹೆಸರುಗಳಿಗೆ ಕೆಲವೊಮ್ಮೆ ಲಕ್ಷಣಸೂಚಕ ಸಂಬಂಧವನ್ನು ಹೊಂದಿರುತ್ತವೆ. ಇವೆರಡೂ ನಿದರ್ಶನಗಳು ಸಮುದಾಯದ ನಂಬಿಕೆಯನ್ನು ಆಧರಿಸಿವೆ. "ಗುಲಾಬಿ'ಯನ್ನು ಬೇರೆ ಹೆಸರಿನಿಂದ ಕರೆದರೂ ಅದರ ಸೌಂದರ್ಯಕ್ಕೆ ಏನೂ ಧಕ್ಕೆ ಆಗುವುದಿಲ್ಲ" ಎಂದು ಶೇಕ್ಸ್‌ಪಿಯರ್ ಹೇಳಿದ ಮಾತು ಪ್ರಸ್ತುತ ಸಂದರ್ಭದಲ್ಲಿ ಉಲ್ಲೇಖಾರ್ಹವೆನಿಸಿದೆ. ಹೆಸರು-ವ್ಯಕ್ತಿಯ ನಡುವೆ ಕನಿಷ್ಠ ನಿರ್ದೇಶನಾತ್ಮಕ ಸಂಬಂಧವಿರುತ್ತದೆ. ಅದು ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುವುದಿಲ್ಲ ಎಂಬ ಸಂಗತಿಯನ್ನು ಮೇಲಿನ ವ್ಯಾಖ್ಯೆ ಧ್ವನಿಸುತ್ತದೆ. ಹೆಸರು ಮತ್ತು ವ್ಯಕ್ತಿಯ ನಡುವಿನ ಸಂಬಂಧವನ್ನು ನಿರೂಪಿಸುವ ಒಂದು ಉದಾಹರಣೆಯನ್ನು ಇಲ್ಲಿ ಗಮನಿಸಬಹುದು. "ನಾಮದಿಂದ ದೊಡ್ಡತನವಲ್ಲ, ಕರ್ಮದಿಂದ ದೊಡ್ಡತನ ಎಂಬರ್ಥದ ಹಿಂದಿ ಮಾತೊಂದಿದೆ ("ನಾಮ್ ಸೇ ನಹೀಂ, ಕಾಮ್ ಸೇ ಬಡಪ್ಪನ್ ಹೋತಾ ಹೈ") 'ಪಾಪಿ' ಎಂಬ ಹೆಸರಿನವನೊಬ್ಬನಿದ್ದನಂತೆ. ಅವನನ್ನೆಲ್ಲರೂ 'ಪಾಪಿ' 'ಪಾಪಿ' ಎಂದು ಹಾಸ್ಯ ಮಾಡುತ್ತಿದ್ದರಂತೆ. ಅವನು ತನಗೊಂದು ಒಳ್ಳೆ ಹೆಸರಿಡಬೇಕೆಂದು ಗುರುಗಳಲ್ಲಿ ಕೇಳಿಕೊಂಡಾಗ ನೀನು ಸಾಕಷ್ಟು ಬೇರೆ ಬೇರೆ ಜನಗಳ ಹೆಸರನ್ನು ಕೇಳಿಕೊಂಡು ತನಗೊಂದು ಆರಿಸಿಕೋ. ಅದನ್ನೇ ಇಟ್ಟು ಬಿಡೋಣ ಎಂದರಂತೆ ಗುರುಗಳು. ಪಾಪಿ ಕಂಡವರಲ್ಲೆಲ್ಲಾ ಹೆಸರು ವಿಚಾರಿಸುತ್ತಾ ಹೋದ. ದಾರಿಯಲ್ಲಿ ಹುಲ್ಲು ಹೊರೆ ಹೊತ್ತವನನ್ನು ಕೇಳಿದಾಗ ಅವನು ಲೋಕನಾಥನೆಂದೂ, ಶವಯಾತ್ರೆಯಲ್ಲಿ ಶವವಾಗಿದ್ದವನ ಹೆಸರು ಕೇಳಿದಾಗ ಅವನ ಹೆಸರು ಅಮರನೆಂದೂ ತಿಳಿಯಿತು. ಇದರಿಂದ ಹೆಸರಿಗೂ ಅದರ ಅರ್ಥಕ್ಕೂ ಸಂಬಂಧವಿಲ್ಲವೆಂಬುದನ್ನರಿತ 'ಪಾಪಿ'ಗೆ ಬುದ್ಧಿ ಬಂದು ತನ್ನ ಹೆಸರನ್ನು ಬದಲಾಯಿಸಲಿಲ್ಲ ಎಂಬುದು ಹಿರಿಯರು ಹೇಳುವ ಕತೆ." 'ರಾಮ' ಹೆಸರುಳ್ಳ ವ್ಯಕ್ತಿಯನ್ನು ಗೋವಿಂದ ಎಂದು ಬೇರೊಂದು ಹೆಸರಿಂದ ಕರೆದರೂ ಅವನ ವ್ಯಕ್ತಿತ್ವದಲ್ಲಿ ಯಾವುದೇ ವ್ಯತ್ಯಾಸ ಆಗುವುದಿಲ್ಲ.

ಹೆಸರು ಮತ್ತು ವ್ಯಕ್ತಿಯ ನಡುವಿನ ಸಂಬಂಧ ಹಾಗೂ ವ್ಯಕ್ತಿ ಮತ್ತು ಹೆಸರು ನಡುವಿನ ಸಂಬಂಧ ಎರಡೂ ಬೇರೆ ಬೇರೆ. ಒಂದು, ಹೆಸರು ವ್ಯಕ್ತಿಗೆ ಕಾರಣವಾಗುವುದು. ಎರಡು, ವ್ಯಕ್ತಿ ಹೆಸರಿಗೆ ಕಾರಣವಾಗುವುದು. ಸಮಾಜದಲ್ಲಿ ಒಮ್ಮೆ ಒಂದು ಹೆಸರು ಒಬ್ಬ ವ್ಯಕ್ತಿಗೆ ನಿರ್ದೇಶನ ಮಾಡಲ್ಪಟ್ಟರೆ, ಮುಂದೆ ಆ ಹೆಸರಿನ ಅಳಿವು-ಉಳಿವು ಆ ವ್ಯಕ್ತಿಯ ವ್ಯಕ್ತಿತ್ವದ ಮೇಲೆ ನಿರ್ಧರಿಸಲ್ಪಡುತ್ತದೆ. ಉದಾಹರಣೆಗೆ 'ರಾಮ' ಮತ್ತು 'ರಾವಣ' ಎಂಬ ಎರಡು ಹೆಸರುಗಳನ್ನು ಗಮನಿಸಬಹುದು. 'ರಾಮ' ಮತ್ತು 'ರಾವಣ' ಇಬ್ಬರೂ ಸಮಕಾಲೀನ ವ್ಯಕ್ತಿಗಳು. 'ರಾಮ' ಸಚ್ಚಾರಿತ್ರ್ಯವುಳ್ಳ ವ್ಯಕ್ತಿಯಾದ ಕಾರಣ, ಆ ಹೆಸರಿಗೂ ಮೌಲ್ಯ ಪ್ರಾಪ್ತವಾಯಿತು. ಈ ಹೆಸರನ್ನು ಈಗಲೂ ಅನೇಕ ಜನ ಭಕ್ತಿ, ಗೌರವಗಳಿಂದ ಇಟ್ಟುಕೊಳ್ಳುತ್ತಾರೆ. 'ರಾವಣ' ದುಷ್ಟಗುಣಗಳನ್ನು ಹೊಂದಿದ ಕಾರಣ ಆ ಹೆಸರಿಗೆ ಹೀನಾರ್ಥ ಪ್ರಾಪ್ತವಾಯಿತು. ಆ ಹೆಸರೇ ಅಪವಿತ್ರವಾಯಿತು. 'ರಾವಣ' ಎಂಬ ಪದಕ್ಕೂ ದುಷ್ಟ, ಕೆಟ್ಟ ಮುಂತಾದ ಅರ್ಥಗಳು ರೂಢಿಯಾದವು. ಆ ಕಾರಣದಿಂದ ಆ ಹೆಸರನ್ನು ಯಾರೂ ಇಡುವುದಿಲ್ಲ. 'ರಾಮ' ಎಂಬ ಹೆಸರು ಧರ್ಮದ ಸಂಕೇತವಾದರೆ, 'ರಾವಣ' ಎಂಬ ಹೆಸರು ಅಧರ್ಮದ ಸಂಕೇತವಾಯಿತು. ಈ ಹೆಸರುಗಳ ಬಳಕೆ ಮತ್ತು ನಿಷೇಧಕ್ಕೆ ಆ ಹೆಸರಿನ ವ್ಯಕ್ತಿಗಳ ವ್ಯಕ್ತಿತ್ವವೇ ಮುಖ್ಯ ಕಾರಣವಾಗಿದೆ. ಈ ಮೂಲಕ ಸ್ಪಷ್ಟವಾಗುವ ಸಂಗತಿ ಎಂದರೆ, ಸಮುದಾಯದ ನಂಬಿಕೆಗಳು ಹೆಸರಿನ ಬಳಕೆಯನ್ನು ನಿಯಂತ್ರಿಸುತ್ತವೆ. 'ರಾಮನ' ಹೆಸರು ರಾವಣ ಎಂದಾಗಿದ್ದು, 'ರಾವಣ'ನ ಹೆಸರು ರಾಮ ಎಂದು ಇದ್ದಿದ್ದಾಗಲೂ, 'ರಾವಣ' ಎಂಬ ಹೆಸರು ಜನರ ಬಳಕೆಯಲ್ಲಿ ಇದ್ದು, 'ರಾಮ' ಎಂಬ ಹೆಸರು ಬಳಕೆಯಿಂದ

ದೂರಸರಿಯುತ್ತಿತ್ತು. ಬಹಳ ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ, ಹೆಸರು ಮತ್ತು ವ್ಯಕ್ತಿಯ ಮಧ್ಯೆ ಲಕ್ಷಣ ಸೂಚಕ ಸಂಬಂಧಗಳು ಇರದಿದ್ದರೂ, ವ್ಯಕ್ತಿ-ಹೆಸರು ಮತ್ತು ಸಮಾಜದ ನಡುವೆ ಕಾರ್ಯಕಾರಣ ಸಂಬಾಧಗಳು ಇರುತ್ತವೆ ಎಂಬುದು ಎಲ್ಲಾ ಹೆಸರುಗಳಿಗೂ ಈ ನಿಯಮ ಅನ್ವಯಿಸಿದಂತೆ ತೋರುವುದಿಲ್ಲ. ಪ್ರಸಿದ್ಧ ವ್ಯಕ್ತಿಗಳ ಹೆಸರುಗಳಿಗೆ ಈ ನಿಯಮ ಹೆಚ್ಚು ಅನ್ವಯಿಸುತ್ತದೆ.

ವ್ಯಕ್ತಿಯನ್ನು ಗುಂಪಿನಿಂದ ಪ್ರತ್ಯೇಕಿಸುವುದು, ಗುರುತಿಸುವುದು ಹೆಸರಿನ ಮುಖ್ಯ ಉದ್ದೇಶ. ವ್ಯಕ್ತಿಯನ್ನು ಸಂಬೋಧಿಸುವಾಗ ಮತ್ತು ಉಲ್ಲೇಖಿಸುವಾಗ ಎರಡು ಉದ್ದೇಶಕ್ಕಾಗಿ ಹೆಸರನ್ನು ಬಳಸುತ್ತೇವೆ. ವ್ಯಕ್ತಿಯ ಹಾಜರಿ ಮತ್ತು ಗೈರುಹಾಜರಿಯಲ್ಲಿ ಹೆಸರು ಅಧಿಕೃತ ಪ್ರತಿನಿಧಿಯಾಗಿರುತ್ತದೆ. ಕೆಲವು ಸಮಾಜಗಳು ಪರಸ್ಪರ ಸಂಬೋಧನೆಯಲ್ಲಿ ಹೆಸರನ್ನು ಬಳಸುವುದು ನಿಷಿದ್ಧವಾಗಿದೆ. ಹೆಸರಿಗೂ-ವ್ಯಕ್ತಿಗೂ ನಿರ್ದೇಶನಾತ್ಮಕ ಸಂಬಂಧ ಮಾತ್ರ ಇರುವುದಾದರೆ, ಹೆಸರಿನ ಬಳಕೆಗೆ ನಿಷಿದ್ಧಗಳಿರುವುದೇಕೆ? ಹೆಸರು ವ್ಯಕ್ತಿಯ ಇತರ ಅಂಶಗಳನ್ನು ಒಳಗೊಂಡಿರುತ್ತದೆ ಎಂಬುದರ ಸೂಚನೆ ಈ ನಿಷೇಧದ ಹಿಂದೆ ಇರಬಹುದೆ? ಇದು ಪ್ರಾಚೀನ ಕಾಲದಿಂದಲೂ ಬೆಳೆದುಬಂದ ಪದ್ಧತಿಯಾಗಿದ್ದು, ಸಮಾಜದ ಅಸಮಾನತೆಯನ್ನು ಧ್ವನಿಸುತ್ತದೆ. ನಾಮ ನಿರ್ದೇಶನದ ಬಗೆಗೆ ಇರುವ ಮಿತಿಗಳನ್ನು ಗಮನಿಸಿದರೆ, ಹೆಸರು ವ್ಯಕ್ತಿಗೆ ಸಂಬಂಧಿಸಿದ್ದಾದರೂ ಅದು ವ್ಯಕ್ತಿಯ ಸ್ವಾಧೀನದಲ್ಲಿರದೆ, ಸಮಾಜದ ಸ್ವಾಧೀನದಲ್ಲಿರುತ್ತದೆ ಎಂಬುದು ಸ್ಪಷ್ಟವಾಗುತ್ತದೆ.

## ೫.೨. ನಾಮಕರಣ

ವ್ಯಕ್ತಿಗೆ (ಮಗುವಿಗೆ) ಹೆಸರಿಡುವ ಸಂಸ್ಕಾರವನ್ನೇ 'ನಾಮಕರಣ' ಎಂದು ಕರೆಯುತ್ತಾರೆ. ವ್ಯಕ್ತಿಯನ್ನು ಕೌಟುಂಬಿಕ ಪರಿಸರದಿಂದ ಸಾಮಾಜಿಕ ಪರಿಸರಕ್ಕೆ ಒಪ್ಪಿಸುವ ಒಂದು ಸಂದರ್ಭವೆನ್ನಬಹುದು. ಇದು ವ್ಯಕ್ತಿಯನ್ನು ಸಾಮಾಜಿಕವಾಗಿ ದಾಖಲಿಸಿ, ಅಸ್ತಿತ್ವವನ್ನೂ, ಸದಸ್ಯತ್ವವನ್ನೂ ತಂದುಕೊಡುವುದಾಗಿದೆ. "ಮಾನವ ಶಾಸ್ತ್ರಜ್ಞರು ಹೆಸರಿಡುವ ಪ್ರಸಂಗವನ್ನು ಹೊಸ ಸದಸ್ಯರಿಗೆ ಅಧಿಕೃತ ಮನ್ನಣೆ ನೀಡುವ ಸಂದರ್ಭವೆಂದು ಗುರುತಿಸುತ್ತಾರೆ. ಮುಂದುವರೆದು ವ್ಯಕ್ತಿಯನ್ನು ಸಮುದಾಯದ ತನ್ನ ಹಿಡಿತಕ್ಕೆ ತೆಗೆದುಕೊಳ್ಳುವ ಘಟನೆ ಎನ್ನುತ್ತಾರೆ."[೪] ಒಟ್ಟಾರೆಯಾಗಿ ಇದು ವ್ಯಕ್ತಿ ಮತ್ತು ಸಮಾಜದ ಮಧ್ಯೆ ಸಂಬಂಧ ಕಲ್ಪಿಸುವ ಪ್ರಸಂಗ ಎಂದು ಹೇಳಬಹುದು. ಈ ಹಿನ್ನೆಲೆಯಲ್ಲಿ 'ನಾಮಕರಣ ಸಂಸ್ಕಾರ' ವ್ಯಕ್ತಿ ಜೀವನದಲ್ಲಿ ತುಂಬಾ ಪ್ರಾಮುಖ್ಯತೆಯನ್ನು ಪಡೆದುಕೊಂಡಿದ.

ನಾಮಕರಣ ವ್ಯಕ್ತಿಗೆ ಬಾಲ್ಯದಲ್ಲಿ ನೆರವೇರಿಸಲ್ಪಡುವುದು. ವ್ಯಕ್ತಿ ಜೀವನದಲ್ಲಿ ನಡೆಯುವ ಹದಿನಾರು ಸಂಸ್ಕಾರಗಳಲ್ಲಿ ನಾಮಕರಣವೂ ಒಂದಾಗಿದೆ. ವ್ಯಕ್ತಿಗೆ ಹೆಸರಿಡುವ ಸಂಪ್ರದಾಯ ಹಿಂದಿನಿಂದ ಬೆಳೆದುಬಂದ ಪದ್ಧತಿ. ವೇದೋಪನಿಷತ್ತು ಮತ್ತು ಮನುಸ್ಮೃತಿಯಲ್ಲಿ 'ನಾಮಕರಣ ಸಂಸ್ಕಾರ'ದ ಬಗೆಗೆ ಕೆಲವು ವಿವರಣೆಗಳು ಇವೆ. ಸಮಾಜದ ನಾಲ್ಕು ವರ್ಗಗಳಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರು ಕ್ರಮವಾಗಿ ಮಗು ಜನನವಾದ ಹದಿನಾರು ಅಥವಾ ಹದಿನೇಳು, ಹದಿನಾರು ಅಥವಾ ಇಪತ್ತು, ಇಪ್ಪತ್ತೆರಡು ಅಥವಾ ಇಪ್ಪತ್ತುನಾಲ್ಕು ಮತ್ತು ತಿಂಗಳ ಕೊನೆಯಲ್ಲಿ ಹೆಸರಿಡಬೇಕೆಂದೂ, ಕ್ರಮವಾಗಿ ಅವರ ಹೆಸರು ಶರ್ಮನ್, ವರ್ಮನ್, ಗುಪ್ತ ಮತ್ತು ದಾಸ ಎಂದು ಕೊನೆಗೊಳ್ಳಬೇಕೆಂದು ಸೂಚಿಸಲಾಗಿದೆ. ನಾಮಕರಣದ ಬಗೆಗೆ

ಚರ್ಚೆಗೊಂಡಿರುವ ಅಲ್ಲಿನ ವಿಷಯಗಳು ಅಂದಿನ ಸಾಮಾಜಿಕ ರಚನೆಗೆ ಅನುಗುಣವಾಗಿ ರೂಪಿತಗೊಂಡಿರುವ ನಿಯಮಗಳಾಗಿದ್ದು, ಪ್ರಸ್ತುತ ಸಾಮಾಜಿಕ ವ್ಯವಸ್ಥೆಗೆ ಆ ನಿಯಮಗಳು ಅಪ್ರಸ್ತುತವೆನಿಸುತ್ತವೆ. ಪ್ರಸ್ತುತ ಚಿತ್ರದುರ್ಗ ಪರಿಸರದ ನಾಮಕರಣದ ಸ್ವರೂಪ, ಅದರ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಯಾಮಗಳ ಕುರಿತು ಗಮನಿಸುವ ಪ್ರಯತ್ನಮಾಡಲಾಗಿದೆ.

ನಾಮಕರಣ ಪದ್ಧತಿ ಕಾಲಕ್ರಮೇಣ ತುಂಬಾ ಬದಲಾಗುತ್ತಾ ಬಂದಿದೆ. ಧಾರ್ಮಿಕ ಸ್ವರೂಪದ ಮಹತ್ವಕ್ಕೆ ಬದಲಾಗಿ, ಹಬ್ಬ, ಉತ್ಸವ ಸಮಾರಂಭದ ಸ್ವರೂಪವನ್ನು ಪಡೆದುಕೊಂಡಿದೆ. ನಾಮಕರಣದ ಮೂಲ ಆಶಯ ಒಂದೇ ಆಗಿದ್ದರೂ, ಅದರ ಬಗೆಗೆ ಜನರ ಪರಿಕಲ್ಪನೆಗಳು ಬೇರೆಯಾಗಿವೆ ಎಂಬುದನ್ನು ಗಮನಿಸಬಹುದು.

ನಾಮಕರಣ ಪದ್ಧತಿ ಸಮಾಜದ ಎಲ್ಲಾ ಸಮುದಾಯಗಳಲ್ಲಿ ಏಕಪ್ರಕಾರವಾಗಿ ನಡೆಯುವುದಿಲ್ಲ. ಅದರ ಆಚರಣೆಯಲ್ಲಿ ತುಂಬಾ ವೈವಿಧ್ಯಗಳಿವೆ. ಸಾಮಾನ್ಯವಾಗಿ ಬ್ರಾಹ್ಮಣರು ಮಗು ಜನಿಸಿದ ಒಂಭತ್ತು ಅಥವಾ ಹನ್ನೊಂದು ತಿಂಗಳಲ್ಲಿ, ಲಿಂಗಾಯತ ಮತ್ತು ಜಂಗಮರು ಮಗು ಜನನವಾದ ಮೂರನೇ ದಿನದಲ್ಲಿಯೂ, ರೆಡ್ಡಿ ಮತ್ತು ವೈಶ್ಯರು ಮೂರು ಅಥವಾ ಐದನೆ ತಿಂಗಳಲ್ಲಿ ಮಗುವಿಗೆ ನಾಮಕರಣ ಮಾಡಿದರೆ, ಮಾದಿಗ, ನಾಯಕ, ಕುರುಬ, ಗೊಲ್ಲ, ಲಂಬಾಣಿ, ಮರಾಠಿ, ಭೋವಿ, ಉಪ್ಪಾರ, ಕುಂಚಟಿಗ, ಮೊದಲಾದ ಕೆಳಸಮುದಾಯಗಳು ಯಾವುದೇ ಒಂದು ನಿರ್ದಿಷ್ಟ ದಿನ, ತಿಂಗಳಲ್ಲಿ ನಾಮಕರಣ ಮಾಡುತ್ತಾರೆಂದು ಹೇಳುವುದು ಕಷ್ಟ. ಮಗು ಜನನವಾದ ಮೂರು, ಐದು, ಒಂಭತ್ತು, ಹನ್ನೊಂದು, ಹದಿನಾರು, ಇಪ್ಪತ್ತೊಂದನೆಯ ದಿನದಲ್ಲಿಯೂ; ಒಂದು, ಮೂರು, ಐದು, ಒಂಭತ್ತು, ಹನ್ನೊಂದನೆ ತಿಂಗಳಲ್ಲಿಯೂ; ಒಂದು, ಮೂರು, ಐದು ವರ್ಷಗಳಲ್ಲಿಯೂ ನಾಮಕರಣ ಮಾಡುವುದು ಕಾಣಬರುತ್ತದೆ. ಇದು ಅವರ ಅನುಕೂಲಕ್ಕೆ ತಕ್ಕಂತೆ ನೆರವೇರಿಸಲ್ಪಡುತ್ತದೆ. ಆದರೂ ಬಹುತೇಕ ಜನ ಮಗು ಜನನವಾದ ತಿಂಗಳ ಒಳಗೆ ನಾಮಕರಣ ಮಾಡುವುದೇ ಹೆಚ್ಚು. ಸಾಮಾನ್ಯವಾಗಿ ಮೇಲ್ಜಾತಿಗಳಲ್ಲಿ ನಿರ್ದಿಷ್ಟ ಅವಧಿಯಲ್ಲಿಯೇ ಮಾಡುತ್ತಾರೆ. ಕೆಲವು ಕಾರಣಗಳಿಂದ ತೊಂದರೆ ಉಂಟಾಗಿ, ಮುಂದೂಡಲ್ಪಟ್ಟರೆ ಬೇರೆ ಅವಧಿಯಲ್ಲಿ ನೆರವೇರಿಸಲಾಗುವುದು.

ನಾಮಕರಣದ ಅವಧಿಯ ಹಾಗೆ, ನಾಮಕರಣ ನಿರ್ದೇಶನವು ಸಮಾಜದ ಎಲ್ಲಾ ಸಮುದಾಯಗಳಲ್ಲಿ ಯಾವುದೇ ಒಬ್ಬ ವ್ಯಕ್ತಿಯಿಂದ ನಡೆಯುವುದಿಲ್ಲ. ಬೇರೆ ಬೇರೆ ಸಮುದಾಯಗಳಲ್ಲಿ ಬೇರೆ ಬೇರೆ ಜನರು ಹೆಸರಿಡುತ್ತಾರೆ. ಬ್ರಾಹ್ಮಣ, ನಾಯಕ, ಮಾದಿಗ, ಕುರುಬ, ಗೊಲ್ಲ, ಭೋವಿ, ಉಪ್ಪಾರ, ಲಂಬಾಣಿ, ವೈಶ್ಯ, ಬಲಿಜ, ಬೇಡ, ಜಂಗಮ ಮತ್ತು ಈಡಿಗ ಸಮುದಾಯಗಳಲ್ಲಿ ಸೋದರತ್ತೆ, ಸೋದರಮಾವನವರೂ, ಲಿಂಗಾಯತ ಮತ್ತು ಜಂಗಮರಲ್ಲಿ ಪುರೋಹಿತರೂ (ಕುಲಗುರುಗಳು) ಮರಾಠರಲ್ಲಿ ತಂದೆ-ತಾಯಿಯವರು ಸಾಮಾನ್ಯವಾಗಿ ಹೆಸರಿಡುತ್ತಾರೆ. ಮ್ಯಾಸನಾಯಕರಲ್ಲಿ ಕೆಲವು ಕಡೆ ಐದು ಜನ ಅವಿವಾಹಿತ ಹುಡುಗ ಹುಡುಗಿಯರೂ ಹೆಸರಿಡುವುದು ಕಾಣಬರುತ್ತದೆ. ಮೇಲಿನ ಈ ವಿಧಾನದಲ್ಲಿಯೂ ಕೆಲ ಬದಲಾವಣೆಗಳು ಉಂಟಾಗಿವೆ. ಆರ್ಥಿಕವಾಗಿ, ಶೈಕ್ಷಣಿಕವಾಗಿ ಮುಂದುವರೆದ, ಕೆಳ ಮಧ್ಯಮಜಾತಿ ಮೇಲ್ವರ್ಗದವರು ಪಾರಂಪರಿಕ ಸಂಪ್ರದಾಯ ಪದ್ಧತಿಗಳಿಗೆ ಅನುಗುಣವಾಗಿ ಹೆಸರಿಡದೆ, ಮೇಲ್ ಸಮುದಾಯಗಳ ಪದ್ಧತಿಗಳನ್ನು ಅನುಕರಿಸುತ್ತಾರೆ. ಸೋದರತ್ತೆ, ಸೋದರಮಾವರಿಗೆ ಬದಲಾಗಿ ಪುರೋಹಿತರಿಂದ ನಾಮಕರಣ ಮಾಡಿಸುತ್ತಾರೆ.

ಆರ್ಥಿಕವಾಗಿ, ಶೈಕ್ಷಣಿಕವಾಗಿ ಮುಂದುವರೆದ ಎಲ್ಲರಲ್ಲಿಯೂ ಈ ಪದ್ಧತಿ ಕಾಣಬರುವುದಿಲ್ಲ. ಹಿಂದಿನ ಸಾಂಪ್ರದಾಯಿಕ ಪದ್ಧತಿಗಳನ್ನು ಇಷ್ಟಪಡದ, ಮೇಲ್ಜಾತಿಯವರ ಹಾಗೆ ಶ್ರೇಷ್ಠರು, ಮುಂದುವರೆದವರೂ ಎಂದು ಎನಿಸಿಕೊಳ್ಳಬೇಕೆಂಬ ಮನೋಭಾವನೆಯುಳ್ಳವರಲ್ಲಿ ಮಾತ್ರ ಈ ಪದ್ಧತಿ ಕಾಣಬರುತ್ತದೆ. ಲಿಂಗಾಯಿತ, ಜಂಗಮ ಮತ್ತು ಬ್ರಾಹ್ಮಣರು ಸಾಮಾನ್ಯವಾಗಿ ಶಾಸ್ತ್ರ ಕೇಳಿಯೇ ಹೆಸರಿಡುತ್ತಾರೆ. ಇತರ ಸಮುದಾಯದ ಕೆಲವರಲ್ಲಿ ಈ ಪದ್ಧತಿ ಕಡ್ಡಾಯವಾಗಿಲ್ಲ. ಕೆಲವರು ಶಾಸ್ತ್ರ ಕೇಳಿ ಹೆಸರಿಟ್ಟರೆ, ಕೆಲವರು ಹಾಗೆಯೇ ತಮಗೆ ಇಷ್ಟವಾದ ಹೆಸರನ್ನು ಇಡುತ್ತಾರೆ. ಶಾಸ್ತ್ರಕೇಳಿ ಹೆಸರಿಡುವುದು ಒಂದು ಹಳೆಯ ಪದ್ಧತಿ ಎಂಬುದು ಕೆಲವರ ಅಭಿಪ್ರಾಯವಾಗಿದೆ. ಆ ಕಾರಣಕ್ಕಾಗಿ ತಮಗೆ ಪ್ರಿಯವಾದ ಹೆಸರನ್ನು ತಾವೇ ಸೂಚಿಸಿ ಮಗುವಿಗೆ ಇಡುತ್ತಾರೆ. ಹೆಚ್ಚಾಗಿ ಇದು ವಿದ್ಯಾವಂತ ಉದ್ಯೋಗಸ್ಥರಲ್ಲಿ ಅಧಿಕವಾಗಿ ಕಾಣಬರುತ್ತದೆ.

ಬ್ರಾಹ್ಮಣ ಮತ್ತು ರೆಡ್ಡಿ ಸಮುದಾಯಗಳಲ್ಲಿ ನಾಮಕರಣ ಮಾಡುವಾಗ ಮಗುವಿಗೆ ಮೂರು ಹೆಸರುಗಳನ್ನು ಕಡ್ಡಾಯವಾಗಿ ಇಡುತ್ತಾರೆ. ಮೊದಲನೆಯದಾಗಿ ದೈವನಾಮವನ್ನು, ಎರಡನೆಯದಾಗಿ ವ್ಯವಹಾರಿಕ ನಾಮವನ್ನು, ಮೂರನೆಯದಾಗಿ ಒಪ್ಪಿತ ಅಥವಾ ಕೇಳಿಸಿದ ನಕ್ಷತ್ರ ನಾಮವನ್ನೂ ಇಡುತ್ತಾರೆ. ಅಲ್ಲದೆ ಒಂದೊಂದು ಹೆಸರನ್ನು ಮೂರು ಮೂರು ಸಲ ಕೂಗುತ್ತಾರೆ. ಹೀಗೆ ಹೆಚ್ಚು ಸಲ ಕರೆಯುವುದರ ಉದ್ದೇಶ ಮಗುವಿನ ಹೆಸರು ಅಲ್ಲಿನ ಎಲ್ಲಾ ಜನರಿಗೂ ತಿಳಿಯಲೀ ಎಂಬುದಾಗಿದೆ.

ನಾಮಕರಣ ಸಂದರ್ಭದಲ್ಲಿ ಮುತ್ತೈದೆಯರ ಪಾತ್ರ ತುಂಬಾ ಮುಖ್ಯವಾಗಿದೆ. ಕೆಲವರಲ್ಲಿ ಸೋದರತ್ತೆ/ ಸೋದರಮಾವ ಮಗುವಿನ ಹೆಸರು ಕರೆದ ನಂತರ, ಐದು ಜನ ಮುತ್ತೈದೆಯರೂ ಮಗುವಿನ ಹೆಸರು ಕರೆಯುತ್ತಾರೆ. ಅಲ್ಲದೆ ಮಗುವಿನ ಹೆಸರನ್ನು ಸೇರಿಸಿಕೊಂಡು ಜೋಗುಳ ಹಾಡುತ್ತಾರೆ. ಜೋಗುಳ ಹಾಡು ಹೇಳುವ ಪದ್ಧತಿ ಎಲ್ಲರಲ್ಲಿಯೂ ಕಾಣಬರುವ ಸಾಮಾನ್ಯವಾದ ಸಂಪ್ರದಾಯವಾಗಿದೆ. ಸೋದರತ್ತೆ/ ಸೋದರಮಾವನವರು ಮಗುವಿಗೆ ಹೆಸರಿಡುವಾಗ, ಹೆಸರು ಹೇಳುತ್ತಾ, ತೊಟ್ಟಿಲು ಸುತ್ತ ಸುತ್ತುತ್ತಾ, ಮನೆಯ ಒಳಗೆ ಮತ್ತು ಹೊರಗೆ ಓಡಾಡುತ್ತಾರೆ. ಹೀಗೆ ಮನೆಯ ಒಳಗೆ-ಹೊರಗೆ ಓಡಾಡುವಾಗ, ಸೊಸೆ, ಅತ್ತೆ, ಅಳಿಯ, ಮಾವನವರಾದವರು ಪೊರಕೆ, ಟವಲುಗಳಿಂದ ಹೊಡೆಯುತ್ತಾರಲ್ಲದೆ, ಕೈಯಿಂದ ಬೆನ್ನಿಗೆ ಗುದ್ದು ಹಾಕುವುದು ಕೆಲವರಲ್ಲಿ ರೂಢಿಯಲ್ಲಿರುವುದು ಕಾಣಬರುತ್ತದೆ. ಇದು ಮನರಂಜನೆಗಾಗಿ ಮಾಡುವ ಪದ್ಧತಿಯೆನಿಸಿದರೂ, ಇಂಥ ನಂಬಿಕೆಗಳ ಹಿಂದೆ ಅಡಗಿರುವ ವಾಸ್ತವ ಸತ್ಯಗಳನ್ನು ಅಧ್ಯಯನ ಮಾಡಬೇಕಾದ ಅಗತ್ಯವಿದೆ.

### ೫.೨.೧ ನಾಮಕರಣ : ನಿಷೇಧಗಳು

ನಾಮಕರಣ ಸಂಸ್ಕಾರದ ಬಗೆಗೆ ಕೆಲವು ನಂಬಿಕೆ ಮತ್ತು ನಿಷೇಧಗಳಿವೆ. ಇದು ಹಿಂದಿನಿಂದ ಬೆಳೆದು ಬಂದಿರುವ ಸಂಪ್ರದಾಯವಾಗಿದೆ. ಹೆಸರು ಉಸಿರು ಇರುವತನಕ ವ್ಯಕ್ತಿಯ ಜತೆ ಇರುವುದರಿಂದ ಅದನ್ನು ಶುಭ ದಿನಗಳಲ್ಲಿ ಮಾತ್ರ ಮಾಡಬೇಕೆಂಬುದು ಒಂದು ಸಾಮಾನ್ಯ ನಂಬಿಕೆ. ಆ ಕಾರಣಕ್ಕಾಗಿ ನಾಮಕರಣವನ್ನು ಎಲ್ಲಾ ಸಂದರ್ಭಗಳಲ್ಲಿ ಮಾಡದೆ, ಒಳ್ಳೆಯ ಸಮಯ, ದಿವಸಗಳಲ್ಲಿ ಮಾತ್ರ ಮಾಡುತ್ತಾರೆ. ಮಗುವಿನ ನಾಮಕರಣದ ದಿನವನ್ನು ಮೊದಲೇ ತೀರ್ಮಾನಿಸಲಾಗುವುದು. ಅದೇ ದಿನದಂದು ಅಥವಾ ಅದರ ಪೂರ್ವದ

ದಿನಗಳಲ್ಲಿ ಅಹಿತಕರ ಘಟನೆಗಳು, ಅಶುಭ ಪ್ರಸಂಗಗಳು ಸಂಭವಿಸಿದರೆ ನಾಮಕರಣವನ್ನು ಪೂರೈಸದೆ, ಮುಂದೂಡುತ್ತಾರೆ. ಅಂಥ ಸಂದರ್ಭಗಳಲ್ಲಿ ಹೆಸರಿಟ್ಟರೆ, ಮಗುವಿಗೆ ಒಳ್ಳೆಯದಾಗುವುದಿಲ್ಲ ಎಂಬುದು ವಾಡಿಕೆ. ನಾಮಕರಣ ನಿಷೇಧದ ಕಾರಣಗಳನ್ನು ಈ ರೀತಿ ಪಟ್ಟಿ ಮಾಡಬಹುದು.

ಅ. ಮಗುವಿನ ಮನೆಯಲ್ಲಿ ಯಾರಾದರು ಋತುಮತಿಯಾದರೆ

ಆ. ಮಗುವಿನ ಮನೆಯಲ್ಲಿ ಅಥವಾ ಸಂಬಂಧಿಕರು ತೀರಿಕೊಂಡರೆ (ಗ್ರಾಮೀಣ ಪರಿಸರದಲ್ಲಿ ಯಾರೇ ವ್ಯಕ್ತಿ ತೀರಿಕೊಂಡರೂ ನಾಮಕರಣ ಮಾಡುವುದಿಲ್ಲ)

ಇ. ಮಗು ಇಲ್ಲವೆ ಮಗುವಿನ ತಾಯಿ ಅನಾರೋಗ್ಯದಿಂದ ಇದ್ದರೆ

ಈ. ಅಮವಾಸೆ, ಹುಣ್ಣಿಮೆ, ಆಷಾಡ ಮಾಸಗಳಲ್ಲಿ

ಉ. ಮಗು ಹುಟ್ಟಿದ ವಾರದ ದಿನ. (ಈ ನಂಬಿಕೆ ಕೆಲವು ಸಮುದಾಯಗಳಲ್ಲಿ ಮಾತ್ರ ಇದೆ)

ಊ. ಶನಿವಾರ, ಭಾನುವಾರ, ಮಂಗಳವಾರ ನಾಮಕರಣ ಮಾಡುವುದಿಲ್ಲ. (ಹೆಚ್ಚಾಗಿ ಈ ನಂಬಿಕೆ ಮ್ಯಾಸನಾಯಕ, ರೆಡ್ಡಿ, ಜನಾಂಗದವರಲ್ಲಿ ಇರುವುದು ಕಾಣಬರುತ್ತದೆ)

ಋ. ಮಗು ಹುಟ್ಟಿದ ಏಳನೆಯ ದಿನ - ಇತ್ಯಾದಿ ಸಂದರ್ಭಗಳಲ್ಲಿ ನಾಮಕರಣ ಮಾಡುವುದಿಲ್ಲ.

ಪ್ರಸ್ತುತ ಸಂದರ್ಭದಲ್ಲಿ ಚಿತ್ರದುರ್ಗ ಪರಿಸರದ ವಿವಿಧ ಸಮುದಾಯಗಳಲ್ಲಿ ರೂಢಿಯಲ್ಲಿರುವ ನಾಮಕರಣ ಸಂಸ್ಕಾರದ ಸ್ವರೂಪ ಮತ್ತು ನಂಬಿಕೆಗಳ, ಕೆಲವು ಸಾಮಾನ್ಯ ಸಂಗತಿಗಳ ಬಗೆಗೆ ಸ್ಥೂಲವಾಗಿ ವಿಶ್ಲೇಷಿಸಲಾಗಿದೆ. ಜಾತಿ ಮತ್ತು ಭೌಗೋಳಿಕತೆಯನ್ನಿಟ್ಟುಕೊಂಡು ಪ್ರತ್ಯೇಕ ಅಧ್ಯಯನ ಮಾಡುವುದರಿಂದ ಸಂಸ್ಕೃತಿಯ ಹಲವು ಮಜಲುಗಳು ಗೋಚರವಾಗಬಹುದು.

## ೫.೩. ನಾಮಕರಣ : ನಂಬಿಕೆ

ಹೆಸರು ವ್ಯಕ್ತಿ ಜೀವಂತ ಇರುವವರೆಗೆ ಮಾತ್ರವಲ್ಲದೆ, ತೀರಿ ಹೋದ ನಂತರದಲ್ಲಿಯೂ, ವ್ಯಕ್ತಿಯನ್ನು ಜೀವಂತವಾಗಿ ಇರಿಸುತ್ತದೆ. ಆ ಕಾರಣಕ್ಕಾಗಿ ವ್ಯಕ್ತಿ ಜೀವನದಲ್ಲಿ ಹೆಸರಿಗೆ ತುಂಬಾ ಮಹತ್ವದ ಸ್ಥಾನವಿದೆ. ನಂಬಿಕೆ ಹೆಸರಿಗೆ ಕಾರಣವಾಗುವಂತೆ, ಹೆಸರಿಗೆ ನಂಬಿಕೆ ಕಾರಣವಾಗಬಹುದು. ಆದರ್ಶ ವ್ಯಕ್ತಿಗಳ ಹೆಸರಿಡುವುದು, ಆ ಹೆಸರಿನ ವ್ಯಕ್ತಿಗಳ ಹಾಗೆ ನಮ್ಮ ಮಕ್ಕಳು ಆಗಲೆಂದು ಬಯಸುವುದು, ಹೆಸರು ನಂಬಿಕೆಗೆ ಕಾರಣವಾದರೆ; ವ್ಯಕ್ತಿ ಜೀವನದಲ್ಲಿ ತೊಂದರೆಗಳು ಬಾರದಿರಲೆಂದು ತಿಪ್ಪಯ್ಯ, ಗುಂಡಣ್ಣ ಮೊದಲಾದ ಹೆಸರುಗಳನ್ನು ಇಡುವುದು ನಂಬಿಕೆ ಹೆಸರಿಗೆ ಕಾರಣವಾಗಿದೆ. ಚಿತ್ರದುರ್ಗ ಪರಿಸರದಲ್ಲಿ ಜನರು ಯಾವ ನಂಬಿಕೆಗಳಿಂದ ಎಂಥ ಹೆಸರುಗಳನ್ನು ಇಡುತ್ತಾರೆ, ವ್ಯಕ್ತಿಗೆ ಈ ಹೆಸರುಗಳನ್ನು ಇಡುವಾಗ, ನಾಮಕರಣ ಸಂದರ್ಭದಲ್ಲಿ ಯಾವ ವಿಶೇಷ ಆಚರಣೆಗಳನ್ನು ಮಾಡುತ್ತಾರೆ ಎಂಬುದರ ಕುರಿತು ಇಲ್ಲಿ ಚರ್ಚಿಸಲಾಗಿದೆ.

ನಂಬಿಕೆ, ಸಂಪ್ರದಾಯಗಳು ನಾಮನಿರ್ದೇಶನಕ್ಕೆ ಅಥವಾ ಹೆಸರಿನ ಸೃಷ್ಟಿಗೆ ಕಾರಣವಾಗುತ್ತವೆ. ಮದುವೆಯಾದ ಬಹಳ ವರ್ಷಗಳ ನಂತರ ಮಕ್ಕಳಾದರೆ, ಹುಟ್ಟಿದ ಮಕ್ಕಳು ಬೇಗ ಸಾಯುತ್ತಾರೆ ಎಂಬುದು ಕೆಲವು ಜನರ ನಂಬಿಕೆ. ಹುಟ್ಟಿದ ಮಕ್ಕಳು ಮತ್ತೆ ಮತ್ತೆ ಸತ್ತು ಹೋಗುತ್ತಿದ್ದು, ಮುಂದೆ ಹುಟ್ಟಿದ ಮಗು ರೋಗ ಪೀಡಿತವಾಗಿದ್ದರೆ, ಆಗ ದುಷ್ಟಶಕ್ತಿಗಳಾದ ಭೂತ-ಪ್ರೇತಗಳ ಕಣ್ಣು ಮಕ್ಕಳ ಮೇಲೆ ಬೀಳದಿರಲಿ,

ಬಿದ್ದರೂ ಅವುಗಳ ಶಕ್ತಿ ಕೈಗೂಡದಿರಲಿ ಎಂದು ಅಪಾಯದಿಂದ ಪಾರು ಮಾಡುವ ಸಲುವಾಗಿ ಮಕ್ಕಳಿಗೆ ಕಲ್ಲಪ್ಪ-ಕಲ್ಲಮ್ಮ, ಗುಂಡಣ್ಣ-ಗುಂಡಮ್ಮ, ತಿಪ್ಪಯ್ಯ-ತಿಪ್ಪಮ್ಮ, ಕರಿಯಪ್ಪ-ಕರಿಯಮ್ಮ, ಜವರಯ್ಯ, ಕಾಡಪ್ಪ, ಅಡಿವೆಪ್ಪ, ತಿರುಕಪ್ಪ, ಯಮನಪ್ಪ, ಯಮನೂರಪ್ಪ, ಯಮನೂರಮ್ಮ ಮೊದಲಾದ ಹೆಸರುಗಳನ್ನು ಇಡುತ್ತಾರೆ. ಈ ಹೆಸರುಗಳು ದೈವಸಂಬಂಧಿ ಹೆಸರುಗಳಾಗಿದ್ದರೂ, ಅಮಂಗಳಕರವಾದ, ಸುಂದರವಲ್ಲದ ಹೆಸರುಗಳು ಎಂದು ಜನ ಭಾವಿಸಿದ್ದಾರೆ. ಇಂಥ ಹೆಸರುಗಳನ್ನು ಇಟ್ಟರೆ ಮಕ್ಕಳಿಗೆ ಯಾವುದೇ ರೋಗ, ತೊಂದರೆ ಸಂಭವಿಸುವುದಿಲ್ಲ ಎಂಬುದು ಜನರಲ್ಲಿರುವ ಒಂದು ನಂಬಿಕೆ. ಹೆಚ್ಚಾಗಿ ಈ ಹೆಸರುಗಳನ್ನು ಕೆಳಸಮುದಾಯದವರು ಇಟ್ಟುಕೊಳ್ಳುವುದರಿಂದ, ಮೇಲ್‌ಸಮುದಾಯದವರು ಹೀಗೆ ಅಮಂಗಳ, ಅಶುಭ ಹೆಸರುಗಳೆಂದು ಕರೆದಿರಬಹುದು.

ಮಗು ಮೈ, ಕೈ ತುಂಬಿಕೊಂಡು, ದಷ್ಟಪುಷ್ಟವಾಗಿ, ಆರೋಗ್ಯವಂತನಾಗಿ ಬೆಳೆಯಲಿ ಎಂಬ ಉದ್ದೇಶದಿಂದ ಗುಂಡಣ್ಣ, ಗುಂಡಪ್ಪ ಎಂದು ಹೆಸರು ಇಡುತ್ತಾರೆ. 'ಗುಂಡಪ್ಪ', ಗುಂಡಮ್ಮ ಎಂದು ಹೆಸರಿಟ್ಟರೆ ಮಕ್ಕಳು 'ಗುಂಡುಕಲ್ಲು' ಇದ್ದ ಹಾಗೆ ಇರುತ್ತಾರೆ ಎಂಬುದು ಜನರಲ್ಲಿರುವ ಒಂದು ನಂಬಿಕೆ. ಈ ಹೆಸರನ್ನು ಮಕ್ಕಳಿಗೆ ಇಡುವಾಗ, ನಾಮಕರಣ ಸಂದರ್ಭದಲ್ಲಿ ಒಂದು ವಿಶೇಷ ಆಚರಣೆಯನ್ನು ಮಾಡುತ್ತಾರೆ.

ವ್ಯಕ್ತಿಗೆ ಹೆಸರಿಡುವ ಸಂಪ್ರದಾಯ ಹಿಂದಿನಿಂದ ಬೆಳೆದುಬಂದ ಪದ್ಧತಿ. ಹೆಸರಿಡುವಾಗ ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ಹೆಸರು ಕರೆಯುವುದು ಸಂಪ್ರದಾಯ. ಮಗುವಿನ ತೊಟ್ಟಿಲಲ್ಲಿ ಕಲ್ಲನ್ನು (ರುಬ್ಬುಗುಂಡು) ಇಟ್ಟು ಗುಂಡಪ್ಪ-ಗುಂಡಮ್ಮ ಎಂದು ಕರೆಯುತ್ತಾರೆ (ಕೆಲವು ಕಡೆ ಕಲ್ಲನ್ನು ಮಗುವಿನ ಜೊತೆ ತೊಟ್ಟಿಲಲ್ಲಿ ಇಡದೆ, ಮೂರು ಅಥವಾ ಐದು ಸಲ ತೊಟ್ಟಿಲು ಸುತ್ತ ತಿರುಗಿಸುತ್ತಾರೆ.) ಹೀಗೆ ಗುಂಡನ್ನು ಇಟ್ಟು ನಾಮಕರಣ ಮಾಡಿದರೆ, ಅದು 'ಯಮಧರ್ಮರಾಯನಿಗೆ ದೋಷ' ಎಂಬುದು ಜನರ ನಂಬಿಕೆ. ಹುಟ್ಟಿದ ಕೆಲವೇ ದಿವಸಗಳಲ್ಲಿ (ಹತ್ತು ದಿನದ ಮುನ್ನ) ಹಲವು ಮಕ್ಕಳು ಸಾಯುವ ಕಾಲದಲ್ಲಿ, ಹೊಲೆಯರ ಮನೆಯಲ್ಲಿ ಒಂದು ಪಿಶಾಚಿ ಬಂದು ಮಕ್ಕಳ ಉಸಿರನ್ನು ಕೊಳ್ಳಲು ನೋಡುತ್ತದೆ ಎಂಬುದು ಒಂದು ನಂಬಿಕೆ. ಆ ಅಪಾಯದಿಂದ ಪಾರು ಮಾಡುವುದಕ್ಕಾಗಿ, ತೊಟ್ಟಿಲಲ್ಲಿ ಮಗುವಿಗೆ ಒಂದು ರುಬ್ಬುಗುಂಡನ್ನು ಇರಿಸುವುದು ನಿವಾರಣೆಯ ಒಂದು ಸಂಕೇತವಾಗಿದೆ.

ಹುಟ್ಟಿದ ಮಕ್ಕಳು ಉಳಿಯದೆ, ಬೇಗನೆ ತೀರಿಹೋಗುತ್ತಿದ್ದರೆ, ಮುಂದೆ ಹುಟ್ಟಿದ ಮಗುವಿಗೆ ತಿಪ್ಪಯ್ಯ-ತಿಪ್ಪಮ್ಮ ಎಂದು ಹೆಸರಿಡುವುದು ಒಂದು ಸಂಪ್ರದಾಯ. ಮಗುವಿಗೆ ಹೆಸರಿಡುವುದಕ್ಕಿಂತ ಮೊದಲು, ಮಗುವನ್ನು ಮೊರದಲ್ಲಿ ಒಯ್ದು, ತಿಪ್ಪೆಯ ಮೇಲೆ ಮಲಗಿಸಿ, ನಂತರ ಮನೆಗೆ ತೆಗೆದುಕೊಂಡು ಬಂದು ತಿಪ್ಪಯ್ಯ-ತಿಪ್ಪಮ್ಮ ಎಂದು ಕರೆಯುತ್ತಾರೆ. (ಕೆಲವರು ಮಗುವನ್ನು ತಿಪ್ಪೆಯ ಮೇಲೆ ಮಲಗಿಸದೆ, ತೊಟ್ಟಿಲು ಕೆಳಗೆ ಸ್ವಲ್ಪ ತಿಪ್ಪೆಯ ಗೊಬ್ಬರವನ್ನು ಇರಿಸಿ ಹೆಸರಿಡುತ್ತಾರೆ) ಮತ್ತು ನಾಮಕರಣ ಮಾಡುವಾಗ, ರಾಗಿ ಮುರುವಿನಿಂದ ಮಗುವಿನ ಮೂಗು ಚುಚ್ಚುತ್ತಾರೆ. ಹೀಗೆ ಚುಚ್ಚುವುದು ಮಗುವಿನ ದೋಷ ಪರಿಹಾರದ ಸಂಕೇತವಾಗಿದೆ.

ಮಕ್ಕಳು ಆಗದೆ ಇರುವಾಗ ಕೆಲವರು ದೇವರಿಗೆ ಹರಕೆ ಮಾಡಿಕೊಳ್ಳುತ್ತಾರೆ. ನಂತರದಲ್ಲಿ ಮಕ್ಕಳಾದರೆ, ಹರಕೆ ಮಾಡಿಕೊಂಡಿದ್ದ ದೇವರ ಹೆಸರನ್ನು ಮಗುವಿಗೆ ಇಡುವುದು ಒಂದು ನಂಬಿಕೆ. 'ಮಕ್ಕಳುಬೇಕು' ಮತ್ತು 'ಮಕ್ಕಳುಸಾಕು' ಎಂಬುದರ ಸೂಚನೆಯಾಗಿ ಕೆಲವು ಹೆಸರುಗಳನ್ನು ಇಡುತ್ತಾರೆ. ಮಕ್ಕಳು ಬೇಕು ಎಂಬುದರ

ಸೂಚನೆಯಾಗಿ ಬೆನಕಪ್ಪ, ಬೆನವಣ್ಣ, ಗಣೇಶ ಎಂಬ ಹೆಸರುಗಳನ್ನು ಇಟ್ಟರೆ, ಮಕ್ಕಳು ಸಾಕು ಎಂಬುದರ ಸೂಚನೆಯಾಗಿ ಸಾಕು ಸಾವಿತ್ರಿ, ಸಾಕವ್ವ, ಸಾವಿತ್ರಿ, ಸಾವಿಂತ್ರಿ ಎಂಬ ಹೆಸರುಗಳನ್ನು ಇಡುತ್ತಾರೆ. 'ಬೆನಕಪ್ಪ' ಎಂದು ಹೆಸರಿಟ್ಟರೆ ಮುಂದೆ ಮಕ್ಕಳಾಗುತ್ತಾರೆಂದೂ, 'ಸಾಕವ್ವ' ಎಂದು ಹೆಸರಿಟ್ಟರೆ ಮುಂದೆ ಮಕ್ಕಳು ಆಗುವುದಿಲ್ಲವೆಂಬುದು ರೂಢಿಯಲ್ಲಿರುವ ನಂಬಿಕೆಯಾಗಿದೆ. ಗಂಡುಮಕ್ಕಳು ಸಾಕು, ಹೆಣ್ಣುಮಕ್ಕಳು ಬೇಕು ಎಂಬುದರ ಸೂಚನೆಯಾಗಿ ಹೆಸರಿಡುವ ಪದ್ಧತಿ ಚಿತ್ರದುರ್ಗ ಪರಿಸರದಲ್ಲಿ ಇರುವುದು ಕಾಣಬರುವುದಿಲ್ಲ. ಗಂಡು ಬೇಕು, 'ಹೆಣ್ಣು ಸಾಕು' ಎಂಬ ನಂಬಿಕೆಯಿಂದ ನಿರ್ದೇಶಿಸುವ ಕ್ರಮ ಪುರುಷಪ್ರಧಾನ ಸಮಾಜದ ಧೋರಣೆಯನ್ನು ಸೂಚಿಸುತ್ತದೆ. ಗಂಡುಮಕ್ಕಳು ಬೇಕು ಎಂಬುದರ ಸೂಚನೆಯಾಗಿ, ವಿಘ್ನೇಶ್ವರನ (ಬೆನವಣ್ಣ) ಹೆಸರನ್ನು ಇಡುವುದಕ್ಕೆ ಕಾರಣ, ಸಕಲ ದೇವತೆಗಳಲ್ಲಿ ವಿಘ್ನೇಶ್ವರನಿಗೆ ಮೊದಲ ಸ್ಥಾನವಿದ್ದು, ಯಾವುದೇ ಕಾರ್ಯ ಮೊದಲಾಗುವ ಮುನ್ನ ವಿಘ್ನೇಶ್ವರನ ಪೂಜೆ ಮಾಡುವುದು ಸಂಪ್ರದಾಯ. ಪ್ರಾಯಶ: ಅದೇ ಹಿನ್ನೆಲೆಯಲ್ಲಿ ಸಂತಾನ ಮೊದಲಾಗಿರುವುದರ ಸೂಚನೆಯಾಗಿಯೂ ಮತ್ತು ಮಕ್ಕಳು ಬೇಕು ಎಂಬ ಆಶಯವೂ, ಈ ಹೆಸರಿಡುವುದರ ಹಿಂದಿನ ಉದ್ದೇಶವಾಗಿರಬಹುದು. 'ಹೆಣ್ಣುಮಕ್ಕಳು' ಸಾಕು ಎಂಬುದರ ಸೂಚನೆಯಾಗಿ ಸಾವಿತ್ರಿ ಎಂದು ಹೆಸರಿಡುವುದಕ್ಕೆ ಕಾರಣ, ಮಕ್ಕಳ ಸಂತಾನಕ್ಕೆ ಸಾವುಕೊಡು ಅಂದರೆ ಮಕ್ಕಳಾಗುವುದು ಬೇಡ ಎಂಬುದು ಇದರ ಹಿಂದಿನ ಆಶಯವಾಗಿರಬಹುದು. ಈ ಸಂಪ್ರದಾಯ ಹಿಂದೆ ಇದ್ದು, ಇಂದು ಕಡಿಮೆಯಾಗಿದೆ.

ಏಕಕಾಲಕ್ಕೆ ಇಬ್ಬರು ಮಕ್ಕಳು (ಅವಳಿ-ಜವಳಿ) ಹುಟ್ಟಿದಾಗ ಆ ಮಕ್ಕಳಿಗೆ ಇತಿಹಾಸ ಪ್ರಸಿದ್ಧ ಸಹೋದರರ ಹೆಸರಿಡುವುದು ಸಂಪ್ರದಾಯ. ಇಬ್ಬರು ಗಂಡು ಇಲ್ಲವೆ, ಇಬ್ಬರು ಹೆಣ್ಣು ಮಕ್ಕಳು ಆಗಿದ್ದಾಗ ಮಾತ್ರ ಈ ಹೆಸರುಗಳನ್ನು ಇಡುವುದು ರೂಢಿ. ನಿದರ್ಶನಕ್ಕೆ ಕೆಲವು ಹೆಸರುಗಳನ್ನು ನೋಡಬಹುದು.

| ಪುರುಷ | ಸ್ತ್ರೀ |
|---|---|
| ರಾಮ-ಲಕ್ಷ್ಮಣ | ಗಂಗಮ್ಮ-ಗೌರಮ್ಮ |
| ಲವ-ಕುಶ | |
| ನಕುಲ-ಸಹದೇವ | |
| ಹಸೇನ-ಹುಸೇನ | |

ಮೇಲಿನ ಹೆಸರುಗಳಲ್ಲಿ 'ಲವ-ಕುಶ'ರ ಹೆಸರನ್ನು ಹೊರತುಪಡಿಸಿ ಉಳಿದ ಯಾವ ಹೆಸರುಗಳು ಮೂಲತಃ ಅವಳಿ ಸಹೋದರರ ಹೆಸರಾಗಿರುವುದಿಲ್ಲ. ಅವು ಸಹೋದರರ ಹೆಸರುಗಳಷ್ಟೆ. ಆದರೆ ಪರಸ್ಪರ ಅವರು ಬದುಕಿದ ರೀತಿ ತುಂಬಾ ಅನ್ಯೋನ್ಯವಾಗಿದ್ದ ಕಾರಣ, ಅವರ ಹಾಗೆ ಬಾಳಲಿ ಎಂಬ ಆಶಯದಿಂದ ಈ ಹೆಸರುಗಳನ್ನು ಇಡುತ್ತಿರಬಹುದು. ಹಿಂದೆ ಈ ಪದ್ಧತಿ ಅಧಿಕವಾಗಿದ್ದು, ಪ್ರಸ್ತುತ ಸಾಮಾಜಿಕ ಸಂದರ್ಭದಲ್ಲಿ ಪುರಾಣ ಮೂಲದ ಹೆಸರುಗಳಿಗೆ ಬದಲಾಗಿ, ಪ್ರಾಸಯುಕ್ತವಾದ ಅವಳಿ ಪದಗಳನ್ನು, ಅವಳಿ ಮಕ್ಕಳಿಗೆ ಹೆಸರಾಗಿಡುವುದು ಆಧುನಿಕ ಕಾಲದ ಲಕ್ಷಣವಾಗಿದೆ ಎಂದು ಹೇಳಬಹುದು. ಉದಾಹರಣೆಗೆ :

| | |
|---|---|
| ವಿಜಯ - ವಿನಯ | ರೂಪ - ದೀಪ |
| ಜಯ - ವಿಜಯ | ರೇಖ - ಸುರೇಖ |
| ಸತೀಶ - ಜಗದೀಶ | ಪ್ರೀತಿ - ಪ್ರೇಮ |
| ಶೀಲ - ಸುಶೀಲ | |

- ಇತ್ಯಾದಿ

ವ್ಯಕ್ತಿಗೆ ಹೆಸರಿಡುವ ಆರಂಭದ ಕಾಲಾವಧಿಯಲ್ಲಿ ಈ ನಂಬಿಕೆ, ಸಂಪ್ರದಾಯಗಳು ಇದ್ದಿರಲಾರವು. ಹೆಸರಿನ ಬಗೆಗೆ ಜನರ ತಿಳುವಳಿಕೆಗಳು ಜಾಸ್ತಿ ಆಗುತ್ತಾ ಬರುತ್ತಿದ್ದಂತೆ, ಅದೇ ಕಾಲಕ್ಕೆ ಅನೇಕ ನಂಬಿಕೆಗಳು ಹುಟ್ಟಿಕೊಂಡಿವೆ. ಆದರೆ ಇಂದು ನಾಮ ಮತ್ತು ನಾಮಕರಣದ ಗ್ರಹಿಕೆಗಳು ಜನರಲ್ಲಿ ಬೇರೆಯಾಗಿದೆ. ಪರಿಣಾಮವಾಗಿ ಹೆಸರಿನ ಬಗೆಗೆ ಇದ್ದ ನಂಬಿಕೆಗಳೂ ಮರೆಯಾಗುತ್ತಿವೆ. ಈ ನಂಬಿಕೆಗಳು ವೈಜ್ಞಾನಿಕ ಆಶೋತ್ತರಗಳಿಗಿಂತ, ಧಾರ್ಮಿಕ ಮತ್ತು ಸಾಮಾಜಿಕ ಆಶೋತ್ತರಗಳನ್ನು ಒಳಗೊಂಡಿದ್ದವು ಎಂಬುದನ್ನು ಗಮನಿಸಬಹುದು.

## ೫.೪. ಹೆಸರು : ನಂಬಿಕೆ

ಪುರಾತನ ಕಾಲದಿಂದಲೂ ಹೆಸರುಗಳು ಚಾಲ್ತಿಯಲ್ಲಿವೆ. ಹೆಸರಿನ ಉಗಮದ ಹಿಂದೆಯೇ, ಹೆಸರಿನ ಬಗೆಗೆ ನಂಬಿಕೆಗಳೂ ಹುಟ್ಟಿಕೊಂಡಿವೆ. ಹೆಸರುಗಳು ಕಾಲದಿಂದ ಕಾಲಕ್ಕೆ, ಜನಾಂಗದಿಂದ ಜನಾಂಗಕ್ಕೆ ವ್ಯತ್ಯಾಸವಾಗುತ್ತ ಬಂದಿರುವಂತೆ, ಹೆಸರಿನ ಬಗೆಗಿನ ನಂಬಿಕೆಗಳೂ ಬದಲಾಗುತ್ತಾ ಬಂದಿವೆ. ಪ್ರಾಚೀನ ಮಾನವರಲ್ಲಿ ಹೆಸರಿನ ಬಗೆಗೆ ಇದ್ದ ನಂಬಿಕೆ, ಸಂಪ್ರದಾಯಗಳು, ಅರ್ವಾಚೀನ ಮಾನವರಲ್ಲಿ ಸಂಪೂರ್ಣವಾಗಿ ಮರೆಯಾಗಿರುವುದಿಲ್ಲ. ಈಗಲೂ ಕೆಲವು ನಂಬಿಕೆಗಳು ಬಳಕೆಯಲ್ಲಿ ಉಳಿದಿವೆ. ಪ್ರಾದೇಶಿಕವಾಗಿ ಮತ್ತು ಜನಾಂಗಿಕವಾಗಿ ಹೆಸರಿನ ನಂಬಿಕೆಗಳ ಸ್ವರೂಪ ಮತ್ತು ಆಶಯ ಬೇರೆ ಬೇರೆಯಾಗಿರುವ ಸಾಧ್ಯತೆಗಳೂ ಇವೆಯಾದರೂ ಪ್ರಸ್ತುತ ಅಧ್ಯಾಯದಲ್ಲಿ ಚಿತ್ರದುರ್ಗ ಪರಿಸರದಲ್ಲಿ ಕಾಣಬರುವ ನಂಬಿಕೆಗಳ ಕುರಿತು ಚರ್ಚಿಸಲಾಗುವುದು.

ಹೆಸರು ವ್ಯಕ್ತಿಯ ವ್ಯಕ್ತಿತ್ವದ ಒಂದು ಭಾಗವಾಗಿರುವಂತೆ, ಶರೀರದ ಒಂದು ಅಂಗವೆಂಬುದು ಜನರ ನಂಬಿಕೆಯಾಗಿದೆ. ಮಾಟ, ಮಂತ್ರಕ್ಕೆ ವ್ಯಕ್ತಿಯ ಕೂದಲು, ಉಗುರು, ಬಟ್ಟೆ, ಚಪ್ಪಲಿ, ಮೂತ್ರ ಮೊದಲಾದವುಗಳನ್ನು ಬಳಸಿಕೊಳ್ಳುವಂತೆ, ಹೆಸರನ್ನು ಉಪಯೋಗಿಸಿಕೊಳ್ಳುತ್ತಾರೆಂದು ಜನ ಭಾವಿಸಿದ್ದಾರೆ. "ಅಂಗಾಂಗಳ ಬಗ್ಗೆ ಎಚ್ಚರಿಕೆಯಿಲ್ಲದಿರುವಾಗ ಅಘಾತವೆಂತು ಸಂಭವಿಸುವುದೋ ಜಾಗರೂಕತೆಯಿಲ್ಲದಿರುವಾಗ ಹೆಸರಿಗೂ ಅಪಾಯವೊದಗುತ್ತದೆಂದು, ಅಮೇರಿಕೆಯ ಮೂಲನಿವಾಸಿಗಳು ಅರಿತ್ತಿದ್ದಂತೆ"* ಚಿತ್ರದುರ್ಗ ಪರಿಸರದ 'ಮ್ಯಾಸನಾಯಕ', ಕುರುಬ, ಲಂಬಾಣಿ ಮೊದಲಾದ ಬುಡಕಟ್ಟು ಸಮುದಾಯಗಳಲ್ಲಿ ಈಗಲೂ ಈ ನಂಬಿಕೆಯಿದೆ. ಆ ಕಾರಣಕ್ಕಾಗಿ ಜನರು ಹೆಸರಿನ ಬಗೆಗೆ ಸದಾ ಜಾಗ್ರತರಾಗಿರುವುದು ತಿಳಿದುಬರುತ್ತದೆ. ಹೆಸರು ಭೂತ-ಪಿಶಾಚಿಗಳಿಗೆ ತಿಳಿದಿದ್ದಾದರೆ, ಅನಾಹುತ ಸಂಭವಿಸುತ್ತದೆ ಎಂಬ ಭಾವನೆ ಕೆಲವರಲ್ಲಿದೆ. ಹೆಸರಿನ ಬಗೆಗಿನ ಈ ನಂಬಿಕೆ ಮತ್ತು ಕಟ್ಟುಪಾಡುಗಳು ವ್ಯಕ್ತಿಯ ನಿಜನಾಮಕ್ಕೆ ಮಾತ್ರವೆ ಅನ್ವಯಿಸುತ್ತಿದ್ದು, ಇತರ ನಾಮಗ್ಳಗೆ ಅಂದರೆ ಕುಲನಾಮ, ಅಡ್ಡಹೆಸರು, ವ್ಯಾವಹಾರಿಕ ನಾಮಗಳಿಗೆ ಈ ನಿಯಮಗಳು ಸಲ್ಲುವುದಿಲ್ಲ. ನಿಜನಾಮ ಮಾತ್ರ ವ್ಯಕ್ತಿಯೊಂದಿಗೆ ನೇರ ಸಂಬಂಧವನ್ನು ಹೊಂದಿದ್ದು, ಇತರ ನಾಮಗಳು ಹೊಂದಿರುವುದಿಲ್ಲ ಎಂಬುದು ಜನರ ಮನೋಭಾವನೆಯಾಗಿದೆ.

ಕೆಲವು ಸಮುದಾಯಗಳಲ್ಲಿ ಒಬ್ಬ ವ್ಯಕ್ತಿಗೆ, ಒಂದಕ್ಕಿಂತ ಹೆಚ್ಚು ಹೆಸರು ಇಡುವ ಸಂಪ್ರದಾಯವಿದೆ. ಬ್ರಾಹ್ಮಣ, ಲಿಂಗಾಯತ, ಜಂಗಮ, ಒಕ್ಕಲಿಗ, ರೆಡ್ಡಿ ಇವೇ ಮೊದಲಾದ ಮೇಲ್ಜಾತಿಗಳಲ್ಲಿ ಈ ಪದ್ಧತಿ

ಹೆಚ್ಚು ಕಾಣಬರುತ್ತದೆ. ಹೀಗೆ ಹೆಚ್ಚು ಹೆಸರುಗಳನ್ನು ಇಟ್ಟಾಗ ವ್ಯವಹಾರಕ್ಕೆ ಒಂದು ಹೆಸರು, ಜಾತಕ ಕರ್ಮಗಳಿಗೆ ಒಂದು ಹೆಸರು ಪ್ರತ್ಯೇಕವಾಗಿರುತ್ತವೆ. ಮದುವೆ, ಮುಂಜಿ, ಜಾತಕ, ಕುಂಡಲಿ ಮೊದಲಾದ ಕಡೆ ಜನ್ಮನಾಮವನ್ನು ಬಳಕೆ ಮಾಡಲಾಗುತ್ತಿದ್ದು, ಇತರ ಸಂದರ್ಭಗಳಲ್ಲಿ ಜನ್ಮನಾಮವನ್ನು ಬಳಸದೆ, ಗೌಪ್ಯವಾಗಿಡುತ್ತಾರೆ. ಹೆಚ್ಚಿನ ಸಂದರ್ಭಗಳಲ್ಲಿ ಮಗುವಿನ ಜನ್ಮನಾಮ ಮಗುವಿನ ತಂದೆ-ತಾಯಿ ಮಾತ್ರ ತಿಳಿದಿದ್ದು, ಬೇರೆಯವರಿಗೆ ಈ ಹೆಸರು ತಿಳಿದಿರುವುದಿಲ್ಲ. ಕೆಲವೊಮ್ಮೆ ವ್ಯಕ್ತಿಯಿಂದಲೂ ಈ ಹೆಸರನ್ನು ರಹಸ್ಯವಾಗಿಡುತ್ತಾರೆ. ಜನ್ಮನಾಮವನ್ನು ಬಹಿರಂಗ ಪಡಿಸದೆ ಗುಟ್ಟಾಗಿ ಇಡುವುದರ ಉದ್ದೇಶ, ಈ ಹೆಸರು ದುಷ್ಟರಿಗೆ ಗೊತ್ತಾದರೆ, ಅನಾಹುತ (ಮಾಟ-ಮಂತ್ರ ಮಾಡಿಸಬಹುದು) ಸಂಭವಿಸಬಹುದು ಎಂಬ ಭಯವೇ ಇದಕ್ಕೆ ಮುಖ್ಯ ಕಾರಣವಾಗಿದೆ. ಶತೃಗಳಿಗೆ ವ್ಯಕ್ತಿಯ ನಿಜನಾಮ ತಿಳಿದರೆ, ಮಾಟ-ಮಂತ್ರ, ಮಾಡಿಸಿ ಸಾಯಿಸುತ್ತಾರೆ ಎಂದು ಜನ ಭಾವಿಸಿದ್ದಾರೆ.

ಕಿರಿಯರು, ಹಿರಿಯರನ್ನು, ಗಂಡ ಹೆಂಡತಿಯನ್ನು, ಹೆಂಡತಿ ಗಂಡನನ್ನು, ಕೆಳಜಾತಿ, ಕೆಳವರ್ಗದವರು, ಮೇಲ್ಜಾತಿ ಮೇಲ್ವರ್ಗದವರನ್ನು ಹೆಸರಿಡಿದು ಕರೆಯುವುದಿಲ್ಲ. ಈ ಜಾತಿ, ವರ್ಗ ಮತ್ತು ಸಂಬಂಧಗಳ ಮಧ್ಯೆ ಹೆಸರಿನ ಸಂಬೋಧನೆ ನಿಷಿದ್ಧವಾಗಿದೆ. ಈ ನಿಷೇಧಕ್ಕೆ ಹಲವು ಸಾಮಾಜಿಕ ಕಾರಣಗಳಿವೆ. ಜೊತೆಗೆ ಮಾಟ-ಮಂತ್ರದ ಹೆದರಿಕೆಯೂ ಈ ನಿಷೇಧಕ್ಕೆ ಒಂದು ಕಾರಣವಾಗಿರಬಹುದು.

ಪ್ರಸ್ತುತ ಅನೇಕ ಸಂದರ್ಭಗಳಲ್ಲಿ ಹೆಸರು ಹೇಳಲು ಅನುಮಾನಿಸುತ್ತಿರುವುದನ್ನು ಕಾಣಬಹುದು. ಚಿತ್ರದುರ್ಗ ಪರಿಸರದಲ್ಲಿ 'ಕಾಡುಸಿದ್ಧ' (ಕಾಟೆಪಾಪ) 'ಕೊಂಡಮಾವ' ಜನಾಂಗದವರು ವಾಸವಾಗಿದ್ದಾರೆ. ಇವರು ತಮ್ಮ ಮೂಲ ಕಸುಬಿನೊಂದಿಗೆ, ಶಾಸ್ತ್ರ, ಭವಿಷ್ಯ ಹೇಳುವ ವೃತ್ತಿಯನ್ನು ಮಾಡುತ್ತಾರೆ. ಭವಿಷ್ಯ ಹೇಳಲು ಹೆಸರು ಕೇಳಿದಾಗ ಜನ ಹೆಸರು ಹೇಳುವುದಿಲ್ಲ. ಅಥವಾ ಹೆಸರು ಹೇಳಲು ಹಿಂಜರಿಯುತ್ತಾರೆ. ಕಾರಣ ಇವರು ಮಾಟ ಮಂತ್ರ ಬಲ್ಲವರಾಗಿದ್ದು, ಹೆಸರು ಗೊತ್ತಾದರೆ ಮಾಟ ಮಾಡಿಸಿ ಸಾಯಿಸುತ್ತಾರೆ ಎಂಬುದು ಜನರ ನಂಬಿಕೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂಗ್ರಹಿಸಲಾಗಿರುವ ಕೆಲವು ನಂಬಿಕೆಗಳನ್ನು ಮಾತ್ರ ಇಲ್ಲಿ ದಾಖಲಿಸಲಾಗಿದೆ. ಹೆಸರಿನ ಬಗೆಗೆ ಇನ್ನೂ ಅನೇಕ ನಂಬಿಕೆಗಳು ಇರಲೂಬಹುದು. ಚಿತ್ರದುರ್ಗ ಪರಿಸರದಲ್ಲಿ ಹೆಸರಿನ ಬಗೆಗೆ ಇರುವ ನಂಬಿಕೆಗಳು, ಕರ್ನಾಟಕದ ಇತರ ಪ್ರದೇಶಗಳಲ್ಲಿಯೂ ಕಾಣಬರಬಹುದು.

### ೫.೫. ಹೆಸರು : ಆಯ್ಕೆ

ಹೆಸರು ವ್ಯಕ್ತಿಗೆ ಒಂದು ಸಾಮಾಜಿಕ ಅಗತ್ಯ. ವ್ಯಕ್ತಿ ತನಗೆ ತಾನೇ ಹೆಸರಿಟ್ಟುಕೊಳ್ಳುವುದಿಲ್ಲ. ತಂದೆ, ತಾಯಿ, ಮನೆಯಲ್ಲಿ ಹಿರಿಯರು, ತಮ್ಮ ಆಶೋತ್ತರಗಳಿಗೆ ಅನುಗುಣವಾಗಿ ಹೆಸರಿಡುತ್ತಾರೆ. ಅಂದರೆ ಹೆಸರಿನ ಆಯ್ಕೆ ವ್ಯಕ್ತಿಗೆ ಸಂಬಂಧಿಸಿರದೆ, ಕುಟುಂಬದ ಸದಸ್ಯರಿಗೆ ಸಂಬಂಧಿಸಿರುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ಹೆಸರಿನ ಆಯ್ಕೆಗೆ ಆಕರಗಳು ಹಲವಾರು ದೈವ, ಧರ್ಮ, ಗುರು-ಹಿರಿಯರು, ರಾಜಮಹಾರಾಜರು, ಸಾಧು-ಸಂತರು, ನಾಯಕಶಿರೋಮಣಿಗಳು, ಮಹಾವೀರರು, ಕವಿಗಳು, ಪ್ರಾಣಿ, ಪಕ್ಷಿ, ಗಿಡ, ಮರ, ಬಳ್ಳಿ, ಭೂಮಿ, ಆಕಾಶ ಮೊದಲಾದ ನಿಸರ್ಗದ ಅನೇಕ ಸಂಗತಿಗಳು ಹೆಸರಿಗೆ ಪ್ರೇರಣೆಯಾಗಿವೆ. ದೈವ ಮತ್ತು ಧರ್ಮ ವ್ಯಕ್ತಿನಾಮಗಳ ಮೇಲೆ ತುಂಬಾ ಗಾಢ ಪ್ರಭಾವವನ್ನು ಬೀರಿದೆ. ಭಾರತೀಯ ಸಂಸ್ಕೃತಿಯಲ್ಲಿ ದೈವ ಮತ್ತು

ಧರ್ಮಗಳು ತುಂಬಾ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಇದರ ಪರಿಣಾಮವಾಗಿ ವ್ಯಕ್ತಿನಾಮಗಳ ಮೇಲೆ ಇವುಗಳ ಪ್ರಭಾವ ಅಧಿಕವಾಗಿರುವುದು ಸಹಜವೇ ಆಗಿದೆ.

ಹೆಸರಿನ ಆಯ್ಕೆ ಗ್ರಾಮೀಣ ಪರಿಸರಕ್ಕಿಂತ ನಗರ ಪರಿಸರದಲ್ಲಿ ಹೆಚ್ಚು ಸಂಕೀರ್ಣವಾಗಿದೆ. ನಗರ ಪರಿಸರದ ಶಿಷ್ಟ ಸಂಸ್ಕೃತಿಯ ಜನ ಹೆಸರಿನ ಆಯ್ಕೆಗೆ ಶಾಸ್ತ್ರ, ಪುರಾಣ, ಕಾವ್ಯ, ನಿಘಂಟು, ಸಹಸ್ರನಾಮಾವಳಿ ಮೊದಲಾದವುಗಳನ್ನು ಅವಲಂಬಿಸಿದರೆ, ಗ್ರಾಮೀಣ ಪರಿಸರದ ಸಾಂಪ್ರದಾಯಿಕ ಜನ ಶಾಸ್ತ್ರ, ಪುರಾಣಗಳನ್ನು ಅವಲಂಬಿಸದೆ, ದೇವರ ಹೆಸರನ್ನೋ, ಹಿರಿಯರ ಹೆಸರನ್ನೋ ಇಡುವುದು ಒಂದು ಸಾಮಾನ್ಯ ಸಂಪ್ರದಾಯವಾಗಿದೆ. ಶಿಕ್ಷಣ ಮತ್ತಿತರ ಸೌಲಭ್ಯಗಳಿಂದಾಗಿ ಇತ್ತೀಚಿಗೆ ಗ್ರಾಮೀಣ ಪರಿಸರದ ಜನರಲ್ಲಿಯೂ, ಹೆಸರಿನ ಆಯ್ಕೆಯಲ್ಲಿ ಅನೇಕ ಬದಲಾವಣೆಗಳು ಆಗಿರುವುದು ಗಮನಾರ್ಹ ಸಂಗತಿಯಾಗಿದೆ. ಮೇಲಿನ ಸಂಗತಿಗಳನ್ನು ಗಮನಿಸಿದರೆ, ಹೆಸರಿನ ಆಯ್ಕೆ ಏಕಕಾಲಕ್ಕೆ ಸರಳವೂ ಆಗಿರುವಂತೆ, ಸಂಕೀರ್ಣವೂ ಆಗಿದೆ. ಚಿತ್ರದುರ್ಗ ಪರಿಸರದಲ್ಲಿ ಯಾವ ಯಾವ ಆಕರಗಳು ಹೆಸರಿನ ಆಯ್ಕೆಗೆ ಪ್ರೇರಣೆಯಾಗಿವೆ, ಹೆಸರಿನ ಆಯ್ಕೆಯ ಹಿಂದಿರುವ ಜನರ ನಂಬಿಕೆ ಮತ್ತು ಸಾಮಾಜಿಕ ವೈವಿಧ್ಯತೆಗಳನ್ನು ಕುರಿತು ಪ್ರಸ್ತುತ ಭಾಗದಲ್ಲಿ ಗಮನಿಸುವ ಪ್ರಯತ್ನ ಮಾಡಲಾಗಿದೆ.

ಚಿತ್ರದುರ್ಗ ಪರಿಸರದಲ್ಲಿ ಹೆಸರಿನ ಆಯ್ಕೆಗೆ ಪ್ರೇರಣೆಯಾಗಿರುವ ಸಂಗತಿಗಳು ಅನೇಕ. ಅಧ್ಯಯನದ ಅನುಕೂಲಕ್ಕಾಗಿ ಅವುಗಳನ್ನು ಈ ರೀತಿ ವರ್ಗೀಕರಿಸಿಕೊಳ್ಳಬಹುದು.

ಅ. ಧಾರ್ಮಿಕ ಪ್ರೇರಣೆ

ಆ. ಲೌಕಿಕ ಪ್ರೇರಣೆ

### ೫.೫.೧ ಧಾರ್ಮಿಕ ಪ್ರೇರಣೆ

ದೇವರ ಹೆಸರು ವ್ಯಕ್ತಿನಾಮ ನಿರ್ದೇಶನಕ್ಕೆ ಪ್ರೇರಣೆಯಾಗಿವೆ. ದೈವ ಸಂಬಂಧಿ ಹೆಸರುಗಳನ್ನು ವ್ಯಕ್ತಿನಾಮಗಳಾಗಿ ಬಳಸಿಕೊಳ್ಳುವುದು ಹಳೆಯ ಪರಂಪರೆ. ದೇವರ ಹೆಸರುಗಳನ್ನು ವ್ಯಕ್ತಿನಾಮವಾಗಿ ಇಡುವುದರ ಹಿಂದೆ, ಜನರಲ್ಲಿ ಕೆಲವು ನಂಬಿಕೆಗಳಿವೆ. ದೇವರ ಮೇಲಿನ ಭಕ್ತಿಯಿಂದಲೂ, ಭಯದಿಂದಲೂ ಮಕ್ಕಳಿಗೆ ದೈವ ಸಂಬಂಧಿ ಹೆಸರುಗಳನ್ನು ನಿರ್ದೇಶನ ಮಾಡುತ್ತಾರೆ. ದೇವರ ಹೆಸರನ್ನು ಮಕ್ಕಳಿಗೆ ಇಟ್ಟು ಕರೆಯುವುದರಿಂದ, 'ದೇವರ ನಾಮಸ್ಮರಣೆ' ಮಾಡಿದಂತಾಗುತ್ತದೆ. ಪರಿಣಾಮವಾಗಿ ದೇವರ ಕೃಪೆಗೆ ಪಾತ್ರರಾಗಿ, ಮೋಕ್ಷ ಪ್ರಾಪ್ತಿಯಾಗುತ್ತದೆ ಎಂಬುದು ಜನರ ಒಂದು ಸಾಮಾನ್ಯ ನಂಬಿಕೆಯಾಗಿದೆ. ಮತ್ತು ದೇವರ ನಾಮಗಳನ್ನು ಮಕ್ಕಳಿಗೆ ಇಟ್ಟರೆ, ದುಷ್ಟಶಕ್ತಿಗಳ ಕಣ್ಣು ಬೀಳುವುದಿಲ್ಲ, ಮಕ್ಕಳ ಜೀವನದಲ್ಲಿ ಯಾವ ಅರಿಷ್ಟವೂ ಪ್ರಾಪ್ತವಾಗುವುದಿಲ್ಲ ಎಂಬುದು ಜನರ ಭಾವನೆಯಾಗಿದೆ. ಇಂಥ ಹಲವಾರು ನಂಬಿಕೆ, ಸಂಪ್ರದಾಯಗಳು, ದೈವನಾಮಗಳು ವ್ಯಕ್ತಿನಾಮಗಳಾಗಿ ಪರಿಣಮಿಸಿ, ಪ್ರಸಾರ ಪಡೆಯುವುದಕ್ಕೆ ಕಾರಣಗಳಾಗಿವೆ.

ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳ ಸಾಮಾಜಿಕ ಆಯಾಮಗಳನ್ನು ಗಮನಿಸಿದರೆ, ಬ್ರಾಹ್ಮಣರು, ವಿಷ್ಣುಪರವಾದ, ಮತ್ತು ಶೈವರು ಶಿವಪರವಾದ ಹೆಸರಿಡುವುದು ಸಾಮಾನ್ಯ ಸಂಗತಿಯಾಗಿದೆ. ಆದರೂ,

ವೈಷ್ಣವರು ಶಿವಸಂಬಂಧಿ ಹೆಸರನ್ನೂ, ಶೈವರು ವಿಷ್ಣುಸಂಬಂಧಿ ಹೆಸರನ್ನು ಇಡುವುದೂ ಕಾಣಬರುತ್ತದೆ. ಒಂದೇ ಮನೆಯಲ್ಲಿ ಒಬ್ಬರ ಹೆಸರು 'ರಾಮಯ್ಯ' ಎಂದೂ ಮತ್ತೊಬ್ಬರ ಹೆಸರು 'ಗಂಗಾಧರ' ಎಂದು ಇಟ್ಟ ನಿದರ್ಶನಗಳನ್ನು ಗಮನಿಸಬಹುದು. ನಾಯಕ, ಕುರುಬ, ಗೊಲ್ಲ, ರೆಡ್ಡಿ, ಮಾದಿಗ, ಲಂಬಾಣಿ, ವಿಶ್ವಕರ್ಮ, ಮರಾಠ, ಮೊದಲಾದ ಇತರ ಸಮುದಾಯಗಳು ಸಾಮಾನ್ಯವಾಗಿ ತಮ್ಮ ಮನೆದೈವ, ಕುಲದೈವಗಳ ಹೆಸರಿನ ಜತೆಗೆ, ಗ್ರಾಮದೇವತೆ ಹಾಗೂ ಪ್ರಾದೇಶಿಕ ಪ್ರಸಿದ್ಧ ದೇವರ ಹೆಸರನ್ನು ಇಡುವುದು ರೂಢಿ. ರಾಮ, ಕೃಷ್ಣ, ಹನುಮಂತ, ಶಿವ, ರುದ್ರ, ಭೈರವ, ಸೀತ, ಲಕ್ಷ್ಮಿ, ಪಾರ್ವತಿ, ಗೌರಿ ಮೊದಲಾದವು ಬ್ರಾಹ್ಮಣ ಮತ್ತು ಶೈವರಿಗೆ ಸಂಬಂಧಪಟ್ಟ ದೈವಗಳಾಗಿವೆ. ಈ ದೈವನಾಮಗಳು ಸಹಜವಾಗಿಯೇ ಆಯಾ ಸಮುದಾಯಗಳ ವ್ಯಕ್ತಿನಾಮಗಳ ಮೇಲೆ ಪ್ರಭಾವ ಬೀರಿವೆ. ಈ ದೈವಗಳು ಭಾರತೀಯ ದೈವಗಳಾಗಿರುವುದರಿಂದ ಅದೇ ಕಾಲಕ್ಕೆ ಇತರ ಸಮುದಾಯಗಳ ಮೇಲೂ ಪ್ರಭಾವವಾಗಿರುವುದು ಕಾಣಬರುತ್ತದೆ. ಮೇಲ್ ಸಮುದಾಯಗಳ ದೈವಗಳು ಕೆಳಸಮುದಾಯಗಳ ವ್ಯಕ್ತಿನಾಮಗಳಿಗೆ ಪ್ರೇರಣೆಯಾಗಿರುವಂತೆ, ಕೆಳಸಮುದಾಯಗಳ ದೈವಗಳು ಮೇಲ್ ಸಮುದಾಯಗಳ ವ್ಯಕ್ತಿನಾಮಗಳಿಗೆ ಪ್ರೇರಣೆಯಾಗಿರುವುದು ಕಾಣಬರುವುದಿಲ್ಲ. ಕೆಲವು ಅಪವಾದಗಳು ಇರಲೂ ಸಾಧ್ಯವಿದೆ.

ಚಿತ್ರದುರ್ಗ ಪರಿಸರದಲ್ಲಿ ಆಯಾ ಸಮುದಾಯಗಳು ತಮ್ಮ ಧಾರ್ಮಿಕ ಪರಂಪರೆಗೆ (ಮನೆದೈವ, ಕುಲದೈವ) ಅನುಗುಣವಾಗಿ ಹೆಸರಿಡುವ ಸಂಪ್ರದಾಯವಿದೆ. ನಿದರ್ಶನಕ್ಕೆ ಕೆಲ ಸಮುದಾಯಗಳ ಹೆಸರುಗಳನ್ನು ಇಲ್ಲಿ ಗಮನಿಸಬಹುದು.

'ನಾಯಕ' ಸಮುದಾಯದಲ್ಲಿ ಕಾಣಬರುವ ದೈವಸಂಬಂಧಿ ವ್ಯಕ್ತಿನಾಮಗಳು

| ಪುರುಷರು | ಸ್ತ್ರೀ |
|---|---|
| ಮುತ್ತಯ್ಯ | ಪಾಪಮ್ಮ |
| ಪಾಪಯ್ಯ | ಓಬಮ್ಮ |
| ಬೋರಯ್ಯ | ಬೋರಮ್ಮ |
| ಗಾದಿರಯ್ಯ | ಮಲ್ಲಮ್ಮ |
| ಕಂಪಳಯ್ಯ | ಮಾರಮ್ಮ |
| ಮಲ್ಲಯ್ಯ | ಸೂರಮ್ಮ |
| ಓಬಯ್ಯ | ಚಳ್ಳೇರಮ್ಮ |
| ಕಾಮಯ್ಯ | |
| ಸೂರಯ್ಯ | |
| ಮಾರಯ್ಯ | |

- ಇತ್ಯಾದಿ

'ಕುರುಬ' ಸಮುದಾಯದಲ್ಲಿ ಕಾಣಬರುವ ದೈವಸಂಬಂಧಿ ವ್ಯಕ್ತಿನಾಮಗಳು

| ಪುರುಷರು | ಸ್ತ್ರೀ |
| --- | --- |
| ಕುರುಕುಂಟೆಪ್ಪ | ಲಕ್ಕಮ್ಮ |
| ಜಾಲಾಟಪ್ಪ | ಉದೇದಮ್ಮ |
| ಲಕ್ಕಪ್ಪ | ಜಡೆಮ್ಮ |
| ಗಟ್ಟೆಪ್ಪ | ಜಾಲಮ್ಮ |
| ಮೈಲಾರಪ್ಪ | ಮಲ್ಲಮ್ಮ (< ಮೈಲಾರ) |
| ಕರಿಯಪ್ಪ | ಕರಿಯಮ್ಮ |
| ಉದೇದಪ್ಪ | |
| ಜಡೆಪ್ಪ | |
| ಮುರಡೆಪ್ಪ | |

- ಇತ್ಯಾದಿ

'ಗೊಲ್ಲ' ಸಮುದಾಯದಲ್ಲಿ ಕಾಣಬರುವ ದೈವಸಂಬಂಧಿ ವ್ಯಕ್ತಿನಾಮಗಳು

| ಪುರುಷರು | ಸ್ತ್ರೀ |
| --- | --- |
| ಸಿರಿಯಣ್ಣ | ಚಿತ್ರಮ್ಮ |
| ಚಿತ್ರಯ್ಯ | ಲಿಂಗಮ್ಮ (< ಚಿತ್ರಲಿಂಗಪ್ಪ) |
| ಚಿತ್ರಲಿಂಗಪ್ಪ | ಕ್ಯಾತಮ್ಮ |
| ಮೈಲಾರಪ್ಪ | ಸಿರಿಯಮ್ಮ |
| ಕ್ಯಾತಪ್ಪ | |

'ಮಾದಿಗ' ಸಮುದಾಯದಲ್ಲಿ ಕಾಣಬರುವ ದೈವಸಂಬಂಧಿ ವ್ಯಕ್ತಿನಾಮಗಳು

| ಪುರುಷರು | ಸ್ತ್ರೀ |
| --- | --- |
| ಕೊಲ್ಲಾರಪ್ಪ | ಕೊಲ್ಲಾರಮ್ಮ |
| ದುರುಗಪ್ಪ | ದುರುಗಮ್ಮ |
| ಪೆನ್ನೋಬಳಿ/ ಓಬಳೇಶ | ಓಬಳಮ್ಮ |
| ಯಲ್ಲಪ್ಪ | ಯಲ್ಲಮ್ಮ |

'ಲಂಬಾಣಿ' ಸಮುದಾಯದಲ್ಲಿ ಕಾಣಬರುವ ದೈವಸಂಬಂಧಿ ವ್ಯಕ್ತಿನಾಮಗಳು

| ಪುರುಷರು | ಸ್ತ್ರೀ |
| --- | --- |
| ತೊಳಚ್ಯಾನಾಯ್ಕ | ತೊಳಚೀಬಾಯಿ |
| ಲಾಲ್ಯಾನಾಯ್ಕ | ಸೇವ್ಲಿಬಾಯಿ |
| ಸೇವ್ಯಾನಾಯ್ಕ | ಚಾವ್ಳಿಬಾಯಿ |
| ದೇವ್ಲಾನಾಯ್ಕ | ಭನ್ನಿಬಾಯಿ |
| ಮಾನ್ಯನಾಯ್ಕ | ರೂಪ್ಲಿಬಾಯಿ |
| ಕೂಬ್ಯಾನಾಯ್ಕ | ಕಾಳೀಬಾಯಿ |
| ಕಾಳ್ಯಾನಾಯ್ಕ | ಜಮಲೀಬಾಯಿ |
| | ಭೀಮೀಬಾಯಿ |

- ಇತ್ಯಾದಿ

'ರೆಡ್ಡಿ' ಸಮುದಾಯದಲ್ಲಿ ಕಾಣಬರುವ ದೈವಸಂಬಂಧಿ ವ್ಯಕ್ತಿನಾಮಗಳು

| ಪುರುಷರು | ಸ್ತ್ರೀ |
|---|---|
| ಶ್ರೀನಿವಾಸರೆಡ್ಡಿ | ಮಂಗಮ್ಮ |
| ತಿಮ್ಮಾರೆಡ್ಡಿ | ತಿಮ್ಮಕ್ಕ |
| ಲಕ್ಷ್ಮಿನರಸಿಂಹರೆಡ್ಡಿ | ನರಸಮ್ಮ |
| ವೆಂಕಟರೆಡ್ಡಿ | ವೆಂಕಮ್ಮ |
| ನಾರಾಯಣರೆಡ್ಡಿ | ಲಕ್ಷ್ಮಮ್ಮ |
| ರಾಮರೆಡ್ಡಿ | ತಿಪ್ಪಮ್ಮ |
| ಭೂಸರೆಡ್ಡಿ | |
| ತಿಪ್ಪಾರೆಡ್ಡಿ | |

- ಇತ್ಯಾದಿ

'ಶೈವ' ಸಮುದಾಯದಲ್ಲಿ ಕಾಣಬರುವ ದೈವಸಂಬಂಧಿ ವ್ಯಕ್ತಿನಾಮಗಳು

| ಪುರುಷರು | ಸ್ತ್ರೀ |
|---|---|
| ವೀರಭದ್ರಪ್ಪ | ವೀರಮ್ಮ |
| ಮುರಿಗೆಪ್ಪ | ಈರಮ್ಮ |
| ಶಿವಣ್ಣ | ಮುರಿಗೆಮ್ಮ |
| ಶರಣಬಸಪ್ಪ | ಶರಣಮ್ಮ |
| ಈಶ್ವರಪ್ಪ | ಬಸಮ್ಮ |
| ಮಲ್ಲಿಕಾರ್ಜುನ | ರುದ್ರಮ್ಮ |
| ತಿಪ್ಪೇರುದ್ರಯ್ಯ | |

- ಇತ್ಯಾದಿ

'ಬ್ರಾಹ್ಮಣ' ಸಮುದಾಯದಲ್ಲಿ ಕಾಣಬರುವ ದೈವಸಂಬಂಧಿ ವ್ಯಕ್ತಿನಾಮಗಳು

| ಪುರುಷರು | ಸ್ತ್ರೀ |
|---|---|
| ಹುಲಿಕುಂಟಾಚಾರ್ಯ | ಹೂಲೆಮ್ಮ |
| ನರಸಿಂಹಮೂರ್ತಿ | ನರಸಮ್ಮ |
| ಶ್ರೀನಿವಾಸರಾವ್ | ಹನುಮಂತಮ್ಮ |
| ರಾಘವೇಂದ್ರರಾವ್ | ಸುಬ್ಬಮ್ಮ |
| ಹನುಮಂತರಾವ್ | |
| ಸುಬ್ರಹ್ಮಣ್ಯ | |
| ಭುಜಂಗರಾವ್ | |

- ಇತ್ಯಾದಿ

ಮೇಲೆ ಸೂಚಿಸಿರುವ ಹೆಸರುಗಳು, ಆಯಾ ಸಮುದಾಯಗಳ ಮನೆದೈವ, ಕುಲದೈವಗಳ ಪ್ರಭಾವ ಪ್ರೇರಣೆಯಿಂದ ನಿರ್ದೇಶನಗೊಂಡಿರುವ ಹೆಸರುಗಳಾಗಿವೆ. ಒಂದೇ ದೇವರಿಗೆ ಬೇರೆ ಬೇರೆ ಸಮುದಾಯಗಳು ಒಕ್ಕಲುಗಳಾಗಿ ನಡೆದುಕೊಳ್ಳುವುದರಿಂದ, ಒಂದೇ ದೈವ ಬೇರೆ ಬೇರೆ ಸಮುದಾಯಗಳ ಮನೆ ದೇವರೆನಿಸಿಕೊಳ್ಳುತ್ತದೆ. ಪರಿಣಾಮವಾಗಿ ಒಂದೇ ಹೆಸರು ಬೇರೆ ಬೇರೆ ಸಮುದಾಯಗಳಲ್ಲಿ

ಕಾಣಿಸಿಕೊಳ್ಳಬಹುದು. ಪ್ರತಿ ಸಮುದಾಯದಲ್ಲಿ ಹಲವು ಒಳಪಂಗಡಗಳಿರುತ್ತವೆ. ಈ ಪಂಗಡಗಳಿಗೆ 'ಮನೆದೇವರು' ಬೇರೆ ಬೇರೆಯಾಗಿರುತ್ತದೆ. ಬಹುತೇಕ 'ಮನೆದೇವರ' ಹೆಸರನ್ನು ಸಂಬಂಧಪಟ್ಟ ಪಂಗಡದವರು ಮಾತ್ರ ಇಡುತ್ತಾರೆ. ಮನೆದೇವರು ಹೆಚ್ಚು ಪ್ರಸಿದ್ಧಿಯಾಗಿದ್ದ ಸಂದರ್ಭದಲ್ಲಿ, ಸಂಬಂಧಪಟ್ಟ ಜಾತಿಯವರಲ್ಲದೆ, ಬೇರೆ ಜಾತಿಯವರೂ ಇಟ್ಟುಕೊಳ್ಳುತ್ತಾರೆ. ಒಂದು ಜಾತಿಯ ದೈವದ ಹೆಸರುಗಳನ್ನು ಮತ್ತೊಂದು ಜಾತಿಯವರು ಇಟ್ಟುಕೊಳ್ಳುವ ಪ್ರಕ್ರಿಯೆ ಎಲ್ಲಾ ಸಾಮಾಜಿಕ ಸಂದರ್ಭಗಳಿಗೆ ಅನ್ವಯಿಸುವುದಿಲ್ಲ. ಸಮಾಜದ ಕೆಳಸಮುದಾಯಗಳು, ಮೇಲ್ ಸಮುದಾಯಗಳ ಮನೆದೇವರು ಕುಲದೇವರುಗಳ ಹೆಸರುಗಳಿಂದ ಪ್ರಭಾವಿತರಾಗಿರುವಂತೆ, ಮೇಲ್ ಸಮುದಾಯಗಳು ಆಗಿರುವುದು ಕಾಣಬರುವುದಿಲ್ಲ. "ಜಾನಪದರಲ್ಲಿ ಅವರ ಸಂಸ್ಕೃತಿಗೆ ಅನ್ಯವಾದ ಹೆಸರುಗಳು ಸೇರಿಕೊಳ್ಳುತ್ತವೆ. ಮತ್ತು ಅವು ಮುಂದುವರೆಯುತ್ತವೆ."[೬] ವ್ಯಕ್ತಿನಾಮಗಳ ಕೆಳಮುಖ ಚಲನೆಯನ್ನು ಇಲ್ಲಿ ಗಮನಿಸಬಹುದು. ದೇವರ ಹೆಸರನ್ನು ಇಡುವಾಗ ಪುರುಷ ದೇವರ ಹೆಸರನ್ನು ಸ್ತ್ರೀಯರೂ, ಸ್ತ್ರೀ ದೇವರ ಹೆಸರನ್ನು ಪುರುಷರು, ಸ್ತ್ರೀವಾಚಿ ಮತ್ತು ಪುರುಷವಾಚಿಯಾಗಿ ಪರಿವರ್ತಿಸಿಕೊಳ್ಳುತ್ತಾರೆ. ಕೆಳಜಾತಿಗಳಲ್ಲಿ ಸ್ತ್ರೀ ದೇವತೆಗಳು ಪ್ರಧಾನ. ಮೇಲ್ ಜಾತಿಗಳಲ್ಲಿ ಪುರುಷ ದೇವರುಗಳು ಪ್ರಧಾನ. ಹೀಗಾಗಿ ಕೆಳ ಜಾತಿಗಳಲ್ಲಿ ಸ್ತ್ರೀವಾಚಿ ನಾಮಗಳನ್ನು ಪುರುಷವಾಚಿ ಮಾಡಿಕೊಂಡರೆ, ಮೇಲ್ ಜಾತಿಗಳಲ್ಲಿ ಪುರುಷವಾಚಿ ನಾಮಗಳನ್ನು ಸ್ತ್ರೀವಾಚಿ ಮಾಡಿಕೊಳ್ಳುವುದು ವಿಶೇಷವಾಗಿ ಕಂಡುಬರುತ್ತದೆ. ಆರ್ಯರ ಪಿತೃಪ್ರಧಾನ ಮತ್ತು ದ್ರಾವಿಡರ ಮಾತೃಪ್ರಧಾನ ಸಂಸ್ಕೃತಿಯ ಕುರುಹುಗಳನ್ನು ಇಲ್ಲಿ ಕಾಣಬಹುದಾಗಿದೆ.

ದೇವರ ಹೆಸರನ್ನು ವ್ಯಕ್ತಿಗೆ ಇಡುವ ಸಂಪ್ರದಾಯ ತೀರಾ ಹಳೆಯದು. 'ಕುಲದೇವರು' ಎಂಬ ಪರಿಕಲ್ಪನೆಯೂ ಅಷ್ಟೇ ಪ್ರಾಚೀನವಾದುದು. "ಸಿದ್ಧರಾಮ ಹುಟ್ಟಿದಾಗ ಅವನ ತಾಯ್ತಂದೆಯರು ತಮ್ಮ ಕುಲದೈವವಾದ 'ಧೂಳಿಮಾಂಕಾಳನ' ಹೆಸರು ಇಟ್ಟರೆಂದು ರಾಘವಾಂಕನ ಸಿದ್ಧರಾಮ ಚಾರಿತ್ರ ವಿವರಿಸುತ್ತದೆ."[೭] ಎಂಬುದು ಕುಲದೇವರ ಹೆಸರನ್ನು ಆಯಾ ಸಮುದಾಯಗಳು ವ್ಯಕ್ತಿನಾಮವಾಗಿ ಬಳಸಿಕೊಳ್ಳುವ ಸಂಪ್ರದಾಯವನ್ನು ಸೂಚಿಸುತ್ತದೆ.

ಮಕ್ಕಳಿಗೆ ಅಥವಾ ವ್ಯಕ್ತಿಗೆ ದೇವರ ಹೆಸರನ್ನು ಇಡುವುದು ದೇವರ ಮೇಲಿನ 'ಭಕ್ತಿ' ಒಂದು ಕಾರಣವಾದರೆ, ನಂಬಿಕೆ ಮತ್ತು ಸಾಂದರ್ಭಿಕ ವಿಶೇಷ ಘಟನೆಗಳು ಎರಡನೆಯ ಕಾರಣವಾಗಿದೆ. ಮದುವೆಯಾಗಿ ಬೇಗ ಮಕ್ಕಳು ಆಗದಿರುವಾಗ, ದೇವರಲ್ಲಿ ಹರಕೆ ಮಾಡಿಕೊಂಡರೆ ಮಕ್ಕಳಾಗುತ್ತಾರೆ ಎಂಬುದು ಒಂದು ನಂಬಿಕೆ. ಮಕ್ಕಳಾದರೆ ಜವಳ ತೆಗೆಸುತ್ತೇವೆ, ಮಗುವಿನ ತೂಕ ಹೂವು, ಹಣ್ಣು ಕೊಡುತ್ತೇವೆಂದು ಅಂದುಕೊಳ್ಳುವಂತೆ, ನಿನ್ನ ಹೆಸರು ಇಡುತ್ತೇವೆಂದೂ ಅಂದುಕೊಳ್ಳುತ್ತಾರೆ. ಹರಕೆಯಂತೆ ಮಕ್ಕಳಾದರೆ, ಮಗುವಿಗೆ ದೇವರ ಹೆಸರನ್ನು ಇಡುವುದು ಒಂದು ವಾಡಿಕೆ. ಹುಟ್ಟಿದ ಮಕ್ಕಳು ಉಳಿಯದೆ ಸತ್ತುಹೋದರೆ, ಮುಂದೆ ಹುಟ್ಟಿದ ಮಗುವಿಗೆ ದೇವರ ಹೆಸರು ಇಡುವುದು ಜನರಲ್ಲಿರುವ ನಂಬಿಕೆ. ದೇವರ ಹೆಸರಿಟ್ಟರೆ, ಮಕ್ಕಳು ಸಾಯದೆ ಉಳಿಯುತ್ತಾರೆ ಎಂಬುದು ಜನರ ಮನೋಭಾವನೆಯಾಗಿದೆ. ಕ್ಷೇತ್ರಕಾರ್ಯದ ಮಾಹಿತಿ ಪ್ರಕಾರ ಯಾವ ಸಂದರ್ಭದಲ್ಲಿ, ಯಾವ ಕಾರಣಗಳಿಗಾಗಿ ದೇವರ ಹೆಸರಿಡುತ್ತಾರೆ ಎಂಬುದರ ಸ್ಪಷ್ಟನೆಗಾಗಿ ಕೆಲವು ಉದಾಹರಣೆಗಳನ್ನು ಇಲ್ಲಿ ಗಮನಿಸಬಹುದು.

"ಗೋವಿಂದಪ್ಪ' - ಮಕ್ಕಳಾಗಿದ್ದರೂ, ಗಂಡುಮಕ್ಕಳಾಗಿರಲಿಲ್ಲ. ತಿರುಪತಿ ವೆಂಕಟೇಶ್ವರನಿಗೆ ಹೋಗಿ ಗಂಡುಮಗುವಾದರೆ ನಿನ್ನ ಹೆಸರು ಇಡುತ್ತೇವೆಂದು ಹರಕೆ ಮಾಡಿಕೊಂಡ ಮೇಲೆ, ಗಂಡು ಮಗುವಾಯಿತು. ಆ ಕಾರಣಕ್ಕಾಗಿ 'ಗೋವಿಂದಪ್ಪ' ಎಂದು ದೇವರ ಹೆಸರನ್ನು ಇಡಲಾಗಿದೆ."[೮]

"ಮಾರಪ್ಪ'- ಮದುವೆಯಾಗಿ ಬೇಗ ಮಕ್ಕಳಾಗದ ಕಾರಣ ಗೌರಸಂದ್ರ ಮಾರಮ್ಮನಿಗೆ ನಡೆದುಕೊಂಡಾಗ ಗಂಡುಮಗು ಹುಟ್ಟಿತು. ಹರಕೆಯಿಂದ ಹುಟ್ಟಿದ್ದಕ್ಕಾಗಿ 'ಮಾರಮ್ಮ'ನ ಹೆಸರನ್ನು ಇಡಲಾಗಿದೆ."[೯]

"ಹೊನ್ನೂರಸ್ವಾಮಿ'- ಎಂಟು ಜನ ಮಕ್ಕಳು ಹುಟ್ಟಿದ್ದರೂ ಒಬ್ಬರೂ ಬದುಕುಳಿಯಲಿಲ್ಲ. ಮುಂದೆ ಮಕ್ಕಳಾದರೆ, ನಿನ್ನ ಹೆಸರು ಇಡುತ್ತೇವೆಂದು 'ಹೊನ್ನೂರಸ್ವಾಮಿಗೆ' ಬೇಡಿಕೊಂಡಾಗ ಒಂಭತ್ತನೆ ಮಗು ಬದುಕುಳಿಯಿತು. ಆ ಕಾರಣಕ್ಕಾಗಿ ಈ ಹೆಸರನ್ನು ಇಡಲಾಗಿದೆ."[೧೦]

"ತಿಪ್ಪೇಸ್ವಾಮಿ' - ಮದುವೆಯಾಗಿ ಎಂಟು ವರ್ಷಗಳಾದರೂ ಮಕ್ಕಳಾಗಿರಲಿಲ್ಲ. ಹಟ್ಟಿ ತಿಪ್ಪೇಸ್ವಾಮಿಗೆ ಹರಕೆ ಮಾಡಿಕೊಂಡಾಗ ಮಕ್ಕಳಾದವು. ಅದಕ್ಕಾಗಿ ತಿಪ್ಪೇಸ್ವಾಮಿ ಎಂದು ದೇವರ ಹೆಸರು ಇಟ್ಟಿದ್ದಾರೆ."[೧೧]

"ನುಂಕಣ್ಣ' - ಹೆರಿಗೆ ಶುಶ್ರೂತವಾಗಿ ಆಗದೆ, ತೊಂದರೆಯಾಗಿತ್ತು. ಹೆರಿಗೆ ಸುಖವಾಗಿ ಆಗಿ ಮಗು ಉಳಿದರೆ ನಿನ್ನ ಹೆಸರಿಡುತ್ತೇನೆಂದು 'ನುಂಕಮಲ್ಲೆಸಿದ್ದೇಶ್ವರ' ದೇವರನ್ನು ಮನಸ್ಸಿನಲ್ಲಿ ಬೇಡಿಕೊಂಡಿದ್ದರಿಂದ ಈ ಹೆಸರನ್ನು ಇಡುವುದಕ್ಕೆ ಕಾರಣವಾಗಿದೆ."[೧೨]

"ನಾಗೇಂದ್ರಪ್ಪ' - ಗರ್ಭಿಣಿಯಿರುವಾಗ ರಾತ್ರಿ ಕನಸಿನಲ್ಲಿ ನಾಗರಹಾವು ಕಾಣಿಸಿಕೊಳ್ಳುತ್ತಿದ್ದರಿಂದ, ಈ ಹೆಸರನ್ನು ಇಟ್ಟಿದ್ದಾರೆ."[೧೩] (ಹಿಂದೂಗಳು ನಾಗರಹಾವನ್ನು ದೇವರೆಂದು ಭಾವಿಸಿ ಪೂಜಿಸುತ್ತಾರೆ! ಕಲ್ಲು ನಾಗರ ಕಂಡರೆ ಹಾಲನೆರೆವರಯ್ಯಾ' ಎಂಬ ಶರಣರ ವಚನದ ಸಾಲನ್ನು ನೆನಪಿಸಿಕೊಳ್ಳಬಹುದು)

"ನಾಗರತ್ನಮ್ಮ' - ಗರ್ಭಿಣಿಯಿದ್ದಾಗ ನಾಗರಹಾವು ತೊಡೆಯ ಮೇಲೆ ಹಾದು ಹೋದ ಕಾರಣ ಈ ಹೆಸರು ಇಡಲಾಗಿದೆ."[೧೪]

"ತಿಪ್ಪೇಸ್ವಾಮಿ' - ಗರ್ಭಿಣಿಯಿದ್ದಾಗ ರಾತ್ರಿ ಕನಸಿನಲ್ಲಿ ಹಟ್ಟಿಜಾತ್ರೆಯಲ್ಲಿ ಹೂವು ಮಾರಿದ ಹಾಗೆ ಕನಸ್ಸು ಬಿದ್ದಿತ್ತು. ಆ ಕಾರಣಕ್ಕಾಗಿ 'ತಿಪ್ಪೇಸ್ವಾಮಿ' ಎರದು ದೇವರ ಹೆಸರನ್ನು ಇಟ್ಟಿದ್ದಾರೆ."[೧೫]

"ಮಾರಕ್ಕ' - ಗರ್ಭಿಣಿಯಿದ್ದಾಗ ಮಾರಮ್ಮ ದೇವಿಯ ಪೂಜಾರಿ ಕನಸ್ಸಿನಲ್ಲಿ ಬಂದಿದ್ದರಿಂದ, 'ಮಾರಮ್ಮ' ದೇವಿಯ ಹೆಸರನ್ನು ಇಡಲಾಗಿದೆ."[೧೬]

ಗರ್ಭಿಣಿಯಿರುವಾಗ, ದೇವರು ಮತ್ತು ಅದಕ್ಕೆ ಸಂಬಂಧಪಟ್ಟ ಸಂಗತಿಗಳು ಕನಸ್ಸಿನಲ್ಲಿ ಗೋಚರವಾದರೆ, ಇದು ದೇವರ ಕಾಟ ಎಂದು ಜನ ಭಾವಿಸುತ್ತಾರೆ. ಅದರಿಂದ ಬಿಡುಗಡೆ ಪಡೆಯಲು ಮಕ್ಕಳಿಗೆ ದೇವರ ಹೆಸರಿಡುವುದು ಪರಿಹಾರದ ಸಂಕೇತವೆಂಬುದು ಜನರ ನಂಬಿಕೆ. ಆ ಕಾರಣಕ್ಕಾಗಿ ಕನಸ್ಸಿನಲ್ಲಿ ದೇವರು ಬಂದರೆ, ಹುಟ್ಟಿದ ಮಕ್ಕಳಿಗೆ ದೇವರ ಹೆಸರಿಡುತ್ತಾರೆ.

ದೈವಸಂಬಂಧಿ ವಿಶೇಷ ಘಟನೆಗಳು ಕೆಲವೊಮ್ಮೆ ಹೆಸರಿನ ಆಯ್ಕೆಗೆ ಕಾರಣವಾಗುತ್ತವೆ. ಜಾತ್ರೆ, ಉತ್ಸವ, ರಥೋತ್ಸವ, ಹಬ್ಬ-ಹರಿದಿನ ಮೊದಲಾದ ವಿಶೇಷ ದಿನಗಳಂದು ಮಕ್ಕಳು ಹುಟ್ಟಿದರೆ, ಆಯಾ ಘಟನೆಗಳ ಹಿನ್ನೆಲೆಗೆ ಅನುಗುಣವಾಗಿ ಹೆಸರಿಡುವುದು ಒಂದು ಸಂಪ್ರದಾಯ.

ನಾಗರ ಪಂಚಮಿಯಂದು ಹುಟ್ಟಿದರೆ - ನಾಗಪ್ಪ, ನಾಗರಾಜ, ನಾಗೇಂದ್ರ, ನಾಗಮ್ಮ, ನಾಗರತ್ನ ಎಂದೂ, ಶಿವರಾತ್ರಿ ದಿನದಂದು ಜನಿಸಿದರೆ - ಶಿವಣ್ಣ, ಶಿವಮ್ಮ ಎಂದೂ, ಗೌರಿಹಬ್ಬದ ದಿನದಂದು ಹುಟ್ಟಿದ ಮಕ್ಕಳಿಗೆ ಗೌರಮ್ಮ ಎಂದು ಹೆಸರಿಡುವುದು ಒಂದು ನಂಬಿಕೆ. ಅದೇ ರೀತಿ ಕೊಟ್ಟೂರು, ನಾಯ್ಕನಹಟ್ಟಿ, ಹಂಪಿ ರಥೋತ್ಸವದಂದು ಹುಟ್ಟಿದರೆ, ಕೊಟ್ರಪ್ಪ, ಕೊಟ್ರಮ್ಮ, ತಿಪ್ಪಯ್ಯ, ತಿಪ್ಪಮ್ಮ, ವಿರೂಪಾಕ್ಷಿ, ಹಂಪಮ್ಮ ಎಂದು ಹೆಸರಿಡುವುದು ಸಂಪ್ರದಾಯ. ಆ ದಿನಗಳಂದು ಹುಟ್ಟಿದ ಎಲ್ಲಾ ಮಕ್ಕಳಿಗೂ ಈ ಹೆಸರು ಇಡುತ್ತಾರೆಂದಲ್ಲ. ಆ ಸಾಂಸ್ಕೃತಿಕ ಮನೋಧರ್ಮವುಳ್ಳ ಕೆಲವರಲ್ಲಿ ಈ ಸಂಪ್ರದಾಯವನ್ನು ಕಾಣಲು ಸಾಧ್ಯವಿದೆ. ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿರುವ ಕೆಲವು ಉದಾಹರಣೆಗಳನ್ನು ಇಲ್ಲಿ ಗಮನಿಸಬಹುದು.

''ತಿಪ್ಪೇಸ್ವಾಮಿ' - ನಾಯ್ಕನಹಟ್ಟಿ ತಿಪ್ಪೇರುದ್ರಸ್ವಾಮಿಯ ರಥೋತ್ಸವದಂದು ಜನಿಸಿದ್ದಕ್ಕಾಗಿ 'ತಿಪ್ಪೇಸ್ವಾಮಿ' ಎಂದು ಹೆಸರಿಡಲಾಗಿದೆ.''[೧೭]

''ಕೊಟ್ರಪ್ಪ' - ಕೊಟ್ಟೂರು ಬಸವೇಶ್ವರನ ರಥೋತ್ಸವದಂದು ಹುಟ್ಟಿದ್ದರಿಂದ 'ಕೊಟ್ರಪ್ಪ' ಎಂದು ಆ ದೇವರ ಹೆಸರು ಇಟ್ಟಿದ್ದಾರೆ.''[೧೮]

''ವಿರೂಪಾಕ್ಷಪ್ಪ' - ಹಂಪಿಯ ಫಲಪೂಜೆಯ ದಿನದಂದು ಹುಟ್ಟಿದ್ದ ಕಾರಣ ವಿರೂಪಾಕ್ಷಿ ಎಂದು ಹೆಸರಿಡಲಾಗಿದೆ.''[೧೯]

''ನಾಗಮ್ಮ' - ನಾಗರಪಂಚಮಿಯ ದಿನದಂದು ಹುಟ್ಟಿದ್ದರಿಂದ ಈ ಹೆಸರು ಇಟ್ಟಿದ್ದಾರೆ.''[೨೦]

''ಗೌರಮ್ಮ' - ಗೌರಿಹಬ್ಬದ ದಿನದಂದು ಜನಿಸಿದ್ದರಿಂದ 'ಗೌರಮ್ಮ' ಎಂದು ಹೆಸರು ಇಟ್ಟಿದ್ದಾರೆ.''[೨೧]

''ಶಿವಮ್ಮ' - ಶಿವರಾತ್ರಿಯ ದಿನದಂದು ಹುಟ್ಟಿದ್ದಕ್ಕಾಗಿ 'ಶಿವಮ್ಮ' ಎಂದು ಹೆಸರು ಇಟ್ಟಿದ್ದಾರೆ.''[೨೨]

''ದಡ್ಡಯ್ಯ' - ಹಿರೇಹಳ್ಳಿ ದಡ್ಡಯ್ಯನ ಜಾತ್ರೆಗೆ ಹೋಗಿ ಬಂದ ಮೇಲೆ ಹೆರಿಗೆಯಾದ ಕಾರಣ 'ದಡ್ಡಯ್ಯ' ಎಂದು ಹೆಸರಿಡಲಾಗಿದೆ.''[೨೩]

''ಶ್ರೀಶೈಲಪ್ಪ' - ಗರ್ಭಿಣಿಯಿರುವಾಗ ಶ್ರೀಶೈಲಕ್ಕೆ ಹೋಗಿ ಮನೆಗೆ ಬಂದ ಮರುದಿನವೇ ಹೆರಿಗೆಯಾಯಿತು. ಅದಕ್ಕಾಗಿ 'ಶ್ರೀಶೈಲಪ್ಪ' ಎಂದು ದೇವರ ಹೆಸರನ್ನು ಇಡಲಾಗಿದೆ.''[೨೪]

''ಹಸೇನ್ ಪೀರ್' - ಮೊಹರಂ ಹಬ್ಬದ ತಿಂಗಳಲ್ಲಿ ಹುಟ್ಟಿದ್ದರಿಂದ ಈ ಹೆಸರನ್ನು ಇಡಲಾಗಿದೆ.''[೨೫]

ಧಾರ್ಮಿಕ ಆಚರಣೆಗಳಲ್ಲದೆ ಇತರ ಮಹತ್ವದ ದಿವಸಗಳೂ ಹೆಸರಿನ ನಿರ್ದೇಶನಕ್ಕೆ ಪ್ರೇರಣೆಯಾಗಿದೆ. ''ಅಕ್ಟೋಬರ್ ೨, ಗಾಂಧಿಜಯಂತಿಯಂದು ಹುಟ್ಟಿದ ಒಬ್ಬ ವ್ಯಕ್ತಿಗೆ ಚಿತ್ರದುರ್ಗದಲ್ಲಿ 'ಗಾಂಧಿ' ಎಂದು ಹೆಸರಿಟ್ಟಿ ಅಪರೂಪದ ಉದಾಹರಣೆ ದೊರಕಿದೆ.''[೨೬]

ಸಾಂಸ್ಕೃತಿಕ ಮತ್ತು ಚಾರಿತ್ರಿಕ ಮಹತ್ವವನ್ನು ಪಡೆದಿರುವ ಈ ಹೆಸರುಗಳು ಚರಿತ್ರೆಯ ಅಧ್ಯಯನದ ದೃಷ್ಟಿಯಿಂದ ತುಂಬಾ ಮಹತ್ವವನ್ನು ಪಡೆದುಕೊಳ್ಳುತ್ತವೆ.

### ೫.೫.೨ ಲೌಕಿಕ ಪ್ರೇರಣೆ

ದೈವ ಮತ್ತು ಧರ್ಮದಂತೆ ಲೌಕಿಕ ಪ್ರೇರಣೆಗಳು ನಾಮನಿರ್ದೇಶನಕ್ಕೆ ಕಾರಣವಾಗಿವೆ.

**ಹಿರಿಯರು :** ಹಿರಿಯರ ಹೆಸರು ಕಿರಿಯರ ಹೆಸರುಗಳಿಗೆ ಆಕರವಾಗುತ್ತದೆ. ಹಿರಿಯರ ಹೆಸರನ್ನು ಮೊಮ್ಮಕ್ಕಳಿಗೆ ಇಡುವುದು ಒಂದು ಸಂಪ್ರದಾಯ. ಆಧುನೀಕರಣದ ಪ್ರಭಾವದಿಂದ ಈ ಪ್ರಕ್ರಿಯೆ ಕಡಿಮೆಯಾಗಿದೆಯಾದರೂ ಕೆಲವು ಬುಡಕಟ್ಟು ಸಮುದಾಯಗಳಲ್ಲಿ (ಮ್ಯಾಸನಾಯಕ, ಗೊಲ್ಲ, ಕುರುಬ) ಈಗಲೂ ಈ ಪದ್ಧತಿ ರೂಢಿಯಲ್ಲಿದೆ.

ಹಿರಿಯರ ನೆನಪು ಮಾಡಿಕೊಳ್ಳುವುದಕ್ಕಾಗಿ, ಕೌಟುಂಬಿಕ ಪರಿಸರದಲ್ಲಿ ಆ ಹೆಸರನ್ನು ಉಳಿಸಿಕೊಳ್ಳುವುದಕ್ಕಾಗಿ ಮತ್ತು ಅವರ ಹಾಗೆ ನಮ್ಮ ಮಕ್ಕಳು ಬಾಳಿಬದುಕಲಿ ಎಂಬ ಆಶಯದಿಂದ ಹಿರಿಯರ ಹೆಸರನ್ನು ಕಿರಿಯರಿಗೆ ಇಡುತ್ತಾರೆ. ಸಾಮಾನ್ಯವಾಗಿ ಹಿರಿಯರು ಬದುಕಿರುವಾಗ ಅವರ ಹೆಸರು ಇಡುವುದಿಲ್ಲ. ತೀರಿಹೋದ ಮೇಲೆ ಇಡುತ್ತಾರೆ. "ತೀರಿಹೋದ ಅಜ್ಜ ಅಥವಾ ಅಜ್ಜಿಯರ (ಸಾಮಾನ್ಯವಾಗಿ ತಂದೆಯ ತಂದೆ ಮತ್ತು ತಾಯಿಯರ, ವಿರಳವಾಗಿ ತಾಯಿಯ ತಂದೆ ತಾಯಿಯರ) ಹೆಸರಿಡುವುದು."[೨೭] ಇತರ ಪ್ರದೇಶಗಳಲ್ಲಿ ಇರುವಂತೆ ಚಿತ್ರದುರ್ಗ ಪರಿಸರದಲ್ಲಿಯೂ ಕಾಣಬರುತ್ತದೆ.

ಒಂದು ಕೌಟುಂಬಿಕ ಪರಿಸರದಲ್ಲಿ ಹಿರಿಯರಿಗೂ ಮತ್ತು ಕಿರಿಯರಿಗೂ ಏಕಕಾಲಕ್ಕೆ ಒಂದೇ ಹೆಸರು ಇಡುವುದಿಲ್ಲ. ಅಥವಾ ಅಜ್ಜ-ಮೊಮ್ಮಗ, ಅಜ್ಜಿ-ಮೊಮ್ಮಗಳ ಹೆಸರು ಒಂದೇ ಆಗಿರುವುದಿಲ್ಲ. ಒಂದು ವೇಳೆ ಹಿರಿಯರ ಮತ್ತು ಕಿರಿಯರ ಹೆಸರು ಒಂದೇ ಆಗಿದ್ದರೆ, ಇತರರು ಕಿರಿಯರನ್ನು ಹೆಸರಿಡಿದು ಕರೆದಾಗ ಹಿರಿಯರಿಗೆ ಅಗೌರವ ತೋರಿ ಹೆಸರಿನಿಂದ ಕರೆದಂತಾಗುತ್ತದೆ ಎಂಬ ನಂಬಿಕೆ ಅಲ್ಲದೆ ಗುರುತಿಸುವಿಕೆಯಲ್ಲಿ ಉಂಟಾಗಬಹುದಾದ ತೊಂದರೆಗಳು ಇದರ ನಿಯಂತ್ರಣಕ್ಕೆ ಕಾರಣವಾಗಿರಬಹುದು.

ಚರಿತ್ರೆಯಲ್ಲಿ ಒಂದೇ ಹೆಸರು ಮತ್ತೆ ಮತ್ತೆ ಪುನರಾವರ್ತನೆಯಾದಾಗ ಸ್ಪಷ್ಟ ತಿಳುವಳಿಕೆಗಾಗಿ ಒಂದನೆಯ, ಎರಡನೆಯ, ಮೂರನೆಯ, ನಾಲ್ಕನೆಯ, ಇಮ್ಮಡಿ, ಮುಮ್ಮಡಿ, ನಾಲ್ವಡಿ - ಹೀಗೆ ಸಂಖ್ಯಾವಾಚಕ ಪದ ವಿಶೇಷಣಗಳಿಂದ ಪ್ರತ್ಯೇಕತೆಯನ್ನು ಗುರುತಿಸಿಕೊಳ್ಳುವುದುಂಟು. "ಇತಿಹಾಸ ಬರೆಯುವಲ್ಲಿ ಸಂದೇಹ ಉದ್ಭವಿಸಬಾರದೆಂಬ ಕಾರಣದಿಂದ ಹೀಗೆ ಕರೆಯುತ್ತಿದ್ದರೆಂದು ತೋರುವುದರಿಂದ ಇತಿಹಾಸ ಯೋಗ್ಯ ವ್ಯಕ್ತಿಗಳಿಗೇ ಈ ಪದ್ಧತಿ ಸೀಮಿತವಾಗಿದೆ."[೨೮] ಇದು ವ್ಯಕ್ತಿನಾಮ ಇತಿಹಾಸದಲ್ಲಿ ಹಿರಿಯರ ಹೆಸರನ್ನು ಮೊಮ್ಮಕ್ಕಳಿಗೆ ಇಡುವ ಸಂಪ್ರದಾಯವನ್ನೇ ಸೂಚಿಸುತ್ತಿರಬೇಕು.

ಹಿರಿಯರ ಹೆಸರು ತಲೆಮಾರುಗಳಲ್ಲಿ ಹೇಗೆ ಮುಂದುವರೆಯುತ್ತದೆ ಎಂಬುದನ್ನು ಕೆಲವು ಉದಾಹರಣೆಗಳ ಮೂಲಕ ಚರ್ಚಿಸಬಹುದು.

| ಅಜ್ಜನಹೆಸರು | ಮಗನ ಹೆಸರು | ಮೊಮ್ಮಗನ ಹೆಸರು (ಭಾಗ - ೧) | ಮರಿಮೊಮ್ಮಗನ ಹೆಸರು (ಭಾಗ - ೨) |
|---|---|---|---|
| ಮರಿನಿಂಗಪ್ಪ | ಮಲಿಯಪ್ಪ | ಮರಿನಿಂಗಪ್ಪ | ಮಲಿಯಪ್ಪ |
| ಕೃಷ್ಣಾರೆಡ್ಡಿ | ವೆಂಕಟರೆಡ್ಡಿ | ಕೃಷ್ಣಾರೆಡ್ಡಿ | ವೆಂಕಟರೆಡ್ಡಿ |
| ಕರಿಯಪ್ಪ | ತಿಪ್ಪಯ್ಯ | ಕರಿಯಪ್ಪ | ತಿಪ್ಪಯ್ಯ |
| ಭೀಮಪ್ಪ | ರಾಜಣ್ಣ | ಭೀಮಪ್ಪ | ರಾಜಣ್ಣ |
| ಹನುಮಂತಪ್ಪ | ರುದ್ರಪ್ಪ | ಹನುಮಂತಪ್ಪ | ರುದ್ರಪ್ಪ |
| ಅಜ್ಜಿಹೆಸರು | ಮಗಳಹೆಸರು | ಮೊಮ್ಮಗಳಹೆಸರು | ಮರಿಮೊಮ್ಮಗಳ ಹೆಸರು |
| ತಿಪ್ಪಮ್ಮ | ಮಲ್ಲಮ್ಮ | ತಿಪ್ಪಮ್ಮ | ಮಲ್ಲಮ್ಮ |
| ಯಲ್ಲಮ್ಮ | ತಿಮ್ಮಕ್ಕ | ಯಲ್ಲಮ್ಮ | ತಿಮ್ಮಕ್ಕ |
| ಬಸಮ್ಮ | ಸಿದ್ದಮ್ಮ | ಬಸಮ್ಮ | ಸಿದ್ದಮ್ಮ |
| ಶಂಕರಮ್ಮ | ಹನುಮಕ್ಕ | ಶಂಕರಮ್ಮ | ಹನುಮಕ್ಕ |
| ಗಂಗಮ್ಮ | ಬೋರಮ್ಮ | ಗಂಗಮ್ಮ | ಬೋರಮ್ಮ |

ಮೇಲಿನ ಪಟ್ಟಿಯ ಹೆಸರುಗಳನ್ನು ಗಮನಿಸಿದಾಗ, ಅಜ್ಜ ಅಜ್ಜಿಯ ಹೆಸರು, ಮೊಮ್ಮಗ, ಮೊಮ್ಮಗಳಲ್ಲಿ ಮತ್ತು ಅಜ್ಜ-ಅಜ್ಜಿಯ ಮಗ, ಮಗಳ ಹೆಸರು ಮರಿಮೊಮ್ಮಗ, ಮೊಮ್ಮಗಳಲ್ಲಿ ಪುನರಾವರ್ತನೆಯಾಗುತ್ತದೆ. ಹಿರಿಯರ ಹೆಸರು ಎರಡು ತಲೆಮಾರುಗಳಿಗೊಮ್ಮೆ ನಿರ್ದೇಶನ ಮಾಡಲ್ಪಡುತ್ತದೆ. ಹಿರಿಯರ ಹೆಸರನ್ನು ಒಂದೇ ತಲೆಮಾರಿನಲ್ಲಿ ಇಬ್ಬರಿಗೆ ಇಟ್ಟಾಗ 'ಸಣ್ಣ', 'ದೊಡ್ಡ' ವಿಶೇಷಣಗಳಿಂದ ಪ್ರತ್ಯೇಕತೆಯನ್ನು ಗುರುತಿಸಿಕೊಳ್ಳುವುದುಂಟು. (ಸಣ್ಣತಿಪ್ಪಯ್ಯ, ದೊಡ್ಡತಿಪ್ಪಯ್ಯ, ಸಣ್ಣಮಾರಕ್ಕ, ದೊಡ್ಡಮರಕ್ಕ) ತೀರಿ ಹೋದ ಹಿರಿಯರು ಪುನಃ ಅದೇ ಕುಟುಂಬದಲ್ಲಿ ಮರುಜನ್ಮ ಪಡೆದು ಹುಟ್ಟುತ್ತಾರೆಂಬುದು ಚಿತ್ರದುರ್ಗ ಪರಿಸರ ಅನೇಕ ಸಮುದಾಯಗಳಲ್ಲಿರುವ ನಂಬಿಕೆಯಾಗಿದೆ. ಹಿಂದುಳಿದ ಬುಡಕಟ್ಟು ಸಮುದಾಯಗಳೆನಿಸಿರುವ ಮ್ಯಾಸನಾಯಕ, ಗೊಲ್ಲ, ಕುರುಬ ಮತ್ತು ಲಂಬಾಣಿ ಜನರಲ್ಲಿ ಈ ನಂಬಿಕೆ ಇದೆ. ಚಿತ್ರದುರ್ಗ ಪರಿಸರದಲ್ಲಿ ಇರುವಂತೆ ಜಗತ್ತಿನ ಅನೇಕ ಸಮುದಾಯಗಳಲ್ಲಿಯೂ ಈ ನಂಬಿಕೆ ಇರುವುದು ತಿಳಿದುಬರುತ್ತದೆ. "ಸತ್ತವರು ಮತ್ತೆ ಹುಟ್ಟುತ್ತಾರೆಂಬ ನಂಬಿಕೆ ಉತ್ತರ ಯುರೋಪಿನ ಲಾಫ್ ಜನಾಂಗದಲ್ಲಿತ್ತು."[೨೯] ಇದರ ಮೂಲಕ ಅದರ ವ್ಯಾಪಕತೆಯನ್ನು ತಿಳಿಯಬಹುದು. ಹಿರಿಯರ ಹೆಸರನ್ನು ಮೊಮ್ಮಕ್ಕಳಿಗೆ ಇಡುವುದು ಎಂದರೆ ಅದೇ ವ್ಯಕ್ತಿಗೆ ಅದೇ ಹೆಸರನ್ನು ನಿರ್ದೇಶನ ಮಾಡುವುದೆಂದೇ ಅರ್ಥ. "ಸತ್ತವರು ಅದೇ ಕುಟುಂಬದಲ್ಲಿ ಜನ್ಮ ತಾಳುತ್ತಾರೆ ಎಂಬ ನಂಬಿಕೆ ನಮ್ಮವರಲ್ಲಿ ಇರುವುದರಿಂದ ಸತ್ತ ವ್ಯಕ್ತಿಯೇ ಜನ್ಮತಾಳಿದ್ದಾನೆ. ಆದ್ದರಿಂದ ಆ ಮಗುವಿಗೆ ಸತ್ತ ವ್ಯಕ್ತಿಯ ಹೆಸರನ್ನೇ ಇಡುವುದು ಒಳ್ಳೆಯದೆಂದು ನಂಬಿದ್ದಾರೆ"[೩೦] ಅಂದರೆ ಅಜ್ಜನ ಹೆಸರನ್ನು ಅಜ್ಜನಿಗೆ, ಅಜ್ಜಿಯ ಹೆಸರನ್ನು ಅಜ್ಜಿಗೆ ಇಡುವುದೇ ಆಗಿದೆ ಎಂಬುದು ಕುತೂಹಲದ ಸಂಗತಿಯಾಗಿದೆ. ಇಂದಿನ ಮೊಮ್ಮಗ/ಳು ಅಂದಿನ ಅಜ್ಜ/ಅಜ್ಜಿಯರೇ ಆಗಿರುತ್ತಾರೆ.

ಅಜ್ಜನ ಹೆಸರು ಮೊಮ್ಮಗನಿಗೆ ಇಡುವುದರಿಂದ ಪೂರ್ವಜನ್ಮದಲ್ಲಿದ್ದ ಹೆಸರು, ಮರುಜನ್ಮದಲ್ಲಿ ಮುಂದುವರೆದಂತಾಗುತ್ತದೆಯೇ ಹೊರೆತು ವ್ಯಕ್ತಿ ಮತ್ತು ಹೆಸರಿನ ಮಧ್ಯೆ ಯಾವುದೇ ಬದಲಾವಣೆ ಆಗಿರುವುದಿಲ್ಲ. ಜನ್ಮ ಜನ್ಮಾಂತರದಲ್ಲಿ ಆ ಹೆಸರು ವ್ಯಕ್ತಿಗೆ ಮುಂದುವರೆದಂತಾಗುತ್ತದೆ.

ಭಾರತೀಯ ನ್ಯಾಯಪದ್ಧತಿಯ ಪ್ರಕಾರ ಮಕ್ಕಳಿಗೆ ತಂದೆಯ ಆಸ್ತಿ ಮೇಲೆಗಿಂತ, ಪಿತ್ರಾರ್ಜಿತ (ಅಜ್ಜ/ತಾತ, ಹಿರಿಯರು) ಆಸ್ತಿಯ ಮೇಲೆ ಹಕ್ಕು, ಅಧಿಕಾರವಿರುತ್ತದೆ. ಅಂದರೆ ಅಜ್ಜ/ತಾತನವರ ಆಸ್ತಿಗೆ ಮೊಮ್ಮಗ ಹಕ್ಕುದಾರನಾಗಿದ್ದು, ಆ ಆಸ್ತಿ ಅವನಿಗೆ ಸಂಬಂಧಪಡುತ್ತದೆ. ಅಜ್ಜ ತೀರಿಹೋಗಿ ಮೊಮ್ಮಗನಾಗಿ ಮರುಜನ್ಮ ಪಡೆದು ಬರುತ್ತಾನೆ ಎಂಬ ನಂಬಿಕೆ ತತ್ವದ ಪ್ರಕಾರ, ಅವನ ಆಸ್ತಿಗೆ ಅವನೇ ಹಕ್ಕುದಾರನಾಗುತ್ತಾನೆ. ಅಂದರೆ ಅಜ್ಜನ ಆಸ್ತಿಗೆ ಅಜ್ಜನೇ ಹಕ್ಕುದಾರನೆನಿಸುತ್ತಾನೆ. ಅಜ್ಜನ ಹೆಸರು ಮೊಮ್ಮಗನಿಗೆ ಇಡುವುದು, ಅಜ್ಜನ ಆಸ್ತಿಗೆ ಮೊಮ್ಮಗ ಹಕ್ಕುದಾರನಾಗುವುದು ಎರಡೂ ಒಂದೆಯಾಗಿದೆ. ಅದೇ ವ್ಯಕ್ತಿ ಅದೇ ಹೆಸರನ್ನು ಪಡೆಯುವಂತೆ ಅದೇ ವ್ಯಕ್ತಿ ಅದೇ ಆಸ್ತಿಗೆ ಒಡೆಯನೆನಿಸುತ್ತಾನೆ. 'ಆಸ್ತಿಯ ಒಡೆತನದ ನಿಯಮ' ಈ ನಂಬಿಕೆ ತತ್ವದ ಆಧಾರದ ಮೇಲೆ ರೂಪುಗೊಂಡಿರಬಹುದೆ? ಈ ವಾದಕ್ಕೆ ಇನ್ನಷ್ಟು ವಿವರಣೆಗಳ ಅಗತ್ಯವಿದೆ.

### ೫.೫.೨.೧ ರಾಜಮಹಾರಾಜರು

ರಾಜ ಮಹಾರಾಜರ ಹೆಸರುಗಳು ನಂತರದ ವ್ಯಕ್ತಿಗಳ ಹೆಸರಿಗೆ ಪ್ರೇರಣೆಯಾಗುತ್ತವೆ. ಚಿತ್ರದುರ್ಗ ಪರಿಸರದಲ್ಲಿ ಗಂಗ, ಕದಂಬ, ಚಾಳುಕ್ಯ ಮೊದಲಾದ ಅನೇಕ ರಾಜಮನೆತನಗಳು ಆಳಿಹೋಗಿದ್ದರೂ, ನಾಯಕ ಪಾಳೆಯಗಾರರು ತುಂಬಾ ಪ್ರಸಿದ್ಧಿಯನ್ನು ಪಡೆದಿದ್ದು, ಚಿತ್ರದುರ್ಗದ ಇತಿಹಾಸದಲ್ಲಿ ಮೈಲುಗಲ್ಲಾಗಿ ಉಳಿದಿದ್ದಾರೆ. ಪಾಳೆಯಗಾರರ ಹೆಸರುಗಳು ಇಲ್ಲಿನ ಅನೇಕರ ಹೆಸರುಗಳಿಗೆ ಪ್ರೇರಣೆಯಾಗಿವೆ. ಉದಾಹರಣೆಗೆ

ಮದಕರಿನಾಯಕ ಅಹೋಬಲನಾಯಕ

ತಿಮ್ಮಣ್ಣನಾಯಕ

ಭರಮಣ್ಣನಾಯಕ - ಇತ್ಯಾದಿ

ಮೇಲಿನ ಈ ಹೆಸರುಗಳು ಈಗಲೂ ಅನೇಕರಲ್ಲಿ ಬಳಕೆಯಾಗುತ್ತಿವೆ. ಮತ್ತು ಮ್ಯಾಸನಾಯಕ ಸಮುದಾಯದವರಲ್ಲಿ ಮಾತ್ರ ಕಾಣಬರುತ್ತಿದ್ದು, ಇತರ ಸಮುದಾಯಗಳು ಇಟ್ಟುಕೊಂಡಿರುವುದು ಕಾಣಬರುವುದಿಲ್ಲ.

### ೫.೫.೨.೨ ನಾಯಕ ಶಿರೋಮಣಿಗಳು

ನಾಯಕ ಶಿರೋಮಣಿಗಳ ಹೆಸರುಗಳು, ಇತರ ವ್ಯಕ್ತಿಗಳ ಹೆಸರಿನ ಆಯ್ಕೆಗೆ ಕಾರಣವಾಗುತ್ತವೆ. ಚಿತ್ರದುರ್ಗ ಪರಿಸರದಲ್ಲಿ ಕಾಣಬರುವ ಉದಾಹರಣೆಗಳನ್ನು ಇಲ್ಲಿ ಗಮನಿಸಬಹುದು. ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಹೆಸರು ಮಾಡಿರುವ 'ಗಾಂಧಿ' (< ಮಹಾತ್ಮಗಾಂಧಿ) ಮತ್ತು ಇಂದಿರಾಗಾಂಧಿಯವರ ಹೆಸರುಗಳನ್ನು ಇಲ್ಲಿನ ಕೆಲವು ಜನರು ಇಟ್ಟುಕೊಂಡಿರುವುದು ತಿಳಿದುಬರುತ್ತದೆ. ಅವರ ಹಾಗೆ ನಮ್ಮ ಮಕ್ಕಳು ಆಗಲಿ ಎಂಬ ಉದ್ದೇಶದಿಂದಲೂ, ಅವರ ಮೇಲಿನ ಅಭಿಮಾನದಿಂದಲೂ

ಇಂಥ ಹೆಸರುಗಳನ್ನು ಇಡುತ್ತಾರೆ. ಚಿತ್ರದುರ್ಗ ಪ್ರದೇಶದಲ್ಲಿ ಇಟ್ಟಿರುವಂತೆ, ಇತರ ಪ್ರದೇಶಗಳಲ್ಲಿಯೂ ಈ ಹೆಸರುಗಳು ಬಳಕೆಯಲ್ಲಿರಬಹುದು.

### ೫.೫.೩ ಇತರೆ

ಮಾನವ ನಿಸರ್ಗದ ಒಂದು ಅಂಗ. ಪ್ರಕೃತಿ ಮತ್ತು ಮಾನವನ ಸಂಬಂಧ ಅನ್ಯೋನ್ಯ ಮತ್ತು ನಿರಂತರವಾದುದು. ಪ್ರಕೃತಿ ಜತೆ ಜತೆಗೆ ಬದುಕು ಸಾಗಿಸುತ್ತ ಬಂದ ಮಾನವ ನಿಸರ್ಗದ ಅನೇಕ ವಸ್ತು, ಸಂಗತಿಗಳ ಹೆಸರನ್ನು ವ್ಯಕ್ತಿನಾಮವಾಗಿ ಇಟ್ಟುಕೊಂಡಿದ್ದಾನೆ. ಸೂರ್ಯ, ಚಂದ್ರ, ನಕ್ಷತ್ರ, ಆಕಾಶ, ಭೂಮಿ, ಸಮುದ್ರ, ಗಾಳಿ, ಪ್ರಾಣಿ, ಪಕ್ಷಿ, ಹೂವು ಮೊದಲಾದ ಪ್ರಾಕೃತಿಕ ಹೆಸರುಗಳು, ವ್ಯಕ್ತಿನಾಮಗಳಾಗಿ ಬಳಕೆಯಾಗುತ್ತಿವೆ. ಈ ಹೆಸರುಗಳು ಸಾಮಾನ್ಯವಾಗಿ ಎಲ್ಲಾ ಪರಿಸರಗಳಲ್ಲಿಯೂ ಕಾಣಬರುತ್ತಿದ್ದು, ಯಾವೊಂದು ಪರಿಸರವನ್ನಾಗಲೀ, ವರ್ಗವನ್ನಾಗಲೀ ಪ್ರತಿನಿಧಿಸುವುದಿಲ್ಲ. ಪ್ರಸ್ತುತ ಅಧ್ಯಯನದ ಸಂದರ್ಭಕ್ಕೆ ಅವುಗಳ ವಿಶ್ಲೇಷಣೆ ಅನಗತ್ಯ ಎನಿಸಬಹುದು ಎಂಬ ಕಾರಣದಿಂದ ವಿಶ್ಲೇಶಿಸುವ ಪ್ರಯತ್ನ ಮಾಡಿರುವುದಿಲ್ಲ. ಇದು ಈ ನಿಬಂಧದ ಮಿತಿಯೂ ಆಗಿದೆ.

### ೫.೬. ಹೆಸರು : ಬದಲಾವಣೆ

ಹೆಸರಿಗು ಮತ್ತು ವ್ಯಕ್ತಿಗು ಪರಸ್ಪರ ನೇರವಾದ ಸಂಬಂಧವಿದೆ ಎಂಬುದು ಜನರ ಒಂದು ಸಾಮಾನ್ಯ ನಂಬಿಕೆ. ವ್ಯಕ್ತಿ ಜೀವನದಲ್ಲಿ ಸಂಭವಿಸುವ ಘಟನೆಗಳಿಗೆ ಹೆಸರೂ ಕಾರಣವಾಗಿರುತ್ತದೆ ಎಂದು ನಂಬಿರುವ ಜನ ಸುಖ-ದುಃಖ, ಸೋಲು-ಗೆಲುವು, ಮಾನ-ಅಪಮಾನ, ಆರೋಗ್ಯ-ಅನಾರೋಗ್ಯ, ಕೀರ್ತಿ-ಅಪಕೀರ್ತಿ - ಇತ್ಯಾದಿಗಳು ಬರುವುದಕ್ಕೆ ಬೇರೆ ಬೇರೆ ಅಂಶಗಳು ಕಾರಣವಾಗುವಂತೆ, ಹೆಸರೂ ಕಾರಣವಾಗುತ್ತದೆ ಎಂದು ಭಾವಿಸಿದ್ದಾರೆ. ವ್ಯಕ್ತಿಯ ಹಿನ್ನಡೆ ಮತ್ತು ಮುನ್ನಡೆ ಬೆಳವಣಿಗೆಗೆ ಹೆಸರೂ ಸಹ ಕಾರಣ ಎಂದು ತಿಳಿದಿರುವುದರಿಂದ ಕೆಲವು ಸಂದರ್ಭಗಳಲ್ಲಿ ಹೆಸರನ್ನು ಬದಲಾಯಿಸುತ್ತಾರೆ. ನಾಮಾಂತರ ಪ್ರಕ್ರಿಯೆ ಪ್ರಾಚೀನ ಕಾಲದಲ್ಲಿಯೂ ಬಳಕೆಯಲ್ಲಿರುವುದರ ಬಗೆಗೆ ಶಾಸನಗಳಲ್ಲಿ ಉಲ್ಲೇಖಗಳು ದೊರಕುತ್ತಿವೆ. ಹಿಂದಿನ ಕಾಲದ ಜನರಲ್ಲಿ ಹೆಸರಿನ ಬಗೆಗೆ ಇದ್ದ ನಂಬಿಕೆಗಳು, ಪ್ರಸ್ತುತ ಆಧುನಿಕ ಕಾಲದ ಜನರಲ್ಲಿಯೂ ಉಳಿದುಕೊಂಡಿವೆ. ಚಿತ್ರದುರ್ಗ ಪರಿಸರದ ವಿವಿಧ ಜನ ಸಮುದಾಯಗಳಲ್ಲಿ ಹೆಸರಿನ ಬಗೆಗೆ ಅನೇಕ ನಂಬಿಕೆಗಳು ಇರುವುದು ತಿಳಿದುಬಂದಿದೆ. ಹೆಸರು ಮತ್ತು ವ್ಯಕ್ತಿಯ ನಡುವೆ ಅವಿನಾಭಾವ ಸಂಬಂಧವಿದೆ ಎಂಬುದು ಈಗಲೂ ಇಲ್ಲಿನ ಹಲವರ ನಂಬಿಕೆ. ಆ ನಂಬಿಕೆಯ ಹಿನ್ನೆಲೆಯಲ್ಲಿ ಅನೇಕ ಜನರು ವ್ಯಕ್ತಿಯ ಹೆಸರುಗಳನ್ನು ಬದಲಾಯಿಸುವುದು ಕಾಣಬರುತ್ತದೆ. ಚಿತ್ರದುರ್ಗ ಪರಿಸರದಲ್ಲಿ ಜನರು ಯಾವ ಯಾವ ನಂಬಿಕೆ ಕಾರಣ, ಉದ್ದೇಶಗಳಿಗಾಗಿ ಹೆಸರನ್ನು ಬದಲಾಯಿಸುತ್ತಾರೆ ಎಂಬುದನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

### ೫.೬.೧ ಹೆಸರು : ಬಾಲ್ಯ

ಮಗುವಿಗೆ ಬಾಲ್ಯದಲ್ಲಿ ಹೆಸರಿಡುತ್ತಾರೆ. ಹೆಸರಿಟ್ಟು ಕೆಲವೇ ದಿವಸ, ತಿಂಗಳುಗಳಲ್ಲಿ ಮಗು ಯಾವುದಾದರೂ ಖಾಯಿಲೆಗೆ ಒಳಗಾಗಿ ಅನಾರೋಗ್ಯದಿಂದ ಬಳಲುತ್ತಿದ್ದರೆ, ಮತ್ತು ಅಳುವುದು,

ಹಠಮಾಡುವುದು, ಚೇಷ್ಟೆಮಾಡುವುದು, ಹಾಲುಕುಡಿಯದೆ ಹೋದರೆ - ಇಟ್ಟ ಹೆಸರು ಅಂಟಿ ಬಂದಿಲ್ಲ ಎಂದು ಜನ ಭಾವಿಸುತ್ತಾರೆ. ಮಗುವಿಗೆ ಇಟ್ಟಿರುವ ಹೆಸರಿನ ಬಲ (ನಾಮಬಲ) ಸರಿಯಿಲ್ಲವೆಂದು ಭಾವಿಸಿ ಮೊದಲ ಹೆಸರು ಬಿಟ್ಟು ಬೇರೊಂದು ಹೆಸರನ್ನು ಸೂಚಿಸುತ್ತಾರೆ. ಮಕ್ಕಳಿಗೆ ಖಾಯಿಲೆ ಬಂದಾಗ ಹೆಸರು ಬದಲಾಯಿಸಿದರೆ, ಖಾಯಿಲೆ ವಾಸಿಯಾಗುತ್ತದೆ ಎಂಬುದು ಜನರ ನಂಬಿಕೆ. "ಭೂತ ಪಿಶಾಚಾದಿ ದುಷ್ಟಶಕ್ತಿಗಳಿಂದ ರಕ್ಷಣೆ ಪಡೆಯುವ ಸಲುವಾಗಿ ಬೋರ್ನಿಯಾ ಜನ ಮಕ್ಕಳ ಹೆಸರನ್ನು ಆಗಾಗ್ಗೆ ಬದಲಿಸುತ್ತಿದ್ದುದುಂಟು."[೨೧] ಚಿತ್ರದುರ್ಗ ಪರಿಸರದ 'ಮ್ಯಾಸನಾಯಕ', 'ಗೊಲ್ಲ', 'ಮಾದಿಗ', 'ಕುರುಬ' ಜನಾಂಗಗಳಲ್ಲಿ ಈ ನಂಬಿಕೆಯಿರುವುದು ಕಾಣಬರುತ್ತದೆ.

ನಿದರ್ಶನಕ್ಕೆ, ಕ್ಷೇತ್ರಕಾರ್ಯದಲ್ಲಿ ದೊರೆತ ಕೆಲವು ಉದಾಹರಣೆಗಳನ್ನು ಗಮನಿಸಬಹುದು.

| ಮೊದಲ ಹೆಸರು | ಹೆಸರಿನ ಬದಲಾವಣೆಗೆ ಕಾರಣ | ಎರಡನೆ ಹೆಸರು (ಮರುನಾಮಕರಣ) | ಜಾತಿ | ಊರು | ತಾಲೂಕು |
|---|---|---|---|---|---|
| "ಕಾಡಪ್ಪ | ಹೆಸರಿಟ್ಟ ಎರಡನೆ ದಿನದಿಂದ ಜ್ವರ ಬಂದು, ತುಂಬಾ ದಿನಗಳವರೆಗೆ ವಾಸಿಯಾಗದಿದ್ದರಿಂದ (ದೇವರ ಹೆಸರು) | ತಿಪ್ಪೇಸ್ವಾಮಿ | ಗೊಲ್ಲ | ಗೋಪನಹಳ್ಳಿ | ಚಳ್ಳಕೆರೆ"[೨೨] |
| "ಶಿವಣ್ಣ | ಬಾಲ್ಯದಲ್ಲಿ (ಅಂದರೆ ನಾಮಕರಣ ಮಾಡಿದ ನಂತರ) ಹಗಲು-ರಾತ್ರಿ ತುಂಬಾ ರಂಪ ಮಾಡುತ್ತಿದ್ದರಿಂದ (ತಾತನ ಹೆಸರು) | ಬೋರಣ್ಣ | ನಾಯಕ | ಮುತ್ತಿಗಾರಹಳ್ಳಿ | ಮೊಳಕಾಲ್ಮೂರು"[೨೩] |
| "ಕುಮಾರ | ಸಣ್ಣವನಿರುವಾಗ ಅಳುವುದು ಚೇಷ್ಟೆ ಮಾಡುವುದು ಮಾಡುತ್ತಿದ್ದರಿಂದ ನಾಮಬಲ ಸರಿ ಬಂದಿಲ್ಲವೆಂದು (ದೇವರ ಹೆಸರು ಇಟ್ಟಿದ್ದಾರೆ) | ಮೈಲಾರಪ್ಪ | ಕುರುಬ | ಹೊಳಲ್ಕೆರೆ | ಹೊಳಲ್ಕೆರೆ"[೨೪] |
| "ಗೀತಾ | ನಾಮಕರಣ ಮಾಡಿದ ಮರುದಿನವೆ ಮಗುವಿಗೆ ವಾಂತಿ-ಭೇದಿಯಾಗಿದ್ದರಿಂದ ಹೆಸರು ಬಲ ಸರಿಯಿಲ್ಲವೆಂದು ಇನ್ನೊಂದು ಹೆಸರು ಇಟ್ಟಿದ್ದಾರೆ. | ಪಾರ್ವತಮ್ಮ | ಲಿಂಗಾಯತ | ಚಿತ್ರದುರ್ಗ | ಚಿತ್ರದುರ್ಗ"[೨೫] |
| "ಗಂಗಮ್ಮ | ಮಗುವಿಗೆ ಒಂದುವರ್ಷ ತುಂಬಿರುವಾಗಲೇ 'ಕಾಮಲೆ' (ಖಾಯಿಲೆ) ರೋಗ ಕಾಣಿಸಿಕೊಂಡಿತ್ತು. ಅಲ್ಲದೆ ಮಗುವಿನ ತಂದೆ ತೀರಿ ಹೋದರು. ಕಾರಣ ಮಗುವಿನ ನಾಮಬಲ ಸರಿಯಿಲ್ಲವೆಂದು ಮರುನಾಮಕರಣ ಮಾಡಿದ್ದಾರೆ. (ಮನೆದೇವರ ಹೆಸರು) | ಪಾಪಮ್ಮ | ನಾಯಕ | ಚಳ್ಳಕೆರೆ | ಚಳ್ಳಕೆರೆ"[೨೬] |
| "ಪದ್ಮ | ಬಾಲ್ಯದಲ್ಲಿ ಆಗಾಗ ಜ್ವರ, ಕೆಮ್ಮು ಕಾಣಿಸಿಕೊಂಡು, ಮಗುವಿನ ಬೆಳವಣಿಗೆ ಸರಿಯಾಗಿ ಆಗದ ಕಾರಣ ಹೆಸರು ಬದಲಾಯಿಸಿ (ಅಜ್ಜಿಯ ಹೆಸರು) ಇಟ್ಟಿದ್ದಾರೆ. | ರೂಪ್ಲಿಬಾಯಿ | ಲಂಬಾಣಿ | | ಮೊಳಕಾಲ್ಮೂರು"[೨೭] |

ಮಗುವಿಗೆ ಮರುನಾಮಕರಣ ಮಾಡುವಾಗ, ಮೊದಲಿನ ಹಾಗೆ ಶಾಸ್ತ್ರೋಕ್ತವಾಗಿ ಮಾಡದೆ, ಮನೆಯಲ್ಲಿ ಮಗುವಿನ ತಂದೆ-ತಾಯಿ ಇಲ್ಲವೆ ಹಿರಿಯರು ಸಹಜವಾಗಿ ಕರೆಯುತ್ತಾರೆ. ಚಿತ್ರದುರ್ಗ ಪರಿಸರದಲ್ಲಿ ಇರುವಂತೆ, ಕರ್ನಾಟಕದ ಇತರ ಪರಿಸರಗಳಲ್ಲಿಯೂ ಈ ನಂಬಿಕೆ ಇರಬಹುದು. "ಮಕ್ಕಳು ಖಾಯಿಲೆ ಮಲಗಿದಾಗ ಅವರ ದೌರ್ಬಲ್ಯ ತೊಲಗಲೆಂದು ಅಥವಾ ಅವರಿಂದ ಅದು ಕಳೆದುಹೋಗಲೆಂದು ಅರೇಬಿಯಾದ ಜನ ಅವರಿಗೆ ತೋಳ, ಚಿರತೆ ಅಥವಾ ಹುಲಿಗಳ ಹೆಸರು ಇಡುತ್ತಾರೆ"[೬೮] ಎಂಬುದನ್ನು ಗಮನಿಸಿದರೆ, ಪ್ರಾಚೀನ ಕಾಲದ ಜನರಲ್ಲಿಯೂ ಈ ನಂಬಿಕೆ ಇರುವುದು ಸ್ಪಷ್ಟವಾಗುತ್ತದೆ. ಅಲ್ಲದೆ ಜಗತ್ತಿನ ಅನೇಕ ಬುಡಕಟ್ಟು ಸಮುದಾಯಗಳಲ್ಲಿ ಈಗಲೂ ಈ ನಂಬಿಕೆ ರೂಢಿಯಲ್ಲಿರುವುದು ತಿಳಿದುಬರುತ್ತದೆ.

**೫.೬.೨ ಹೆಸರು : ಮದುವೆ**

ಮದುವೆ ಸಂದರ್ಭದಲ್ಲಿ ಹೆಸರು ಬದಲಾಯಿಸುವ ಪದ್ಧತಿ, ಚಿತ್ರದುರ್ಗ ಪರಿಸರದಲ್ಲಿ ರೂಢಿಯಲ್ಲಿರುವ ಒಂದು ಸಂಪ್ರದಾಯವಾಗಿದೆ. ಈ ಪದ್ಧತಿ ಮದುವೆಯಾಗುವ ಎಲ್ಲಾ ಹೆಣ್ಣು-ಗಂಡಿಗೆ, ಅಂದರೆ ವಧು-ವರರಿಗೆ ಅನ್ವಯಿಸುವುದಿಲ್ಲ. ಅಥವಾ ಇದು ಕಡ್ಡಾಯವಾದ ಪದ್ಧತಿ ಆಗಿರುವುದಿಲ್ಲ. ಕೆಲವರು ಮಾತ್ರ ಕೆಲವು ನಂಬಿಕೆ, ಕಾರಣಗಳಿಂದಾಗಿ ಬದಲಾಯಿಸುವುದು ಕಾಣಬರುತ್ತದೆ. ಹೆಸರನ್ನು ಬದಲಾಯಿಸುವುದು ಎಂದರೆ ಗಂಡು-ಹೆಣ್ಣಿನ ಇಬ್ಬರ ಹೆಸರನ್ನು ಬದಲಾಯಿಸುವುದು ಎಂದರ್ಥವಲ್ಲ. ಕ್ಷೇತ್ರಕಾರ್ಯದ ಮಾಹಿತಿ ಪ್ರಕಾರ - ಸ್ತ್ರೀಯರ ಹೆಸರು ಬದಲಾಯಿಸುವುದು ಮಾತ್ರ ಕಾಣಬರುತ್ತಿದ್ದು, ಪುರುಷರ ಹೆಸರು ಬದಲಾಯಿಸಿರುವುದು (ಬದಲಾಯಿಸುವುದು) ಕಾಣಬರುವುದಿಲ್ಲ. ಮದುವೆ ಸಂದರ್ಭದಲ್ಲಿ ಹೆಸರಿನ ಬದಲಾವಣೆಗೆ ಕಾರಣವಾಗುವ ಅಂಶಗಳನ್ನು ಈ ರೀತಿ ಗುರುತಿಸಬಹುದು.

ಅ. ಗಂಡು-ಹೆಣ್ಣಿನ ಹೆಸರಿನ ನಡುವೆ ಸಾಲಾವಳಿ ಅಥವಾ ಗುಣಗಳು ಅಥವಾ ನಾಮಬಲ (ಹೆಣ್ಣಿಗಿಂತ ಗಂಡಿಗೆ ಗುಣಗಳು ಜಾಸ್ತಿ ಬಂದರೆ) ಸರಿ ಬರಲಿಲ್ಲವೆಂದರೆ -

ಆ. ಹಳೆಯ ಹೆಸರು ಆಗಿದ್ದರೆ -

ಇ. ಹೆಣ್ಣಿನ ಹೆಸರು, ಗಂಡನ ಮನೆ ವಾತಾವರಣಕ್ಕೆ ಸರಿ ಹೊಂದದೆ ಇದ್ದರೆ -

ಈ. ಹೆಸರು ಉದ್ದವಾಗಿದ್ದರೆ - (ಸಂಬೋಧನೆಗೆ ತೊಂದರೆ ಆಗುತ್ತದೆ ಎಂಬ ಕಾರಣದಿಂದ)

ಉ. ಹೆಣ್ಣಿನ ಹೆಸರು, ಗಂಡನ ಮನೆಯ ಹಿರಿಯ ಸ್ತ್ರೀಯರ (ಅಜ್ಜಿ, ತಾಯಿ, ಅಕ್ಕ) ಹೆಸರು ಒಂದೇ ಆಗಿದ್ದರೆ (ಕಾರಣ - ಗಂಡ ಅಥವಾ ಕುಟುಂಬದ ಇತರ ಸದಸ್ಯರು, ಹೆಸರಿಡಿದು ಕರೆದರೆ, ಹಿರಿಯರನ್ನು ಹೆಸರಿಡಿದು ಕರೆದಂತಾಗುತ್ತದೆ ಎಂಬ ನಂಬಿಕೆಯಿಂದ ಹೆಸರು ಬದಲಾಯಿಸುತ್ತಾರೆ)

ಈ ಎಲ್ಲಾ ಅಂಶಗಳು ಹೆಸರಿನ ಬದಲಾವಣೆಗೆ ಕಾರಣಗಳಾಗಿವೆಯಾದರೂ, ಬಹುತೇಕವಾಗಿ ಗುಣಗಳ ಹೊಂದಾಣಿಕೆ ಇಲ್ಲದಿರುವಾಗ ಬದಲಾಯಿಸುವುದು ಹೆಚ್ಚಾಗಿ ಕಾಣಬರುತ್ತದೆ.

ಗಂಡು ಮತ್ತು ಹೆಣ್ಣಿನ ನಾಮಬಲವನ್ನು ಪರೀಕ್ಷಿಸುವುದು ವಿವಾಹ ಪೂರ್ವದಲ್ಲಿ. ನಾಮಬಲ ಸರಿ ಬರದೆ ಇರುವಾಗ, ಆ ಸಂಬಂಧವನ್ನು ಬೆಸೆಯುವುದಿಲ್ಲ. ರದ್ದುಮಾಡುವುದುಂಟು. ಆದರೆ ಆ ಹುಡುಗಿಯನ್ನು ಮದುವೆ ಮಾಡಿಕೊಳ್ಳಲೇ ಬೇಕು ಎಂಬ ಉದ್ದೇಶ ಇರುವಾಗ, ಮೊದಲ ಹೆಸರನ್ನು ಕೈಬಿಟ್ಟು ಹೊಸ ಹೆಸರನ್ನು

ಇಟ್ಟುಕೊಳ್ಳುತ್ತಾರೆ. ನಾಮಬಲ ಸರಿ ಬರದೆ ಇರುವಾಗ ಹೆಸರು ಬದಲಾಯಿಸಿದರೆ, ಮುಂದೆ ಗಂಡ-ಹೆಂಡತಿ ಅನ್ಯೋನ್ಯವಾಗಿ ಇರುತ್ತಾರೆ ಮತ್ತು ಕೊಟ್ಟಮನೆಗೆ ಒಳ್ಳೆಯದಾಗುತ್ತದೆ ಎಂದು ಜನ ಭಾವಿಸಿದ್ದಾರೆ.

ಮದುವೆ ಸಂದರ್ಭದಲ್ಲಿ ಪುರುಷನ ಹೆಸರು ಬದಲಾಯಿಸದೆ 'ಸ್ತ್ರೀ' ಹೆಸರು ಮಾತ್ರ ಬದಲಾಯಿಸುತ್ತಾರೆ. ಇದಕ್ಕೆ ಕ್ಷೇತ್ರಕಾರ್ಯದಲ್ಲಿ ವಕ್ತೃಗಳು ಹೇಳಿರುವ ಕೆಲವು ಅಭಿಪ್ರಾಯ (ಕಾರಣ) ಗಳನ್ನು ಇಲ್ಲಿ ಉಲ್ಲೇಖಿಸಬಹುದು.

ಅ. "ಪುರುಷನ ಹೆಸರು ಹೇಗಿದ್ದರೂ ನಡೆಯುತ್ತದೆ. ಆದರೆ ಹೆಣ್ಣುಮಕ್ಕಳ ಹೆಸರು ಚೆನ್ನಾಗಿರಬೇಕು. ಮದುವೆ ಸಮಯದಲ್ಲಿ ಪುರುಷನ ಹೆಸರಿಗಿಂತ, ಸ್ತ್ರೀಯರ ಹೆಸರು ಮುಖ್ಯವಾಗಿರುತ್ತದೆ. ಆ ಕಾರಣಕ್ಕಾಗಿ ಸ್ತ್ರೀಯರ ಹೆಸರನ್ನು ಬದಲಾಯಿಸುತ್ತಾರೆ."[೬೯]

ಆ. "ಪುರುಷ ಹೆಸರು ಬದಲಾಯಿಸುವುದು ಹಿಂದಿನಿಂದಲೂ ಬೆಳೆದುಬಂದಿಲ್ಲ. ಒಂದು ವೇಳೆ ಬದಲಾಯಿಸಿದರೆ, ಪುರುಷ ಕುಲಕ್ಕೆ ಅವಮಾನ ಆದಂತಾಗುತ್ತದೆ. ಹೆಣ್ಣುಮಕ್ಕಳ ಹೆಸರು ಬದಲಾಯಿಸುವುದರಿಂದ ಏನೂ ತೊಂದರೆ ಆಗುವುದಿಲ್ಲ. ಅದಕ್ಕೆ ಹೆಣ್ಣಿಗೆ ಹೆಸರು ಬದಲಾಯಿಸುವುದು ರೂಢಿಯಲ್ಲಿದೆ."[೭೦]

ಇ. "ಇದು ಪುರುಷಪ್ರಧಾನ ಸಮಾಜವಾಗಿರುವುದರಿಂದ ಗಂಡುಮಕ್ಕಳ ಹೆಸರು ಬದಲಾಯಿಸದೆ ಹೆಣ್ಣುಮಕ್ಕಳ ಹೆಸರು ಮಾತ್ರ ಬದಲಾಯಿಸುತ್ತಾರೆ."[೭೧]

ಗಂಡು, ಹೆಣ್ಣಿನ ಮನೆಗೆ ಹೋಗದೆ, ಹೆಣ್ಣು ಗಂಡನ ಮನೆಗೆ ಬರುವುದು ಸಂಪ್ರದಾಯ. ಹೆಣ್ಣಿಗೆ ಗಂಡನ ಮನೆ ಪರಿಸರ ಹೊಸದಾಗುವಂತೆ, ಹೆಣ್ಣು ಈ ಪರಿಸರಕ್ಕೆ ಹೊಸಬರಾಗಿರುತ್ತಾರೆ. ಗಂಡನ ಹೆಸರು ಅಲ್ಲಿನ ಸಮಾಜದ ಜನರಿಗೆ ಈಗಾಗಲೇ ಪರಿಚಯವಾಗಿರುತ್ತದೆ. ಆದುದರಿಂದ ಗಂಡಿನ ಹೆಸರು ಬದಲಾಯಿಸುವುದರಿಂದ ಸಂಬೋಧನೆಯಲ್ಲಿ ತೊಡಕು ಉಂಟಾಗಬಹುದು. ಅಥವಾ ಹೆಸರು ಬದಲಾಯಿಸಿದರೂ ಜನರಲ್ಲಿ ಅದರ ಪರಿಣಾಮ ಆಗದೆ ಇರಬಹುದು. ಅಂದರೆ ಜನ ಮೊದಲ ಹೆಸರಿನಿಂದಲೇ ಕರೆಯಬಹುದು. ಹೆಣ್ಣು ಈ ಪರಿಸರಕ್ಕೆ ಹೊಸಬಳಾಗುವುದರಿಂದ ಅವರ ಹೆಸರು ಆ ಸಮಾಜದ ಜನರಿಗೆ ಪರಿಚಯವಾಗಿರುವುದಿಲ್ಲ. (ಕೆಲವರಿಗೆ ತಿಳಿದಿರಬಹುದು) ಹೆಸರಿನ ಬದಲಾವಣೆ ಮಾಡಿದರೂ, ಅದು ವ್ಯಕ್ತಿಯ ಮೊದಲ ಹೆಸರಾಗಿ ರೂಢಿಗೆ ಬರುತ್ತದೆ. ಸಂಬೋಧನೆಗೆ ಆಗಲಿ, ವ್ಯಕ್ತಿಯನ್ನು ಗುರುತಿಸುವುದಕ್ಕೆ ಆಗಲೀ ಹೆಚ್ಚಾಗಿ ತೊಂದರೆ ಆಗಲಾರದು. ಆ ಕಾರಣಕ್ಕಾಗಿಯೆ ಹೆಣ್ಣಿನ ಹೆಸರನ್ನು ಬದಲಾಯಿಸುತ್ತಿರಬಹುದು. ಮೇಲಿನ ತಿಳುವಳಿಕೆಗೂ ಮಿತಿಗಳಿವೆ ಎಂಬುದನ್ನು ಗಮನಿಸಬಹುದು. ಗಂಡು, ಹೆಣ್ಣು (ವಧು-ವರರು) ಒಂದೇ ಊರಿನವರಾಗಿದ್ದರೆ, ಈ ನಿಯಮ ಅನ್ವಯಿಸುವುದಿಲ್ಲ. ಪುರುಷ ಹೆಸರು ಬದಲಾಯಿಸದೆ, ಸ್ತ್ರೀ ಹೆಸರು ಮಾತ್ರ ಬದಲಾಯಿಸುವುದು ಪುರುಷ ಪ್ರಧಾನ ಸಮಾಜದ ಧ್ಯೋತಕವೂ ಆಗಿರಬಹುದು. ನಾಮ ಪರಿವರ್ತನೆಗೆ ಸಂಬಂಧಿಸಿ, ಕೆಲವು ನಿದರ್ಶನಗಳನ್ನು ಇಲ್ಲಿ ನೋಡಬಹುದು.

"ಅಶ್ವಿನಿ' ಇವರ ಮೊದಲ ಹೆಸರು ಪದ್ಮಜ. 'ಅಶೋಕ' ಎಂಬುವವರ ಜತೆ ವಿವಾಹ ಮಾಡಿಕೊಳ್ಳಬೇಕಾದಾಗ, ಗಂಡನ ಹೆಸರಿಗೆ ಹೊಂದಾಣಿಕೆ ಆಗದ ಕಾರಣ, (ಅಂದರೆ, ನಾಮಬಲ ಸರಿ ಬರದ ಕಾರಣ) ಗಂಡನ ಹೆಸರಿನ ಆದ್ಯಕ್ಷರದಿಂದ ಆರಂಭವಾಗುವ ಹೆಸರನ್ನೇ ಸೂಚಿಸಿದ್ದರಿಂದ, 'ಅಶ್ವಿನಿ' ಎಂದು ಹೆಸರನ್ನು ಬದಲಾಯಿಸಿಕೊಂಡಿದ್ದಾರೆ."[೭೨]

"ಕಮಲ' ಇವರ ಮೊದಲ ಹೆಸರು ಪಾಲಮ್ಮ. ಪಾಪಯ್ಯ ಎಂಬುವವರ ಜತೆ ಮದುವೆಯಾಗುವಾಗ, ಹಳೆಯ ಹೆಸರು ಎಂಬ ಕಾರಣದಿಂದ ಇವರಿಗೆ ಕಮಲ ಎಂದು ಮರುನಾಮಕರಣ ಮಾಡಿದ್ದಾರೆ."[೪೩]

"ರಾಧ' ಇವರ ಮೊದಲ ಹೆಸರು ಶಿವಮ್ಮ. ಗಂಡನ ತಾಯಿ ಹೆಸರೂ 'ಶಿವಮ್ಮ' ಎಂಬುದೇ ಆಗಿರುವುದರಿಂದ 'ರಾಧ' ಎಂದು ಹೊಸ ಹೆಸರು ಇಟ್ಟಿದ್ದಾರೆ."[೪೪]

"ಲೋಕಮ್ಮ' ಇವರ ಮೊದಲ ಹೆಸರು ಕೆಂಗಮ್ಮ. ಓಬಯ್ಯ ಎಂಬುವವರ ಜೊತೆ ಮದುವೆಯಾಗುವಾಗ ಸಾಲಾವಳಿ ಸರಿ ಬರದೆ ಇರುವುದರಿಂದ, 'ಲೋಕಮ್ಮ' ಎಂದು ಪುನರ್ ನಾಮಕರಣ ಮಾಡಿದ್ದಾರೆ."[೪೫]

"ಲಕ್ಷ್ಮಿ ಇವರ ಮೊದಲ ಹೆಸರು ಹುಚ್ಚಮ್ಮ. ಆಧುನಿಕ ಕಾಲದ ಹೆಸರಾಗಿರದೆ, ಹಳೆಯ ಹೆಸರಾಗಿದ್ದರಿಂದ 'ಲಕ್ಷ್ಮಿ' ಎಂದು ಇವರ ಹೆಸರನ್ನು ಬದಲಾಯಿಸಿದ್ದಾರೆ."[೪೬]

"ಗೀತಾ' ಇವರ ಮೊದಲ ಹೆಸರು 'ಉಮಾಮಹೇಶ್ವರಿ'. ಹೆಸರು ಉದ್ದ ಎನಿಸಿದ್ದರಿಂದ ಮದುವೆ ಸಮಯದಲ್ಲಿ ಇವರ ಹೆಸರನ್ನು 'ಗೀತಾ' ಎಂದು ಬದಲಾಯಿಸಿದ್ದಾರೆ."[೪೭]

ಹೀಗೆ ಮದುವೆ ಸಮಯದಲ್ಲಿ ನಾಮಾಂತರ ಪ್ರಕ್ರಿಯೆ ಒಂದು ಪರಂಪರೆಯಾಗಿ ಮುಂದುವರೆದುಕೊಂಡು ಬರುತ್ತಿರುವುದು ಕಾಣಬರುತ್ತದೆ. ಚಿತ್ರದುರ್ಗ ಪರಿಸರದಲ್ಲಿ ಕಾಣಬರುವಂತೆ ಇತರ ಪ್ರದೇಶಗಳಲ್ಲಿಯೂ ಈ ನಂಬಿಕೆ ರೂಢಿಯಲ್ಲಿರಬಹುದು.

ವಿವಾಹ ಸಂದರ್ಭದಲ್ಲಿ ಹೆಸರನ್ನು ಬದಲಾಯಿಸುವ ಪದ್ಧತಿ ತೀರಾ ಹಳೆಯದು. "ಪ್ರಾಚೀನ ಕಾಲದಲ್ಲಿ, ಸ್ತ್ರೀಯಾಗಿದ್ದರೆ ಮದುವೆ ಸಂದರ್ಭದಲ್ಲಿ ಪುರುಷನಾಗಿದ್ದರೆ ಪಟ್ಟ ಬಂಧ ಸಂದರ್ಭದಲ್ಲಿ ಕೆಲವೊಮ್ಮೆ ವ್ಯಕ್ತಿನಾಮ ವ್ಯತ್ಯಾಸವಾಗುತ್ತಿರಬಹುದು."[೪೮] ಹೆಣ್ಣಿಗೆ ತವರು ಮನೆಯವರು ಇಟ್ಟ ಹೆಸರನ್ನು ಕೈಬಿಟ್ಟು, ಗಂಡನ ಮನೆಯವರು ಮದುವೆಯಲ್ಲಿ ಬೇರೊಂದು ಹೆಸರನ್ನು ಇಡುವ ಪದ್ಧತಿ ಈಗಲೂ ಇರುವಂತೆ, ಹಿಂದೆಯೂ ಇದ್ದುದರ ಬಗೆಗೆ ಆಧಾರಗಳು ಸಿಗುತ್ತವೆ. "ಬಳ್ಳಾರಿ ಜಿಲ್ಲೆಯ ಬಾಗಳಿಯಲ್ಲಿ ದೊರೆತಿರುವ ಹನ್ನೊಂದನೆ ಶತಮಾನದ ಶಾಸನವೊಂದರಲ್ಲಿ ಮದುವೆಗೆ ಮುಂಚೆ 'ಧರ್ಮಾಂಗನೆ' ಎಂಬ ಹೆಸರಿದ್ದ ಆಕೆಗೆ ಗಂಡನ ಮನೆಯಲ್ಲಿ 'ನಾಗಾಂಬಿಕೆ' ಎಂಬ ಹೆಸರು ಪ್ರಾಪ್ತವಾದುದರ ಬಗೆಗೆ ಉಲ್ಲೇಖವಿದೆ."[೪೯] ಹನ್ನೊಂದನೆ ಶತಮಾನಕ್ಕೂ ಮೊದಲೆ ಈ ಪದ್ಧತಿ ರೂಢಿಯಲ್ಲಿರುವುದು ಈ ಶಾಸನಾಧಾರಗಳಿಂದ ಸ್ಪಷ್ಟವಾಗುತ್ತದೆ.

ಗಂಡನ ಹೆಸರಿಗೆ ಅನುಗುಣವಾಗಿ ಹೆಂಡತಿ ಹೆಸರನ್ನು ಬದಲಾಯಿಸುವುದು ಇಲ್ಲವೆ, ಗಂಡನ ಹೆಸರನ್ನೇ ಸ್ತ್ರೀವಾಚಿಗೊಳಿಸಿ ಹೆಂಡತಿಗೆ ಮದುವೆಯಲ್ಲಿ ಪುನರ್ ನಾಮಕರಣ ಮಾಡುತ್ತಿದ್ದರು. "ಕಾಡುವೆಟ್ಟಿಗೆ ವಿವಾಹ ಮಹೋತ್ಸವಮಂ ಮಾಡಿ ಚಟ್ಟಲ ದೇವಿಗೆ, ಕಾಡವ ಮಹಾದೇವಿ ಪಟ್ಟಮಂ ಕಟ್ಟಿ ಸುಖದಿರಿಸಿದಂ" "ವೀರದೇವಂಗಂ ಕಂಚಲ ಮಹಾದೇವಿಯುಮೆನಿಸಿಯುಮೆರಡನೆಯ ಪೆಸರಂ ತಾಳ್ದಿದ ವೀರಮಹಾದೇವಿಗಂ"[೫೦] ಗಂಡನ ಮನೆ ಪರಿಸರದ ಹೆಸರಿಡುವುದು ಮುಖ್ಯವಾಗಿ, ಹೆಣ್ಣು ಸಂಪೂರ್ಣವಾಗಿ ಎಲ್ಲಾ ವಿಧದಲ್ಲೂ ಗಂಡನ ಮನೆಗೆ ಸೇರಿದಳಾಗಿ, ಮಾನಸಿಕವಾಗಿ ತವರನ್ನು ಮರೆಯಲಿ ಎಂಬುದಾಗಿರಬಹುದು. ಗಂಡ ಹೆಂಡತಿಯರ ಹೆಸರು ಒಂದೇ ಇದ್ದವರು, ಮೊಣಕೈ ನೋವಾದಾಗ (ಮೊಣಸಂದು) ಮೂರುಬಣ್ಣದ ದಾರವನ್ನು ಕೈಗೆ ಕಟ್ಟಿದರೆ, ಬೇನೆ ವಾಸಿಯಾಗುತ್ತದೆ ಎಂಬುದು ಚಿತ್ರದುರ್ಗ ಪರಿಸರದಲ್ಲಿ ಇರುವ ಒಂದು ನಂಬಿಕೆ. (ಈ ನಂಬಿಕೆ ಮ್ಯಾಸನಾಯಕರಲ್ಲಿ ಕಾಣಬರುತ್ತದೆ)

ಪ್ರಾಚೀನ ಕಾಲದಲ್ಲಿ ನಾಮಾಂತರಕ್ರಿಯೆ ಮೇಲ್ಜಾತಿ, ಮೇಲ್ವರ್ಗದವರಲ್ಲಿ ರೂಢಿಗೆ ಬಂದು, ಕ್ರಮೇಣ ಇತರ ಜಾತಿ, ವರ್ಗಗಳಲ್ಲೂ ಕಾಣಿಸಿಕೊಂಡಿರಬಹುದು. ಮದುವೆಯ ಕಾಲಕ್ಕೆ ಈ ಸಮಸ್ಯೆಗಳು ಉಂಟಾಗದಿರಲೆಂದು ಹೆಣ್ಣಿಗೆ ವಿನೂತನವಾದ ಹೆಸರುಗಳನ್ನು ಇಡುವುದು ಮುಂಜಾಗ್ರತೆಯ ಕ್ರಮವಾಗಿದೆ. ಹೆಣ್ಣಿನ ನಾಮಕರಣವನ್ನು ಅತ್ತೆಯವರು ಮಾಡುತ್ತಿದ್ದರು. ಮುಂದೆ ಈ ಕನ್ಯೆಯನ್ನು ಸೊಸೆಯಾಗಿ ಪಡೆಯುವ ಉದ್ದೇಶದಿಂದ ಹುಡುಗನ ಹೆಸರಿಗೆ ಹೊಂದಿಕೆಯಾಗುವಂಥ ಹೆಸರನ್ನೇ ಇಡುತ್ತಿದ್ದರು. ಈ ಎಲ್ಲಾ ಮುಂಜಾಗ್ರತಾ ಕ್ರಮಗಳು ನಾಮ ಪರಿವರ್ತನೆಯ ಸಂಕೀರ್ಣತೆಯನ್ನು ಸರಳಗೊಳಿಸಿವೆ.

### ೫.೬.೩ ಹೆಸರು : ಆಧುನಿಕ ಮನೋಧರ್ಮ

ಆಧುನೀಕರಣದ ಪ್ರಭಾವ ಇಂದು ಗ್ರಾಮ ಸಮಾಜಗಳನ್ನು ಪ್ರವೇಶಿಸಿದೆ. ಪರಿಣಾಮವಾಗಿ ಪಾರಂಪರಿಕ ಜೀವನ ಕ್ರಮಕ್ಕೆ ಹೊರತಾದ ಹೊಸ ಬದುಕಿನ ಹಂಬಲ ಹೆಚ್ಚಾಗುತ್ತಿದೆ. ಪ್ರಾದೇಶಿಕ ಸಂಸ್ಕೃತಿಯ ವಿವಿಧ ರಂಗಗಳಲ್ಲಿ ಆಧುನೀಕರಣದ ಪ್ರಭಾವ ಉಂಟಾಗಿರುವಂತೆ ವ್ಯಕ್ತಿನಾಮಗಳ ಮೇಲೂ ಇದರ ಪ್ರಭಾವ ಆಗಿದೆ. ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮತ್ತು ರಾಜಕೀಯವಾಗಿ ಮುಂದುವರೆದಂತೆಲ್ಲ, ಕೆಲವರು ಹೆಸರುಗಳಲ್ಲೂ ಮುಂದುವರೆಕೆಯನ್ನು ಗುರುತಿಸಿಕೊಳ್ಳಲು ಹೊಸ ಹೆಸರುಗಳನ್ನು ಇಟ್ಟುಕೊಳ್ಳುತ್ತಾರೆ. ಅಂದರೆ ಹೆಸರುಗಳಲ್ಲಿಯೂ ಆಧುನಿಕರಾಗಬಯಸುತ್ತಾರೆ. ಚಿತ್ರದುರ್ಗ ಪರಿಸರ ಇದಕ್ಕೆ ಹೊರತಲ್ಲ. ಹಿಂದೆ ಬಳಕೆಯಲ್ಲಿದ್ದ ಕೆಲವು ಹೆಸರುಗಳು ಈಗಲೂ ಬಳಕೆಯಲ್ಲಿ ಉಳಿದಿದ್ದರೆ ಜನ ಆ ಹೆಸರುಗಳನ್ನು ಹಳೆಯ ಹೆಸರುಗಳೆಂದು ಗುರುತಿಸುತ್ತಾರೆ. ಪ್ರಸ್ತುತ ಸಾಮಾಜಿಕ ಸಂದರ್ಭದಲ್ಲಿ ಪಾರಂಪರಿಕ ಹೆಸರುಗಳನ್ನು ಇಟ್ಟುಕೊಳ್ಳುವುದು ಆಧುನಿಕತೆಯನ್ನು ಮೈಗೂಡಿಸಿಕೊಂಡಿರದ, ಸಂಪ್ರದಾಯಸ್ಥ ಜನರು ಮಾತ್ರ ಎಂಬುದು ಮುಂದುವರೆದ ಕೆಲವು ಜನರ ಅಭಿಪ್ರಾಯವಾಗಿದೆ. ಹಳೆಯ ಹೆಸರುಗಳನ್ನು ಇಟ್ಟುಕೊಂಡಿರುವ ಜನ ಅಥವಾ ವ್ಯಕ್ತಿ ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಮುಂದುವರೆದಾಗ ಹಳೆಯ ಹೆಸರುಗಳಿಂದ ಗುರುತಿಸಿಕೊಳ್ಳುವುದು ಕೆಲವರಿಗೆ ಅಸಮಧಾನವನ್ನು ಉಂಟುಮಾಡುತ್ತದೆ. ಅಂಥ ಹೆಸರುಗಳ ಬಗೆಗೆ ಕೀಳರಿಮೆ ಭಾವನೆ ಉಂಟಾಗಿ ಕೆಲವರು ಹೆಸರುಗಳನ್ನು ಬದಲಾಯಿಸಿಕೊಳ್ಳುತ್ತಾರೆ. ಹೀಗೆ ಬದಲಾಯಿಸಿಕೊಳ್ಳುವಾಗ, ಆಧುನಿಕ ಸಮಾಜದ ಹೆಸರುಗಳು ಎಂದು ಭಾವಿಸಲಾಗಿರುವ ಹೊಸ ಹೆಸರುಗಳನ್ನು ಇಟ್ಟುಕೊಳ್ಳುತ್ತಾರೆ. ಇಲ್ಲಿ ಹೆಸರಿನ ಬದಲಾವಣೆ ಪ್ರಕ್ರಿಯೆ ಎರಡು ಪ್ರಕಾರಗಳಲ್ಲಿ ನಡೆಯುತ್ತದೆ.

೧. ಕಾನೂನು ಪ್ರಕಾರ ಬದಲಾಯಿಸಿಕೊಳ್ಳುವುದು

೨. ಮೌಖಿಕವಾಗಿ ಬದಲಾಯಿಸಿಕೊಳ್ಳುವುದು

ಪ್ರಸ್ತುತ ಅಧ್ಯಯನದ ವ್ಯಾಪ್ತಿಯ ಒಳಗೆ ಕಾನೂನಿನನ್ವಯ ಬದಲಾಯಿಸಿಕೊಂಡ ಉದಾಹರಣೆಗಳು ಇರಬಹುದಾದರೂ, ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಆ ಬಗೆಗೆ ಮಾಹಿತಿ ಲಭ್ಯವಾಗಿರುವುದಿಲ್ಲ. ಮೌಖಿಕವಾಗಿ ಬದಲಾಯಿಸಿಕೊಂಡಿರುವ ಹಲವು ನಿದರ್ಶನಗಳು ಲಭ್ಯವಾಗಿವೆ. ಉದಾಹರಣೆಗೆ ಕೆಲವು ನಿದರ್ಶನಗಳನ್ನು ನೋಡಬಹುದು.

ಜವರಯ್ಯ > ಜನಾರ್ಧನ

ಗುಂಡಣ್ಣ > ಗುರುಮೂರ್ತಿ

ಕಲ್ಲಯ್ಯ > ಕರುಣಾಕರ

ಓಬಯ್ಯ > ಓಬಳೇಶ್

ಮಾರಯ್ಯ > ಮಾರೇಶ್

ಕಾಡಪ್ಪ > ಅರುಣ

ಅಡಿವೆಪ್ಪ > ಶಂಕರ

ತಿಪ್ಪಮ್ಮ > ತಾರಾ

ಹುಚ್ಚಮ್ಮ > ಅನಿತ

ದುರುಗಮ್ಮ > ಗೀತ

ಗುಂಡಮ್ಮ > ಶೈಲಜ

ಹೀಗೆ ಹೆಸರು ಬದಲಾಯಿಸಿಕೊಂಡ ನಂತರ ಮೊದಲ ಹೆಸರು (ಹಳೆಯಹೆಸರು) ದಾಖಲೆಗಳಲ್ಲಿ ಮತ್ತು ಬಳಕೆಯಲ್ಲಿ ಬಿಟ್ಟು ಹೋಗಿ, ಹೊಸ ಹೆಸರು ಸೇರ್ಪಡೆಯಾಗುತ್ತದೆ. ಕೆಲವು ಸಂದರ್ಭಗಳಲ್ಲಿ ದಾಖಲೆಗಳಲ್ಲಿ ಹಳೆಯಹೆಸರು ಇದ್ದು, ಬಳಕೆಯಲ್ಲಿ ಇನ್ನೊಂದು ಹೊಸ ಹೆಸರು ಇರಲೂಬಹುದು. ಇನ್ನೂ ಕೆಲವು ಸಂದರ್ಭಗಳಲ್ಲಿ ಸಂಬೋಧನೆಯಲ್ಲಿ ಎರಡೂ ಹೆಸರುಗಳೂ ಬಳಸಲ್ಪಡಬಹುದು. ಚಿತ್ರದುರ್ಗ ಪರಿಸರದಲ್ಲಿ ಈ ಬದಲಾವಣೆ ಪ್ರಕ್ರಿಯೆ ಹೆಚ್ಚಾಗಿ ಕೆಳಜಾತಿ ಮೇಲ್ ಮಧ್ಯಮವರ್ಗದ ವಿದ್ಯಾವಂತ, ಬಾಲ್ಯ ಮತ್ತು ಮಧ್ಯಮ ವಯಸ್ಕರಲ್ಲಿ ಕಾಣಬರುವುದನ್ನು ಗಮನಿಸಬಹುದು.

**೫.೬.೪ ಹೆಸರು : ಮತಾಂತರ**

ಮತಾಂತರ ಪ್ರಕ್ರಿಯೆಗೆ ಸುದೀರ್ಘವಾದ ಪರಂಪರೆಯಿದೆ. ಮತ್ತು ಅದಕ್ಕೆ ಐತಿಹಾಸಿಕ ಮಹತ್ವವೂ ಇದೆ. ಈ ಮತಾಂತರ ಪ್ರಕ್ರಿಯೆ ವ್ಯಕ್ತಿಯ ಸಂಸ್ಕೃತಿ ಬದಲಾವಣೆಗೆ ಕಾರಣವಾಗುವಂತೆ, ಹೆಸರಿನ ಬದಲಾವಣೆಗೂ ಕಾರಣವಾಗುತ್ತದೆ. ಒಂದು ಧರ್ಮವನ್ನು ಬಿಟ್ಟು ಮತ್ತೊಂದು ಧರ್ಮವನ್ನು ಸೇರುವಾಗ, ವ್ಯಕ್ತಿ ತನ್ನ ಪೂರ್ವದ ಹೆಸರನ್ನು ಬಿಟ್ಟು ಬೇರೊಂದು ಹೊಸ ಹೆಸರನ್ನು ಪಡೆದುಕೊಳ್ಳುತ್ತಾನೆ. ಒಂದು ಧರ್ಮದ ಯೋಗ ಹಾಗೂ ಮತ್ತೊಂದು ಧರ್ಮದ ವಿಯೋಗದ ಸಂಕೇತವೇ ಈ ಮರುನಾಮಕರಣ ಅಥವಾ ನಾಮಬದಲಾವಣೆಯ ಮೂಲ ಆಶಯವಾಗಿರುತ್ತದೆ. ಮತಾಂತರ ಸಂದರ್ಭದಲ್ಲಿ ಹೆಸರಿನ ಬದಲಾವಣೆ ಎರಡು ರೀತಿಯಲ್ಲಿ ಆಗುತ್ತದೆ. ಒಂದು - ಮೊದಲ ಹೆಸರನ್ನು ಸಂಪೂರ್ಣವಾಗಿ ತೊರೆದು, ಬೇರೊಂದು ಹೆಸರನ್ನು ಪಡೆಯುವುದು. ಎರಡು - ಹೊಸ ಹೆಸರಿನ ಜತೆ, ಮೊದಲ ಹೆಸರನ್ನು ಹಾಗೆಯೇ ಉಳಿಸಿಕೊಳ್ಳುವುದು. ಮೂಲ ಹೆಸರು ವ್ಯಕ್ತಿಯಿಂದ ದೂರವಾಗದೆ ಹಾಗೆಯೇ ಇದ್ದು, ಇನ್ನೊಂದು ಹೆಸರು ಮೊದಲ ಹೆಸರಿನೊಂದಿಗೆ ಬಂದು ಸೇರುವುದರಿಂದ ಹೆಸರಿನ ರಾಚನಿಕ ಸ್ವರೂಪ ಮತ್ತು ಸಂಬೋಧನೆಯಲ್ಲಿ ವ್ಯತ್ಯಾಸವಾಗುತ್ತವೆ. ಆ ಹಿನ್ನೆಲೆಯಲ್ಲಿ ಇದನ್ನು ಹೆಸರಿನ ಬದಲಾವಣೆಯೆಂದೇ ಗುರುತಿಸಲಾಗಿದೆ. ಹಿಂದೂ ಮತ್ತು ಮುಸ್ಲಿಂ ಧರ್ಮದ ಜನರು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ಪಡೆದಾಗ, ಮೂಲ ಹೆಸರುಗಳಿಗೆ ಬದಲಾಗಿ, ಹೊಸ ಹೆಸರುಗಳನ್ನು ಪಡೆಯುವ ಕೆಲವು ಉದಾಹರಣೆಗಳನ್ನು ಇಲ್ಲಿ ಗಮನಿಸಬಹುದು.

| ಪುರುಷರ ಹೆಸರು<br>ಮೂಲ > ಮತಾಂತರ | ಸ್ತ್ರೀಯರ ಹೆಸರು<br>ಮೂಲ > ಮತಾಂತರ |
|---|---|
| ಲಕ್ಷ್ಮಣ > ಟೋನಿ | ಪಾರ್ವತಮ್ಮ > ರೀಟಾ |
| ಶಿವರಾಜ > ಮಾರ್ ಗ್ರೇಟ್ | ರಾಧಮ್ಮ > ಜಸ್ಸಿ |
| ಮಾರುತಿ > ಜ್ಯೋಸೆಫ್ | ಲಕ್ಷ್ಮೀದೇವಿ > ಮರಿಯ |
| ಮಹದೇವ > ಯೇಸು | ಫಾತಿಮಾ > ಮೇರಿ |
| ಸಲೀಂ > ಆಂಟೋನಿ | ಹಾಲಮ್ಮ > ಲಲಿತ |
| ನಾರಾಯಣ > ನವೀನ್ ಕುಮಾರ್ | ಸೀತ > ತೃಪ್ತಿ |
| ಶಂಕರ > ಪ್ರೇಮ್ ಕುಮಾರ್ | ನಸ್ರೀನ್ > ರಾಣಿ |
| ದುರುಗಪ್ಪ > ಆನಂದ್ | ಬೀಬಿಜಾನ್ > ಪ್ರೇಮ - ಇತ್ಯಾದಿ |

ಭಿನ್ನ ಧರ್ಮಗಳ ನಡುವಿನ ವೈವಾಹಿಕ ಸಂಬಂಧವು ನಾಮ ಬದಲಾವಣೆಗೆ ಕಾರಣವಾಗುತ್ತದೆ. ಕುತೂಹಲದ ಸಂಗತಿಯೆಂದರೆ, ಜಗತ್ತಿನ ಬೇರೆ ಬೇರೆ ಧರ್ಮದ ಜನರು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಳ್ಳುವಂತೆ, ಕ್ರಿಶ್ಚಿಯನ್ ಧರ್ಮದ ಜನರು ಇತರ ಧರ್ಮಗಳಿಗೆ ಮತಾಂತರಗೊಳ್ಳುವಂತೆ ಕಾಣಬರುವುದಿಲ್ಲ. ಕ್ರಿಶ್ಚಿಯನ್ ಧರ್ಮದ ಸ್ತ್ರೀ, ಪುರುಷ ಹಾಗೂ ಇತರ ಯಾವುದೇ ಧರ್ಮದ ಸ್ತ್ರೀ-ಪುರುಷರ ನಡುವೆ ವೈವಾಹಿಕ ಸಂಬಂಧಗಳು ಉಂಟಾದಾಗ, ಹೆಚ್ಚಾಗಿ ಇತರ ಧರ್ಮದ ಸ್ತ್ರೀ-ಪುರುಷರು ತಮ್ಮ ಮೂಲಧರ್ಮವನ್ನು ತೊರೆದು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರವಾಗುತ್ತಾರೆಯೇ ಹೊರತು, ಕ್ರಿಶ್ಚಿಯನ್ ಧರ್ಮದವರನ್ನು ತಮ್ಮ ಧರ್ಮಕ್ಕೆ ಮತಾಂತರಗೊಳಿಸುವುದಿಲ್ಲ. ಅಥವಾ ಕ್ರಿಶ್ಚಿಯನ್ ಧರ್ಮದವರು ಇತರ ಧರ್ಮಕ್ಕೆ ಮತಾಂತರವಾಗುವುದಿಲ್ಲ. ಇದಕ್ಕೆ ಕೆಲವು ಅಪವಾದಗಳೂ ಇರಬಹುದು. ಕ್ರಿಶ್ಚಿಯನ್ ಧರ್ಮ ಜಗತ್ತಿನ ಇತರ ಎಲ್ಲಾ ಧರ್ಮಗಳಿಗಿಂತ ಶ್ರೇಷ್ಠ ಎಂಬುದು ಇತರ ಧರ್ಮದವರ ಭಾವನೆಯಾಗಿದ್ದು, ಅದುವೇ ಇದಕ್ಕೆ ಕಾರಣವಾಗಿರಬಹುದಾದರೂ, ಇದರ ಹಿಂದಿನ ವಾಸ್ತವ ಸತ್ಯ ಶೋಧನೀಯವೆನಿಸಿದೆ.

**೫.೬.೫ ಹೆಸರು : ದೈವ**

ಕರ್ನಾಟಕದಲ್ಲಿ ಅನೇಕ ಪುರುಷ ಮತ್ತು ಸ್ತ್ರೀ ದೈವಗಳಿವೆ. ಸವದತ್ತಿ 'ಎಲ್ಲಮ್ಮ' ಮತ್ತು ಹುಲಿಗಿಯ 'ಹುಲಿಗೆಮ್ಮ' ಪ್ರಸಿದ್ಧ ಸ್ತ್ರೀ ದೇವತೆಗಳೆನಿಸಿವೆ. ಅಪಾರ ಭಕ್ತಸಮೂಹವನ್ನು ಹೊಂದಿರುವ ಈ ದೈವಗಳು ರಾಜ್ಯ ಮತ್ತು ಹೊರ ರಾಜ್ಯಗಳಲ್ಲೆಲ್ಲ ಪ್ರಸಿದ್ಧಿಯನ್ನು ಪಡೆದಿವೆ. ಈ ದೈವಗಳು ಒಲಿದವರಿಗೆ ತಲೆಯಕೂದಲು ಜಡೆಕಟ್ಟುತ್ತವೆ. ಇದನ್ನು 'ಮುಡಿ ಜಡೆ' ಕಟ್ಟುವುದು ಎಂದು ಕರೆಯುತ್ತಾರೆ.

ಇವರನ್ನು ಜೋಗತಿಯರು, ಜೋಗಮ್ಮನವರು, ಹುಲಿಗೆಮ್ಮನವರು, ಖೋಜಾಗಳು ಎಂಬ ಮೊದಲಾದ ಅಭಿಧಾನಗಳಿಂದ ಕರೆಯುವುದು ರೂಢಿ. ಇದರಲ್ಲಿ ಪುರುಷ ಮತ್ತು ಸ್ತ್ರೀ ಇಬ್ಬರೂ ಇರುತ್ತಾರೆ. ಸ್ತ್ರೀಯರನ್ನು ಹೆಣ್ಣು ಜೋಗಮ್ಮ, ಹುಲಿಗೆಮ್ಮನವರು ಎಂದೂ, ಪುರುಷರನ್ನು ಗಂಡು ಜೋಗಮ್ಮ/ಜೋಗಿ, ಹುಲಿಗೆಮ್ಮ ಎಂದೂ ಕರೆಯಲಾಗುತ್ತದೆ. ಸ್ತ್ರೀಯರು ಜೋಗತಿಯರಾದರೆ ಲೌಕಿಕವಾಗಿ ಅವರಲ್ಲಿ ಯಾವುದೇ

ಬದಲಾವಣೆ ಆಗುವುದಿಲ್ಲ. ಆದರೆ ಪುರುಷರು ಸ್ತ್ರೀ ರೂಪವನ್ನು ಪಡೆಯುತ್ತಾರೆ. ಪುರುಷ ಉಡುಪಿಗೆ ಬದಲು, ಸೀರೆ, ಕುಪ್ಪಸ, ಬಳೆ ಮೊದಲಾದ ಸ್ತ್ರೀ ಉಡುಪುಗಳನ್ನು ಧರಿಸುತ್ತಾರಲ್ಲದೆ, ಸ್ತ್ರೀಯರ ಹಾಗೆ ಮಾತನಾಡುವುದನ್ನು ರೂಢಿಸಿಕೊಳ್ಳುತ್ತಾರೆ. ಅದೇ ರೀತಿ ಹೆಸರನ್ನು ಕೂಡ ಬದಲಾಯಿಸಿಕೊಳ್ಳುವುದುಂಟು. ಇಲ್ಲಿ ಹೆಸರನ್ನು ಬದಲಾಯಿಸಿಕೊಳ್ಳುವುದು ಎಂದರೆ, ಪುರುಷನಿದ್ದಾಗ ಇದ್ದ ಹೆಸರು ಅಥವಾ ಮೊದಲ ಹೆಸರನ್ನು ಬಿಟ್ಟು ಬೇರೆ ಹೆಸರನ್ನು ಪಡೆಯುವುದಿಲ್ಲ. ಬದಲಿಗೆ ಮೊದಲಿದ್ದ ಹೆಸರಿಗೆ (ನಿರ್ದಿಷ್ಟ ಭಾಗಕ್ಕೆ) ಸ್ತ್ರೀ ಸಂಬಂಧಸೂಚಕ ವಾರ್ಗಿಕಗಳನ್ನು ಅಂಟಿಸಿಕೊಂಡು ಸ್ತ್ರೀ ಹೆಸರನ್ನಾಗಿ ಪರಿವರ್ತನೆ ಮಾಡಿಕೊಳ್ಳುತ್ತಾರೆ. ನಿದರ್ಶನಕ್ಕೆ ಕೆಲವು ಉದಾಹರಣೆಗಳನ್ನು ನೋಡಬಹುದು.

ನಾಗಪ್ಪ > ನಾಗಮ್ಮ

ತಿಮ್ಮಣ್ಣ > ತಿಮ್ಮಕ್ಕ

ತಿಪ್ಪಯ್ಯ > ತಿಪ್ಪಮ್ಮ/ತಿಪ್ಪಕ್ಕ

ಹನುಮಂತಪ್ಪ > ಹನುಮಕ್ಕ/ಹನುಮಂತಮ್ಮ

ಇಲ್ಲಿ ಪುರುಷವಾಚಿ ವಾರ್ಗಿಕಗಳಿಗೆ ಬದಲಾಗಿ ಸ್ತ್ರೀವಾಚಿ ವಾರ್ಗಿಕಗಳನ್ನು ಮಾತ್ರ ಸೇರಿಸುತ್ತಾರೆ. ಹೆಸರಿನ ನಿರ್ದಿಷ್ಟ ಭಾಗ ಮಾತ್ರ ಮೊದಲ ಹೆಸರಿನದೇ ಆಗಿರುತ್ತದೆ. ಇವರಲ್ಲಿ ಪೂರ್ಣ ಹೆಸರನ್ನು ಬದಲಿಸುವುದು ಅಂದರೆ ಮೊದಲ ಹೆಸರನ್ನು ಕೈಬಿಟ್ಟು ಹೊಸ ಹೆಸರನ್ನು ಪಡೆದಂತೆ ಕಾಣುವುದಿಲ್ಲ. 'ಎಲ್ಲಮ್ಮ' ಮತ್ತು 'ಹುಲಿಗೆಮ್ಮ' ಸ್ತ್ರೀ ದೇವತೆಗಳಾಗಿರುವುದೇ ಇಲ್ಲಿ ಹೆಸರಿನ ಬದಲಾವಣೆಗೆ ಕಾರಣ. ಹೆಸರಿನ ರಾಚನಿಕ ಸ್ವರೂಪದಲ್ಲಿ ಯಾವುದೇ ಬದಲಾವಣೆ ಆಗದಿದ್ದರೂ 'ಲಿಂಗ' ಸೂಚಕದಲ್ಲಿ ಬದಲಾವಣೆಯಾಗುತ್ತದೆ. ಇದರಿಂದಾಗಿ ಅದು ಅರ್ಥ ಬದಲಾವಣೆಯನ್ನುಂಟು ಮಾಡುತ್ತದೆ. ಆ ಹಿನ್ನೆಲೆಯಲ್ಲಿ ಇದನ್ನು ಹೆಸರಿನ ಬದಲಾವಣೆ ಎಂದು ಕರೆಯಬಹುದು. ಮತದಾರರ ಪಟ್ಟಿ ಹಾಗೂ ಇತರ ಸಂದರ್ಭಗಳಲ್ಲಿ ಇವರ ಹೆಸರನ್ನು ದಾಖಲಿಸುವಾಗ, ಸ್ತ್ರೀ ಹೆಸರಾಗಿಯೇ ಬಳಸುತ್ತಾರೆ. ಹಾಗೂ ಸಂಬೋಧನೆಯಲ್ಲಿ ಸ್ತ್ರೀಯರನ್ನು ಸಂಬೋಧಿಸಿದಂತೆ ಸಂಬೋಧಿಸಲಾಗುವುದು.

ಒಟ್ಟಿನಲ್ಲಿ ನಾಮಕರಣ ಮತ್ತು ಹೆಸರಿನ ಸುತ್ತ ಹುಟ್ಟಿಕೊಂಡಿರುವ ನಂಬಿಕೆ, ಸಂಪ್ರದಾಯಗಳು ಪ್ರಾಚೀನ ಕಾಲದ ಮಾನವನಿಗೆ ಹೆಸರಿನ ಬಗೆಗೆ ಇದ್ದ ಕಾಳಜಿ ಮತ್ತು ಆಲೋಚನಾ ವಿಧಾನವನ್ನು ಪ್ರತಿಬಿಂಬಿಸುತ್ತವೆ. ಮಾಟ-ಮಂತ್ರದ ಬಗೆಗಿನ ಭಯವೇ ಬಹುತೇಕ ಈ ನಂಬಿಕೆ ಸಂಪ್ರದಾಯಗಳ ಹಿಂದಿರುವ ರಹಸ್ಯ. ಪ್ರಸ್ತುತ ಸಾಮಾಜಿಕ ಸಂದರ್ಭದಲ್ಲಿ ಜನರ ಆಲೋಚನೆಗಳು ಹಿಂದೆಗಿಂತ ಇಂದು ಬೇರೆಯಾಗಿವೆ. ಹೆಸರಿನ ಬಗೆಗಿನ ನಂಬಿಕೆಗಳು ಕ್ರಮೇಣ ಜನರಲ್ಲಿ ಕಡಿಮೆಯಾಗುತ್ತಿವೆ. ಹೆಸರುಗಳ ಬಗೆಗೆ ಮನಶಾಸ್ತ್ರ, ಜಾನಪದಶಾಸ್ತ್ರ ಅಧ್ಯಯನಗಳಿಗಿಂತ, ಭಾಷಾಶಾಸ್ತ್ರದ ಅಧ್ಯಯನಗಳು ಹೆಸರಿನ ನಂಬಿಕೆಗಳನ್ನು ಕಡಿಮೆ ಮಾಡಿವೆ.

## ೫.೭. ಅಡ್ಡಹೆಸರು

ಅಡ್ಡಹೆಸರುಗಳು ವ್ಯಕ್ತಿನಾಮಾಧ್ಯಯನದ ಬಹು ಸ್ವಾರಸ್ಯಕರವಾದ ಭಾಗವಾಗಿದೆ. ಅಡ್ಡ ಹೆಸರು ಎಂದರೇನು? ಯಾವುದು, ಯಾವ ಕಾರಣದಿಂದ ಅಡ್ಡ ಹೆಸರೆಂದು ಕರೆಯಲ್ಪಡುತ್ತದೆ? ಅದರ ಸ್ವರೂಪ,

ಬಳಕೆಯ ಆವರಣ ಮೊದಲಾದ ಸಂಗತಿಗಳ ಬಗೆಗೆ ನಮ್ಮಲ್ಲಿ ಚರ್ಚೆಗಳಿವೆ. ಅಡ್ಡಹೆಸರಿನ ಬಗೆಗೆ ಭೌಗೋಳಿಕವಾಗಿ ಭಿನ್ನ ಪರಿಕಲ್ಪನೆಗಳಿವೆ. ಈ ವೈವಿಧ್ಯಮಯ ಭಾವನೆಗಳು ಅಡ್ಡ ಹೆಸರನ್ನು ಸಂಕೀರ್ಣಗೊಳಿಸಿವೆ.

ನಿರ್ದೇಶನ ನಾಮದ ನಂತರ ವ್ಯಕ್ತಿಗೆ ಯಾವುದೇ ಘಟ್ಟದಲ್ಲಿ ಬಂದು ಸೇರುವ ಹೆಸರೇ 'ಅಡ್ಡಹೆಸರು'. ವ್ಯಕ್ತಿಗೆ ಮಧ್ಯಂತರದಲ್ಲಿ ಅಥವಾ ಅರ್ಧದಲ್ಲಿ ಬಂದು ಅಂಟುವ ಕಾರಣದಿಂದಾಗಿ ಈ ಹೆಸರನ್ನು 'ಅರ್ಧಹೆಸರು' ಎಂದು ಅನ್ವರ್ಥಕವಾಗಿ ಕರೆಯಲಾಗಿದ್ದು, ಅರ್ಧ ಹೆಸರು ಎಂಬುದೇ, ಅಡ್ಡಹೆಸರು ಎಂದಾಗಿರಬಹುದು. 'ಅರ್ಧ' ತತ್ಸಮ ಪದದ ತದ್ಭವ ರೂಪ 'ಅಡ್ಡ'. ಕನ್ನಡದಲ್ಲಿ ಅಡ್ಡ ಎಂಬ ಪದಕ್ಕೆ ನಾನಾರ್ಥಗಳಿವೆಯಾದರೂ, 'ಮಧ್ಯೆ' ಎಂಬ ಅರ್ಥವೂ ಇದೆ. 'ಅಡ್ಡ' ಮಾತನಾಡಬೇಡ. 'ಅಡ್ಡ' ಬಾಯಿ ಹಾಕಬೇಡ' ಎಂದರೆ ಮಾತಿನ 'ಮಧ್ಯೆ' ಮಾತನಾಡಬೇಡ ಎಂದರ್ಥ. ಈ ಹಿನ್ನೆಲೆಯಲ್ಲಿ 'ಅಡ್ಡಹೆಸರು' ವ್ಯಕ್ತಿಗೆ ಮಧ್ಯದಲ್ಲಿ ಸೇರುವ ಹೆಸರು ಎಂದು ಹೇಳಬಹುದು. "ಅಡ್ಡಹೆಸರು' ಎಂಬ ಪದ ನೇರವಲ್ಲದ ಹೆಸರು ಎಂಬ ಅರ್ಥದಲ್ಲಿ ಬಂದಿರಬಹುದು. ಇಲ್ಲವೆ ಅರ್ಧಹೆಸರು > ಅಡ್ಡ ಹೆಸರಾಗಿರಬಹುದು."[೫೦] ಡಾ. ಎಂ.ಚಿದಾನಂದಮೂರ್ತಿಯವರು ತಮ್ಮ ವಾಗರ್ಥ ಕೃತಿಯಲ್ಲಿ (ಪುಟ ೧೮೧) ಅಡ್ಡಪದದ ವ್ಯುತ್ಪತ್ತಿ ಬಗೆಗೆ ಚರ್ಚಿಸಿದ್ದಾರೆ. ವಿವರಣೆಗೆ ಈ ಕೃತಿಯನ್ನು ಗಮನಿಸಬಹುದು. ಚಿತ್ರದುರ್ಗ ಪರಿಸರದ ಮ್ಯಾಸನಾಯಕರಲ್ಲಿ ಅಡ್ಡಹೆಸರಿನ ಬಗೆಗೆ ಒಂದು ಮಾತು ರೂಢಿಯಲ್ಲಿದೆ. ಅಡ್ಡ ಹೆಸರಿನಿಂದ ಸಂಬೋಧಿಸಿದರೆ, "ಪೀತಿಡ್ಲು ಗುಗ್ಗಿಡ್ಲು ಏಸಿ ಪೆಟ್ಟಿಂಟಿವೇಮಿ" ('ಪೀತಿಡ್ಲು' ಎಂಬುದು ಶಿಷ್ಟತೆಲುಗಿನ 'ಪಿಯ್ಯ' ಶಬ್ದಕ್ಕೆ ಮ್ಯಾಸನಾಯಕರ ಪ್ರಾದೇಶಿಕ ತೆಲುಗಿನಲ್ಲಿ ಸಂವಾದಿಯಾಗಿ ಬಳಕೆಯಾಗುವ ಪದ. ತೆಲುಗಿನ 'ಪಿಯ್ಯ' ಶಬ್ದಕ್ಕೆ ಕನ್ನಡದಲ್ಲಿ ಸಂವಾದಿ ಪದ 'ಹೇಲು') ಅಂದರೆ ಹೇಲು ಗುಗ್ಗರಿ ಹಾಕಿ ಇಟ್ಟಿದ್ದೇನು? ಎಂಬುದು ಇದರರ್ಥ. ಈ ಮಾತಿನಲ್ಲಿ 'ಅಡ್ಡಹೆಸರು' ನಿರ್ದೇಶನಗೊಂಡ ಹೆಸರಾಗಿರದೆ, ಮಧ್ಯದಲ್ಲಿ ಬಂದು ಸೇರುವಂಥದ್ದು ಎಂಬ ಸೂಚನೆ ವ್ಯಕ್ತವಾಗುವುದನ್ನು ಗಮನಿಸಬಹುದು.

'ಅಡ್ಡಹೆಸರು' ಬಗೆಗಿನ ಪರಿಕಲ್ಪನೆ ಉತ್ತರ ಮತ್ತು ದಕ್ಷಿಣ ಕರ್ನಾಟಕದಲ್ಲಿ ಬೇರೆ ಬೇರೆಯಾಗಿದೆ. ಉತ್ತರ ಕರ್ನಾಟಕದಲ್ಲಿ 'ಅಡ್ಡಹೆಸರು' ಎಂಬುದನ್ನು ಇಂಗ್ಲೀಶ್‌ನ "Surname" ಎಂಬ ಅರ್ಥದಲ್ಲಿಯೂ, ದಕ್ಷಿಣ ಕರ್ನಾಟಕದಲ್ಲಿ ಅಡ್ಡಹೆಸರು ಎಂಬುದನ್ನು ಇಂಗ್ಲಿಶ್‌ನ "Nick name" ಎಂಬ ಅರ್ಥದಲ್ಲಿಯೂ ಸಂವಾದಿಯಾಗಿ ಬಳಸಲಾಗುತ್ತದೆ. 'Surname' ಮತ್ತು 'Nickname' ಎಂಬ ಪದಗಳು ಒಂದಕ್ಕೊಂದು ಪರ್ಯಾಯಸೂಚಕವಾಗಿ ಬಳಸಲ್ಪಡುತ್ತವೆ. 'Surname' ಎಂಬುದು ಒಂದು ಮನೆತನಕ್ಕೆ ಸಂಬಂಧಿಸಿದ್ದು, ತಲೆಮಾರಿನಿಂದ ತಲೆಮಾರಿಗೆ ಮುಂದುವರೆದರೆ, 'Nickname' ಎಂಬುದು ಒಬ್ಬ ವ್ಯಕ್ತಿಗೆ ಮಾತ್ರ ಸಂಬಂಧಿಸಿರುತ್ತದೆ. ಈ ಹೆಸರನ್ನು ಇಡುವುದು ಬಹುತೇಕ ತಮಾಷೆ ಅಥವಾ ಕುಚೋದ್ಯಕ್ಕಾಗಿ. ಚಿತ್ರದುರ್ಗ ಪರಿಸರದಲ್ಲಿ 'ಅಡ್ಡಹೆಸರು' ಎಂಬುದು 'Nickname' ಎಂಬ ಅರ್ಥದಲ್ಲಿ ಬಳಸಲ್ಪಡುತ್ತದೆ. ಇಲ್ಲಿ 'ಅಡ್ಡಹೆಸರುಗಳು' ವ್ಯಕ್ತಿಯ ಯಾವುದಾದರೊಂದು ವೈಶಿಷ್ಟ್ಯವನ್ನು ಅನುಲಕ್ಷಿಸಿ ಹುಟ್ಟಿಕೊಳ್ಳುತ್ತವೆ. ವ್ಯಕ್ತಿಯ ಆಕಾರದ ಯಾವುದೋ ದೋಷ ಅಥವಾ ವೈಶಿಷ್ಟ್ಯವನ್ನು ಒಮ್ಮೆ ಯಾರೋ ನಾಲ್ಕಾರು ಜನರ ಮುಂದೆ ಕುಚೋದ್ಯಕ್ಕಾಗಿ ಕರೆದುದು, ಅಡ್ಡಹೆಸರಾಗಿ ವ್ಯಕ್ತಿಗೆ ಅಂಟಬಿಡುತ್ತದೆ. ಸಾಮಾನ್ಯವಾಗಿ ಅಡ್ಡಹೆಸರುಗಳು ವ್ಯಕ್ತಿಯ ಶಾರೀರಕ ಲಕ್ಷಣ, ಎತ್ತರ, ಬಣ್ಣ, ಗುಣ, ರೂಪ, ನೋಟ, ನಡಿಗೆ, ಮಾತು, ಧ್ವನಿ ಹಾಗೂ

ಕುಡಿಯುವುದು, ಸೇದುವುದು, ತಿನ್ನುವುದು, ಜೂಜು, ಜಂಬ, ಚಾಡಿ ಇವೇ ಮೊದಲಾದ ವರ್ತನೆಗಳು ಜನರಿಗೆ ಎದ್ದುಕಾಣುವ ಗುಣಗಳು. ಅವುಗಳನ್ನೇ ದೊಡ್ಡದುಮಾಡಿ ಅಡ್ಡಹೆಸರು ಇಡುತ್ತಾರೆ. ಹೀಗೆ ಇಟ್ಟ ಅಡ್ಡಹೆಸರು ಜನರಲ್ಲಿ ಬಳಕೆಗೆ ಬಂದು ವ್ಯಕ್ತಿಯ ಅನಧಿಕೃತ ನಾಮವಾಗಿ ಬಳಕೆಯಾಗುತ್ತದೆ. ಕೆಲವು ಸಂದರ್ಭಗಳಲ್ಲಿ 'ಅಡ್ಡಹೆಸರು' ಅಧಿಕೃತನಾಮದ ಭಾಗವಾಗಿಯೂ ಪರಿಣಮಿಸುತ್ತದೆ. ಒಮ್ಮೆ ವ್ಯಕ್ತಿಗೆ ಅಡ್ಡಹೆಸರು ಅಂಟಿದರ ಅದರಿಂದ ಬಿಡುಗಡೆಯೇ ಇಲ್ಲ. ವ್ಯಕ್ತಿ ಎದುರಿಗೆ ಇರುವಾಗ ಅಡ್ಡಹೆಸರಿನಿಂದ ಕರೆದರೆ ಸಹನವಾಗುವುದಿಲ್ಲ. ಪ್ರತಿಭಟಿಸಬಹುದು. ಆ ಕಾರಣಕ್ಕಾಗಿ ಅಡ್ಡಹೆಸರು ವ್ಯಕ್ತಿಯ ಗೈರುಹಾಜರಿಯಲ್ಲಿ ಬಳಸಲ್ಪಡುತ್ತದೆ. ಉದಾಹರಣೆಗೆ ತುಂಬಾ ಕಡಿಮೆ ಮಾತಾಡುವ ವ್ಯಕ್ತಿಯನ್ನು 'ಮೂಕ' ಎಂದು ಅಡ್ಡಹೆಸರಿನಿಂದ ಸಂಬೋಧಿಸುವುದುಂಟು. ವ್ಯಕ್ತಿ ಹಾಜರಿ ಇರುವಾಗ 'ಮೂಕ' ಎಂದು ಕರೆದರೆ ವಿರೋಧಿಸಬಹುದು ಎಂದು ಹೆದರಿ ಆ ಕ್ಷಣ ಜನ ಸುಮ್ಮನೆ ಇರಬಹುದು. ಆದರೆ ಗೈರು ಹಾಜರಿಯಲ್ಲಿ ಆ ವ್ಯಕ್ತಿಯನ್ನು 'ಮೂಕ' ಎಂದೇ ಸಂಬೋಧಿಸಬಹುದು. ಕೆಲವು ಸಂದರ್ಭಗಳಲ್ಲಿ ವ್ಯಕ್ತಿಯ ಎದುರಿಗೆ ಇರುವಾಗ ಅಡ್ಡಹೆಸರಿನಿಂದ ಸಂಬೋಧಿಸುತ್ತಾರೆ. ಆದರೂ ಅಡ್ಡಹೆಸರಿನ ಸಂಬೋಧನೆಗೆ ತುಂಬಾ ಮಿತಿಗಳಿವೆ. ಈ ಲಕ್ಷಣಗಳು ಚಿತ್ರದುರ್ಗ ಪರಿಸರದಲ್ಲಿ ಕಾಣಬರುತ್ತಿರುವಂತೆ, ಕರ್ನಾಟಕದ ಇತರ ಪರಿಸರಗಳಲ್ಲಿಯೂ ಗೋಚರಿಸಬಹುದು.

ಚಿತ್ರದುರ್ಗ ಪರಿಸರದಲ್ಲಿ ಅಡ್ಡಹೆಸರುಗಳು ಸಾಮಾನ್ಯವಾಗಿ ವ್ಯಕ್ತಿಯ ಶಾರೀರಕ ಅಂಗ ವೈಶಿಷ್ಟ್ಯಗಳನ್ನು ಅನುಲಕ್ಷಿಸಿ ಹುಟ್ಟಿಕೊಂಡ ಅನ್ವರ್ಥನಾಮಗಳಾಗಿರುತ್ತವೆ. ವ್ಯಕ್ತಿಯ ಯಾವ ದೋಷ ಇಲ್ಲವೆ ವೈಶಿಷ್ಟ್ಯಗಳಿಂದ ಎಂಥ ಅಡ್ಡಹೆಸರುಗಳು ಅಂಟುತ್ತವೆ ಎಂಬುದನ್ನು ತಿಳಿಯಲು ಮಾದರಿಗಾಗಿ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿರುವ ಕೆಲವು ಅಡ್ಡಹೆಸರುಗಳನ್ನು ಇಲ್ಲಿ ಗಮನಿಸಬಹುದು.

ಅಧ್ಯಯನದ ಅನುಕೂಲಕ್ಕಾಗಿ ಅಡ್ಡ ಹೆಸರುಗಳನ್ನು ಈ ರೀತಿ ವರ್ಗೀಕರಿಸಿಕೊಳ್ಳಬಹುದು.

೧. ಶರೀರವಾಚಿ ಅಡ್ಡಹೆಸರು

೨. ಪ್ರಾಣಿವಾಚಿ ಅಡ್ಡಹೆಸರು

೩. ವಸ್ತುವಾಚಿ ಅಡ್ಡಹೆಸರು

೪. ಗುಣವಾಚಿ ಅಡ್ಡಹೆಸರು

೫. ವ್ಯಕ್ತಿವಾಚಿ ಅಡ್ಡಹೆಸರು

೬. ಇತರೆ ಅಡ್ಡಹೆಸರು

### ೫.೭.೧ ಶರೀರವಾಚಿ ಅಡ್ಡಹೆಸರು

ವ್ಯಕ್ತಿಯ ಶಾರೀರಕ ವೈಲಕ್ಷಣಗಳನ್ನು ನೇರವಾಗಿ ಸೂಚಿಸುವ ಹೆಸರುಗಳು ಶರೀರವಾಚಿ ಅಡ್ಡಹೆಸರುಗಳಾಗಿವೆ. ಉದಾಹರಣೆಗೆ

| ಅಡ್ಡಹೆಸರು | ವಿವರಣೆ/ಕಾರಣ |
|---|---|
| ಕುಂಟ/ಟಿ | ಕಾಲು ಊನವಾದವನು/ಳು |
| ಕಿವುಡ/ಡಿ | ಕಿವಿ ಮಂದವಾಗಿರುವವನು/ಳು |
| ಮೂಕ/ಕಿ | ಕಡಿಮೆ ಮಾತಾಡುವವನು/ಳು |
| ಸೊಂಟ/ಟಿ | ಕೈ ಊನವಾದವನು/ಳು |
| ರೊಡ್ಡ/ಡ್ಡಿ | ಎಡಗೈ ಮುಂದು ಬಳಸುವವನು/ಳು |
| ಕುಲ್ಡ/ಕುಲ್ಡಿ | ಕಣ್ಣಿನ ದೋಷವುಳ್ಳವನು/ಳು |
| ಕಣ್ಣುಪಿಳಕ/ಕಿ - ಕುಣ್ಣಬಡಕ/ಕಿ | ಸದಾ ಕಣ್ಣರೆಪ್ಪೆ ಬಡಿಯುವವನು/ಳು |
| ಗಿಡ್ಡ/ಡ್ಡಿ | ಕುಳ್ಳಗೆ ಇರುವವನು/ಳು |
| ಲಂಬು | ತೆಳ್ಳಗೆ ಉದ್ದವಾಗಿರುವವನು/ಳು |
| ಮೂಗ/ಗಿ | ಮೂಗಿನ ಹೊರಳು ಅಗಲವಾಗಿರುವವನು/ಳು |
| ಉಗ್ಗ/ಗ್ಗಿ - ಗುಕ್ಕ/ಕ್ಕಿ | ತೊದಲು ಮಾತಾಡುವವನು/ಳು |
| ಉಬ್ಬ/ಬ್ಬಿ - ಹಲ್ಲುಬೀರ/ರಿ | ಹಲ್ಲು ಉಬ್ಬಾಗಿರುವವನು/ಳು |
| ಬೋಡ/ಡಿ | ತಲೆಯಲ್ಲಿ ಕೂದಲು ಇಲ್ಲದಿರುವವನು/ಳು |
| ಎಳವ/ವಿ | ತೆಳ್ಳನೆ ಕಾಲು ಇರುವವನು/ಳು |
| ಗೂನ/ನಿ | ಬೆನ್ನು ಗೂನಾಗಿರುವವನು/ಳು |
| ಸೆಟಗ/ಗಿ | ಕಾಲು ಸೆಟೆ ಹಿಡಿದು ನಡೆಯುವವನು/ಳು |
| ಕರಿಯ/ಕರಿಪಿ | ಕಪ್ಪಾಗಿರುವವನು/ಳು |
| ಕೆಂಪ/ಪಿ | ಕೆಂಪಾಗಿರುವವನು/ಳು |
| ಸೊಟ್ಟ/ಟ್ಟಿ | ಡೊಂಕು ನಡೆಯುವವನು/ಳು |
| | ಕಾಲು ಡೊಂಕಾಗಿರುವವನು/ಳು |
| ತ್ಯಾಟ್ಕರುಕ/ಕಿ | ತುಟಿ ಹರಿದಿರುವವನು/ಳು |
| ಒಗ್ಗಣ್ಣ/ಣ್ಣಿ | ಒಂದು ಕಣ್ಣುದೋಷದಿಂದ ಕೂಡಿರುವವನು/ಳು |
| ಒಪ್ಪರ್ರಿ | ಒಂದೇ ಮಗ್ಗುಲಿನಿಂದ ನೋಡುವವನು/ಳು |
| ಕೆರಕ/ಕಿ | ಸದಾ ಪರಚುವವನು/ಳು |

## ೫.೭.೨ ಪ್ರಾಣಿವಾಚಿ ಅಡ್ಡಹೆಸರುಗಳು

ವ್ಯಕ್ತಿಯ ದೋಷ ಅಥವಾ ವಿಶೇಷ ಗುಣಗಳನ್ನು ಪ್ರಾಣಿಗಳ ಸಹಜ ಲಕ್ಷಣಗಳೊಂದಿಗೆ ಆರೋಪಮಾಡಿ ಇಟ್ಟ ಅನ್ವರ್ಥಕ ನಾಮಗಳೆ, ಪ್ರಾಣಿವಾಚಿ ಅಡ್ಡ ಹೆಸರುಗಳು. ಉದಾಹರಣೆ

| ಅಡ್ಡಹೆಸರು | ವಿವರಣೆ/ಕಾರಣ |
|---|---|
| ಒಂಟೆ | ಉದ್ದವಾಗಿರುವವನು/ಳು |
| ಜಿರಾಫೆ | ಎತ್ತರವಾಗಿದ್ದು, ಕತ್ತು ಉದ್ದವಾಗಿರುವವನು/ಳು |
| ಆನೆ (ಆನೆಮರಿ) | ದಪ್ಪಗೆ ಇರುವವನು/ಳು |
| ಕಪ್ಪೆ (ವಟಗ/ಗಿ) | ಕಪ್ಪೆ ಒಟಗುಟ್ಟುವಂತೆ, ಸದಾ ವಟವಟ ಎಂದು ಮಾತಾಡುವವನು/ಳು |
| ಕೋಳಿ | ತೆಳ್ಳಗೆ ಇರುವವನು/ಳು |
| ಕರಡಿ | ಮೈತುಂಬ ಕೂದಲು ಇರುವವನು/ಳು |
| ನಾಯಿ | ಬಾಯಿಗೆ ಬಂದ್ಹಂಗೆ ಮಾತಾಡುವವನು/ಳು |
|  | ಉಗುರಿನಿಂದ ಕ್ರೂರವಾಗಿ ಜಿಗರುವವನು/ಳು |
| ಹಂದಿ | ದಪ್ಪಗಿರುವವನು/ಳು |
| ಕೋಣ/ಎಮ್ಮೆ | ದಪ್ಪಗಿರುವವನು/ಳು |
| ಗೂಬೆ | ದೊಡ್ಡಕಣ್ಣು ಇರುವವನು/ಳು |
|  | ಮೌನವಾಗಿದ್ದು, ದೃಷ್ಟಿಸಿ ನೋಡುವವನು/ಳು |
| ಗೋರಿಲ್ಲ | ಆದಿಮಾನವನ ಮುಖಚಹರೆವುಳ್ಳವನು/ಳು |
| ಮುಂಗಸಿ | ಗುಮ್ಮನಂತೆ ಮುಖಲಕ್ಷಣ ಇರುವವನು/ಳು |
| ಗುಂಗಾಡಿ | ಕಣ್ಣಲ್ಲಿ ಹನಿ ನೀರಿಲ್ಲದೆ, ಯಾವಾಗಲೂ ಅಳುವ ಸ್ವಭಾವವುಳ್ಳವನು/ಳು |
| ಚೇಳು | ಬೆನ್ನಿನ ಹಿಂದೆ ಚೂರಿ ಹಾಕುವವನು/ಳು |
|  | ಕಾಣದ ಹಾಗೆ ಮೋಸ ಮಾಡುವವನು/ಳು |
| ಮೊಸಳೆ | ತುಟಿ ಮುಚ್ಚಲಾರದಷ್ಟು ದೊಡ್ಡ ಹಲ್ಲು ಇರುವವನು/ಳು |
| ಗಂಗೆತ್ತು(ಗಂಗೆ ಎತ್ತು) | ಯಾವಾಗಲೂ ಮನೆ ಮನೆ ಸುತ್ತುವವನು/ಳು |

ಮೇಲೆ ಸೂಚಿಸಿರುವ ಪ್ರಾಣಿವಾಚಿ ಅಡ್ಡಹೆಸರುಗಳು ಯಾವುದೋ ಒಂದು ನಿರ್ದಿಷ್ಟ ಕಾರಣದಿಂದ ಬರದೆ, ಬೇರೆ ಬೇರೆ ಕಾರಣಗಳಿಂದಲೂ ಬರುವ ಸಾಧ್ಯತೆಗಳಿವೆ. ಕ್ಷೇತ್ರಕಾರ್ಯದಲ್ಲಿ ವಕ್ತೃಗಳು ನೀಡಿದ ಕಾರಣಗಳನ್ನು ಮಾತ್ರ ಇಲ್ಲಿ ಯಥಾವತ್ತಾಗಿ ದಾಖಲಿಸಲಾಗಿದೆ. ಪ್ರಾಣಿವಾಚಿ ಅಡ್ಡ ಹೆಸರುಗಳು ಇತರ ಬೇರೆ ಕಾರಣಗಳಿಂದಲೂ ವ್ಯಕ್ತಿಗೆ ಅಂಟಬಹುದು. ಉದಾಹರಣೆಗೆ "ಪಾಲಯ್ಯ' ಎಂಬ ಹೆಸರಿನ ವ್ಯಕ್ತಿ ಮೇಕೆ ಕಾಯಲು ಅಡವಿಗೆ ಹೋದ ಸಂದರ್ಭದಲ್ಲಿ ಕರಡಿ ಕಚ್ಚಿತ್ತು. ಆ ಕಾರಣದಿಂದ ಆ ವ್ಯಕ್ತಿಗೆ 'ಕಲ್ಡಿ' (<ಕರಡಿ) ಎಂಬ ಅಡ್ಡಹೆಸರು ಅಂಟಿದೆ. ಆ ವ್ಯಕ್ತಿಯ ಜೀವನದಲ್ಲಿ ಈ ಅಡ್ಡಹೆಸರು ಮುಂದುವರೆದು, ಅಧಿಕೃತ ನಾಮವಾಗಿ (ಕಲ್ಡೆಪ್ಪ) ಪರಿಣಮಿಸಿರುವುದು ತಿಳಿದುಬರುತ್ತದೆ." "ನಿಂಗಪ್ಪ' ಎಂಬ ಹೆಸರಿನ ವ್ಯಕ್ತಿಗೆ ಹುಚ್ಚುನಾಯಿ ಕಚ್ಚಿದ್ದ ಕಾರಣ ಜನ ಆ ವ್ಯಕ್ತಿಯನ್ನು 'ನಾಯಿ' ಎಂಬ ಅಡ್ಡಹೆಸರಿನಿಂದ ಸಂಬೋಧಿಸುತ್ತಾರೆ." ಅಡ್ಡಹೆಸರಿನ ಬಳಕೆಗೂ ವಿಶೇಷ ಘಟನಾವಳಿಗಳು ವ್ಯಕ್ತಿಯ ಅಧಿಕೃತನಾಮ ನಿರ್ದೇಶನಕ್ಕೆ ಕಾರಣವಾಗುವಂತೆ, 'ಅಡ್ಡಹೆಸರಿನ ಬಳಕೆಗೂ ಪ್ರೇರಣೆಯಾಗುತ್ತಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ.

### ೫.೭.೩ ವಸ್ತುವಾಚಿ ಅಡ್ಡಹೆಸರುಗಳು

ವ್ಯಕ್ತಿಯ ಶಾರೀರಕ ಅಥವಾ ಗುಣವೈಶಿಷ್ಟಗಳನ್ನು ವಸ್ತುಗಳ ಲಕ್ಷಣಗಳೊಂದಿಗೆ ಆರೋಪಮಾಡಿ ಇಟ್ಟ ಹೆಸರುಗಳು ವಸ್ತುವಾಚಿ ಅಡ್ಡಹೆಸರುಗಳಾಗಿವೆ. ಉದಾಹರಣೆಗೆ

| ಅಡ್ಡಹೆಸರು | ವಿವರಣೆ/ಕಾರಣ | |
|---|---|---|
| ಬಡಿಗಿ | ತೆಳ್ಳಗೆ, ಎತ್ತರನಾಗಿರುವವನು/ಳು | |
| ಡೊಳ್ಳು | ದೊಡ್ಡ ಹೊಟ್ಟೆ ಇರುವವನು/ಳು | |
| ಡ್ರಮ್ಮು | ದಪ್ಪಗೆ ಇರುವವನು/ಳು | |
| ಸೋಡಾಗ್ಲಾಸ್ | ಕಣ್ಣಿಗೆ ಚಸ್ಮ ಹಾಕಿರುವವನು/ಳು | |
| ಡಾಂಬರ್ | ಕಪ್ಪನೆ ಬಣ್ಣ ಇರುವವನು/ಳು | |
| ಕಡ್ಡಿಪುಡಿ | ಸದಾ ಬಾಯಲ್ಲಿ ತಾಂಬೂಲ ತಿನ್ನುವವನು/ಳು | |
| ದೊಣ್ಣೆಮೆಣಸಿನಕಾಯಿ | ಮೂಗು ದಪ್ಪನಾಗಿರುವವನು/ಳು | |
| ಗೊಣ್ಣೆ/ಳ್ಳಿ | ಸದಾ ಮೂಗಿನಲ್ಲಿ ಸಿಂಬಳ ಸೋರುವವನು/ಳು | |
| ಪಾಕೆಟ್ | ಹೆಚ್ಚು ಸರಾಯಿ ಕುಡಿಯುವವನು/ಳು | |
| ಬಂಗಿ/ಚಿಲುಮೆ | ಯಾವಾಗಲೂ ಗಾಂಜಾ ಸೇದುವವನು | |
| ತೊಂಡೆಹಣ್ಣು/ಟೊಮಟೊ | ಕೆಂಪಗೆ ಇರುವವನು/ಳು | |
| ಕೊಲ್ಡು (< ಕೊರಡು) | ದಪ್ಪಗೆ ಇರುವವನು/ಳು | - ಇತ್ಯಾದಿ |

ಪ್ರಾಣಿವಾಚಿ ಅಡ್ಡೆಹೆಸರುಗಳಂತೆ, ವಸ್ತುವಾಚಿ ಅಡ್ಡಹೆಸರುಗಳೂ ಸಹ ಬೇರೆ ಬೇರೆ ಕಾರಣಗಳಿಂದ ಅಂಟುತ್ತವೆ. ಅಂದರೆ ಒಂದೇ ಅಡ್ಡಹೆಸರು ಹಲವು ಬೇರೆ ಬೇರೆ ಕಾರಣಗಳಿಂದ ಬರುವುದುಂಟು. ಮೇಲಿನ ಅಡ್ಡಹೆಸರುಗಳಿಗೆ ವಕ್ತೃಗಳು ನೀಡಿದ ಕಾರಣಗಳನ್ನು ಮಾತ್ರ ಇಲ್ಲಿ ದಾಖಲಿಸಲಾಗಿದೆ.

### ೫.೭.೪ ಗುಣವಾಚಿ ಅಡ್ಡಹೆಸರುಗಳು

ವ್ಯಕ್ತಿಯ ಗುಣ ಸ್ವಭಾವಗಳ ಪ್ರೇರಣೆಯಿಂದ ಇಟ್ಟ ಅಡ್ಡಹೆಸರುಗಳನ್ನು ಗುಣವಾಚಿ ಅಡ್ಡಹೆಸರುಗಳೆಂದು ಕರೆಯಬಹುದು. ಉದಾಹರಣೆಗೆ

| ಅಡ್ಡಹೆಸರು | ವಿವರಣೆ/ಕಾರಣ |
|---|---|
| ಚಕ್ಕ/ಹೆಣ್ಣಾಡಿಗ | ಹೆಂಗಸರ ಗುಣಸ್ವಭಾವ ಇರುವ ಗಂಡಸು |
| ಉರುಕ/ಕಿ | ಬೇಗನೆ ಕೋಪಿಸಿಕೊಳ್ಳುವವನು/ಳು |
| ಪಿಟ್ಟಿ (< ಪಿಂಟ್ಲಿ) | ಚಾಡಿ ಹೇಳುವವನು |
| ಅರಕ್ಲ/ಕ್ಲಿ | ಸದಾ ಜಗಳ ಮಾಡುವವನು/ಳು |
| ಸಪಟೆ/ಟಿ | ಸುಳ್ಳು ಹೇಳುವವನು/ಳು |

| | |
|---|---|
| ಮೊಂಡ/ಡಿ | ಹಠ ಮಾಡುವವನು/ಳು |
| ಉಂಬ/ಬಿ | ಹೆಚ್ಚು ಊಟ ತಿನ್ನುವವನು/ಳು |
| ಸೂಗ | ಪುರುಷತ್ವ ಇಲ್ಲದ ಗಂಡಸು |
| ಚಾಡಿ | ಒಬ್ಬರ ವಿಷಯವನ್ನು ಮತ್ತೊಬ್ಬರಿಗೆ ಹೇಳುವವನು/ಳು |
| ದೊಂದು | ಮಂದಬುದ್ಧಿ ಮತ್ತು ನಿಧಾನವಾದ ನಡಿಗೆಯುಳ್ಳವನು/ಳು |
| ಅಪ್ಪಳ ಮಾಡೋ ಚಿಪ್ಪೆ | ಗಂಡು ಜೋಗಮ್ಮನವರ ಹಾಗೆ ಮಾಡುವವನು |
| ಸ್ಟಂಟ್ | ಒಂದು ಬಗೆಯ ಅಹಂನಿಂದ ಬೀಗುವವನು/ಳು |
| ಗುಮ್ಮ | ಯಾವಾಗಲೂ ಗಂಟುಮುಖ ಹಾಕಿಕೊಂಡು ಮಾತಾಡದೆ ಇರುವವನು |
| ಭಂಡ/ಭಂಡಿ | ಕೇಳಿದ್ದನ್ನು ತಕ್ಷಣವೆ ಕೊಡದೆ ಇರುವವನು/ಳು |
| | ಅಸತ್ಯವನ್ನು ಸತ್ಯವೆಂದು ಸಾಧಿಸುವವನು/ಳು |

### ೫.೭.೫ ವ್ಯಕ್ತಿವಾಚಿ ಅಡ್ಡಹೆಸರುಗಳು

ಇತಿಹಾಸದಲ್ಲಿ ಆಗಿಹೋದ ವ್ಯಕ್ತಿಗಳ ಹೆಸರು ಅಡ್ಡಹೆಸರಿನ ನಿರ್ದೇಶನಕ್ಕೆ ಪ್ರೇರಣೆಯಾಗುತ್ತದೆ. ಅಂದಿನ ಆ ವ್ಯಕ್ತಿಗಳ ಗುಣ ಸ್ವಭಾವಗಳು ಇತರ ವ್ಯಕ್ತಿಗಳಲ್ಲಿ ಕಾಣಿಸಿಕೊಂಡರೆ ಜನ ಆ ವ್ಯಕ್ತಿಗಳ ಹೆಸರನ್ನು ಅಡ್ಡಹೆಸರುಗಳಾಗಿ ಇಡುವುದುಂಟು. ಉದಾಹರಣೆಗೆ ಕೆಲವು ಹೆಸರುಗಳನ್ನು ನೋಡಬಹುದು

| ಅಡ್ಡಹೆಸರು | ವಿವರಣೆ/ಕಾರಣ |
|---|---|
| ಕುಂಭಕರ್ಣ | ಹೆಚ್ಚು ಊಟ ತಿನ್ನುವವನು ಮತ್ತು ಹೆಚ್ಚು ನಿದ್ರೆ ಮಾಡುವವನು. |
| ನಾರದ | ಒಬ್ಬರ ವಿಷಯ ಮತ್ತೊಬ್ಬರಿಗೆ ಹೇಳುವವನು |
| ಶಕುನಿ | ಇಬ್ಬರ ಮಧ್ಯೆ ಜಗಳ ಇಡುವವನು |
| ಕರಿಬಂಟ | ಕಪ್ಪಗೆ ಇರುವವನು |
| ಕೃಷ್ಣ | ಒಬ್ಬರಿಗಿಂತ ಹೆಚ್ಚು ಜನರನ್ನು ಮದುವೆಯಾದವನು ಅಥವಾ ಹೆಚ್ಚು ಜನ ಪ್ರೇಯಸಿರನ್ನು ಹೊಂದಿದವನು. |
| ದ್ರೌಪದಿ | ಒಬ್ಬರಿಗಿಂತ ಹೆಚ್ಚು ಜನ ಪ್ರಿಯಕರರನ್ನು ಹೊಂದಿರುವವಳು |
| ಕುಂತಿ | ಮದುವೆಗೆ ಮುಂಚೆ ಮಕ್ಕಳನ್ನು ಪಡೆದವಳು |

ಈ ಅಡ್ಡಹೆಸರುಗಳು ವ್ಯಕ್ತಿಯ ವ್ಯಕ್ತಿತ್ವದ ಮೇಲೆ ನೇರ ಪರಿಣಾಮ ಬೀರುವುದರಿಂದ, ಅಂದರೆ ವ್ಯಕ್ತಿತ್ವಕ್ಕೆ ಧಕ್ಕೆ ಉಂಟುಮಾಡುವುದರಿಂದ, ಈ ಹೆಸರುಗಳನ್ನು ವ್ಯಕ್ತಿಯ ಹಾಜರಿಯಲ್ಲಿ ಬಳಸುವುದಿಲ್ಲ. ಕೆಲವೇ ಕೆಲವು ಜನರ ಮಧ್ಯೆ ತುಂಬಾ ಗೌಪ್ಯವಾಗಿ ಈ ಹೆಸರುಗಳು ಬಳಕೆಯಾಗುತ್ತಿರುತ್ತವೆ. ಬಹುತೇಕ ಸಲ ಇಂಥ ಅಡ್ಡಹೆಸರುಗಳು ವ್ಯಕ್ತಿಗೆ ಇರುವುದು ಗೊತ್ತಿಲ್ಲದೆ ಇರಲೂಬಹುದು.

### ೫.೭.೬ ಇತರ ಅಡ್ಡಹೆಸರುಗಳು

ಮೇಲಿನ ವರ್ಗಕ್ಕೆ ಸೇರದ ಎಷ್ಟೋ ಅಡ್ಡಹೆಸರುಗಳು ಇಲ್ಲಿ ಬಳಕೆಯಲ್ಲಿರುವುದು ಕಾಣಬರುತ್ತದೆ. ಬೆಂಕಿ, ತಗಾದಿ, ಬಿಪಿ, ಷುಗರ್, ಸೂಜಿ, ಕೂದಲು, ಛೀಗು, ಜೋಳ, ಬೆಲ್ಲ, ನಾಲ್ಕುನೂರಾ ಇಪ್ಪತ್ತು (Four Twenety), ನಿಂಬೆ, ಬದನೆಕಾಯಿ ಮೊದಲಾದ ಇವುಗಳೆಲ್ಲವೂ ಚಿತ್ರದುರ್ಗ ಪರಿಸರದಲ್ಲಿ ಅಡ್ಡಹೆಸರುಗಳಾಗಿ ಬಳಕೆಯಲ್ಲಿವೆ ಎಂಬುದು ಗಮನಾರ್ಹ.

ವ್ಯಕ್ತಿ ಜೀವನದಲ್ಲಿ ಸಂಭವಿಸಿದ ಆಕಸ್ಮಿಕ ಘಟನೆಯೂ ಅಡ್ಡಹೆಸರಿಗೆ ಪ್ರೇರಣೆಯಾಗಬಹುದು. ಉದಾಹರಣೆಗೆ "ತಿಪ್ಪೇಸ್ವಾಮಿ' ಎಂಬ ಹೆಸರಿನ ವ್ಯಕ್ತಿ ಗಣೇಶನ ವಿಸರ್ಜನೆ ಮಾಡಲು ಹೋಗುವ ಸಮಯದಲ್ಲಿ ಕಾಲುಜಾರಿ ಬಿದ್ದ ಕಾರಣ ಆ ವ್ಯಕ್ತಿಗೆ 'ಗಣಪ' ಎಂಬ ಅಡ್ಡಹೆಸರು ಅಂಟಿದೆ."[೫೪] "ಚಿತ್ರದುರ್ಗ ಪರಿಸರದಲ್ಲಿ ಮ್ಯಾಸನಾಯಕರು 'ತೀಡೆಮಣೆ' (ಸೊಪ್ಪು ಮಸೆಯುವ ಸಾಧನ)ಗೆ 'ಕೂರಗುತ್ತಿ' ಎಂದು ಕರೆಯುತ್ತಾರೆ. ಮಲ್ಲಯ್ಯ' ಹೆಸರಿನ ವ್ಯಕ್ತಿ 'ಕೂರಗುತ್ತಿ' ಎಂದು ಉಚ್ಚರಿಸುವ ಬದಲು, 'ಕೂಗುತ್ತಿ' ಎಂದು, 'ರ' ಕಾರ ಲೋಪಮಾಡಿ ಉಚ್ಚರಿಸಿದ್ದರಿಂದ ಅವರಿಗೆ 'ಕೂಗುತ್ತಿ' ಎಂದೇ ಅಡ್ಡಹೆಸರಿನಿಂದ ಕರೆಯಲಾಗುತ್ತಿದೆ."[೫೫] ಪ್ರಸಿದ್ಧ ವ್ಯಕ್ತಿಗಳ ಹೆಸರು ವ್ಯಕ್ತಿಯ ನಿಜನಾಮಕ್ಕೆ ಪ್ರೇರಣೆಯಾಗುವಂತೆ ಅಡ್ಡಹೆಸರಿಗೂ ಪ್ರೇರಣೆಯಾಗುತ್ತದೆ. "ಮಂಜುನಾಥ ಎಂಬ ವ್ಯಕ್ತಿ ತುಂಬಾ ದಪ್ಪಗೆ ಇರುವುದರಿಂದ ಜನ ಆ ವ್ಯಕ್ತಿಯನ್ನು 'ದೊಡ್ಡಣ್ಣ' (ಚಲನಚಿತ್ರ ನಟ) ಎಂದು ಅಡ್ಡಹೆಸರಿನಿಂದ ಸಂಬೋಧಿಸುತ್ತಾರೆ."[೫೬] "'ನಾಗರಾಜ' ಎಂಬ ಹೆಸರಿನ ವ್ಯಕ್ತಿ ಕಳ್ಳತನ ಮಾಡುತ್ತಿದ್ದರಿಂದ ಅವರಿಗೆ 'ವೀರಪ್ಪನ್' ಎಂಬ ಅಡ್ಡಹೆಸರು ಬಂದಿದೆ."[೫೭] ಅಂದರೆ ಒಬ್ಬ ವ್ಯಕ್ತಿಯ ಅಧಿಕೃತ ನಾಮ ಇನ್ನೊಬ್ಬ ವ್ಯಕ್ತಿಗೆ ಅಡ್ಡಹೆಸರಾಗಿ ಬಳಕೆಯಾಗುತ್ತಿರುವುದು ಕುತೂಹಲಕರವಾದ ಸಂಗತಿಯೆನಿಸಿದೆ. ಅಡ್ಡಹೆಸರುಗಳ ಕುರಿತು ಇಲ್ಲಿ ಮಾಡಿಕೊಂಡಿರುವ ವರ್ಗೀಕರಣ ಒಂದು ತಾತ್ಕಾಲಿಕ ಪ್ರಯತ್ನ ಮಾತ್ರ. ಈ ವಿಭಾಗಕ್ರಮ ಇತರ ಪರಿಸರದ ಅಡ್ಡಹೆಸರುಗಳ ಸ್ವರೂಪಕ್ಕೆ ಅನ್ವಯಿಸಬಹುದು ಅನ್ವಯಿಸದಿರಬಹುದು. ಕುತೂಹಲದ ಸಂಗತಿಯೆಂದರೆ, ಸಾಮಾನ್ಯವಾಗಿ ಗುಣವಾಚಕ ಪದಗಳೇ ಹೆಚ್ಚಾಗಿ ಅಡ್ಡಹೆಸರುಗಳಾಗಿ ಬಳಕೆಯಾಗುತ್ತಿರುವುದು. 'ನಾಯಿ', 'ಒಂಟೆ', 'ಕುಂಭಕರ್ಣ', 'ಶಕುನಿ' ಮೊದಲಾದ ಪದಗಳು ಪ್ರಾಣಿವಾಚಿ, ವ್ಯಕ್ತಿವಾಚಿ ನಾಮಪದಗಳಾಗಿದ್ದರೂ ಒಬ್ಬ ವ್ಯಕ್ತಿಗೆ ಅಡ್ಡಹೆಸರುಗಳಾಗಿ ಬಳಕೆಯಾಗುವಾಗ (ನಾಮಪದಗಳ ಅರ್ಥದಲ್ಲಿ ಬಳಕೆಯಾಗದೆ) ಗುಣವಾಚಕ ಪದಗಳಾಗಿ ಬಳಕೆಯಾಗುತ್ತಿರುವುದನ್ನು ಗಮನಿಸಬಹುದು. ಆ ಕಾರಣದಿಂದಾಗಿ ಕೆಲವು ಅಡ್ಡಹೆಸರುಗಳನ್ನು ಒಂದಕ್ಕಿಂತ ಹೆಚ್ಚು ವರ್ಗಗಳಲ್ಲಿ ಸೇರಿಸಬಹುದು. ಅಂದರೆ ಮೇಲಿನ ಈ ವರ್ಗೀಕರಣದ ಪ್ರಕಾರ ಕೆಲವು ಅಡ್ಡಹೆಸರುಗಳನ್ನು ನಿರ್ದಿಷ್ಟ ವರ್ಗದಲ್ಲಿ ಗುರುತಿಸುವುದು ಕಷ್ಟ. ಇದು ಪ್ರಸ್ತುತ ಅಧ್ಯಯನದ ಮಿತಿ ಎಂದೇ ಹೇಳಬಹುದು.

ನಿಜನಾಮ, ಕುಲನಾಮಗಳಂತೆ, 'ಅಡ್ಡಹೆಸರು' ಸಹ ವ್ಯಕ್ತಿಯನ್ನು ಖಚಿತವಾಗಿ ಗುರುತಿಸಲು ಸಹಾಯಕ್ಕೆ ಬರುತ್ತದೆ. ಕೆಲವು ಸಂದರ್ಭಗಳಲ್ಲಿ ನಿಜನಾಮ ಕುಲನಾಮಗಳು ಮಾಡದ ಕೆಲಸವನ್ನು ಅಡ್ಡಹೆಸರು ನೆರವೇರಿಸಬಹುದು. ಆ ಹಿನ್ನೆಲೆಯಲ್ಲಿ ಅಡ್ಡಹೆಸರು ತನ್ನದೇ ಆದ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಒಮ್ಮೆ ಯಾವುದೋ ಕಾರಣದಿಂದ ವ್ಯಕ್ತಿಗೆ ಅಂಟಿದ ಅಡ್ಡಹೆಸರು ವ್ಯಕ್ತಿಯ ಜೀವನದುದ್ದಕ್ಕೂ ಇರುತ್ತದೆ. ಅದನ್ನು ಬಳಸುವ ಜನರ ಪ್ರಮಾಣದಲ್ಲಿ ವ್ಯತ್ಯಾಸಗಳು ಇರಬಹುದು. ಹೀಗೆ ಅನಧಿಕೃತವಾಗಿ ಬಳಕೆಯಾಗುವ

ಅಡ್ಡಹೆಸರು, ಕಾಲಾಂತರದಲ್ಲಿ ಅಧಿಕೃತನಾಮದ ಜೊತೆ ಸೇರಿಹೋಗಿ ಹೆಸರಿನ ಭಾಗವೇ ಆಗಿ ಮುಂದುವರೆಯಬಹುದು.

ಅಡ್ಡಹೆಸರುಗಳು ಅಧಿಕೃತ ನಾಮದ ಭಾಗವಾಗಿ ಬಳಕೆಯಾಗುವ ಪ್ರಕ್ರಿಯೆಯನ್ನು ಕೆಲವು ನಿದರ್ಶನಗಳ ಮೂಲಕ ಹೀಗೆ ಚರ್ಚಿಸಬಹುದು.

| ಅಡ್ಡ ಹೆಸರು ಅನಧಿಕೃತ ಬಳಕೆ | ವಯಸ್ಸು | ಅಡ್ಡಹೆಸರು ಅಧಿಕೃತ ನಾಮದ ಭಾಗವಾಗಿ ಬಳಕೆಯಾಗುವುದು | ವಯಸ್ಸು | ಜಾತಿ | ಊರು | ತಾಲೂಕು |
|---|---|---|---|---|---|---|
| ಕೆಂಗಮೀಸೆ | ೨೦ | ಕೆಂಗಮೀಸೆ ಪಾಲಯ್ಯ | ೪೨ | ನಾಯಕ | ಗುಡ್ಡದರಂಗವ್ವನಹಳ್ಳಿ | ಚಿತ್ರದುರ್ಗ |
| ಕಿವುಡ | ೫-೬ | ಕಿವುಡ ಬಸಯ್ಯ | ೩೬ | ಲಿಂಗಾಯತ | ಪರಶುರಾಂಪುರ | ಚಳ್ಳಕೆರೆ |
| ತೊನ್ನು | ೧೪ | ತೊನ್ನು ದುರುಗಪ್ಪ | ೨೨ | ಮಾದಿಗ | ಚಿತ್ರದುರ್ಗ | ಚಿತ್ರದುರ್ಗ |
| ಬೋಡಿ | ೪೦ | ಬೋಡಿ ತಿಮ್ಮಯ್ಯ | ೪೮ | ಭೋವಿ | ಕೊಂಡ್ಲಳ್ಳಿ | ಮೊಳಕಾಲ್ಮೂರು |
| ಊದು | ೨೮ | ಊದು ಗಂಗಪ್ಪ | ೩೩ | ಚಲವಾದಿ | ಹೊಸದುರ್ಗ | ಹೊಸದುರ್ಗ |
| ಗೂರು | ೪೩ | ಗೂರು ಶರಣಮ್ಮ | ೫೦ | ನಾಯಕ | ಹೊಳಲ್ಕೆರೆ | ಹೊಳಲ್ಕೆರೆ |

ಮೇಲಿನ ಪಟ್ಟಿಯನ್ನು ಗಮನಿಸಿದರೆ, ಅಡ್ಡಹೆಸರುಗಳು ಮೊದಮೊದಲು ಅನಧಿಕೃತನಾಮಗಳಾಗಿ ಬಳಕೆಯಾಗುತ್ತಿದ್ದು, ಕಾಲಾಂತರದಲ್ಲಿ, ಅಡ್ಡಹೆಸರು ನಿಜನಾಮದ ಅಂಗವಾಗಿ ವಿಲೀನವಾಗಿರುವುದನ್ನು ಇಲ್ಲಿನ ಉದಾಹರಣೆಗಳಿಂದ ತಿಳಿಯಬಹುದಾಗಿದೆ.

ಅಡ್ಡಹೆಸರು ಅನಧಿಕೃತನಾಮವಾಗಿ ಬಳಕೆಯಾಗುತ್ತಿದ್ದು, ನಿಜನಾಮದ ಭಾಗವಾಗಿ ಸೇರಿ ಹೋಗಿ ವ್ಯಕ್ತಿ ಗತಿಸಿದ ನಂತರವೂ ಆ ಅಡ್ಡಹೆಸರು ಆ ಮನೆತನದಲ್ಲಿ ಸ್ಥಿರವಾಗಿ ನಿಲ್ಲಬಹುದು. ಅಂದರೆ ಅಡ್ಡಹೆಸರು ಕುಲನಾಮವಾಗಿ ಪರಿಣಮಿಸಿ ತಲೆಮಾರಿನಿಂದ ತಲೆಮಾರಿಗೆ ಮುಂದುವರೆಯುತ್ತದೆ. ನಿದರ್ಶನಕ್ಕೆ ಕೆಲವು ಹೆಸರುಗಳನ್ನು ನೋಡಬಹುದು.

| ೧ನೇ ತಲೆಮಾರು | ಅಡ್ಡಹೆಸರು | ೨ನೇ ತಲೆಮಾರು | ೩ನೇ ತಲೆಮಾರು | ಜಾತಿ | ಊರು | ತಾಲೂಕು |
|---|---|---|---|---|---|---|
| ತಿಪ್ಪಯ್ಯ | ನಂಗಿ | ನಂಗಿಬೋರಯ್ಯ | ಎನ್.ಮಲ್ಲೇಶಿ | ನಾಯಕ | ತುರುವನೂರು | ಚಿತ್ರದುರ್ಗ |
| ಹನುಮಯ್ಯ | ಗೂನು | ಗೂನುಬಸಪ್ಪ | ಜಿ.ರಾಮಣ್ಣ | ಗೊಲ್ಲ | ಹೊಳಲ್ಕೆರೆ | ಹೊಳಲ್ಕೆರೆ |
| ಕರಿಯಪ್ಪ | ಕಿವುಡ | ಕಿವುಡ ಪಾತಪ್ಪ | ಕೆ.ನಾಗರಾಜ | ಕುರುಬ | ನಾಯ್ಕನಟ್ಟಿ | ಚಳ್ಳಕೆರೆ |
| ಬಸಪ್ಪ | ಕರಿಯ | ಕರಿಯ ನಿಂಗಪ್ಪ | ಕೆ.ಸಿದ್ದಪ್ಪ | ಲಿಂಗಾಯತ | ಚಿತ್ರದುರ್ಗ | ಚಿತ್ರದುರ್ಗ |
| ಸೂರಯ್ಯ | ಗುಕ್ಕು | ಗುಕ್ಕುಸೂರಯ್ಯ | ಜಿ.ತಿಪ್ಪೇಶ್ | ನಾಯಕ | ತಳಕು | ಚಳ್ಳಕೆರೆ |
| ಭೀಮಪ್ಪ | ಗೂರು | ಗೂರುಹನುಮಂತ | ಜಿ.ಆನಂದ | ಭೋವಿ | ತುಮಕೂರ್ಲಹಳ್ಳಿ | ಮೊಳಕಾಲ್ಮೂರು |

ಈ ಪಟ್ಟಿಯ ಹೆಸರುಗಳನ್ನು ಗಮನಿಸಿದರೆ, ೧ನೇ ತಲೆಮಾರಿನಲ್ಲಿ ವ್ಯಕ್ತಿಗೆ ಯಾವುದೋ ಕಾರಣದಿಂದ ಅಂಟಿದ ಅಡ್ಡಹೆಸರು ಆ ವ್ಯಕ್ತಿಯ ಹೆಸರಿನ ಅಧಿಕೃತ ಭಾಗವಾಗಿರದೆ, ಅನಧಿಕೃತವಾಗಿ ಮಾತ್ರ ಬಳಕೆಯಲ್ಲಿದೆ. ೨ನೆಯ ತಲೆಮಾರಿಗೆ ಅಡ್ಡಹೆಸರು ಅಧಿಕೃತನಾಮದ ಭಾಗವಾಗಿ ಸೇರಿದೆ. ಕುತೂಹಲದ ಸಂಗತಿಯೆಂದರೆ ೨ನೆಯ ತಲೆಮಾರಿನವರ ಹೆಸರುಗಳಲ್ಲಿ ಮೊದಲ ತಲೆಮಾರಿನ ವ್ಯಕ್ತಿಗೆ ಅಡ್ಡಹೆಸರಾಗಿದ್ದ ಹೆಸರು, ೨ನೆಯ ತಲೆಮಾರಿನವರ ಹೆಸರುಗಳಲ್ಲಿ

ಅಧಿಕೃತನಾಮದ ಭಾಗವಾಗಿರುವುದರಿಂದ, ಅದು ಅಡ್ಡಹೆಸರಿನ ಅರ್ಥವನ್ನು ಕಳೆದುಕೊಂಡು, ಮನೆತನದ ಅಥವಾ ಕುಲನಾಮದ ಅರ್ಥದಲ್ಲಿ ಬಳಕೆಯಾಗುವುದನ್ನು ಗಮನಿಸಬಹುದು. ಹೀಗೆ ಅಡ್ಡಹೆಸರು ಮನೆತನದ ಹೆಸರಾಗಿ ಪರಿವರ್ತನೆಯಾದಾಗ, ಮುಂದಿನ ತಲೆಮಾರುಗಳಲ್ಲಿ ಅದರ ಬಳಕೆ ಕಡ್ಡಾಯವಾಗಿ ಬಳಸಲ್ಪಡುತ್ತದೆ. ಅಡ್ಡಹೆಸರು ಅಧಿಕೃತನಾಮದ ಜತೆ ಸೇರಿ ಹೋಗಿ, ಅವೆರಡು ಒಂದು ಸಹಜ ಅಖಂಡ ಹೆಸರಾಗಿ ಬಳಕೆಗೆ ಬರುತ್ತವೆ. ಬಹಳ ಮುಖ್ಯ ಸಂಗತಿಯೆಂದರೆ ಅಡ್ಡಹೆಸರುಗಳು ವ್ಯಕ್ತಿಯನ್ನು ವರ್ಣಿಸುತ್ತಿದ್ದು, ಅನ್ವರ್ಥಕ ನಾಮಗಳಾಗಿರುತ್ತವೆ ಎಂಬುದು. ಆದರೆ ಅಡ್ಡಹೆಸರು ಅರ್ಥಪಲ್ಲಟಗೊಂಡು ಕುಲನಾಮವಾಗಿ ಬಳಸಲ್ಪಡುವಾಗ, ಅಡ್ಡಹೆಸರಿನ ಪದದ ಅರ್ಥಕ್ಕೂ, ವ್ಯಕ್ತಿಯ ವ್ಯಕ್ತಿತ್ವಕ್ಕೂ ಯಾವುದೇ ಸಂಬಂಧ ಇರುವುದಿಲ್ಲ. ಅಂದರೆ ಅಡ್ಡಹೆಸರು ವ್ಯಕ್ತಿಯನ್ನು ವರ್ಣಿಸುವುದಿಲ್ಲ. ಹೆಸರಿಸುತ್ತದೆ ಮಾತ್ರ. ಅಥವಾ ಅಡ್ಡಹೆಸರು ಅಂಕಿತನಾಮವಾಗಿ ಬಳಕೆಯಾಗಬಹುದು. "ಕರಿಸಿದ್ದಪ್ಪ, ಗುಂಡಬಸಪ್ಪ, ಈ ಹೆಸರುಗಳು ಹಿಂದಿನವರಿಗೆ ಅನ್ವರ್ಥಕವಾಗಿದ್ದರೆ, ಈಗ ಅಂಕಿತನಾಮವಾಗುತ್ತದೆ."[೫೮] ಇಂಥ ಸಂದರ್ಭಗಳಲ್ಲಿ ಈ ಹೆಸರುಗಳ ಬಗೆಗೆ ಯಾವುದೇ ಪ್ರತಿರೋಧ ಇರುವುದಿಲ್ಲ.

ಅಡ್ಡಹೆಸರುಗಳು ಇಂದು ಬಳಕೆಯಲ್ಲಿರುವಂತೆ ಹಿಂದೆಯೂ ಕ್ವಚಿತ್ತಾಗಿ ಬಳಕೆಯಲ್ಲಿದ್ದವು ಎಂಬುದಕ್ಕೆ ಕಾವ್ಯ, ಶಾಸನಗಳಲ್ಲಿ ಕೆಲ ನಿದರ್ಶನಗಳು ದೊರಕುತ್ತವೆ. ಉದಾಹರಣೆಗೆ 'ಹೊಟ್ಟೆಯ ಕಾಳಿಸೆಟ್ಟಿ', 'ಕಿರುಗೂದಲು ಚಾಳುಕ್ಯಾಭರಣ ಗಾವುಂಡ', 'ಹೊನ್ನೋತಿಯ ಮುದ್ದಿಸೆಟ್ಟಿ', 'ಗಲ್ಲದ ಕಲೆಯ ಬಾಚಿಸೆಟ್ಟಿ', 'ಕರಿಯಬೊಮ್ಮ', 'ಸುಲಿಹಲ್ಲ ನಾರಸಿಂಹದೇವ', 'ಬಯ್ಯುಲೆಯ ಸೋಹರಸ', 'ಎಡವಚಟ್ಟಿ ಶೆಟ್ಟಿ' - ಮೊದಲಾದವು. ಮೇಲಿನ ಈ ಶಾಸನೋಕ್ತ ಅಡ್ಡಹೆಸರುಗಳು ಎಲ್ಲವೂ ತಮಾಷೆಯಿಂದಲೇ ಬಂದಿರದೇ, ವ್ಯಕ್ತಿಯನ್ನು ಖಚಿತವಾಗಿ ಗುರುತಿಸಲು ಸಹಜವಾಗಿಯೇ ಬಂದಿರಬಹುದು. ಪೂರ್ವಜರಿಗಿದ್ದ ಅಡ್ಡಹೆಸರು ಹೆಚ್ಚು ಬಳಕೆಯ ಪರಿಣಾಮವಾಗಿ, ಅಧಿಕೃತನಾಮದ ಭಾಗವಾಗಿ ಸೇರಿ ಬಂದಿರುವ ಸಾಧ್ಯತೆಗಳೂ ಇವೆ. ಅಂದರೆ ಅದು ಮನೆತನದ ಹೆಸರಾಗಿ ಬಳಕೆಯಾಗಿರಬಹುದು.

### ೫.೭.೭ ಅಡ್ಡಹೆಸರು : ಬಳಕೆ

ಅಡ್ಡಹೆಸರಿನ ಸಂಬೋಧನೆ, ಅಧಿಕೃತನಾಮದ ಸಂಬೋಧನೆಯಂತೆ ವೈವಿಧ್ಯಮಯವಾಗಿದೆ. ಅಡ್ಡಹೆಸರು ವ್ಯಕ್ತಿಯ ದೌರ್ಬಲ್ಯಗಳನ್ನು ಅಭಿವ್ಯಕ್ತಿಸುವುದರಿಂದ ನೇರ ಸಂಬೋಧನೆಯಲ್ಲಿ ಅಡ್ಡಹೆಸರನ್ನು ಬಳಸುವುದಿಲ್ಲ. ಅದರ ಬಳಕೆ ನಿಷಿದ್ಧವಾಗಿರುತ್ತದೆ. " 'Nickname' ಅಂದರೆ, The name given to a person is contempt Ridicule ಎಂದೂ ಇದೆ. ಅಂದರೆ ಒಬ್ಬನನ್ನು ಹೀಯಾಳಿಸಲು, ಕೀಳಾಗಿಕಾಣಲು, ಕೆಲವೇಳೆ ವಿಡಂಬಿಸಲು ಸಣ್ಣಗುಂಪು ಇಲ್ಲವೆ ನಾಲ್ಕಾರು ಜನ ಕೂಡಿ ಇಟ್ಟ ಹೆಸರು. ಈ ಹೆಸರಿನಿಂದ ಅವನನ್ನು ಸಾರ್ವಜನಿಕವಾಗಿ ಗುರುತಿಸುವುದಿಲ್ಲ."[೫೯] ಅಡ್ಡಹೆಸರಿನಿಂದ ಕರೆದರೆ ವ್ಯಕ್ತಿಗೆ ಅಪಮಾನ, ಅಗೌರವ ಎಸಗಿದಂತಾಗುತ್ತದೆ. ಪರಿಣಾಮವಾಗಿ ವ್ಯಕ್ತಿಗೆ ನೋವು, ದು:ಖ ಉಂಟಾಗುತ್ತದೆ. ಆ ಕಾರಣದಿಂದಾಗಿ ಅಡ್ಡಹೆಸರಿನ ಬಳಕೆ ಬಹಿರಂಗವಾಗಿರದೆ, ಗೌಪ್ಯವಾಗಿ ಬಳಸಲ್ಪಡುತ್ತದೆ. ಅಂದರೆ ವ್ಯಕ್ತಿಯ ಗೈರು ಹಾಜರಿಯಲ್ಲಿ ಅಡ್ಡಹೆಸರು ಪ್ರಯೋಗವಾಗುತ್ತಿದ್ದು, ಅಧಿಕೃತ ನಾಮದ ಸ್ಥಾನವನ್ನು ತುಂಬುತ್ತದೆ. ಅಡ್ಡಹೆಸರಿನ

ಪ್ರಯೋಗದಿಂದ ಜನರ ನಡುವೆ ಸಂಘರ್ಷಗಳು ಉಂಟಾಗಿ, ಕೋರ್ಟುಮೆಟ್ಟಿಲು ಹತ್ತಿರುವ ನಿದರ್ಶನಗಳುಂಟು. ಇದನ್ನು ಗಮನಿಸಿದರೆ ಅಡ್ಡಹೆಸರಿನ ಬಳಕೆ ಎಷ್ಟೊಂದು ಸಂಕೀರ್ಣವಾದುದು ಎಂಬುದು ವೇದ್ಯವಾಗುತ್ತದೆ.

ಅಡ್ಡಹೆಸರಿನ ಬಳಕೆಗೆ ಜಾತಿ, ವರ್ಗ, ವಯಸ್ಸು, ಲಿಂಗ, ಶಿಕ್ಷಣ, ಸಾಮಾಜಿಕ ಸ್ಥಾನ-ಮಾನ, ನಡೆ, ನುಡಿ ಇವೇ ಮೊದಲಾದ ಜೈವಿಕ ಅಂಶಗಳು ತುಂಬಾ ಪ್ರಮುಖವಾಗುತ್ತವೆ. ನಗರ ಪರಿಸರಕ್ಕಿಂತ ಗ್ರಾಮೀಣ ಪರಿಸರದಲ್ಲಿ ಅಡ್ಡಹೆಸರಿನ ಬಳಕೆ ಅಧಿಕವಾಗಿರುತ್ತದೆ. ಎಷ್ಟೋ ಜನರ ಅಧಿಕೃತನಾಮಗಳು ಮರೆಯಾಗಿ ಅಡ್ಡಹೆಸರುಗಳೇ ನಿಜನಾಮಗಳಾಗಿ ಪ್ರಚಾರ ಪಡೆದಿರುತ್ತವೆ. ಇದು ಗ್ರಾಮೀಣ ಜನರ ನಡುವಿನ ಸಲಿಗೆ ಮತ್ತು ಆತ್ಮೀಯತೆಯ ದ್ಯೋತಕವಾಗಿದೆ. ಪುರುಷರಿಗಿಂತ ಸ್ತ್ರೀಯರಲ್ಲಿ ಅಡ್ಡಹೆಸರಿನ ಬಳಕೆ ಕಡಿಮೆ ಎಂದು ತೋರುತ್ತದೆ. ಮಕ್ಕಳಲ್ಲಿ ಅಡ್ಡಹೆಸರಿನ ಪ್ರಯೋಗ ಅಧಿಕವಾಗಿದ್ದು, ಮಧ್ಯಮ ವಯಸ್ಕರಲ್ಲಿ ಸಾಧಾರಣವಾಗಿಯೂ, ವೃದ್ಧರಲ್ಲಿ ಅದರ ಬಳಕೆ ಇಲ್ಲವೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಕಡಿಮೆ ಮಟ್ಟದಲ್ಲಿರುತ್ತದೆ. ಪುರುಷ-ಪುರುಷರ ಮಧ್ಯೆ, ಸ್ತ್ರೀ-ಸ್ತ್ರೀಯರ ಮಧ್ಯೆ ಅಡ್ಡಹೆಸರಿನ ಬಳಕೆ ಜಾಸ್ತಿ. ನೇರ ಸಂಬೋಧನೆಯಲ್ಲಿ ಸ್ತ್ರೀ ಮತ್ತು ಪುರುಷರ ನಡುವೆ ಅಡ್ಡಹೆಸರನ್ನು ಕರೆಯುವುದು ಬಹಳ ಕಡಿಮೆ. ಹಿರಿಯ ವಯಸ್ಸಿನವರು ಕಿರಿಯವಯಸ್ಸಿನವರನ್ನು ಕೆಲವೊಮ್ಮೆ ಕರೆಯಲೂಬಹುದು. ಸಾರ್ವಜನಿಕವಾಗಿ ಹಿರಿಯರು, ಕಿರಿಯರನ್ನು ಅಡ್ಡಹೆಸರಿನಿಂದ ಕರೆಯಬಹುದಾದರೂ, ಕಿರಿಯರು ಹಿರಿಯರನ್ನು ಕರೆಯುವುದಿಲ್ಲ. ಇಲ್ಲಿ ವ್ಯಕ್ತಿಗೆ ಅಪಮಾನ ಅಸಮಾಧಾನ ಆಗುವುದಿಲ್ಲವೆಂದಲ್ಲ. ಆಗುತ್ತದೆ. ಆದರೂ ಕೆಲವು ಅನಿವಾರ್ಯ ಕಾರಣಗಳಿಂದಾಗಿ ಸುಮ್ಮನಿರುತ್ತಾನೆ. ಹಿರಿಯರ ಗೈರುಹಾಜರಿಯಲ್ಲಿ ಕಿರಿಯರು ಸಮಾನ ವಯಸ್ಕರ ಮುಂದೆ ಅಡ್ಡಹೆಸರಿನಿಂದ ಕರೆಯಬಹುದಷ್ಟೆ. ಸಮಾನ ವಯಸ್ಕರ ನಡುವೆ ಅಡ್ಡಹೆಸರಿನ ಬಳಕೆ ಅಧಿಕವಾಗಿದ್ದು, ಹಾಜರಿ ಮತ್ತು ಗೈರು ಹಾಜರಿಯಲ್ಲಿ ಸಮಾನವಾಗಿ ಬಳಕೆ ಆಗಬಹುದು. ಪರಸ್ಪರರು ಸಮಾನ ವಯಸ್ಕರು ಮತ್ತು ಸಮಾನ ಮನಸ್ಕರಾಗಿರುವುದರಿಂದ ಇವರ ಮಧ್ಯೆ ಪ್ರತಿಭಟನೆಗಳು ಕಡಿಮೆಯೆಂದೇ ಹೇಳಬಹುದು. ಸ್ನೇಹಿತರ ನಡುವೆ ಹೆಚ್ಚು ಆತ್ಮೀಯತೆ ಮತ್ತು ಸಲಿಗೆ ಇದ್ದಾಗ, ಪ್ರೀತಿಯಿಂದ ಅಡ್ಡಹೆಸರನ್ನು ಕರೆಯುವುದುಂಟು. ಆಗ ಅಡ್ಡಹೆಸರು ಮುದ್ದುಹೆಸರಾಗಿ ಬಳಕೆಯಾಗುತ್ತದೆ ಎಂಬುದು ಕುತೂಹಲಕರವಾದ ಸಂಗತಿಯಾಗಿದೆ.

ಅದೇ ರೀತಿ ಮೇಲ್ಜಾತಿ-ಮೇಲ್ವರ್ಗದವರು, ಕೆಳಜಾತಿ-ಕೆಳ ವರ್ಗದವರನ್ನು ಬಹಿರಂಗವಾಗಿ ಅಡ್ಡಹೆಸರಿನಿಂದ ಕರೆಯಬಹುದಾದರೂ ಕೆಳಜಾತಿ-ಕೆಳವರ್ಗದವರು, ಮೇಲ್ಜಾತಿ-ಮೇಲ್ವರ್ಗದವರನ್ನು ಆ ರೀತಿ ಉಲ್ಲೇಖಿಸಬಹುದು. ವ್ಯಕ್ತಿಯ ಗೈರುಹಾಜರಿಯಲ್ಲಿ ಅಡ್ಡಹೆಸರು ಅಧಿಕೃತನಾಮದಂತೆ ವ್ಯಕ್ತಿಯನ್ನು ಸಮೂಹದಿಂದ ಪ್ರತ್ಯೇಕ ಮಾಡಿ ಗುರುತಿಸುವ ಉದ್ದೇಶವನ್ನು ಹೊಂದಿದೆಯಾದರೂ ಅಡ್ಡಹೆಸರಿನ ಬಗೆಗೆ ಜನರ ಅಥವಾ ವ್ಯಕ್ತಿಯ ಮನೋಭಾವನೆ ಋಣಾತ್ಮಕವಾಗಿರುವುದರಿಂದ ಅದರ ಬಳಕೆಗೆ ತುಂಬಾ ಮಿತಿಗಳು ಇವೆ. ಅಡ್ಡಹೆಸರುಗಳು ಗ್ರಾಮ ಸಮಾಜಗಳಲ್ಲಿ ಬಹುವಾಗಿ ಸಿಗುತ್ತಿದ್ದು, ಅವು ಆ ಜನರ ಕಲ್ಪನಾ ಸಾಮರ್ಥ್ಯಕ್ಕೂ, ಹಾಸ್ಯಶೀಲಕ್ಕೂ ಸಾಕ್ಷಿಯಾಗಿವೆ. ವ್ಯಂಗ್ಯ, ಕಟಕಿ, ವಿನೋದಗಳಿಂದ ಕೂಡಿರುವ ಅಡ್ಡ ಹೆಸರುಗಳು ಮೊದಮೊದಲು ಆ ಹೆಸರುಗಳ ಬಗೆಗೆ ಸಂಬಂಧಪಟ್ಟವರಿಂದ ಪ್ರತಿಕ್ರಿಯೆ ವ್ಯಕ್ತವಾಗಬಹುದಾದರೂ ಅನಿವಾರ್ಯವಿಲ್ಲದೆಯೇ ಸುಮ್ಮನಾಗುತ್ತಾರೆ. ಅಪರೂಪವಾಗಿಯಾದರೂ ಕೆಲವು ಅಡ್ಡಹೆಸರುಗಳು ನಿಜನಾಮಗಳಾಗುವ ಸಾಧ್ಯತೆಯುಂಟು. ಹೀಗಾಗಿ ಕುಂಟಪ್ಪನ ಮೊಮ್ಮಗ

ಕುಂಟಯ್ಯನಾಗುವಂತೆ, ಬಿಳಿಗೌಡನ ಮೊಮ್ಮಗ ಕಪ್ಪಗಿದ್ದರೂ ಬಿಳಿಯಪ್ಪನಾಗಬಹುದು. ಅಂಕಿತ ನಾಮಗಳಂತೆ ಅಡ್ಡಹೆಸರುಗಳು ಒಂದು ಜನಾಂಗದ ಬೌದ್ಧಿಕ ಸಾಮರ್ಥ್ಯಕ್ಕೆ ಹೃದಯವಂತಿಕೆಗೆ ಮತ್ತು ಅದರ ಆಶೆ ಆದರ್ಶಗಳಿಗೆ ಅವು ಕನ್ನಡಿಯಾಗುತ್ತವೆ.

## ೫.೮. ಕುಲನಾಮಗಳು

'ಕುಲನಾಮ' ಎಂಬ ಪದದ ಅರ್ಥ ಮತ್ತು ವ್ಯಾಖ್ಯಾನ ಎರಡು ಬೇರೆ ಬೇರೆ. ಕುಲ + ನಾಮ = ಕುಲನಾಮ. ಎಂದರೆ, ಕುಲದ ಹೆಸರು, ಜಾತಿಹೆಸರು ಎಂದರ್ಥ. ಇದು ಕುಲನಾಮ ಪದದ ಅರ್ಥ. ತಲೆಮಾರಿನಿಂದ ತಲೆಮಾರಿಗೆ ಹರಿದುಬರುವ ಅಥವಾ ವಂಶ ಪಾರಂಪರ್ಯವಾಗಿ ಬರುವ ಹೆಸರು ಎಂಬುದು 'ಕುಲನಾಮ' ಎಂಬುದರ ವ್ಯಾಖ್ಯಾನವಾಗಿದೆ. ಪ್ರಸ್ತುತ ಅಧ್ಯಯನದಲ್ಲಿ 'ಕುಲನಾಮ' ಎಂಬ ಪದವನ್ನು ಅದರ ಪದಾರ್ಥದ ನೆಲೆಯಲ್ಲಿ ಬಳಸದೆ, ವ್ಯಾಖ್ಯಾನ ಅರ್ಥದ ನೆಲೆಯಲ್ಲಿ ಬಳಸಲಾಗಿದೆ. ವ್ಯಕ್ತಿಯ ಹೆಸರಿನಲ್ಲಿ 'ಕುಲನಾಮ' ಬಳಸಲ್ಪಟ್ಟರೂ, ಅದು ಒಬ್ಬ ವ್ಯಕ್ತಿಗೆ ಮಾತ್ರ ಸಂಬಂಧಿಸಿರದೆ, ಇಡೀ ಕುಟುಂಬಕ್ಕೆ, ಮನೆತನಕ್ಕೆ, ವಂಶಕ್ಕೆ ಸಂಬಂಧಿಸಿರುತ್ತದೆ. ವ್ಯಕ್ತಿಯ ಹೆಸರಿನಲ್ಲಿ ಯಾವುದೋ ಕಾರಣಕ್ಕೆ ಕುಲ/ಜಾತಿ, ವೃತ್ತಿ ವಾಚಿ ಇತ್ಯಾದಿ ಹೆಸರುಗಳು ಮೊದಲಬಾರಿಗೆ ಬಳಕೆಯಾಗಬಹುದು. ಅಂಥ ಸಂದರ್ಭದಲ್ಲಿ ಆ ಹೆಸರುಗಳನ್ನು ಕುಲನಾಮಗಳು ಎಂದು ಪರಿಗಣಿಸಲಾಗುವುದಿಲ್ಲ. ಏಕೆಂದರೆ ಈ ಹೆಸರುಗಳು ಹಿಂದಿನಿಂದ ಬಂದ ಹೆಸರುಗಳಲ್ಲ. ಅದೇ ಸಂದರ್ಭಕ್ಕೆ ಅಥವಾ ಅದೇ ತಲೆಮಾರಿಗೆ ಆ ಹೆಸರುಗಳು ಕುಲನಾಮಗಳಾಗಿ ಪರಿಣಮಿಸುವುದಿಲ್ಲ. ಬದಲಾಗಿ ಜಾತಿ, ವೃತ್ತಿವಾಚಿ ವಿಶೇಷಣಗಳು ಎಂದು ಗುರುತಿಸಬಹುದು. ವ್ಯಕ್ತಿನಾಮಗಳಲ್ಲಿ ಬಳಕೆಯಾಗುವ ಕುಲ/ ಜಾತಿ, ವೃತ್ತಿ ಹೆಸರುಗಳೆಲ್ಲವೂ ಕುಲನಾಮಗಳಾಗಿರುವುದಿಲ್ಲ ಎಂಬುದು ಗಮನಾರ್ಹ. ಈ ಹೆಸರುಗಳು ಒಂದು ತಲೆಮಾರಿನ ವ್ಯಕ್ತಿಯ ಹೆಸರಿಗೆ ಅಂಟಿ, ಅದು ಮುಂದಿನ ತಲೆಮಾರುಗಳ ಹೆಸರುಗಳಲ್ಲಿ ಕಾಣಿಸಿಕೊಂಡರೆ, ಆಗ ಅದನ್ನು 'ಕುಲನಾಮ' ಎಂದು ಕರೆಯಲಾಗುವುದು.

ಸಾಮಾನ್ಯವಾಗಿ ಕುಲನಾಮಗಳು ಜಾತಿ, ವಂಶ, ವೃತ್ತಿ, ಗ್ರಾಮ, ಕುಟುಂಬ, ವ್ಯಕ್ತಿ ಸೂಚಕ ಅಂಶಗಳನ್ನು ಒಳಗೊಂಡಿರುತ್ತವೆ. ನಿಜನಾಮ, ಪ್ರತಿನಾಮ (ಅಡ್ಡಹೆಸರು) ಗಳಂತೆ, ಕುಲನಾಮವೂ ಸಹ ವ್ಯಕ್ತಿಯನ್ನು ಸಮೂಹದಿಂದ ಪ್ರತ್ಯೇಕಮಾಡಿ ಗುರುತಿಸುವ ಉದ್ದೇಶವನ್ನು ಹೊಂದಿರುತ್ತದೆ. ನಿಜನಾಮ ಮತ್ತು ಪ್ರತಿನಾಮಗಳಿಂದ ವ್ಯಕ್ತಿಯನ್ನು ಗುರುತಿಸುವುದು ಆಗದೆ ಇರುವ ಸಮಯದಲ್ಲಿ, ಕೆಲವೊಮ್ಮೆ ಕುಲನಾಮಗಳ ಮೂಲಕ ವ್ಯಕ್ತಿಯನ್ನು ಗುರುತಿಸಬಹುದು. ಆ ಕಾರಣಕ್ಕಾಗಿ ಕುಲನಾಮಗಳು ತುಂಬಾ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತವೆ. ಅಲ್ಲದೆ ವ್ಯಕ್ತಿನಾಮಾಧ್ಯಯದಲ್ಲಿ ಕುಲನಾಮಗಳು ತನ್ನದೇ ಆದ ಸ್ಥಾನವನ್ನು ಉಳಿಸಿಕೊಂಡಿವೆ.

'ಕುಲನಾಮ' ಎಂಬುದು ಚಿತ್ರದುರ್ಗ ಪರಿಸರದಲ್ಲಿ ಮನೆತನದ ಹೆಸರು, ಕುಟುಂಬನಾಮ, ವಂಶನಾಮ ಎಂಬಿತ್ಯಾದಿ ಬೇರೆ ಬೇರೆ ಪರಿಭಾಷೆಗಳಿಂದ ಕರೆಯಲ್ಪಟ್ಟಿದೆ. ಆದರೂ ಸಹ 'ಕುಲನಾಮ' ಎಂಬ ಪದ ಇತರ ಪದಗಳಿಗಿಂತ 'ಸೂಕ್ತಪದ' ಎನಿಸಿದ್ದು, ಕನ್ನಡದ ಎಲ್ಲಾ ಭೌಗೋಳಿಕ ಪರಿಸರಗಳಲ್ಲಿ ಬಳಕೆಯಲ್ಲಿರುವ ಸಾಮಾನ್ಯ ಪದವಾಗಿರುವುದರಿಂದ ಪ್ರಸ್ತುತ ಅಧ್ಯಯನದಲ್ಲಿ 'ಕುಲನಾಮ' ಎಂಬ ಪದವನ್ನೇ ಬಳಸಲಾಗಿದೆ.

ಚಿತ್ರದುರ್ಗ ಪರಿಸರದಲ್ಲಿ ವ್ಯಕ್ತಿಯ ಅಧಿಕೃತನಾಮವೇ ಪ್ರಧಾನವಾಗಿದ್ದು, ವ್ಯಕ್ತಿಯ ಸಂಬೋಧನೆಯಲ್ಲಿ ಮತ್ತು ದಾಖಲೆ, ಉಲ್ಲೇಖಗಳಲ್ಲಿ ಈ ಅಧಿಕೃತ ನಾಮವನ್ನೇ ಬಳಸಲಾಗುವುದು. ಕುಲನಾಮಗಳು ವಿಶೇಷ ಸಂದರ್ಭಗಳಲ್ಲಿ ಬಳಕೆಯಾಗುವುದು ಕಾಣಬರುತ್ತದೆ. ಅಲ್ಲದೆ ಈ ಪರಿಸರದ ಎಲ್ಲಾ ವ್ಯಕ್ತಿನಾಮಗಳಲ್ಲಿ 'ಕುಲನಾಮ'ಗಳು ಇರುವುದಿಲ್ಲ. ಕೆಲವು ಮನೆತನದ ಹೆಸರುಗಳಲ್ಲಿ ಮಾತ್ರ ಕುಲನಾಮ ಬಳಕೆಯಾಗುತ್ತಿರುವುದು ಕ್ಷೇತ್ರಕಾರ್ಯದಿಂದ ಸಂಗ್ರಹಿಸಿರುವ ದತ್ತಾಂಶಗಳಿಂದ ತಿಳಿದುಬರುವ ಸಂಗತಿ. ಸಾಮಾನ್ಯವಾಗಿ ಕುಲನಾಮಗಳು ಅಧಿಕೃತ ನಾಮದ ಪೂರ್ವದಲ್ಲಿ ಬಳಕೆಯಾಗುವುದು ಇಲ್ಲಿನ ವೈಶಿಷ್ಟ್ಯವೆನಿಸಿದೆ.

ಚಿತ್ರದುರ್ಗ ಪರಿಸರದಲ್ಲಿ ವೈವಿಧ್ಯಮಯವಾದ ಕುಲನಾಮಗಳು ಬಳಕೆಯಲ್ಲಿವೆ. ಅಧ್ಯಯನದ ಸೌಲಭ್ಯಕ್ಕಾಗಿ, ಕ್ಷೇತ್ರದ ದತ್ತವನ್ನು ಆಧರಿಸಿ, ಕುಲನಾಮಗಳನ್ನು ಅವುಗಳ ಅರ್ಥದ ಆಧಾರದ ಮೇಲೆ ಈ ರೀತಿ ವರ್ಗೀಕರಣ ಮಾಡಿಕೊಳ್ಳಲಾಗಿದೆ.

೧. ವ್ಯಕ್ತಿವಾಚಿ ಕುಲನಾಮಗಳು
೨. ವೃತ್ತಿವಾಚಿ ಕುಲನಾಮಗಳು
೩. ಜಾತಿವಾಚಿ ಕುಲನಾಮಗಳು
೪. ಸ್ಥಳವಾಚಿ ಕುಲನಾಮಗಳು
೫. ಇತರೆ ಕುಲನಾಮಗಳು

### ೫.೮.೧ ವ್ಯಕ್ತಿವಾಚಿ ಕುಲನಾಮಗಳು

ಪೂರ್ವಜನರ ಹೆಸರನ್ನು ಮಕ್ಕಳಿಗೆ ಇಡುವುದು ಚಿತ್ರದುರ್ಗ ಪರಿಸರದಲ್ಲಿ ಒಂದು ಸಾಮಾನ್ಯವಾದ ರೂಢಿ. ಆದರೆ ಹಿರಿಯರ ಹೆಸರುಗಳು ಕುಲನಾಮಗಳಾಗಿ ಬಳಕೆಯಾಗುವುದು ವಿಶಿಷ್ಟವಾದ ಅಂಶವೆಂದೇ ಹೇಳಬಹುದು. ಒಂದು ಕುಟುಂಬದಲ್ಲಿ ಒಬ್ಬ ವ್ಯಕ್ತಿ ಪ್ರಸಿದ್ಧಿಯನ್ನು ಪಡೆದಾಗ ಜನ ಆ ಕುಟುಂಬವನ್ನು, ಕುಟುಂಬದ ಸದಸ್ಯರನ್ನು ಕೆಲವು ಸಂದರ್ಭಗಳಲ್ಲಿ ಪ್ರಸಿದ್ಧ ವ್ಯಕ್ತಿಯ ಹೆಸರಿನ ಮೂಲಕ ಗುರುತಿಸುವುದು ಸಹಜ. ಅಥವಾ ಆ ಕುಟುಂಬದ ಸದಸ್ಯರು ತಮ್ಮ ಅಸ್ತಿತ್ವವನ್ನು ಪ್ರಸಿದ್ಧ ವ್ಯಕ್ತಿಯ ಹೆಸರಿನ ಮುಖೇನ ಗುರುತಿಸಿಕೊಳ್ಳುವುದುಂಟು. ಹೀಗೆ ಪ್ರಸಿದ್ಧ ವ್ಯಕ್ತಿಯ ಹೆಸರಿನ ಮೂಲಕ ಗುರುತಿಸಿಕೊಳ್ಳುವುದು, ಆಯಾ ಕುಟುಂಬದ ಸದಸ್ಯರಿಗೆ ಅಭಿಮಾನ, ಹೆಮ್ಮೆಯ ಸಂಗತಿ ಎನಿಸಿರುವಂತೆ, ಅದು ವ್ಯಕ್ತಿಯನ್ನು ಸ್ಪಷ್ಟವಾಗಿ ಗುರುತಿಸುವುದಕ್ಕೆ ಒಂದು ಸುಲಭದ ಮಾರ್ಗವೂ ಆಗಿರಬಹುದು. ಪ್ರಸಿದ್ಧ ವ್ಯಕ್ತಿ ಜೀವಂತ ಇರುವಾಗ ಇಲ್ಲವೆ ತೀರಿಹೋದ ನಂತರ, ಆ ಕುಟುಂಬದ ಸದಸ್ಯರು ತಮ್ಮ ಹೆಸರಿನ ಜತೆ, ಪ್ರಸಿದ್ಧ ವ್ಯಕ್ತಿಗಳ ಹೆಸರನ್ನು ಮೊದಮೊದಲು ಅನಧಿಕೃತವಾಗಿ ಅಂದರೆ ಮೌಖಿಕವಾಗಿ ಬಳಸುತ್ತಿದ್ದು, ಕ್ರಮೇಣ ದಾಖಲೆಗಳಲ್ಲಿ ಬಳಕೆಗೆ ಬರುತ್ತದೆ. ಈ ಹೆಸರು ನಂತರದ ತಲೆಮಾರುಗಳ ಹೆಸರುಗಳಲ್ಲಿ ಮುಂದುವರೆದು ಕುಲನಾಮವಾಗಿ ಪರಿಣಮಿಸುವುದುಂಟು. ಎಲ್ಲಾ ಪ್ರಸಿದ್ಧ ಇಲ್ಲವೆ, ಹಿರಿಯರ ಹೆಸರುಗಳು ಕುಲನಾಮಗಳಾಗಿ ಪರಿವರ್ತನೆಯಾಗುವುದಿಲ್ಲ. ಇದಕ್ಕೆ ತುಂಬಾ ಮಿತಿಗಳಿವೆ. ಪ್ರಸಿದ್ಧ ವ್ಯಕ್ತಿಗಳ ಕೌಟುಂಬಿಕ ಹಿನ್ನೆಲೆಯೇ ಇದಕ್ಕೆ ಮುಖ್ಯಕಾರಣವಾಗಿರಬಹುದು. ನಿದರ್ಶನಕ್ಕೆ ಕೆಲವು ಉದಾಹರಣೆಗಳನ್ನು ಗಮನಿಸಬಹುದಾಗಿದೆ.

| | | | |
|---|---|---|---|
| ಕರಿಬಸಪ್ಪನವರ ಪರ್ವತಪ್ಪ | ಲಿಂಗಾಯತ | ೪೬ | ಚಿತ್ರದುರ್ಗ |
| ಕಾಟಪ್ಪನವರ ಲಿಂಗರಾಜ | ನಾಯಕ | ೩೮ | ಬೊಮ್ಮದೇವರಹಳ್ಳಿ ಮೊಳಕಾಲ್ಮೂರು |
| ತೋಕಲಯ್ಯನವರ ಲಕ್ಷ್ಮಣ | ಗೊಲ್ಲ | ೫೦ | ಮೊಳಕಾಲ್ಮೂರು |
| ಪೋತಪ್ಪನವರ ಮಾರಪ್ಪ | ಆದಿಕರ್ನಾಟಕ | ೪೭ | ಚಳ್ಳಕೆರೆ |
| ಗುಂಡೆ ಪೆನ್ನಯ್ಯನವರ ಮರಿಬಸಪ್ಪ | ನಾಯಕ | ೫೪ | ಹೊಸದುರ್ಗ |
| ದೇವಣ್ಣನವರ ಕರಿಯಪ್ಪ | ಕುರುಬ | ೩೯ | ಹೊಳಲ್ಕೆರೆ |
| ಸಿದ್ಧಲಿಂಗಯ್ಯನವರ ಮಲ್ಲಿಕಾರ್ಜುನ | ಆದಿಕರ್ನಾಟಕ | ೪೩ | ಚಿತ್ರದುರ್ಗ |
| ಕಲ್ಲಪ್ಪನವರ ರಾಮಣ್ಣ | ಲಿಂಗಾಯತ | ೩೬ | ಮೊಳಕಾಲ್ಮೂರು |
| ಅಬ್ದುಲ್‌ಸಾಬ್‌ನವರ ಅಯ್ಯತ್ ಭಾಷಾ | ಮುಸ್ಲಿಂ | ೫೧ | ಮೊಳಕಾಲ್ಮೂರು |
| ನಿಂಗಮ್ಮನವರ ಬಾಲರಾಜ | ನಾಯಕ | ೪೧ | ಚಿತ್ರದುರ್ಗ |
| ಗಂಗಮ್ಮನವರ ರಂಗಪ್ಪ | ಕುರುಬ | ೩೫ | ಚಿತ್ರದುರ್ಗ |
| ದೇವಮ್ಮನವರ ಗಂಗಣ್ಣ | ಉಪ್ಪಾರ | ೪೩ | ಚಳ್ಳಕೆರೆ |
| ಪಾಪಮ್ಮನವರ ಗೋವಿಂದಪ್ಪ | ನಾಯಕ | ೫೨ | ಚಳ್ಳಕೆರೆ |

ಮೇಲಿನ ಪಟ್ಟಿಯ ಹೆಸರುಗಳನ್ನು ಗಮನಿಸಿದರೆ, ಪಿತೃ ಮತ್ತು ಮಾತೃ ಮೂಲದ ವ್ಯಕ್ತಿವಾಚಿ ಕುಲನಾಮಗಳು ಇರುವುದು ತಿಳಿದುಬರುತ್ತದೆ. ಕ್ಷೇತ್ರಕಾರ್ಯದಿಂದ ಲಭ್ಯವಾದ ದತ್ತಾಂಶಗಳಲ್ಲಿ, ವ್ಯಕ್ತಿವಾಚಿ ಕುಲನಾಮಗಳು ಕೆಳಸಮುದಾಯಗಳಲ್ಲಿ ಹೆಚ್ಚಾಗಿಯೂ, ಮೇಲ್ ಸಮುದಾಯಗಳಲ್ಲಿ ವಿರಳವೂ ಇದ್ದಂತೆ ತೋರಿಬರುತ್ತದೆ. ಭಿನ್ನ ಭೌಗೋಳಿಕ ಪರಿಸರದಲ್ಲಿ ಇದು ಬೇರೆ ಬೇರೆ ಆಗಿರುವ ಸಾಧ್ಯತೆಗಳು ಇರಬಹುದು. ಚಿತ್ರದುರ್ಗ ಪರಿಸರದಲ್ಲಿ ವ್ಯಕ್ತಿವಾಚಿ ಕುಲನಾಮಗಳು ಇದ್ದರೂ, ಅವು ಅವರ ಹೆಸರಿನ ಹಿಂದೆ, ಪ್ರಥಮಾಕ್ಷರಗಳಿಂದ ಕಾಣಿಸಿಕೊಳ್ಳುತ್ತವೆ. ಮೇಲಿನ ಪಟ್ಟಿಯ ಉದಾಹರಣೆಯನ್ನೇ ಇಲ್ಲಿ ಗಮನಿಸಬಹುದು. ಕರಿಬಸಪ್ಪನವರ ಪರತ್ವಪ್ಪ ಎಂಬುದು ಕೆ.ಪರ್ವತಪ್ಪ ಎಂದಾಗುತ್ತದೆ. ನಿಂಗಮ್ಮನವರ ಬಾಲರಾಜ ಎಂಬುದು ಎನ್.ಬಾಲರಾಜ ಎಂದು ಬಳಕೆಯಾಗುತ್ತಿದೆ. ಸಂಬೋಧನೆಯಲ್ಲಿ ವ್ಯಕ್ತಿವಾಚಿ ಕುಲನಾಮವಷ್ಟೇ ಪ್ರತ್ಯೇಕವಾಗಿ ಬಳಸುವುದಿಲ್ಲ. ಅದು ವ್ಯಕ್ತಿಯ ಹೆಸರಿನೊಂದಿಗೆ ಸೇರಿ ಬಳಕೆಯಾಗುತ್ತದೆ. ವ್ಯಕ್ತಿನಾಮಗಳು ಕುಲನಾಮಗಳಾಗಿ ಪರಿಣಮಿಸುವುದರಿಂದ, ಸಂಸ್ಕೃತಿಯಲ್ಲಿ ಆ ಹೆಸರುಗಳು ಬಹುಕಾಲದವರೆಗೆ ಶಾಶ್ವತವಾಗಿ ಉಳಿಯುತ್ತವೆ. ವ್ಯಕ್ತಿ ಹೆಸರನ್ನು ಕುಲನಾಮವಾಗಿ ಬಳಸುವುದು ನಗರ ಪ್ರದೇಶದ ಶಿಷ್ಟ ಜನರಿಗಿಂತ, ಗ್ರಾಮೀಣ ಪ್ರದೇಶದ ಜನಪದರಲ್ಲಿ ಪ್ರಾಯಶಃ ಹೆಚ್ಚು ಎಂಬುದನ್ನು ಗಮನಿಸಬಹುದು. ಈ ಪ್ರಕ್ರಿಯೆ ಕರ್ನಾಟಕದ ಬೇರೆ ಬೇರೆ ಪರಿಸರಗಳಲ್ಲಿಯೂ ಬಳಕೆಯಲ್ಲಿದೆ. ಆದರೆ ರಚನೆಯ ದೃಷ್ಟಿಯಿಂದ ಉತ್ತರ ಮತ್ತು ದಕ್ಷಿಣ ಕರ್ನಾಟಕದಲ್ಲಿ ವ್ಯತ್ಯಾಸಗಳಿರುವುದು ಗಮನಾರ್ಹ.

### ೫.೮.೨ ವೃತ್ತಿವಾಚಿ

ವ್ಯಕ್ತಿಗಳು ತಾವು ಕೈಗೊಳ್ಳುವ ವೃತ್ತಿ ನಾಮಗಳನ್ನು ಹೆಸರಿನೊಂದಿಗೆ ಬಳಸುವ ಕ್ರಮ ಹಿಂದಿನಿಂದಲೂ ಬೆಳೆದುಬಂದಿದೆ. ಇದು ಮೊದಮೊದಲು ಉನ್ನತ ಅಥವಾ ಶ್ರೇಷ್ಠ ವೃತ್ತಿಗಳೆಂದು ಭಾವಿಸಲಾಗಿದ್ದ ವೃತ್ತಿಗಳು ಮಾತ್ರ ವ್ಯಕ್ತಿನಾಮಗಳಲ್ಲಿ ಬಳಸಲ್ಪಡುತ್ತಿದ್ದು, ಕಾಲಾಂತರದಲ್ಲಿ ಸಾಮಾನ್ಯ ವೃತ್ತಿಗಳನ್ನು ಬಳಸುವ ಕ್ರಮ ರೂಢಿಗೆ ಬಂದಿರಬಹುದು. ಹೀಗೆ ವ್ಯಕ್ತಿ ಕೈಗೊಂಡ ವೃತ್ತಿ ಕೆಲವು ಕಾರಣಗಳಿಂದ ಮುಖ್ಯವಾಗಿ ಮುಂದಿನ

ತಲೆಮಾರುಗಳಿಗೆ ಮುಂದುವರೆದು ಕುಲನಾಮಗಳಾಗಿ ಪರಿಣಮಿಸುತ್ತವೆ. ವೃತ್ತಿವಾಚಿ ಕುಲನಾಮಗಳಿಗೆ ಪ್ರಾಚೀನ ಚರಿತ್ರೆಯ ಜೊತೆಗೆ ವಿಶಾಲವಾದ ವ್ಯಾಪಕತೆಯಿದೆ ಇರುವುದು ತಿಳಿದುಬರುತ್ತದೆ.

ಪ್ರಸ್ತುತ ಅಧ್ಯಯನದ ಪರಿಸರದಲ್ಲಿ ವೃತ್ತಿವಾಚಿ ಕುಲನಾಮಗಳು ಬಳಕೆಯಲ್ಲಿರುವುದು ಕಾಣಬಂದಿವೆ. ಮಾದರಿಗಾಗಿ ಕೆಲವು ಉದಾಹರಣೆಗಳನ್ನು ನೋಡಬಹುದು.

| | | | |
|---|---|---|---|
| ಪೂಜಾರಿ ಕೊಲ್ಲಾರಪ್ಪ | ಆದಿಕರ್ನಾಟಕ | ಮುತ್ತಿಗಾರಹಳ್ಳಿ | ಮೊಳಕಾಲ್ಮೂರು |
| ಗೌಡರ/ರ್ ವಿರೂಪಾಕ್ಷಪ್ಪ | ಲಿಂಗಾಯತ | ಚಿತ್ರದುರ್ಗ | |
| ತಳವಾರ ತಿಪ್ಪೇಸ್ವಾಮಿ | ನಾಯಕ | ಕಾಟಪ್ಪನಹಟ್ಟಿ | ಚಳ್ಳಕೆರೆ |
| ನೀರಗಂಟಿ ಪಾಪಣ್ಣ | ನಾಯಕ | ಚಳ್ಳಕೆರೆ | |
| ಆಚಾರಿ ನಾರಾಯಣ | ಅಕ್ಕಸಾಲಿಗ | ಕೋನಾಪುರ | ಮೊಳಕಾಲ್ಮೂರು |
| ಬಳೆಗಾರ ಸಂಜೀವಪ್ಪ | ಬಲಿಜ | ಪರಶುರಾಮಪುರ | ಚಳ್ಳಕೆರೆ |
| ಪಾಳೆಯಗಾರ ಭರಮಣ್ಣನಾಯಕ | ನಾಯಕ | ಚಿತ್ರದುರ್ಗ | |
| ಜಂಗಳಿ ಸೂರಯ್ಯ | ನಾಯಕ | ಚಿತ್ರದುರ್ಗ | |

ಚಿತ್ರದುರ್ಗ ಪರಿಸರದ ಮ್ಯಾಸನಾಯಕರ ಮನೆಮಾತು ತೆಲುಗು ಆಗಿರುವುದರಿಂದ ಅವರ ಕುಲನಾಮಗಳು ತೆಲುಗಿನಲ್ಲಿಯೇ ಬಳಕೆಯಾಗುತ್ತಿವೆ. ಉದಾಹರಣೆಗೆ

ಆವುಲು ಪಾಲಯ್ಯ (ಆವುಲು = ದನಗಳು)

ಮ್ಯಾಕಲು ಪಾಪಯ್ಯ (ಮ್ಯಾಕಲು = ಮೇಕೆ)

ಗೊಡ್ಲು ಸೂರಯ್ಯ (ಗೊಡ್ಲು = ಕುರಿಗಳು) - ಇತ್ಯಾದಿ

ಈ ವೃತ್ತಿನಾಮಗಳು ಆ ಸಮುದಾಯದ ಚರಿತ್ರೆಯ ಮೇಲೆ ಬೆಳಕು ಚೆಲ್ಲುತ್ತವೆ. ಚಿತ್ರದುರ್ಗ ಪರಿಸರದಲ್ಲಿ ವೃತ್ತಿವಾಚಿ ಕುಲನಾಮಗಳ ಬಳಕೆ ಕಡಿಮೆಯೆಂದೇ ಹೇಳಬಹುದು. ಕ್ಷೇತ್ರಕಾರ್ಯದಿಂದ ಸಂಗ್ರಹಿಸಿರುವ ದತ್ತದ ಪ್ರಕಾರ ಮೇಲ್ಜಾತಿಯವರಿಗಿಂತ ಕೆಳಜಾತಿಯವರಲ್ಲಿ, ಸ್ತ್ರೀಯರಿಗಿಂತ ಪುರುಷರಲ್ಲಿ ವೃತ್ತಿವಾಚಿ ಕುಲನಾಮಗಳ ಬಳಕೆ ಅಧಿಕವಾಗಿರುವುದು ತಿಳಿದುಬರುತ್ತದೆ. ಸಂಬೋಧನೆಯಲ್ಲಿ ಅಧಿಕೃತ ನಾಮವನ್ನು ಬಳಸದೆ, ವೃತ್ತಿವಾಚಿ ಕುಲನಾಮದಿಂದಲೇ ವ್ಯಕ್ತಿಯನ್ನು ಸಂಬೋಧಿಸುತ್ತಾರೆ. ವೃತ್ತಿವಾಚಿ ಕುಲನಾಮಗಳು ಸಹ ಬರೆಹದಲ್ಲಿ ಆದ್ಯಕ್ಷರಗಳಿಂದ ಬರೆಯಲ್ಪಡುವುದು ಕಾಣಬರುತ್ತದೆ. ಹನ್ನೆರಡನೆ ಶತಮಾನದ ವಚನಕಾರರ ಹೆಸರುಗಳಲ್ಲಿ ವೃತ್ತಿಸಂಬಂಧಿ ನಾಮಗಳು ಅಧಿಕ ಪ್ರಮಾಣದಲ್ಲಿ ಬಳಕೆಯಾಗಿರುವುದು ಗೋಚರಿಸುತ್ತದೆ. ಉದಾಹರಣೆಗೆ, ಜೇಡರ ದಾಸಿಮಯ್ಯ, ಅಂಬಿಗರ ಚೌಡಯ್ಯ, ಆಯ್ದಕ್ಕಿ ಲಕ್ಕಮ್ಮ. ಸೂಳೆ ಸಂಕವ್ವ ಮೊದಲಾದವು. ವಚನಕಾರರ ಹೆಸರುಗಳ ಬಗೆಗೆ ಅಧ್ಯಯನ ಮಾಡಿರುವ ಕೆಲವು ವಿದ್ವಾಂಸರು ವೃತ್ತಿವಾಚಿ ನಾಮಗಳನ್ನು ಕುಲನಾಮ/ಅಡ್ಡಹೆಸರು ಎಂದು ಪರಿಗಣಿಸಿದ್ದಾರೆ. (ಆಧಾರಕ್ಕೆ ಗಮನಿಸಿ : ಡಾ. ಎಂ.ಎಂ.ಕಲಬುರ್ಗಿ, ನಾಮವಿಜ್ಞಾನ. ಡಾ. ಎಸ್.ಎಸ್.ಅಂಗಡಿ, ವ್ಯಕ್ತಿನಾಮಗಳು, ಸ್ವರೂಪ ಮತ್ತು ವಿಶ್ಲೇಷಣೆ) ಮೇಲಿನ ವಿದ್ವಾಂಸರ ಅಭಿಪ್ರಾಯಗಳು ಸಂದೇಹಾಸ್ಪದವಾಗಿವೆ. ವಚನಕಾರರ ಹೆಸರುಗಳಲ್ಲಿ ಬಳಕೆಯಾಗಿರುವ ವೃತ್ತಿವಾಚಿ ನಾಮಗಳು ಪರಂಪರಾಗತವಾಗಿ ಬಂದು ಸೇರಿದವುಗಳೇ? ಅಥವಾ ಅಂದು ವ್ಯಕ್ತಿ ಕೈಗೊಂಡ ವೃತ್ತಿ ಹಿನ್ನೆಲೆಯಿಂದ ಬಂದು ಸೇರಿದವುಗಳೇ? ಎಂಬುದು ಬಹಳ ಮುಖ್ಯ ಪ್ರಶ್ನೆಯಾಗುತ್ತದೆ.

ವ್ಯಕ್ತಿ ತಾನು ಕೈಗೊಂಡ ವೃತ್ತಿಯನ್ನು ತಾನೇ ತನ್ನ ಹೆಸರಿನ ಜೊತೆಗೆ ಬಳಸಿದಾಗ, ಅದನ್ನು ಕುಲನಾಮ ಎಂದು ಪರಿಗಣಿಸಬಹುದೆ? ಈ ವೃತ್ತಿ ನಾಮಗಳು ಯಾವುದೋ ಕಾರಣಗಳಿಂದಾಗಿ ಮುಂದಿನ ತಲೆಮಾರುಗಳಿಗೆ ಮುಂದುವರೆದರೆ, ಆಗ ಈ ವೃತ್ತಿನಾಮಗಳು ಕುಲನಾಮಗಳಾಗಿ ಪರಿಣಮಿಸುತ್ತವೆ. ಕುಲನಾಮಗಳು ತಲೆಮಾರಿನಿಂದ ಹರಿದುಬರುವುದರಿಂದ, ವ್ಯಕ್ತಿ ಕೈಗೊಂಡ ವೃತ್ತಿ ನಾಮ, ಹೆಸರಿನಲ್ಲಿ ಬಳಕೆಯಾದರೂ ಅದು ಅದೇ ಕಾಲಕ್ಕೆ 'ಕುಲನಾಮ' ಎನಿಸಲಾರದು. ಈ ಹಿನ್ನೆಲೆಯಲ್ಲಿ ಆಲೋಚಿಸಿದಾಗ, ಹನ್ನೆರಡನೆಯ ಶತಮಾನದ ಶರಣರ ಹೆಸರುಗಳಲ್ಲಿ ಕಾಣಬರುವ 'ವೃತ್ತಿವಾಚಿ ನಾಮಗಳು' ಪರಂಪರಾಗತವಾಗಿ ಬಂದವುಗಳಾಗಿರದೆ, ವ್ಯಕ್ತಿ ಕೈಗೊಂಡ ವೃತ್ತಿಯ ಹಿನ್ನೆಲೆಯಿಂದ ಬಂದು ಸೇರಿರಬಹುದಾದ ಸಂಭವಗಳೇ ಅಧಿಕ. ಆ ಕಾರಣದಿಂದಾಗಿ ವಚನಕಾರರ ಹೆಸರುಗಳಲ್ಲಿನ ವೃತ್ತಿ ನಾಮಗಳನ್ನು ಕುಲನಾಮಗಳೆಂದು ಪರಿಗಣಿಸುವುದು ಸಂದೇಹಾಸ್ಪದವಾಗಿದ್ದು, ಆ ಬಗೆಗೆ ಹೆಚ್ಚಿನ ಅಧ್ಯಯನದ ಅವಶ್ಯಕತೆಯಿದೆ. ವಾಸ್ತವವಾಗಿ ಈ ವೃತ್ತಿನಾಮಗಳು, ವ್ಯಕ್ತಿಯ ವೃತ್ತಿಯನ್ನು ಸೂಚಿಸುತ್ತಿದ್ದು, ಹೆಸರುಗಳಲ್ಲಿ ವಿಶೇಷಣಗಳಾಗಿ ಬಳಕೆಯಾಗಿರಬಹುದು.

### ೫.೮.೩ ಜಾತಿವಾಚಿ ಕುಲನಾಮಗಳು

ವ್ಯಕ್ತಿನಾಮಗಳಲ್ಲಿ ಜಾತಿಸೂಚಕ ಪದ (ಅಂದರೆ ಜಾತಿ) ನಿರ್ದಿಷ್ಟವಾಗಿಯೂ, ವಾರ್ಗಿಕವಾಗಿಯೂ (ಗೊಲ್ಲಪ್ಪ, ಮೈಲಾರಯಾದವ್) ಬಳಕೆಯಾಗುವಂತೆ ಕುಲನಾಮವಾಗಿಯೂ ಬಳಕೆಯಾಗುತ್ತದೆ. 'ಜಾತಿ' ಹೆಸರುಗಳು ಕುಲನಾಮವಾಗಿ ಬಳಕೆಯಾಗುವುದು ಇತ್ತೀಚಿನ ಪ್ರಕ್ರಿಯೆಯೇನೂ ಅಲ್ಲ. ಈ ಪದ್ಧತಿ ಹಿಂದಿನಿಂದಲೂ ರೂಢಿಯಲ್ಲಿದೆ. ಕರ್ನಾಟಕದ ಬೇರೆ ಬೇರೆ ಪ್ರದೇಶದಲ್ಲಿ ಬೇರೆ ಬೇರೆ ಸಮುದಾಯಗಳಲ್ಲಿ, 'ಜಾತಿಸೂಚಕಗಳು ಕುಲನಾಮಗಳಾಗಿ ಬಳಕೆಯಾಗುತ್ತಿರುವಂತೆ ಚಿತ್ರದುರ್ಗ ಪರಿಸರದಲ್ಲಿಯೂ ಈ ಪ್ರಕ್ರಿಯೆ ಕಾಣಬರುತ್ತದೆ.

ಕೆಲವು ಉದಾಹರಣೆಗಳನ್ನು ನೋಡಬಹುದು.

| | | |
|---|---|---|
| ಬಡಿಗೇರ ವೀರಪ್ಪ | ಬುಡ್ನೇನಹಳ್ಳಿ | ಮೊಳಕಾಲ್ಮೂರು |
| ವಡ್ಡರ ಭೀಮಪ್ಪ | ಚಿತ್ರದುರ್ಗ' | |
| ನೆವ್ವಾರ್ (ನೇಕಾರ) ವೆಂಕಟೇಶ | ಮೊಳಕಾಲ್ಮೂರು | |
| ಲಂಬಾಣಿ ಕೃಷ್ಣಾನಾಯ್ಕ | ಚಳ್ಳಕೆರೆ | |
| ಮೇದರ ಹನುಮಂತಪ್ಪ | ಹೊಳಲ್ಕೆರೆ | |
| ಹರಿಜನ ನಿಂಗಪ್ಪ | ಹೊಸದುರ್ಗ | |
| ಕುರುಬರ ಮಂಜಣ್ಣ | ಕೊಂಡ್ಲಹಳ್ಳಿ | ಮೊಳಕಾಲ್ಮೂರು |
| ಗೊಲ್ಲರ ಕೃಷ್ಣಯ್ಯ | ಚಿತ್ರದುರ್ಗ | |
| ಈಡಿಗರ ವೀರಣ್ಣ | ಚಿತ್ರದುರ್ಗ | |
| ಉಪ್ಪಾರ ಸೋಮನಾಥ | ಚಳ್ಳಕೆರೆ | |
| ಗೊರವರ ಭರಮಪ್ಪ | ದೇವಸಮುದ್ರ | ಮೊಳಕಾಲ್ಮೂರು |

ಮುಖ್ಯ ಜಾತಿಗಳು ಕುಲನಾಮಗಳಾಗಿ ಬಳಕೆಯಾಗುವಂತೆ ಉಪಪಂಗಡ ಅಥವಾ ಗೋತ್ರಗಳೂ ಕುಲನಾಮಗಳಾಗಿ ಬಳಕೆಯಾಗುವುದುಂಟು. ಉದಾಹರಣೆಗೆ

| | | | |
|---|---|---|---|
| ಅಬ್ಬನಾರು ಪಾಪಯ್ಯ | ನಾಯಕ | ಚಿನ್ನಬಸಯ್ಯನಹಟ್ಟಿ | ಚಳ್ಳಕೆರೆ |
| ಮೀನ್ ಕೇರಿ ಪವಿತ್ರ | ಆದಿಕರ್ನಾಟಕ | ಮೊಳಕಾಲ್ಮೂರು | |
| ಮುತ್ತ್ಯಾಲ್ ಬಾಬುರೆಡ್ಡಿ | ರೆಡ್ಡಿ | ಕವಾಡಿಗರಹಟ್ಟಿ | ಚಿತ್ರದುರ್ಗ |
| ಕರೇಲರು ಹನುಮಂತಪ್ಪ | ಕುರುಬ | ಕುರುಬರಹಟ್ಟಿ | ಚಿತ್ರದುರ್ಗ |
| ಖೀಳತ್ ಜಗನ್ನಾಥನಾಯ್ಕ | ಲಂಬಾಣಿ | ಚಳ್ಳಕೆರೆ | |
| ವಿಸ್ಲಾವತ್ ಕೂಬ್ಯಾನಾಯ್ಕ | ಲಂಬಾಣಿ | ಚಳ್ಳಕೆರೆ | |
| ಯರಬೋತ್ಲಾರು ಓಬಯ್ಯ | ನಾಯಕ | ರಾಯಾಪುರ | ಮೊಳಕಾಲ್ಮೂರು |
| ಕಾಮಗೇತ್ಲಾರು ದೊಡ್ಡಸ್ವಾಮಿನಾಯಕ | ನಾಯಕ | ಯರಜೇನಹಳ್ಳಿ | ಮೊಳಕಾಲ್ಮೂರು |
| ಬಿಮಾವತ್ ಕೇಶವಮೂರ್ತಿ | ಲಂಬಾಣಿ | ಮೆದಕೆಪುರ ತಾಂಡ | ಚಿತ್ರದುರ್ಗ |

ವೃತ್ತಿವಾಚಿ ಕುಲನಾಮಗಳು ಯಾವುದೇ ಒಂದು ವರ್ಗಕ್ಕೆ ಮಾತ್ರ ಸ್ಥಿರವಾಗಿರದೆ, ಅವು ಯಾವುದೇ ಸಮುದಾಯದಲ್ಲಾದರೂ ಬಳಕೆಯಾಗಬಹುದು. ಆದರೆ ಜಾತಿವಾಚಿ ಕುಲನಾಮಗಳು ಸಂಬಂಧಪಟ್ಟ ನಿರ್ದಿಷ್ಟ ಜನರ ಹೆಸರುಗಳಲ್ಲಿ ಮಾತ್ರ ಬಳಕೆಯಾಗುತ್ತವೆ ಎನ್ನುವುದು ಗಮನಾರ್ಹ. ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿರುವ ದತ್ತದ ಪ್ರಕಾರ ಜಾತಿ ಮತ್ತು ಗೋತ್ರಗಳ ಹೆಸರು ಕುಲನಾಮಗಳಾಗಿ ಬಳಕೆಯಲ್ಲಿರುವುದು ಮೇಲ್ ಸಮುದಾಯಗಳಿಗಿಂತ, ಕೆಳಸಮುದಾಯಗಳಲ್ಲಿ ಅಧಿಕವಾಗಿರುವುದು ತಿಳಿದುಬರುತ್ತದೆ. ಇದು ಇನ್ನಿತರ ಪರಿಸರಗಳಲ್ಲಿ ಬೇರೆಯೇ ಇರಲು ಸಾಧ್ಯವಿದೆ.

### ೫.೮.೪ ಸ್ಥಳವಾಚಿ ಕುಲನಾಮಗಳು

ವ್ಯಕ್ತಿನಾಮದ ಜತೆ ಸ್ಥಳದ ಹೆಸರನ್ನು ಸೇರಿಸುವ ಕ್ರಮ ಪ್ರಾಚೀನವಾದುದು. ವ್ಯಕ್ತಿ ಅಭಿಮಾನದಿಂದಲೋ ಅಥವಾ ತನ್ನ ಗುರುತಿಗಾಗಿ ಸ್ಥಳದ ಹೆಸರನ್ನು ವ್ಯಕ್ತಿನಾಮದ ಜತೆ ಸೇರಿಸಿಕೊಳ್ಳುವುದುಂಟು. ಕೆಲವೊಮ್ಮೆ ಆ ಹೆಸರು ಮುಂದಿನ ಪೀಳಿಗೆಗೂ ಮುಂದುವರೆಯಬಹುದು. ಮತ್ತು ವ್ಯಕ್ತಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಬಂದು ನೆಲೆಯೂರಿದಾಗ, ಅಲ್ಲಿನ ಜನರು ಅವರನ್ನು ಗುರುತಿಸುವಾಗ ಹೆಸರಿನ ಜೊತೆ ಮೊದಲಿನ ಸ್ಥಳದ ಹೆಸರನ್ನು ಸೇರಿಸಿ ಸಂಬೋಧಿಸುವುದುಂಟು. ಹೀಗೆ ಕರೆಯುವುದು ರೂಢಿಯಾಗಿ, ಹೆಸರಿನ ಜತೆ ಸ್ಥಳನಾಮದ ಬಳಕೆ ಕಡ್ಡಾಯವಾಗುತ್ತದೆ. ಮತ್ತು ಅದು ನಂತರದ ತಲೆಮಾರುಗಳ ಹೆಸರುಗಳಿಗೂ ಮುಂದುವರೆಯಬಹುದು. ಆಗ ಸ್ಥಳನಾಮವು ಕುಲನಾಮವಾಗಿ ಪರಿಣಮಿಸುತ್ತದೆ. "ಪೂರ್ವಜರ ಗ್ರಾಮಗಳನ್ನು ಕುಲನಾಮಗಳನ್ನಾಗಿ ಬಳಸುವ ವಾಡಿಕೆ ಇದೆ."[೬೦] ಈ ಸ್ಥಳವಾಚಿ ಕುಲನಾಮಗಳು ವ್ಯಕ್ತಿಗಳು ವಾಸಿಸುವ ಮತ್ತು ವಾಸಿಸುತ್ತಿದ್ದ ಸ್ಥಳದ ಸೂಚನೆ ಇರುತ್ತದೆ. ಸ್ಥಳವಾಚಿ ಕುಲನಾಮಗಳು ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಕಾಣಬರುವಂತೆ, ಚಿತ್ರದುರ್ಗ ಪರಿಸರದಲ್ಲಿಯೂ ಕಾಣಬರುತ್ತವೆ. ಕೆಲವು ನಿದರ್ಶನಗಳನ್ನು ಇಲ್ಲಿ ಗಮನಿಸಬಹುದು.

| | | | |
|---|---|---|---|
| ಬೇವಿನಹಳ್ಳಿಯವರು/ರ ಪೆನ್ನಯ್ಯ | ಆದಿಕರ್ನಾಟಕ | ಬಿ.ಜಿ.ಕೆರೆ | ಮೊಳಕಾಲ್ಮೂರು |
| ಹಿರೇಕೆರೆಹಳ್ಳಿಯವರು/ರ ಮಾರಣ್ಣ | ನಾಯಕ | ಕೋನಾಪುರ | ಮೊಳಕಾಲ್ಮೂರು |
| ಉಡೇವುದವರು/ರ ಸುಧರ್ಮ | ಕುರುಬ | ಚಳ್ಳಕೆರೆ | |
| ದೊಡ್ಡಮನೆಯವರು/ರ ತಿಮ್ಮಯ್ಯ | ಗೊಲ್ಲ | ಚಿತ್ರದುರ್ಗ | |
| ಗಾರೆಮನೆಯವರು/ರ ರಾಜಶೇಖರ | ನೇಕಾರರು | ಹೊಸದುರ್ಗ | |

| | | | |
|---|---|---|---|
| ಮಠದ ಭಾಗೀರಥಮ್ಮ | ಬೇಡಜಂಗಮ | ಮಠದ ಕುರುಬರಹಟ್ಟಿ | ಚಿತ್ರದುರ್ಗ |
| ಅತ್ತೀಗೆರೆ ಹಿರೇಮಠ ಮಾದಯ್ಯ | ವೀರಶೈವ | ಚಿತ್ರದುರ್ಗ | |
| ಹೊಸಕೋಟೆಯವರು/ರ ರಾಮಚಂದ್ರಪ್ಪ | ನೇಕಾರರು | ಕೊಂಡ್ಲಳ್ಳಿ | ಮೊಳಕಾಲ್ಮೂರು |
| ಗದ್ದೇರಮನೆ ಮಂಜಯ್ಯ | ನಾಯಕ | ಹೊಳಲ್ಕೆರ | |
| ಮುಸ್ಟಲಗುಮ್ಮ್ಯೋರು ನುಂಕಪ್ಪ | ಲಿಂಗಾಯತ | ಮೊಳಕಾಲ್ಮೂರು | - ಇತ್ಯಾದಿ |

ಇವುಗಳಲ್ಲದೆ ಕಟ್ಟೆಮನೆ, ಮೇಗಳಮನೆ, ಕೆಳಗಳಮನೆ, ಊರುಬಾಗಿಲು ಮನೆ, ಹಂಚಿನಮನೆ, ಮಾಳಿಗೆಮನೆ, ತೋಟದವರು ಮೊದಲಾದ ಸ್ಥಳನಾಮಗಳು ಕುಲನಾಮಗಳಾಗಿ ಬಳಕೆಯಾಗುತ್ತವೆ. ಸ್ಥಳವಾಚಿ ಕುಲನಾಮಗಳು ನಗರ ಪ್ರದೇಶಗಳಿಗಿಂತ, ಗ್ರಾಮೀಣ ಪರಿಸರದಲ್ಲಿ ಅಧಿಕವಾಗಿರುವುದನ್ನು ಗಮನಿಸಬಹುದಾಗಿದೆ.

### ೫.೮.೫ ಇತರೆ ಕುಲನಾಮಗಳು

ವ್ಯಕ್ತಿಯ ಜಾತಿ, ವೃತ್ತಿ, ಸ್ಥಳಗಳು ಮಾತ್ರವಲ್ಲದೆ, ಪದವಿಯ ಹೆಸರುಗಳೂ ಕುಲನಾಮಗಳಾಗಿ ಬಳಕೆಯಾಗುವುದುಂಟು. ಉದಾಹರಣೆಗೆ :

| | | | |
|---|---|---|---|
| ಗೊಂಚಿಕಾರ ಪಂಕಜಾಕ್ಷಿ | ಬಲಿಜ | ಚಳ್ಳಕೆರೆ | |
| ಪಟೇಲ ಪಾತಲಿಂಗಪ್ಪ | ನಾಯಕ | ಕವಾಡಿಗರಹಟ್ಟಿ | ಚಿತ್ರದುರ್ಗ |
| ಶಾನುಭೋಗ ಹುಲಿಕುಂಟಾಚಾರ್ಯ | ಬ್ರಾಹ್ಮಣ | ಮೊಳಕಾಲ್ಮೂರು | |
| ಪಟೇಲ ಪಾಪನಾಯಕ | ನಾಯಕ | ರಾಯಾಪುರ | ಮೊಳಕಾಲ್ಮೂರು |

ಜಾತಿ ಮತ್ತು ವ್ಯಕ್ತಿನಾಮ ಎರಡೂ ಏಕಕಾಲಕ್ಕೆ ಒಂದು ಘಟಕವಾಗಿ ಪರಿಣಮಿಸಿ, ಕುಲನಾಮಗಳಾಗಿ ಬಳಕೆಯಾಗಬಹುದು. ಉದಾಹರಣೆಗೆ :

| | | | |
|---|---|---|---|
| ಗೊಲ್ಲರ ಹೊಸ್ನೂರಪ್ಪನವರು/ರ ಬಸವರಾಜ | ಗೊಲ್ಲ | ಬಿ.ಜಿ.ಕೆರೆ | ಮೊಳಕಾಲ್ಮೂರು |
| ಗೊಲ್ಲರ ದೊಡ್ಡರಾಮಣ್ಣನವರು/ರ ರಾಜಗೋಪಾಲ | ಗೊಲ್ಲ | ದೇವಸಮುದ್ರ | ಮೊಳಕಾಲ್ಮೂರು |
| ಲಂಬಾಣಿ ತೋಳಚ್ಯಾ ನಾಯ್ಕರವರು/ರ ವೆಂಕಟೇಶ | . ಲಂಬಾಣಿ | ಚಳ್ಳಕೆರೆ | - ಇತ್ಯಾದಿ |

### ೫.೮.೬ ಸಂಕೀರ್ಣ ಕುಲನಾಮಗಳು

ಪೊನಗುಪಾಟಿ, ಪಂಚಾಂಗದವರು, ಚನ್ನಪಾಟಿ, ಕೋಟಿ, ಮಲ್ಲೂರಿನವರ್, ಕರಡೆಯರು, ಪೇಟ್ಲೋರು, ತ್ಯಾಬಾಲೋರು, ದುಂಬ್ಲೋರು, ಗುಂಜೆವಾಳ್ಳು, ಇಲ್ಲೂರಿ, ಮೂಲನ್ನೆವರು, ಇತ್ಯಾದಿ.

ಕನ್ನಡದಲ್ಲಿ ಕುಲನಾಮಗಳ ಬಗೆಗೆ ವ್ಯಾಪಕವಾದ ಅಧ್ಯಯನಗಳು ನಡೆದಿರುವುದಿಲ್ಲ. ಕುಲನಾಮಗಳು ವ್ಯಕ್ತಿಯ ಜಾತಿ, ವಂಶ, ವೃತ್ತಿ, ಸ್ಥಳ ಮೊದಲಾದ ಸಂಗತಿಗಳನ್ನು ಒಳಗೊಂಡಿದ್ದು, ವ್ಯಕ್ತಿಯ ಬಗೆಗೆ ಹಲವು ಮಾಹಿತಿಗಳನ್ನು ನೀಡುತ್ತದೆ. ಈ ದೃಷ್ಟಿಯಿಂದ ಕುಲನಾಮಗಳ ಅಧ್ಯಯನವೆಂದರೆ ಒಂದರ್ಥದಲ್ಲಿ ಸಂಸ್ಕೃತಿಯ ಅಧ್ಯಯನವೇ ಆಗುತ್ತದೆ. ಕನ್ನಡದ ಸಾಮಾಜಿಕ ಸಂದರ್ಭದಲ್ಲಿ ಕುಲನಾಮಗಳ ಬಳಕೆಗೆ ತುಂಬಾ ಪ್ರಾಚೀನ ಇತಿಹಾಸವಿದೆ. ಶಾಸನೋಕ್ತ ವ್ಯಕ್ತಿನಾಮಗಳಲ್ಲಿ ಬಳಕೆಯಾಗಿರುವ ಕುಲನಾಮಗಳು, ಅದರ ಪ್ರಾಚೀನತೆಯನ್ನು ದೃಢಪಡಿಸುತ್ತವೆ. ಪ್ರಾಯಶಃ ಕುಲನಾಮಗಳು ಮೊದಮೊದಲು ಕೆಲವೇ ವರ್ಗಗಳಲ್ಲಿ ಮಾತ್ರ ಚಾಲನೆಗೆ

ಬಂದಿದ್ದು, ಕ್ರಮೇಣ ಅದರ ಬಳಕೆ ಎಲ್ಲಾ ವರ್ಗಗಳಿಗೆ ವ್ಯಾಪಿಸಿರಬಹುದು. ಮೇಲ್ಜಾತಿ, ಮೇಲ್ವರ್ಗದವರ ಜಾತಿ ಮತ್ತು ವೃತ್ತಿಗಳು, ಸಮಾಜದ ಇತರ ಜಾತಿ, ವರ್ಗದವರ ವೃತ್ತಿ, ಜಾತಿಗಳಿಗಿಂತ 'ಶ್ರೇಷ್ಠ'ವಾದುದೆಂಬುದು ಮೇಲ್ಜಾತಿ - ಮೇಲ್ವರ್ಗದವರ ಭಾವನೆಯಾಗಿದೆ. ಆ ಕಾರಣಕ್ಕಾಗಿ ಮೇಲ್ಜಾತಿ, ಮೇಲ್ವರ್ಗದವರು ತಮ್ಮ ಜಾತಿ, ವೃತ್ತಿಗಳನ್ನು ಕುಲನಾಮಗಳಾಗಿ ಮೊದಲು ಬಳಸಿರಬಹುದು. "ತಮ್ಮ ವೃತ್ತಿ, ಅಧಿಕಾರ, ವಂಶಗಳ ಬಗ್ಗೆ ಹೆಮ್ಮೆಯಿರುವ ಶ್ರೀಮಂತ ವರ್ಗದವರಿಂದ ಕುಲನಾಮಗಳ ಬಳಕೆ ಆರಂಭವಾಗಿ, ಮುಂದೆ ಅದನ್ನು ಬೂರ್ಜ್ವಾ ಜನರೂ ಬಳಸಿದರು."[೬] ಪ್ರಾಚೀನ ಕಾಲದ ರಾಜಮಹಾರಾಜರು ತಮ್ಮ ರಾಜಮನೆತನಗಳ ಹೆಸರುಗಳಿಂದಲೇ ಹೆಚ್ಚು ಪ್ರಸಿದ್ಧರಾಗಿರುವುದನ್ನು ಇಲ್ಲಿ ಉಲ್ಲೇಖಿಸಬಹುದು. ಮೌರ್ಯ, ಗುಪ್ತ, ಕದಂಬ, ಚಾಲುಕ್ಯ, ಹೊಯ್ಸಳ, ವಿಜಯನಗರ ಇತ್ಯಾದಿ. ಹೀಗೆ ಜಾತಿ, ವೃತ್ತಿ, ವಂಶ ಮೊದಲಾದ ಹೆಸರುಗಳನ್ನು ಪ್ರಾಚೀನ ಕಾಲದ ಜನರು ತಮ್ಮ ಹೆಸರುಗಳಲ್ಲಿ ಸೇರಿಸಿಕೊಂಡಿರುವುದು (ಅಥವಾ ಬಳಸಿರುವುದು) ವ್ಯಕ್ತಿಯನ್ನು ಗುರುತಿಸಲು ಅನುಕೂಲವಾಗಲೆಂಬ ಉದ್ದೇಶದಿಂದ ಸಹಜವಾಗಿ ಬಳಸಿರಬಹುದು. ಈ ಹೆಸರುಗಳನ್ನು 'ಕುಲನಾಮ'ಗಳ ಅರ್ಥದಲ್ಲಿ ಬಳಸದೆ, ತಮ್ಮ ಜಾತಿ, ವಂಶ, ಮನೆತನಗಳ ಅನನ್ಯತೆಯನ್ನು ಮೆರೆಯುವ ಉದ್ದೇಶದಿಂದ ಬಳಸಿರಬಹುದು. ಈ ಹೆಸರುಗಳನ್ನು 'ಕುಲನಾಮ' ಎಂಬ ಪರಿಭಾಷೆಯಲ್ಲಿಯೇ ಉಪಯೋಗಿಸಿದ್ದಾರೆ ಎಂಬುದಕ್ಕೆ ಸ್ಪಷ್ಟ ಆಧಾರಗಳು ಇರುವುದಿಲ್ಲ. 'ಕುಲನಾಮ' ಎಂಬ ಪರಿಕಲ್ಪನೆಯೇ ಅವರಿಗೆ ತಿಳಿಯದೆ ಇದ್ದಿರಬಹುದು! ಅಂಥ ಹೆಸರುಗಳಿಗೆ ವೈಜ್ಞಾನಿಕ ಸ್ವರೂಪ, ಪರಿಭಾಷೆಗಳನ್ನು ಕಲ್ಪಿಸಿ, 'ಕುಲನಾಮ'ಗಳೆಂದು ಗುರುತಿಸುವ ಪ್ರಯತ್ನ, ಆಧುನಿಕ ಅಧ್ಯಯನಗಳ ಒಂದು ಕ್ರಮವಾಗಿದೆ.

ಹೆಸರು ಮತ್ತು ನಾಮಕರಣದ ಆಶಯ ಯಾವ ಕಾಲಕ್ಕೂ ಒಂದೇ ಆಗಿರುತ್ತದೆ. ಅವುಗಳ ಉದ್ದೇಶವನ್ನು ವ್ಯತ್ಯಾಸ ಮಾಡಲು ಬರುವುದಿಲ್ಲ. ಈ ನಿಯಮ ಅಡ್ಡಹೆಸರು ಮತ್ತು ಕುಲನಾಮಗಳಿಗೂ ಅನ್ವಯಿಸುತ್ತದೆ. ಆದರೆ ಅವುಗಳ ಸ್ವರೂಪ ಮತ್ತು ಆಚರಣಾ ವಿಧಾನಗಳು ಹಲವು ಬಗೆಯ ಸ್ಥಿತ್ಯಂತರಗಳಿಗೆ ಒಳಗಾಗಿವೆ. ಈ ಬದಲಾವಣೆಗಳು ಕಾಲದ ದೃಷ್ಟಿಯಿಂದ ಮಾತ್ರವಲ್ಲ, ಜನಾಂಗದ ದೃಷ್ಟಿಯಿಂದಲೂ ಆಗಿದೆ. ಸೂಕ್ಷ್ಮವಾಗಿ ಗಮನಿಸಿದಾಗ ಒಂದು ಕಾಲದ, ಒಂದು ಪ್ರದೇಶದ, ಒಂದು ಜನಾಂಗದ ನಡುವೆ ಹೆಸರು ಮತ್ತು ನಾಮಕರಣದ ಆಚರಣಾ ಪದ್ಧತಿಗಳು, ನಂಬಿಕೆಗಳು ಬೇರೆ ಬೇರೆಯಾಗಿವೆ. ಬಹಳ ಮುಖ್ಯವಾಗಿ, ಆಚರಣೆ ಮತ್ತು ನಂಬಿಕೆಗಳ ಹಿಂದಿನ ವಾಸ್ತವ ಸಂಗತಿಗಳ ವೈಜ್ಞಾನಿಕ ವಿಶ್ಲೇಷಣೆಯಾಗಬೇಕಾಗಿದೆ. ಸಾಂದರ್ಭಿಕವಾಗಿ ನಾಮಕರಣ ವಿಧಾನ ಮತ್ತು ನಂಬಿಕೆಗಳ ಬಗೆಗೆ ಕೆಲವು ಅಧ್ಯಯನಗಳು ಆಗಿದ್ದರೂ, ಸಮಗ್ರವಾದ ಅಧ್ಯಯನಗಳು ಆಗಿರುವುದಿಲ್ಲ. ಈ ದೃಷ್ಟಿಯಿಂದ ಬಿಡಿ ಬಿಡಿಯಾದ ಅಧ್ಯಯನಗಳ ಜತೆಗೆ ತೌಲನಿಕ ವಿಮರ್ಶೆಗಳೂ ಆಗಬೇಕಾಗಿದೆ. ಆಗ ಪರಸ್ಪರ ಸಮುದಾಯಗಳ ನಡುವಿನ ಸಾಂಸ್ಕೃತಿಕ ಸಾಮ್ಯತೆ ಮತ್ತು ಅನನ್ಯತೆಯ ಅಂಶಗಳು ಗೋಚರವಾಗಬಹುದು. ಆ ಮೂಲಕ ಅಂಥ ಅಧ್ಯಯನಗಳು ಹೆಚ್ಚು ಪ್ರಯೋಜನಕಾರಿಯಾಗುತ್ತವೆ.

ಅಡ್ಡಹೆಸರು ಮತ್ತು ಕುಲನಾಮಗಳ ಬಳಕೆ ಕುತೂಹಲಕರವಾದುದು. ಚಿತ್ರದುರ್ಗ ಪರಿಸರದಲ್ಲಿ ಅಡ್ಡಹೆಸರು, ಕುಲನಾಮಗಳ ಬಳಕೆ, ಸ್ವರೂಪ ಮತ್ತು ಆಕರಗಳ ದೃಷ್ಟಿಯಿಂದ ವೈವಿಧ್ಯಮಯವಾಗಿದೆ. ಅಲ್ಲದೆ ಪ್ರಮಾಣದ ದೃಷ್ಟಿಯಿಂದ ಕೆಳಜಾತಿಗಳಲ್ಲಿ ಅಧಿಕವಾಗಿದ್ದರೆ, ಮೇಲ್ ಜಾತಿಗಳಲ್ಲಿ ಗೌಣವಾಗಿರುವುದು ತಿಳಿದುಬರುತ್ತದೆ. ಇದೇ ರೀತಿಯಾಗಿ ಇತರ ಪರಿಸರಗಳಲ್ಲಿ ಇವುಗಳ ಸ್ವರೂಪ, ಆಕರ, ಆಶಯ, ಬಳಕೆಯ

ಸಂದರ್ಭ, ಜಾತಿ, ವರ್ಗ ಮತ್ತು ಪ್ರಾದೇಶಿಕವಾಗಿ ಕಾಣಬರುವ ಸಾಮ್ಯತೆ ಮತ್ತು ವೈಶಿಷ್ಟ್ಯಗಳನ್ನು ಕುರಿತು ಅಧ್ಯಯನ ಮಾಡಬಹುದು. ಇತ್ತೀಚಿನ ದಿನಮಾನಗಳಲ್ಲಿ ಅಡ್ಡಹೆಸರು ಮತ್ತು ಕುಲನಾಮಗಳ ಬಳಕೆ ಕಡಿಮೆಯಾಗುತ್ತಿದೆ. 'ಅಡ್ಡಹೆಸರು' ವ್ಯಕ್ತಿಯನ್ನು ಅಸಮಧಾನಗೊಳಿಸುವ ವ್ಯಕ್ತಿಗೆ ಒಪ್ಪಿತವಲ್ಲದ ಹೆಸರಾಗಿದ್ದರೂ, ಕೆಲವು ಸಂದರ್ಭಗಳಲ್ಲಿ, ಅನ್ಯೋನ್ಯತೆಯ ಸಂಕೇತವಾಗಿಯೂ, ಮುದ್ದು ಹೆಸರಾಗಿಯೂ ಬಳಸಲ್ಪಡುತ್ತದೆ. ಆಧುನೀಕರಣ ಮತ್ತು ಜಾಗತೀಕರಣದ ಪ್ರಭಾವದಿಂದ ಪರಸ್ಪರ ಜನರ ನಡುವಿನ ಮಾನವೀಯ ಸಂಬಂಧಗಳು ತೆಳುವಾಗುತ್ತಿವೆ. ಯಾಂತ್ರಿಕವಾಗುತ್ತಿವೆ. ಪರಿಣಾಮವಾಗಿ ಈ ಹೆಸರುಗಳು ಬಳಕೆಯಿಂದ ದೂರಸರಿಯುತ್ತಿವೆ.

## ಅಡಿಟಿಪ್ಪಣಿಗಳು

೧. ಡಾ.ಕೆ.ವಿ.ನಾರಾಯಣ (ಸಂ), ವ್ಯಕ್ತಿನಾಮಗಳು : ಸ್ವರೂಪ ಮತ್ತು ವಿಶ್ಲೇಷಣೆ, ಪು. ೧, ೨೦೦೦
೨. ದೇಜಗೌ, ಜಾನಪದ ಸೌಂದರ್ಯ, ಪು. ೯೪, ೧೯೭೭
೩. ಡಾ. ಉಪ್ಪಂಗಳ ರಾಮಭಟ್ಟ, ವಿಕಿರಣ, ಪು. ೩೦
೪. ಡಾ. ಕೆ.ವಿ.ನಾರಾಯಣ (ಸಂ), ವ್ಯಕ್ತಿನಾಮಗಳು : ಸ್ವರೂಪ ಮತ್ತು ವಿಶ್ಲೇಷಣೆ, ಪು. ೪, ೨೦೦೦
೫. ದೇಜಗೌ, ಜಾನಪದ ಸೌಂದರ್ಯ, ಪು. ೯೧, ೧೯೭೭
೬. ಡಾ. ಎಂ.ಎಂ. ಕಲಬುರ್ಗಿ, ಕನ್ನಡ ನಾಮವಿಜ್ಞಾನ, ಪು. ೧೩, ೧೯೮೯
೭. ಡಾ. ಎಂ.ಚಿದಾನಂದಮೂರ್ತಿ, ವಾಗರ್ಥ, ಪು. ೫೭, ೧೯೮೧
೮. ವಕ್ತೃವಿನ ಹೆಸರು : ಗೋವಿಂದಪ್ಪ, ಜಾತಿ : ಗೊಲ್ಲ, ವಯಸ್ಸು : ೪೬, ಸ್ಥಳ : ದೇವಸಮುದ್ರ, ಮೊಳಕಾಲ್ಮೂರು ತಾಲೂಕು, ಸಂದರ್ಶನ ದಿನಾಂಕ - ೨೧.೦೩.೨೦೦೧
೯. ವಕ್ತೃವಿನ ಹೆಸರು : ಮಾರಪ್ಪ, ಜಾತಿ : ಆದಿಕರ್ನಾಟಕ, ವಯಸ್ಸು : ೫೫, ಸ್ಥಳ : ತುಮಕೂರ್ಲಹಳ್ಳಿ ಮೊಳಕಾಲ್ಮೂರು - ತಾಲೂಕು, ಸಂದರ್ಶನ ದಿನಾಂಕ: ೧೨.೦೭.೨೦೦೧
೧೦. ವ.ಹೆ: ಹೊನ್ನೂರಪ್ಪ, ಜಾತಿ : ಆದಿಕರ್ನಾಟಕ, ವಯಸ್ಸು: ೪೬, ಸ್ಥಳ : ನಾಯ್ಕನಹಟ್ಟಿ, ಚಳ್ಳಕೆರೆ ತಾಲೂಕು, ಸಂದರ್ಶನ ದಿನಾಂಕ: ೧೯.೦೭.೨೦೦೧
೧೧. ವ.ಹೆ: ತಿಪ್ಪೇಸ್ವಾಮಿ, ಜಾತಿ : ನಾಯಕ, ವಯಸ್ಸು : ೫೨, ಸ್ಥಳ : ಚಿತ್ರದುರ್ಗ, ಸಂದರ್ಶನ ದಿನಾಂಕ : ೨೨.೦೯.೨೦೦೦
೧೨. ವ.ಹೆ: ಶಿವಣ್ಣ, ಜಾತಿ : ಲಿಂಗಾಯತ, ವಯಸ್ಸು : ೪೧, ಸ್ಥಳ : ಕೊಂಡ್ಲಹಳ್ಳಿ, ಮೊಳಕಾಲ್ಮೂರು ತಾಲೂಕು, ಸಂದರ್ಶನ ದಿನಾಂಕ : ೧೭.೦೭.೨೦೦೧
೧೩. ವ.ಹೆ: ಪಾಪಮ್ಮ, ಜಾತಿ : ನಾಯಕ, ವಯಸ್ಸು : ೩೮, ಸ್ಥಳ : ರಾಯಾಪುರದ ಮ್ಯಾಸರಹಟ್ಟಿ, ಮೊಳಕಾಲ್ಮೂರು ತಾಲೂಕು. ಸಂದರ್ಶನದ ದಿನಾಂಕ : ೨೨.೦೯.೨೦೦೦
೧೪. ವ.ಹೆ: ಅಕ್ಕಮ್ಮ, ಜಾತಿ : ವಿಶ್ವಕರ್ಮ, ವಯಸ್ಸು : ೨೪, ಸ್ಥಳ : ಹೊಳಲ್ಕೆರೆ, ಸಂದರ್ಶನ ದಿನಾಂಕ : ೧೧.೦೭.೨೦೦೧
೧೫. ವ.ಹೆ: ನಿರ್ಮಲ, ಜಾತಿ : ಗೊಲ್ಲ, ವಯಸ್ಸು : ೨೮, ಸ್ಥಳ : ಚಳ್ಳಕೆರೆ, ಸಂದರ್ಶನ ದಿನಾಂಕ : ೨೨.೦೭.೨೦೦೧
೧೬. ವ.ಹೆ: ಮಾರಕ್ಕ, ಜಾತಿ : ನಾಯಕ, ವಯಸ್ಸು : ೪೨, ಸ್ಥಳ : ಚಿತ್ರದುರ್ಗ, ಸಂದರ್ಶನ ದಿನಾಂಕ : ೨೦.೦೭.೨೦೦೧
೧೭. ವ.ಹೆ: ಮಲಿಯಮ್ಮ, ಜಾತಿ : ಹರಿಜನ, ವಯಸ್ಸು : ೩೦, ಸ್ಥಳ : ಹಿರಿಯೂರು, ಸಂದರ್ಶನ ದಿನಾಂಕ : ೧೫.೦೭.೨೦೦೧
೧೮. ವ.ಹೆ: ಗಂಗಮ್ಮ, ಜಾತಿ : ಲಿಂಗಾಯತ, ವಯಸ್ಸು : ೫೨, ಸ್ಥಳ : ಹೊಸದುರ್ಗ, ಸಂದರ್ಶನ ದಿನಾಂಕ : ೧೮.೦೭.೨೦೦೧
೧೯. ವ.ಹೆ: ಗಾಯಿತ್ರಿ, ಜಾತಿ : ಕುರುಬ, ವಯಸ್ಸು : ೩೪, ಸ್ಥಳ : ಗುಡ್ಡದರಂಗವ್ವನಹಳ್ಳಿ - ಚಿತ್ರದುರ್ಗ, ಸಂದರ್ಶನ ದಿನಾಂಕ: ೨೫.೧೦.೨೦೦೧
೨೦. ವ.ಹೆ: ಮಾರನಾಯಕ, ಜಾತಿ : ನಾಯಕ, ವಯಸ್ಸು : ೩೯, ಸ್ಥಳ : ಚಳ್ಳಕೆರೆ, ಸಂದರ್ಶನ ದಿನಾಂಕ : ೨೧.೧೦.೨೦೦೧
೨೧. ವ.ಹೆ: ನಾಗಮ್ಮ, ಜಾತಿ : ಉಪ್ಪಾರ, ವಯಸ್ಸು : ೧೮, ಸ್ಥಳ : ಚಿತ್ರದುರ್ಗ, ಸಂದರ್ಶನ ದಿನಾಂಕ : ೨೪.೧೦.೨೦೦೨
೨೨. ವ.ಹೆ: ಗೌರಮ್ಮ, ಜಾತಿ : ಕುಂಚಟಿಗ, ವಯಸ್ಸು : ೨೧, ಸ್ಥಳ : ಚಿತ್ರದುರ್ಗ, ಸಂದರ್ಶನ ದಿನಾಂಕ : ೨೪.೧೦.೨೦೦೨
೨೩. ವ.ಹೆ: ಶಿವಮ್ಮ, ಜಾತಿ : ಹರಿಜನ, ವಯಸ್ಸು : ೨೩, ಸ್ಥಳ : ಹೊಳಲ್ಕೆರೆ, ಸಂದರ್ಶನ ದಿನಾಂಕ : ೨೨.೧೦.೨೦೦೨
೨೪. ವ.ಹೆ: ಗೌರಮ್ಮ, ಜಾತಿ : ಜಂಗಮ, ವಯಸ್ಸು : ೪೧, ಸ್ಥಳ : ಗುಡ್ಡದರಂಗವ್ವನಹಳ್ಳಿ, ಚಿತ್ರದುರ್ಗ, ಸಂದರ್ಶನ ದಿನಾಂಕ : ೨೨.೦೯.೨೦೦೦

೨೫. ವ.ಹೆ: ಜಯತುನ್ ಬಿ, ಜಾತಿ : ಮುಸ್ಲಿಂ, ವಯಸ್ಸು : ೨೪, ಸ್ಥಳ : ಉಡೇವು, ಮೊಳಕಾಲ್ಮೂರು ತಾಲೂಕು, ಸಂದರ್ಶನ ದಿನಾಂಕ : ೧೮.೧೨.೨೦೦೨

೨೬. ವ.ಹೆ: ಕೆ.ಆರ್ ಜೆ. ರಾಜ್ ಕುಮಾರ, ಜಾತಿ : ಮಾದಿಗ, ವಯಸ್ಸು : ೨೬, ಸ್ಥಳ : ಹೊಸದುರ್ಗ, ಸಂದರ್ಶನ ದಿನಾಂಕ : ೨೫.೧೦.೨೦೦೨

೨೭. ಡಾ. ಎಂ.ಚಿದಾನಂದಮೂರ್ತಿ, ವಾಗರ್ಥ, ಪು. ೫೭, ೧೯೮೧

೨೮. ಡಾ. ಎಂ.ಎಂ.ಕಲಬುರ್ಗಿ, ಕನ್ನಡ ನಾಮವಿಜ್ಞಾನ, ಪು. ೧೩, ೧೯೮೯

೨೯. ದೇಜಗೌ, ಜಾನಪದ ಸೌಂದರ್ಯ, ಪು. ೯೩, ೧೯೭೭

೩೦. ಡಾ. ಕೆ.ವಿ.ನಾರಾಯಣ (ಸಂ), ವ್ಯಕ್ತಿನಾಮಗಳು : ಸ್ವರೂಪ ಮತ್ತು ವಿಶ್ಲೇಷಣೆ, ಪು. ೧೫, ೨೦೦೦

೩೧. ದೇಜಗೌ, ಜಾನಪದ ಸೌಂದರ್ಯ, ಪು. ೯೩, ೧೯೭೭

೩೨. ವ.ಹೆ: ತಿಪ್ಪಮ್ಮ, ಜಾತಿ : ಗೊಲ್ಲ, ವಯಸ್ಸು : ೨೬, ಸ್ಥಳ : ಗೋಪನಹಳ್ಳಿ, ಚಳ್ಳಕೆರೆ ತಾಲೂಕು, ಸಂದರ್ಶನ ದಿನಾಂಕ : ೨೫.೧೦.೨೦೦೧

೩೩. ವ.ಹೆ: ಮಾರಯ್ಯ, ಜಾತಿ : ನಾಯಕ, ವಯಸ್ಸು : ೪೨, ಸ್ಥಳ : ಮುತ್ತಿಗಾರಹಳ್ಳಿ, ಮೊಳಕಾಲ್ಮೂರು ತಾಲೂಕು, ಸಂದರ್ಶನ ದಿನಾಂಕ : ೩೦.೧೦.೨೦೦೧

೩೪. ವ.ಹೆ: ಕರಿಯಪ್ಪ, ಜಾತಿ : ಕುರುಬ, ವಯಸ್ಸು : ೨೯, ಸ್ಥಳ : ಹೊಳಲ್ಕೆರೆ, ಸಂದರ್ಶನ ದಿನಾಂಕ : ೨೭.೧೦.೨೦೦೧

೩೫. ವ.ಹೆ: ಬಸವರಾಜ, ಜಾತಿ : ಲಿಂಗಾಯತ, ವಯಸ್ಸು : ೪೩, ಸ್ಥಳ : ಚಿತ್ರದುರ್ಗ, ಸಂದರ್ಶನ ದಿನಾಂಕ : ೨೧.೦೭.೨೦೦೦

೩೬. ವ.ಹೆ: ಸಿದ್ಧಣ್ಣ, ಜಾತಿ : ನಾಯಕ, ವಯಸ್ಸು : ೪೬, ಸ್ಥಳ : ಚಳ್ಳಕೆರೆ, ಸಂದರ್ಶನ ದಿನಾಂಕ : ೨೬.೦೬.೨೦೦೦

೩೭. ವ.ಹೆ: ದೇವ್ಲಾನಾಯ್ಕ, ಜಾತಿ : ಲಂಬಾಣಿ, ವಯಸ್ಸು : ೩೨, ಸ್ಥಳ : ಮೊಳಕಾಲ್ಮೂರು, ಸಂದರ್ಶನ ದಿನಾಂಕ : ೨೨.೧೦.೨೦೦೧

೩೮. ದೇಜಗೌ, ಜಾನಪದ ಸೌಂದರ್ಯ, ಪು. ೯೩, ೧೯೭೭

೩೯. ವ.ಹೆ: ತಿಪ್ಪೇಸ್ವಾಮಿ, ಜಾತಿ : ನಾಯಕ, ವಯಸ್ಸು : ೩೮, ಸ್ಥಳ : ನಲಗೇತನಹಟ್ಟಿ, ಚಳ್ಳಕೆರೆ ತಾಲೂಕು, ಸಂದರ್ಶನ ದಿನಾಂಕ : ೨೨.೦೭.೨೦೦೧

೪೦. ವ.ಹೆ: ಬಾಬುರೆಡ್ಡಿ, ಜಾತಿ : ರೆಡ್ಡಿ, ವಯಸ್ಸು : ೪೦, ಸ್ಥಳ : ಕವಾಡಿಗರಹಟ್ಟಿ, ಚಿತ್ರದುರ್ಗ, ಸಂದರ್ಶನ ದಿನಾಂಕ : ೧೮.೦೭.೨೦೦೦

೪೧. ವ.ಹೆ: ಗೋವಿಂದರಾಜು, ಜಾತಿ : ನಾಯಕ, ವಯಸ್ಸು : ೩೦, ಸ್ಥಳ : ಬೊಮ್ಮದೇವರಹಳ್ಳಿ, ಮೊಳಕಾಲ್ಮೂರು ತಾಲೂಕು, ಸಂದರ್ಶನ ದಿನಾಂಕ : ೧೧.೧೦.೨೦೦೧

೪೨. ವ.ಹೆ: ಅಶ್ವಿನಿ ಆರ್ . ಜಾತಿ : ನೇಕಾರ, ವಯಸ್ಸು : ೪೨, ಸ್ಥಳ : ರಾಂಪುರ, ಮೊಳಕಾಲ್ಮೂರು ತಾಲೂಕು, ಸಂದರ್ಶನ ದಿನಾಂಕ : ೨೪.೧೧.೨೦೦೧

೪೩. ವ.ಹೆ: ಕಮಲ, ಜಾತಿ : ನಾಯಕ, ವಯಸ್ಸು : ೨೯, ಸ್ಥಳ : ತಳಕು, ಚಳ್ಳಕೆರೆ ತಾಲೂಕು, ಸಂದರ್ಶನದ ದಿನಾಂಕ : ೨೦.೧೧.೨೦೦೧

೪೪. ವ.ಹೆ: ಬಸಪ್ಪ, ಜಾತಿ : ಲಿಂಗಾಯತ, ವಯಸ್ಸು : ೩೩, ಸ್ಥಳ : ಚಿತ್ರದುರ್ಗ, ಸಂದರ್ಶನ ದಿನಾಂಕ : ೨೧.೦೭.೨೦೦೦

೪೫. ವ.ಹೆ: ಲೋಕಮ್ಮ, ಜಾತಿ : ಕುರುಬ, ವಯಸ್ಸು : ೨೯. ಸ್ಥಳ : ಚೋಳಗಟ್ಟ, ಚಿತ್ರದುರ್ಗ, ಸಂದರ್ಶನ ದಿನಾಂಕ : ೨೨.೦೬.೨೦೦೦

೪೬. ವ.ಹೆ: ಲಕ್ಷ್ಮಿದೇವಿ, ಜಾತಿ : ಕೊರಚ, ವಯಸ್ಸು : ೩೪. ಸ್ಥಳ : ಹೊಸದುರ್ಗ, ಸಂದರ್ಶನ ದಿನಾಂಕ : ೨೭.೦೭.೨೦೦೦

೪೭. ವ.ಹೆ: ಪ್ರಭಾಕರ, ಜಾತಿ : ಲಿಂಗಾಯತ, ವಯಸ್ಸು : ೪೧, ಸ್ಥಳ : ಹಿರಿಯೂರು, ಸಂದರ್ಶನ ದಿನಾಂಕ : ೨೯.೧೦.೨೦೦೧

೪೮. ಡಾ. ಎಂ.ಎಂ.ಕಲಬುರ್ಗಿ, ಕನ್ನಡ ನಾಮವಿಜ್ಞಾನ, ಪುಟ ೨೩, ೧೯೮೯

೪೯. ಡಾ. ಎಂ.ಚಿದಾನಂದಮೂರ್ತಿ, ವಾಗರ್ಥ, ಪುಟ ೩೫, ೧೯೮೧

೫೦. ಡಾ. ಎಂ.ಎಂ.ಕಲಬುರ್ಗಿ, ಕನ್ನಡ ನಾಮವಿಜ್ಞಾನ, ಪು. ೧೯೮೯

೫೧. ಅದೇ, ಪು. ೧೯೮೯

೫೨. ವ.ಹೆ: ದೊಡ್ಡಮಲ್ಲಯ್ಯ, ಜಾತಿ : ನಾಯಕ, ವಯಸ್ಸು : ೩೪, ಸ್ಥಳ : ಕಾರ್ತಿಕೇನಹಟ್ಟಿ, ಚಳ್ಳಕೆರೆ ತಾಲೂಕು, ಸಂದರ್ಶನ ದಿನಾಂಕ : ೨೪.೦೪.೨೦೦೩

೫೩. ವ.ಹೆ: ಜಗದೀಶ, ಜಾತಿ : ಕುರುಬ, ವಯಸ್ಸು : ೨೧, ಸ್ಥಳ : ಪಂಡ್ರಹಳ್ಳಿ, ಚಿತ್ರದುರ್ಗ, ಸಂದರ್ಶನ ದಿನಾಂಕ : ೨೪.೦೭.೨೦೦೦

೫೪. ವ.ಹೆ: ಚಂದ್ರಪ್ಪ, ಜಾತಿ : ಲಿಂಗಾಯತ, ವಯಸ್ಸು : ೧೬, ಸ್ಥಳ : ನಾಯ್ಕನಹಟ್ಟಿ, ಚಳ್ಳಕೆರೆ ತಾಲೂಕು, ಸಂದರ್ಶನ ದಿನಾಂಕ : ೨೭.೦೭.೨೦೦೧

೫೫. ವ.ಹೆ: ಮಲ್ಲಯ್ಯ, ಜಾತಿ : ನಾಯಕ, ವಯಸ್ಸು : ೩೬, ಸ್ಥಳ : ಕೋನಸಾಗರ, ಮೊಳಕಾಲ್ಮೂರು ತಾಲೂಕು, ಸಂದರ್ಶನ ದಿನಾಂಕ : ೨೫.೧೨.೨೦೦೨

೫೬. ವ.ಹೆ: ಮಲ್ಲಮ್ಮ, ಜಾತಿ : ನಾಯಕ, ವಯಸ್ಸು : ೩೫, ಸ್ಥಳ : ನೇತ್ರನಹಳ್ಳಿ, ಮೊಳಕಾಲ್ಮೂರು ತಾಲೂಕು, ಸಂದರ್ಶನ ದಿನಾಂಕ : ೨೨.೧೨.೨೦೦೨

೫೭. ವ.ಹೆ: ಪದ್ಮಮ್ಮ, ಜಾತಿ : ಈಡಿಗ, ವಯಸ್ಸು : ೨೯, ಸ್ಥಳ : ಕಾರ್ತಿಕೇನಹಟ್ಟಿ, ಚಳ್ಳಕೆರೆ, ಸಂದರ್ಶನ ದಿನಾಂಕ : ೨೪.೦೪. ೨೦೦೩

೫೮. ಡಾ. ಎಂ.ಎಂ.ಕಲಬುರ್ಗಿ, ಕನ್ನಡ ನಾಮವಿಜ್ಞಾನ, ಪು. ೨೬, ೧೯೮೯

೫೯. ಡಾ. ಮ.ಗು.ಬಿರಾದಾರ, ಕಲಾ-ಗಂಗಾ, ಜೂನ್ - ಡಿಸೆಂಬರ್ , ೧೯೯೧

೬೦. ಡಾ. ಕೆ.ವಿ.ನಾರಾಯಣ (ಸಂ), ವ್ಯಕ್ತಿನಾಮಗಳು : ಸ್ವರೂಪ ಮತ್ತು ವಿಶ್ಲೇಷಣೆ, ಪು. ೫೭, ೨೦೦೦

೬೧. ಉದ್ಧೃತ : ಡಾ. ಎಂ.ಚಿದಾನಂದಮೂರ್ತಿ, ವಾಗರ್ಥ, ಪು. ೬೯, ೧೯೮೧



ಅಧ್ಯಾಯ - ೬

# ವ್ಯಕ್ತಿನಾಮಗಳು : ಆಧುನಿಕತೆ

೬. ಪ್ರವೇಶ

೬.೧. ಪರಂಪರೆ

೬.೨. ಜಾತಿ

೬.೩. ವೃತ್ತಿ

೬.೪. ದೈವ

೬.೫. ಚರಿತ್ರೆ

೬.೬. ಭಾವನಾಮಗಳ ವ್ಯಾಪಕತೆ

೬.೭. ಸಾಮಾಜಿಕ ಆಯಾಮಗಳು

೬.೮. ಲಿಂಗಸಂಬಂಧಿ ಆಯಾಮಗಳು

ಅಧ್ಯಾಯ - ೬

# ವ್ಯಕ್ತಿನಾಮಗಳು : ಆಧುನಿಕತೆ

## ೬. ಪ್ರವೇಶ

ಆಧುನಿಕತೆಯ ಪ್ರಭಾವದಿಂದಾಗಿ ಇಂದು ಹಲವಾರು ಕ್ಷೇತ್ರಗಳು ಮಹತ್ತರವಾದ ಬದಲಾವಣೆಗೆ ಒಳಪಟ್ಟಿವೆ. ತೀವ್ರವಾಗಿ ಪ್ರಭಾವಿಸುತ್ತಿರುವ ವಿಜ್ಞಾನ ಮತ್ತು ತಂತ್ರಜ್ಞಾನ ಸಾಂಸ್ಕೃತಿಕ ಸಾಹಿತ್ಯಿಕ ವಲಯದಲ್ಲಿಯೂ ವ್ಯಾಪಕವಾಗಿ ಹರಡಿ ತೀವ್ರವಾದ ಸ್ಥಿತ್ಯಂತರಗಳಿಗೆ ಕಾರಣವಾಗಿದೆ. ಆಯಾ ಕಾಲಮಾನಕ್ಕೆ ತಕ್ಕಂತೆ ಈ ಬದಲಾವಣೆಯು ಅನಿವಾರ್ಯವೇ. ಆದರೆ ಇದು ಸಂಸ್ಕೃತಿಯ ಮೂಲ ಸೊಗಡನ್ನು ಒಂದೊಮ್ಮೆ ಅಳಿಸುವ ಆತಂಕಗಳೂ ಇವೆ. ಈ ದೃಷ್ಟಿಯಿಂದ ಆಧುನಿಕತೆಯ ಆಹ್ವಾನವನ್ನು ಎಚ್ಚರಿಕೆಯಿಂದ ನೋಡಬೇಕಾಗಿದೆ. ಜಾಗತೀಕರಣದಂತಹ ಪ್ರಭಾವದಿಂದಲೂ ಈ ಬಗೆಯ ಧೋರಣೆಯನ್ನು ನೋಡಬಹುದು. ಮುಖ್ಯವಾಗಿ ವ್ಯಕ್ತಿನಾಮಗಳ ಮೇಲೂ ಆಧುನಿಕತೆಯ ಪ್ರಭಾವವನ್ನು ಗುರುತಿಸಬಹುದು. ವ್ಯಕ್ತಿಯ ಹೆಸರುಗಳ ಮೇಲೆ ವ್ಯಾಪಕವಾದ ಬದಲಾವಣೆಯು ಈಚಿನ ದಶಕಗಳಲ್ಲಿ ಉಂಟಾಗಿದೆ. ಕನ್ನಡ ಪರಿಸರದಲ್ಲಿ ಹತ್ತನೆಯ ಶತಮಾನದಿಂದ ಕೆಲವು ಲಿಖಿತ ದಾಖಲೆಗಳನ್ನು ಗಮನಿಸಿದರೆ ಇಪ್ಪತ್ತನೆಯ ಶತಮಾನದ ಈ ಹೊತ್ತಿಗೆ ವ್ಯಕ್ತಿನಾಮಗಳಲ್ಲಿ ಆದಂತಹ ಕಾಲಾತ್ಮಕ ಬದಲಾವಣೆಯನ್ನು ಸ್ಪಷ್ಟವಾಗಿ ಗುರುತಿಸಬಹುದು. ಈ ಬದಲಾವಣೆಗೆ ಸಾಮಾಜಿಕ-ರಾಜಕೀಯ-ಸಾಂಸ್ಕೃತಿಕ ಕಾರಣಗಳಿವೆ. ಆಯಾ ಉದ್ದೇಶಗಳ ಹಿನ್ನೆಲೆಯಲ್ಲಿ ಸ್ಥಿತ್ಯಂತರ ಪಡೆದುಕೊಂಡ ವ್ಯಕ್ತಿನಾಮಗಳಿಗೆ ಭೌಗೋಳಿಕ ಆಯಾಮವೂ ಕಾರಣವಾಗುತ್ತದೆಂಬುದನ್ನು ಗಮನಿಸಬಹುದು. ಅಂದರೆ ಕನ್ನಡ ಪರಿಸರಕ್ಕೂ ಭಾರತದ ಇತರೆ ಭೌಗೋಳಿಕ ವಲಯಕ್ಕೂ ಈ ಬದಲಾವಣೆಯ ಧೋರಣೆಯು ವ್ಯತ್ಯಾಸವಾಗಬಹುದು. ಅದೇನಿದ್ದರೂ ವ್ಯಕ್ತಿನಾಮ ಬದಲಾವಣೆಯ ಪ್ರಕ್ರಿಯೆಯಲ್ಲಿ ಆಧುನಿಕತೆಯೆಂಬುದು ಪ್ರವೇಶಿಸಿದ್ದು ಆಕಸ್ಮಿಕವಲ್ಲ. ಅದೊಂದು ಅನಿವಾರ್ಯವಾಗಿ ಬರಬಹುದಾದ ಸಂಗತಿಯೆಂಬುದನ್ನು ಅಲ್ಲಗಳೆಯಲಾಗದು.

ಮುಖ್ಯವಾಗಿ ವ್ಯಕ್ತಿನಾಮಗಳ ಆಧುನಿಕತೆಗೆ ಜಾತಿ, ವೃತ್ತಿ, ಚರಿತ್ರೆ, ದೈವ, ಭಾಷಿಕ ಸಂದರ್ಭಗಳು, ಧರ್ಮ, ಸಿನಿಮಾ, ರಂಗಭೂಮಿ, ಸಾಹಿತ್ಯ, ಸಂಸ್ಕೃತಿ, ಕ್ರೀಡೆ, ತಂತ್ರಜ್ಞಾನ, ವಿಜ್ಞಾನ, ನಗರೀಕರಣ ಮುಂತಾದ ಹಲವಾರು ಅಂಶಗಳು ಕಾರಣವಾಗುತ್ತವೆ. ಈ ಅಂಶಗಳು (ಒಂದೇ ಸಮಯದಲ್ಲಿ) ಏಕಕಾಲಕ್ಕೆ ತಮ್ಮ ಚಲನೆಯನ್ನು ಮುಮ್ಮುಖವಾಗಿಯೂ, ಹಿಮ್ಮುಖವಾಗಿಯೂ ಮಾಡುವುದುಂಟು. ಇದರರ್ಥ ಆಧುನಿಕತೆಯೆನ್ನುವುದು ಕೇವಲ ಭವಿಷ್ಯವನ್ನು ಮಾತ್ರ ಅವಲಂಬಿಸಿರದೇ ಅದು ಭೂತದಿಂದಲೂ, ವರ್ತಮಾನದಿಂದಲೂ ನಿರಂತರವಾಗಿ ನವೀಕರಣ ಹೊಂದುತ್ತಿರುತ್ತದೆ. ಆ ಮೂಲಕ ತನ್ನ ಆಯಾಮವನ್ನು ಹೊಸತೆಂಬಂತೆ ಸೂಚಿಸುತ್ತದೆ.

ಇಲ್ಲಿ ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳೂ ಈ ಬಗೆಯ ಎಲ್ಲ ಧೋರಣೆಗೆ ಒಳಗಾಗುತ್ತದೆಂಬುದನ್ನು ಗಮನಿಸಿಕೊಂಡು ಈ ಅಧ್ಯಾಯದಲ್ಲಿ ವ್ಯಕ್ತಿನಾಮಗಳ ಆಧುನಿಕ ಪ್ರಕ್ರಿಯೆಯ ಕೆಲವು ಆಯಾಮಗಳನ್ನು ಚರ್ಚಿಸಲಾಗುತ್ತದೆ.

## ೬.೧ ಪರಂಪರೆ

ವ್ಯಕ್ತಿನಾಮಗಳ ಪರಂಪರೆಯೆಂದರೆ ಪ್ರಾಚೀನ ಹೆಸರುಗಳೆಂದೇ ಅರ್ಥ. ಈ ಪರಂಪರಾಗತ ಹೆಸರುಗಳಲ್ಲಿ ಜಾತಿ, ವೃತ್ತಿ, ದೈವ, ಸಮಾಜವನ್ನವಲಂಬಿಸಿದಂತೆ ಹಲವಾರು ಬಗೆಯ ಹೆಸರುಗಳಿದ್ದವು. ಅಲ್ಲದೆ ಹೆಸರಿನ ಬಗ್ಗೆ ಅನೇಕ ನಂಬಿಕೆ, ನಿಷಿದ್ಧ, ಕೀಳರಿಮೆಯ ಭಾವನೆಗಳಿದ್ದವು. ಕೆಳಜಾತಿಯ ಅಥವಾ ಕೆಳವರ್ಗದ ವ್ಯಕ್ತಿಯು ಹೆಸರಿನೊಂದಿಗೆ ತನ್ನ ಜಾತಿಯನ್ನು ಸೂಚಿಸಿಕೊಳ್ಳುವಲ್ಲಿ ಹಿಂಜರಿಯುತ್ತಿದ್ದ. ಒಂದೊಮ್ಮೆ ಅದು ಸಾಮಾಜಿಕ ಅಸಮಾನತೆಗೂ ಕಾರಣವಾಗುತ್ತಿತ್ತೆಂಬುದನ್ನು ಚರಿತ್ರೆಯುದ್ದಕ್ಕೂ ತಿಳಿಯುತ್ತದೆ. ಅಲ್ಲದೇ ಬಹು ಮುಖ್ಯವಾಗಿ ಕೆಳವರ್ಗದ ಮತ್ತು ಕೆಳಜಾತಿಯ ಸಮುದಾಯಕ್ಕೆ ದೈವಮೂಲದ ಹೆಸರಿಡುವಾಗಲೂ ಅವರದೇ ಆದಂತಹ ಮಾರಿ, ಮಸಣಿ, ಚೌಡಿ, ಯಲ್ಲಮ್ಮ, ಕೆಂಚ, ಬೋರೇ ದೇವರು ಮುಂತಾದ ದೈವಗಳನ್ನೇ ಅವಲಂಬಿಸಬೇಕಾಗಿತ್ತು. ಅಲ್ಲದೇ ಮೇಲ್ ವರ್ಗದ ದೈವದ ಹೆಸರನ್ನು ದಲಿತರು ಇಟ್ಟುಕೊಳ್ಳಲು ಹಿಂಜರಿಯುತ್ತಿದ್ದರು. ಈ ಬಗೆಯ ಹಿಂಜರಿಕೆಗೆ ಪರೋಕ್ಷವಾಗಿ ಕೆಲವಾರು ಮೂಢನಂಬಿಕೆ, ಶೋಷಣೆಯಂತಹ ಕಾರಣಗಳಿರಬಹುದು.

ಅದೇನಿದ್ದರೂ ಪರಂಪರೆಯಲ್ಲಿ ಮುಖ್ಯ ಸಂಗತಿಯೆಂದರೆ ಈ ಪ್ರಾಚೀನ ಕಾಲಮಾನದಲ್ಲಿ ಆಗಿಹೋದ ಹಲವಾರು ಅಂಶಗಳು ಮರುಕಳಿಸಿ ನವೀಕರಣವಾಗುತ್ತಿರುವುದು ಆಧುನಿಕತೆಯ ಒಂದು ಧೋರಣೆಯೆನ್ನಬಹುದು. ಅಂತಹ ಕೆಲವು ಅಂಶಗಳ ಮುಖೇನ ಹೀಗೆ ವಿವರಿಸಬಹುದು.

## ೬.೨ ಜಾತಿ

ಜಾತಿಯು ಕೆಳವರ್ಗವಾಗಿರಲಿ, ಮೇಲ್ ವರ್ಗವಾಗಿರಲಿ ಇಂದು ಅವು ಪ್ರತಿಷ್ಠೆಯ ಇಲ್ಲವೇ ಸ್ವಾಭಿಮಾನದ ಸಂಕೇತಗಳಂತೆ ಜನತೆಯು ತಮ್ಮ ಹೆಸರಿನೊಂದಿಗೆ ಬಳಸುತ್ತಿರುವುದು ಆಧುನಿಕ ಜಾತ್ಯಾತೀತ ಸಮಾಜದ ಒಂದು ಮುಖ್ಯ ಸಂಗತಿಯಾಗಿರುವುದು ಗಮನಿಸಬಹುದು.

ಉದಾಹರಣೆಗೆ : ಕೃಷ್ಣಮಾದಿಗ
ಮೈಲಾರ್ ಯಾದವ್
ಕಾವಲಮ್ಮ ಛಲವಾದಿ
ಹೇಮಣ್ಣ ಗೌಳೇರು
ಅಮರೇಶಗೌಡಪಾಟೀಲ
ಸತೀಶಮಡಿವಾಳರ
ಹನುಮಕ್ಕ ಮಾದಿಗರ
ಗೌರಮ್ಮ ಛಲವಾದಿ
ಕಲ್ಪನಾ ಶೆಟ್ಟಿ

ಈ ಬಗೆಯ ಹೆಸರುಗಳು ಒಂದೊಮ್ಮೆ ಮಗುವಿಗೆ ನಾಮಕರಣ ಮಾಡುವ ಸಂದರ್ಭದಲ್ಲಿಯೂ ಇಡಬಹುದು. ಅಲ್ಲದೇ ಜನ್ಮನಾಮ ನಿರ್ದಿಷ್ಟಭಾಗ ಮಾತ್ರ ಆಗಿದ್ದು, ಶಾಲಾ ದಾಖಲಾತಿಯ ಸಂದರ್ಭದಲ್ಲಿಯೋ, ಇಲ್ಲವೇ ಕೆಲವಾರು ಸಂಘಸಂಸ್ಥೆಗಳ ಚಳುವಳಿಗಳನ್ನು ಕಟ್ಟುವಾಗ ಈ ಬಗೆಯ ಜಾತಿಯನ್ನು ಸೂಚಿಸುವ ಹೆಸರನ್ನು ಇಟ್ಟುಕೊಳ್ಳುತ್ತಿರುವುದು ಆಧುನಿಕ ಧೋರಣೆಯೆಂಬುದು ತಿಳಿಯುತ್ತದೆ. ಅಂದರೆ ಆಂಧ್ರದಲ್ಲಿ ಪ್ರಾರಂಭಗೊಂಡ ಮಾದಿಗರ ಮೀಸಲಾತಿ ಹೋರಾಟದ ಸಂದರ್ಭ ಹೆಸರಿನ ಕೊನೆಯಲ್ಲಿ 'ಮಾದಿಗ' ಎಂಬ ಜಾತಿವಾಚಿ ಪದವನ್ನು ಬಳಕೆಗೆ ತಂದಿತು. ಈ ಪ್ರಭಾವ ಗಡಿಭಾಗವಾದ ಚಿತ್ರದುರ್ಗ ಜಿಲ್ಲೆಯಲ್ಲಿಯೂ ಅಲ್ಲಲ್ಲಿ ಕಂಡುಬಂದಿತು. ಈ ಜಾತಿವಾಚಿ ಪದದ ಬಳಕೆಯು ಇಂದು ಎಲ್ಲ ವರ್ಗದಲ್ಲಿಯೂ ನವೀಕೃತವಾಗುತ್ತಿರುವುದು ಗಮನಾರ್ಹ ಸಂಗತಿ.

## ೬.೩ ವೃತ್ತಿ

ಜಾತಿಯಂತೆ ವೃತ್ತಿಯೂ ವ್ಯಕ್ತಿನಾಮಗಳಲ್ಲಿ ಇಂದು ವ್ಯಾಪಕವಾಗಿ ಬಳಕೆಯಾಗುತ್ತಿದೆ. ಕೆಲವಾರು ವೃತ್ತಿಪರರು ಅಭಿಮಾನದ ಸಂಗತಿಯಾಗಿ ಈ ಬಗೆಯ ವೃತ್ತಿವಾಚಿ ಪದವನ್ನು ಬಳಸುತ್ತಿದ್ದಾರೆ. ಮೂಲವೃತ್ತಿಯನ್ನು ಮಾಡುವ ಸಮುದಾಯ ಆಯಾ ವೃತ್ತಿಯ ಹೆಸರನ್ನು ಇಟ್ಟುಕೊಂಡರೆ, ಅದೇ ವೃತ್ತಿಯನ್ನು ಮಾಡುವ ಇತರೆ ಸಮುದಾಯ ಅಂತಹ ಹೆಸರುಗಳನ್ನು ವ್ಯಕ್ತಿನಾಮದ ಭಾಗವಾಗಿ ನಿರ್ದೇಶಿಸಿಕೊಳ್ಳಲಾರರು. ಅಂದರೆ ಬಡಿಗತನ ಮಾಡುವ ಮುಸ್ಲಿಂ ಸಮುದಾಯ ಆ ವೃತ್ತಿಯ ಪದವನ್ನು ಇಟ್ಟುಕೊಳ್ಳಲಾರ. ಹೆಚ್ಚೆಂದರೆ ಬೇರೆಯವರು ಆ ವ್ಯಕ್ತಿಯನ್ನು ಬಡಿಗತನದ ವೃತ್ತಿಯಿಂದ ಗುರುತಿಸಬಹುದು. (ಉದಾಹರಣೆಗೆ : ಕಾರ್ಪೆಂಟರ್ ಮಹ್ಮದ್ ಸಾಹೇಬ್, ಬಡಿಗೇರ ನೂರಿ) ಇದೂ ಕೂಡ ಆಧುನಿಕತೆಯ ಒಂದು ಧೋರಣೆಯೆಂದೇ ಹೇಳಬಹುದು. ಉದಾಹರಣೆಗೆ : ಬಸವರಾಜ ಕುಂಬಾರ
ಹೊನ್ನಪ್ಪ ಮಡಿವಾಳರ
ಕಮ್ಮಾರ ಸಣ್ಣನಾಗರಾಜ
ವೀರೇಶ ಬಡಿಗೇರ
ಮಾರುತಿ ಅಂಬಿಗರ
ಶ್ರೀಕಾಂತ ಟೆಸ್ಟರ್

ಹೀಗೆ ಹಲವು ವೃತ್ತಿಗಳಿಗೆ ಸಂಬಂಧಿಸಿದ ಹೆಸರುಗಳೂ ಕೂಡ ಇಂದು ವ್ಯಕ್ತಿನಾಮದ ಭಾಗವಾಗಿ ಸೇರ್ಪಡೆಯಾಗುತ್ತಿರುವುದು ಹೆಚ್ಚಾಗಿ ಕಂಡುಬರುತ್ತದೆ. ಮೇಲಿನ ಈ ವೃತ್ತಿವಾಚಿ ನಾಮಗಳು ಪುರುಷರಲ್ಲಿ ಮಾತ್ರ ಬಳಕೆಯಾಗಿರುವುದು ಕಾಣಬಂದಿದ್ದು, ಸ್ತ್ರೀಯರಲ್ಲಿ ಬಳಕೆಯಾಗಿರುವುದಕ್ಕೆ ನಿದರ್ಶನಗಳು ದೊರೆತಿರುವುದಿಲ್ಲ.

## ೬.೪ ದೈವ

ಹಲವಾರು ಪ್ರಾಚೀನ ದೈವಗಳು ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳಾಗಿವೆ. ಅಲ್ಲದೇ ಸಂಪ್ರದಾಯ ಮತ್ತು ನಂಬಿಕೆಯನ್ನು ಬಿಡದ ಕುಟುಂಬಗಳು ತಮ್ಮ ವಂಶ, ಕುಲದೈವಗಳ ಹೆಸರನ್ನು ಇಡುತ್ತಾರೆ. ಮೂರನೇ ತಲೆಮಾರಿನ ಇಂದಿನ ಜನತೆಗೆ ಈ ಹೆಸರುಗಳು ಕೊಂಚ ಮಾರ್ಪಾಡಿನೊಂದಿಗೆ ನಿರ್ದೇಶಿಸಲಾಗುತ್ತದೆ.

ಉದಾಹರಣೆಗೆ : ಹುಲುಗಪ್ಪ - ಹುಲುಗೇಶ್
ಮಾರೆಪ್ಪ - ಮಾರೇಶ್
ಸೂರಯ್ಯ ಸುರೇಶ್
ಓಬಳಯ್ಯ - ಓಬಳೇಶ
ನಿಂಗಪ್ಪ - ನಿಂಗೇಶ್
ರುದ್ರಯ್ಯ - ರುದ್ರೇಶ್
ಕೆಂಚಮ್ಮ - ಕೆಂಚಮಾಂಬ
ಮುತ್ತಮ್ಮ - ಮುತ್ತಮಾಂಬಿಕದೇವಿ

## ೬.೫ ಚರಿತ್ರೆ

ಕನ್ನಡನಾಡಿನ ಇತಿಹಾಸದಲ್ಲಿ ಆಗಿಹೋದಂತಹ ಅನೇಕ ಐತಿಹಾಸಿಕ ಪುರುಷರ ಸ್ತ್ರೀಯರ ಹೆಸರುಗಳನ್ನು ವ್ಯಕ್ತಿನಾಮಗಳಾಗಿ ನಿರ್ದೇಶಿಸುವುದುಂಟು. ಐತಿಹಾಸಿಕ ಪುರುಷರ ವಂಶಸ್ಥರು, ಅಭಿಮಾನಿಗಳು ಈ ಬಗೆಯ ಹೆಸರುಗಳನ್ನು ಇಡುವುದುಂಟು. ಹೆಚ್ಚಾಗಿ ಈ ರೀತಿಯ ಪ್ರಕ್ರಿಯೆಯು ಅಕ್ಷರಸ್ಥ ಸಮುದಾಯದಲ್ಲಿ ನಡೆಯುತ್ತದೆಂಬುದು ಗಮನಾರ್ಹ ಸಂಗತಿ. ಒಂದೊಮ್ಮೆ ವಿಶೇಷವೆಂಬಂತೆ ಅನಕ್ಷರಸ್ಥ ಸಮುದಾಯವೂ ಇಂಥ ಹೆಸರುಗಳನ್ನು ಇಡಬಹುದು. ಚರಿತ್ರೆಯಲ್ಲಿನ ರಾಜ, ರಾಣಿ, ಮಂತ್ರಿ, ಯುವರಾಜ, ಅಲ್ಲದೇ ರಾಜ ಪರಿವಾರದ ಇತರೆಯವರ ಹೆಸರುಗಳು ಇಂದು ನಿರ್ದೇಶನವಾಗುತ್ತಿರುವುದು ಆಧುನಿಕತೆಯ ಪ್ರಭಾವವೆಂದೇ ಗುರುತಿಸಲು ಸಾಧ್ಯವಿದೆ. ಚರಿತ್ರೆಯ ಹಲವು ವ್ಯಕ್ತಿನಾಮಗಳು ಇಂದಿನ ಜನತೆಗೆ ಒಂದು ಫ್ಯಾಶನ್ ಆಗಿಯೂ ಕಂಡುಬಂದಿರುವುದು ತಿಳಿಯುತ್ತದೆ. ಇದರಿಂದ ತಮ್ಮ ಹೆಸರುಗಳನ್ನು ಅಭಿಮಾನದಿಂದ ನಿರ್ದೇಶಿಸಿಕೊಳ್ಳುವುದು ಕಂಡುಬರುತ್ತದೆ.

ಚರಿತ್ರೆ ಅಥವ ಇತಿಹಾಸದಲ್ಲಿ ಕೇವಲ ರಾಜಪರಿವಾರದ ಹೆಸರುಗಳು ಮಾತ್ರವಲ್ಲದೇ ಅನೇಕ ಸಾಂಸ್ಕೃತಿಕ ವ್ಯಕ್ತಿಗಳೂ ಇದ್ದಾರೆ. ಕವಿಗಳು, ಸಂಗೀತಗಾರರು, ಕಲಾವಿದರು, ಹಾಡುಗಾರರು, ನೃತ್ಯಗಾರರು ಹೀಗೆ ಹಲವಾರು ವರ್ಗದ ಹೆಸರುಗಳನ್ನು ಇಂದು ನಿರ್ದೇಶಿಸಿಕೊಳ್ಳಲಾಗುತ್ತಿದೆ.

ಉದಾಹರಣೆಗೆ : ನೃಪತುಂಗ
ಮದಕರಿನಾಯಕ
ಕೃಷ್ಣದೇವರಾಯ
ಓಬವ್ವನಾಗತಿ
ವೀರವ್ವನಾಗತಿ
ಓಬವ್ವ
ಶಾಂತಲಾ
ಪಂಪ
ಜಕ್ಕಣ್ಣ
ರನ್ನ
ಲಕ್ಷ್ಮೀಶ

## ಭಾವನಾಮಗಳ ವ್ಯಾಪಕತೆ

ಇಂದು ವ್ಯಕ್ತಿನಾಮ ನಿರ್ದೇಶನದಲ್ಲಿ ಭಾವನಾಮಗಳು ಹೆಚ್ಚು ಸ್ಥಾನವನ್ನು ಪಡೆದುಕೊಂಡಿವೆ. ಈ ಹಿಂದೆ ಇದ್ದಂತಹ ನಾಮನಿರ್ದೇಶನದ ಆಕರ ಇಂದಿನ ಆಧುನಿಕ ಹೆಸರುಗಳಲ್ಲಿ ಕಂಡುಬರುವುದಿಲ್ಲ. ಅಂದರೆ ಹೆಸರಿಗೆ ಒಂದು ದೈವವಾಗಲಿ, ಚರಿತ್ರೆಯಾಗಲಿ, ವಸ್ತುವಾಗಲಿ ಆಕರವಾಗಿರದೆ, ಅದು ಕೇವಲ ಭಾವನೆಗಳ ಪ್ರತಿನಿಧಿಯಾಗಿರುವುದನ್ನು ತಿಳಿಯಬಹುದು. ಇಂದು ವ್ಯಾಪಕವಾಗಿ ಹರಡಿರುವ ಆಧುನಿಕತೆಯ ಪ್ರೇರಣೆಯಿಂದ ಎಲ್ಲೆಡೆಯೂ ಈ ರೀತಿಯ ಭಾವನಾಮಗಳು ಕಂಡುಬರುತ್ತಿವೆ. ಭಾವನಾಮಗಳು ಹೆಚ್ಚಾಗಿ ನಿರ್ದೇಶನಗೊಳ್ಳುತ್ತಿರುವುದರಿಂದ ಮುಖ್ಯವಾಗಿ ಇಂದಿನ ವ್ಯಕ್ತಿನಾಮಗಳಲ್ಲಿ -

೧. ವಾರ್ಗಿಕಗಳು ಮರೆಯಾಗುತ್ತಿವೆ
೨. ವಿಶೇಷಣಗಳು ಕಂಡುಬರುವುದಿಲ್ಲ.

ಅಪ್ಪ, ಅಮ್ಮ, ಅಯ್ಯ, ಅವ್ವ, ಅಣ್ಣ, ಅಕ್ಕ,.ತಮ್ಮಗಳಂತಹ ಹೆಸರಿನ ಉತ್ತರಪದಗಳು ಗ್ರಾಮೀಣ ಪರಿಸರದಲ್ಲಿ ಮಾತ್ರ ಕೊಂಚ ಕಂಡುಬರುತ್ತವೆ. ಅಲ್ಲದೇ ನಗರ ಪರಿಸರದಲ್ಲಿ ಇವು ಸಂಪೂರ್ಣ ಮರೆಯಾಗುತ್ತಿರುವುದನ್ನು ಗುರುತಿಸಬಹುದು. ಅಂತೆಯೇ ವಿಶೇಷಣ ಪದಗಳಾದ ಸಣ್ಣ, ದೊಡ್ಡ, ಕರಿಯ, ಬಿಳಿಯ, ಕೆಂಚ ಮುಂತಾದವು ಹೆಸರಿನ ಪೂರ್ವ ಭಾಗವಾಗಿ ಇಂದು ಕಾಣಿಸುತ್ತಿಲ್ಲ. ಭಾವನಾಮಗಳ ನಿರ್ದೇಶನವು ಗ್ರಾಮೀಣ ಪರಿಸರಕ್ಕೆ ಅಷ್ಟಾಗಿ ಪ್ರವೇಶಿಸಿಲ್ಲವಾದರೂ ಅಕ್ಷರಸ್ಥರಲ್ಲಿ ಸ್ವಲ್ಪ ಪ್ರಮಾಣದಲ್ಲಿ ಕಂಡುಬರುತ್ತದೆ. ಚಿತ್ರದುರ್ಗ ಪರಿಸರದಲ್ಲಿ ಕಂಡುಬರುವ ಕೆಲವು ಭಾವನಾಮಗಳು ಹೀಗಿವೆ.

ಕಲ್ಪನಾ
ಭಾವನಾ
ವಂದನಾ
ಮಾನಸ
ಕೌಶಲ

ತೃಪ್ತಿ
ಪ್ರೀತಿ
ಪ್ರೇಮ
ಮಂಗಳ
ಭಾವನ್
ಆಕರ್ಷಕ್
ಪ್ರವೀಣ್
ಆನಂದ್
ತೇಜಸ್ಸು
ಸಂತೋಷ್

## ೬.೭ ಸಾಮಾಜಿಕ ಆಯಾಮಗಳು

ವ್ಯಕ್ತಿನಾಮಗಳು ಆಯಾ ಕಾಲದ ಸಾಮಾಜಿಕ ಪರಿಸರವನ್ನು ಅವಲಂಬಿಸಿ ನಿರ್ದೇಶನವಾಗುತ್ತವೆ. ಇಂದಿನ ಆಧುನಿಕ ವಿದ್ಯಮಾನದ ಹಲವಾರು ಸಂಗತಿಗಳು ಹೊಸ ಬಗೆಯ ಹೆಸರಿಗೆ ಕಾರಣವಾಗಬಹುದು. ಒಂದೊಮ್ಮೆ ಪರಂಪರೆಯ ಹೆಸರುಗಳೇ ಮತ್ತೊಂದು ರೂಪ ತಾಳುವ ಮೂಲಕ ಹೊಸ ರೂಪವನ್ನು ಪಡೆಯಬಹುದು. ಹೀಗೆ ಸಮಾಜದ ಹಲವು ಸಂದರ್ಭಗಳು, ಹೆಸರುಗಳ ಆಧುನೀಕರಣಕ್ಕೆ ಪ್ರೇರಕವಾಗಿರುತ್ತವೆನ್ನಬಹುದು.

ಮಾಧ್ಯಮಗಳ ಪ್ರಭಾವವು ಇಂದು ಇತರೆ ಅನೇಕ ಸಂಗತಿಗಳ ಮೇಲೆ ವ್ಯಾಪಕವಾದ ಪರಿಣಾಮ ಬೀರಿರುವಂತೆ, ವ್ಯಕ್ತಿಗಳ ಹೆಸರಿಡುವಿಕೆಯಲ್ಲಿಯೂ ಪ್ರೇರಣೆಯನ್ನು ಮಾಡಿದೆ. ದಟ್ಟವಾದ ಮಾಧ್ಯಮದ ಪ್ರಚಾರದಿಂದಾಗಿ ಗ್ರಾಮೀಣ-ನಗರ ಪ್ರದೇಶಗಳೆರಡರಲ್ಲೂ ಈ ಬಗೆಯ ಪ್ರಭಾವ ಆಗಿರುವುದನ್ನು ತಿಳಿಯಬಹುದು. ದೂರದರ್ಶನ, ರೇಡಿಯೋ, ಪತ್ರಿಕೆ ಮುಂತಾದ ಸಮೂಹ ಮಾಧ್ಯಮಗಳಲ್ಲಿ ಬರುವ ಸಿನಿಮಾ, ರಂಗಭೂಮಿ, ಕ್ರೀಡೆ, ಸಾಹಿತ್ಯ, ಸಂಗೀತ. ಮುಂತಾದವುಗಳಲ್ಲಿನ ಹೆಸರುಗಳು ಸಹಜವಾಗಿಯೋ ಎಂಬಂತೆ ಜನರಲ್ಲಿ ನಿರ್ದೇಶನಗೊಳ್ಳುತ್ತಿರುವುದು ಕಂಡುಬರುತ್ತಿದೆ. ಒಂದು ಬಗೆಯಲ್ಲಿ ಭಾವನಾಮಗಳು ಮಾಧ್ಯಮಗಳ ಮುಖೇನವೇ ಅಧಿಕವಾಗಿ ಪ್ರಚಾರಕ್ಕೆ ಬಂದಿವೆಯೆನ್ನಬಹುದು. ಅಲ್ಲದೇ ಹೆಸರುವಾಸಿಯಾದ ಸಿನಿಮಾ ಕಲಾವಿದರು, ರಂಗನಟ-ನಟಿಯರು, ಸಂಗೀತಗಾರರ ಹೆಸರನ್ನೂ ಇಡುವುದು ಒಂದು ಹೊಸ ಪ್ರಯತ್ನವೇ ಆಗಿದೆ. ಅಂದರೆ ಹೆಸರು ರೂಪದ ದೃಷ್ಟಿಯಿಂದ ಹಳೆಯದಾದರೂ ಪ್ರಕೃತ ವಿದ್ಯಮಾನಕ್ಕೆ ಅದರ ಭಾವ ಹೊಸತಾಗಿ ಕಂಡುಬರುತ್ತದೆ. ಉದಾಹರಣೆಗೆ ಪಂಪ ಎಂಬುದು ದೈವವಾಚಿಯಾದ, ಒಬ್ಬ ಕವಿಯ ಹಳೆಯ ಹೆಸರಾದರೂ, ಇಂದು ಸಾಹಿತ್ಯದ ಆಸಕ್ತರು ತಮ್ಮ ಮಕ್ಕಳಿಗೆ ಈ ಹೆಸರನ್ನು ಇಟ್ಟಲ್ಲಿ ಅದೊಂದು ಫ್ಯಾಶನ್ ಆಗಿ ಕಾಣುತ್ತದೆ. ಚಿತ್ರದುರ್ಗ ಪರಿಸರದ ಮೊಳಕಾಲ್ಮೂರು ಗಡಿಪ್ರದೇಶದಲ್ಲಿ ಸಿನಿಮಾ ಮಾಧ್ಯಮ (ತೆಲುಗು ಸಿನಿಮಾ)ದ ಪ್ರಭಾವ ಹೇರಳವಾಗಿ ಆಗಿದೆ. ಅಂತೆಯೇ ಕನ್ನಡ ಪರಿಸರದಲ್ಲಿಯೂ ಈ ಪ್ರೇರಣೆ ಉಂಟಾಗಿದೆ.

ಸಿನಿಮಾ ಪ್ರಭಾವಿತ ಹೆಸರುಗಳು

| ಪುರುಷರು | ಸ್ತ್ರೀಯರು |
|---|---|
| ರಾಜ್‌ಕುಮಾರ್ | ಮಾಲಾಶ್ರೀ |
| ಶಿವರಾಜಕುಮಾರ್ | ಶೃತಿ |
| ಶಶಿಕುಮಾರ್ | ಸುಧಾರಾಣಿ |
| ವಿಷ್ಣುವರ್ಧನ್ | ತಾರ |
| ನಾಗಾರ್ಜುನ | ಭಾವನಾ |
| ಪವನ್‌ಕಲ್ಯಾಣ್ | ಕಲ್ಪನಾ |
| ವಿನೂತ್ | ಶ್ರಾವಣಿ |
| ತೇಜ - ಇತ್ಯಾದಿ | ಇಂದ್ರಾಣಿ - ಇತ್ಯಾದಿ |

ಕ್ರೀಡೆಗೆ ಸಂಬಂಧಿಸಿದ ಹೆಸರುಗಳು

ಉಷಾ - ಕುಂಬ್ಳೆ

ಸಚಿನ್

ಅಶ್ವಿನಿ - ಗಂಗೂಲಿ

ದ್ರಾವಿಡ್

ಸಂಗೀತಕ್ಕೆ ಸಂಬಂಧಿಸಿದ ಹೆಸರುಗಳು

ಲತಾ - ಬಾಲಸುಬ್ರಹ್ಮಣ್ಯ

ಕವಿತಾ - ಶೇಷಣ್ಣ

ಗಂಗಾ - ಅಪ್ಪಣ್ಣ

ಪೂನಮ್ - ಉದಿತ್

ಇಲ್ಲಿ ಚರಿತ್ರೆ, ಸಿನಿಮಾ, ಕ್ರೀಡೆ, ಸಂಗೀತ ಈ ಮೊದಲಾದ ಪ್ರಭಾವದಿಂದ ಬಂದಿರುವ ಹೆಸರುಗಳೆಂದು ಗುರುತಿಸಲಾಗಿರುವ ಹೆಸರುಗಳು, ಆ ಪೂರ್ವದಲ್ಲಿ ಬಳಕೆಯಾಗಿರಬಹುದು. ಆದರೆ ಆ ಹೆಸರುಗಳಿಗೆ ಹೆಚ್ಚು ಜನಪ್ರಿಯತೆ, ಮಾನ್ಯತೆ ಬಂದಿರುವುದು ಆಯಾ ವ್ಯಕ್ತಿಗಳ ವ್ಯಕ್ತಿತ್ವದ ಮೂಲಕವೇ ಎಂಬುದು ಗಮನಾರ್ಹ. ಈ ಹೆಸರುಗಳನ್ನು ಇಟ್ಟುಕೊಂಡಿರುವ ವ್ಯಕ್ತಿಗಳನ್ನು ಸಂದರ್ಶಿಸಿದಾಗ, ಅವರು ಪ್ರಸಿದ್ಧ ವ್ಯಕ್ತಿಗಳ ಪ್ರಭಾವ -ಪ್ರೇರಣೆಯೇ ಕಾರಣವಾಗಿಸುತ್ತಾರೆ. ಆ ಕಾರಣಕ್ಕಾಗಿ ಅವುಗಳ ಮೂಲವನ್ನು ಇಲ್ಲಿಂದಲೇ ಗುರುತಿಸಲಾಗಿದೆ.

ಆಧುನಿಕತೆಯು ಗ್ರಾಮ ಮತ್ತು ನಗರ ಪ್ರದೇಶಗಳಿಗೆ ಒಂದೇ ಬಗೆಯಲ್ಲಿ ಪ್ರವೇಶಿಸುವುದಿಲ್ಲ. ಬದಲಾಗಿ ಇವುಗಳಲ್ಲಿ ನಗರ ತೀವ್ರವಾಗಿ, ಗ್ರಾಮ ನಿಧಾನಗತಿಯಲ್ಲಿ ಹೊಸತನವನ್ನು ಸ್ವೀಕರಿಸುತ್ತದೆ. ಅಲ್ಲದೇ ಈ ಹೊಸತನಕ್ಕೆ ಹೆಚ್ಚಾಗಿ ಅಕ್ಷರಸ್ಥ ಕುಟುಂಬಗಳು ಬೇಗ ತೆರೆದುಕೊಳ್ಳುತ್ತವೆ. ಇವರು ವ್ಯಕ್ತಿಗೆ ಹೆಸರಿಡುವಾಗ ಪ್ರಜ್ಞಾಪೂರ್ವಕವಾಗಿಯೇ ಭಾವನಾಮಗಳು ಮತ್ತು ಇತರ ನೂತನ ಹೆಸರುಗಳನ್ನು ನಿರ್ದೇಶನ ಮಾಡುತ್ತಾರೆ. ಈ ಸಂದರ್ಭದಲ್ಲಿ ಸಂಸ್ಕೃತ ಭಾಷೆಯ ಪ್ರಭಾವವೂ ಕೂಡ ಹೆಚ್ಚಾಗಿ ಕಂಡುಬರುತ್ತದೆ. ಮುಖ್ಯವಾಗಿ ನಗರ ಮತ್ತು ಗ್ರಾಮೀಣ ಪರಿಸರದಲ್ಲಿ ಆಯಾ ಜಾತಿ, ವರ್ಗಗಳ ನೆಲೆಯಲ್ಲಿಯೂ ಆಧುನಿಕ ಹೆಸರುಗಳ

ನಿರ್ದೇಶನದಲ್ಲಿ ಏರು-ಪೇರು ಇರುವುದನ್ನು ಗುರುತಿಸಬಹುದು. ಮೇಲ್ಜಾತಿ, ವರ್ಗಗಳು ಬೇಗನೇ ಹಾಗೂ ಕೆಳಜಾತಿ, ವರ್ಗಗಳು ನಿಧಾನವಾಗಿ ಆಧುನಿಕ ಹೆಸರುಗಳನ್ನು ಸ್ವೀಕರಿಸುತ್ತಿರುವುದು ಕಂಡುಬರುತ್ತದೆ. ಅಲ್ಲದೇ ವೇದಕಾಲೀನ ಕೆಲವು ಹೆಸರುಗಳನ್ನು ಪುನಃ ಇಂದು ನಿರ್ದೇಶನ ಮಾಡುವುದರಿಂದ ಪರಂಪರೆಯ ಹೆಸರುಗಳು ಮರುಕಳಿಸಿದಂತಾಗುತ್ತದೆ.

ಗ್ರಾಮೀಣ ಹಾಗೂ ನಗರಗಳಲ್ಲಿ ಪರಂಪರೆಯಿಂದ ಬಂದಂತಹ ಹೆಸರುಗಳನ್ನು ಕೊಂಚ ಬದಲಾಯಿಸಿ ಅವುಗಳನ್ನು ಆಧುನಿಕವೆಂಬಂತೆ ಪರಿಭಾವಿಸುತ್ತಿರುವುದು ಕಂಡುಬರುತ್ತದೆ. ಅಂದರೆ ಈ ಮುಂಚೆ ಇಟ್ಟ ಹೆಸರು ಹಳೆಯದೆಂದು ಭಾವಿಸಿ ಅದನ್ನು ನವೀಕರಿಸುವ ಮೂಲಕ ಸಮಕಾಲೀನ ವಿದ್ಯಮಾನಗಳಿಗೆ ಹೊಂದುವ ಮನೋಧರ್ಮ ವ್ಯಕ್ತಪಡಿಸುತ್ತಾರೆ. ಉದಾಹರಣೆಗೆ : ದುರುಗಮ್ಮ - ದುರುಗೇಶ್

ಕಲ್ಲಮ್ಮ - ಕವಿತಾ

ತಿಪ್ಪಯ್ಯ - ತಿಪ್ಪೇಶ್

ಸಿದ್ದಮ್ಮ - ಶೋಭಾ

ಮಲ್ಲಮ್ಮ - ಮಲ್ಲಿಕಾ

ಶಂಕ್ರಪ್ಪ - ಶಂಕರ್

ಅಲ್ಲದೇ ಈಚೆಗೆ ಅಯ್ಯಪ್ಪಸ್ವಾಮಿ ಮಾಲೆಯನ್ನು ಹಾಕುವ ಭಕ್ತರು ತಮ್ಮ ಮೂಲ ಹೆಸರಿನೊಂದಿಗೆ 'ಸ್ವಾಮಿ' ಎಂದು ಸೇರಿಸಿಕೊಳ್ಳುತ್ತಿರುವುದು ಇಂದಿನ ಹೆಸರು ಇಡುವಿಕೆಯೊಂದಿಗಿನ ಆಧುನಿಕ ಮನೋಭಾವದ ಭಾಪನ್ನು ಪ್ರತಿನಿಧಿಸುತ್ತದೆ.

## ೬.೮ ಲಿಂಗಸಂಬಂಧಿ ಆಯಾಮಗಳು

ವ್ಯಕ್ತಿನಾಮಗಳಿಗೆ ಲಿಂಗಸಂಬಂಧಿ ನೆಲೆಯಲ್ಲಿ ಚರ್ಚೆಯು ಸಾಧ್ಯವಿದೆ. ಏಕೆಂದರೆ ಇಲ್ಲಿ ಪುರುಷ ಮತ್ತು ಸ್ತ್ರೀಯರ ಹೆಸರುಗಳಲ್ಲದೇ, ಒಂದೇ ಹೆಸರನ್ನು ಇಬ್ಬರೂ ಇಟ್ಟುಕೊಳ್ಳುವಲ್ಲಿ ಆಧುನಿಕತೆಯನ್ನು ಕಾಣಬಹುದು. ಇಂದು ವ್ಯಕ್ತಿಗಳು ನಿರ್ದೇಶಿಸಿಕೊಳ್ಳುತ್ತಿರುವ ಕೆಲವು ಭಾವನಾಮಗಳಿಗೆ ಲಿಂಗದ ನೆಲೆಯೇ ಇರುವುದಿಲ್ಲ. ಈ ದೃಷ್ಟಿಯಿಂದ ಲಿಂಗಸಂಬಂಧೀ ಆಯಾಮವನ್ನು ಹೆಸರನ್ನು ಇಡುವವರೇ ಸೃಷ್ಟಿಸುತ್ತಾರೆ. 'ವಿನಯ' ಎಂಬ ಸಾಮಾನ್ಯ ಲಿಂಗವಾದ ಭಾವನಾಮವನ್ನು 'ವಿನಯ್' ಎಂಬುದಾಗಿ ಕರೆದರೆ ಅದು ಪುರುಷನಿಗೆ ಸಂಬಂಧಿಸುತ್ತದೆ. ಈ ಧೋರಣೆಯು ಈಚೆಗೆ ವ್ಯಾಪಕವಾಗಿ ಬಳಕೆಯಾಗುತ್ತಿದೆ.

| ಉದಾಹರಣೆಗೆ : | ಸ್ತ್ರೀ | ಪುರುಷ |
|---|---|---|
| | ವಿನಯ | ವಿನಯ್ |
| | ಪ್ರವೀಣ | ಪ್ರವೀಣ್ |
| | ಭಾವನಾ | ಭಾವನ್ |
| | ಭುವನಾ | ಭುವನ್ |
| | ರಂಜನಾ | ರಂಜನ್ |
| | ನವನೀತಾ | ನವನೀತ್ |
| | ಕಿರಣ | ಕಿರಣ್ |

ಹೀಗೆ ಆಧುನಿಕತೆ ಎನ್ನುವುದು ಹೆಸರುಗಳಿಗೆ ಪ್ರವೇಶಿಸಿರುವುದು ಇಂದಿನ ಹೊಸ ಮನೋಧರ್ಮವೇನಲ್ಲ. ಅದು ಆಯಾ ಭೌಗೋಳಿಕ ಪರಿಸರದಲ್ಲಿ, ಕಾಲಾನುಕ್ರಮದಲ್ಲಿ ನವೀಕೃತಗೊಳ್ಳುತ್ತಲೇ ಇರುತ್ತದೆ. ಇಂದು ರೂಢಿಯಲ್ಲಿರುವ ವ್ಯಕ್ತಿನಾಮಗಳು ಭವಿಷ್ಯದಲ್ಲಿ ಬೇರೆಯದೇ ಸ್ವರೂಪವನ್ನು ಪಡೆಯಬಹುದು. ಆಧುನಿಕತೆಯೆನ್ನುವುದು ಆತಂಕವೆಂದು ತಿಳಿಯುವುದೇ ಹೆಚ್ಚು. ಆದರೆ ಅದೊಂದು ಸಹಜ ಮನೋಧರ್ಮವಾಗಿದೆ. ಸಮಾಜದ ಅಭಿವೃದ್ಧಿಯೊಂದಿಗೆ, ಸಂಸ್ಕೃತಿಯ ಆಚರಣೆಯೊಂದಿಗೆ ವ್ಯಕ್ತಿಗೆ ನಿರ್ದೇಶಿಸುವ ಹೆಸರುಗಳೂ ಬದಲಾವಣೆಯಾಗುತ್ತಿರುತ್ತವೆ.

◆◆

ಅಧ್ಯಾಯ - ೭

# ಸಮಾರೋಪ

೭. ಪ್ರವೇಶ

೭.೧. ಅಧ್ಯಯನದ ಮುಖ್ಯ ಫಲಿತಗಳು

೭.೨. ಅಧ್ಯಯನದ ಮಹತ್ವ ಮತ್ತು ಮಿತಿಗಳು

೭.೩. ಪ್ರಸ್ತುತ ಅಧ್ಯಯನದಿಂದ ಕಂಡುಕೊಂಡ ಮುಂದಿನ ಅಧ್ಯಯನದ ಸಾಧ್ಯತೆಗಳು

## ಅಧ್ಯಾಯ - ೭

# ಸಮಾರೋಪ

ಸಂಸ್ಕೃತಿ ಅಧ್ಯಯನದಲ್ಲಿ ವ್ಯಕ್ತಿನಾಮಗಳು ಅತ್ಯಂತ ಸೂಕ್ಷ್ಮ ಸಂಗತಿಗಳನ್ನು ನೀಡಬಲ್ಲ ಅಪೂರ್ವ ಆಕರಗಳಾಗಿವೆ. ವ್ಯಕ್ತಿನಾಮಗಳಲ್ಲಿ ಸಮಾಜದ ಸಂಸ್ಕೃತಿಯ ಅಥವಾ ಸಮಾಜದ ವಿಕಾಸ ಕ್ರಮದ ಲಕ್ಷಣಗಳು ಅಂತರ್ಗತಗೊಂಡಿವೆ. ಹೀಗಾಗಿ ವ್ಯಕ್ತಿನಾಮಗಳ ಅಧ್ಯಯನದ ಮೂಲಕ ಸಮಾಜದ ಬೆಳವಣಿಗೆಯ ಹಲವು ಆಯಾಮಗಳನ್ನು ಗುರುತಿಸಬಹುದಾದಂತೆ, ಸಮಾಜದ ವಿಕಾಸ ಕ್ರಮದ ವಿವಿಧ ಕಾಲಘಟ್ಟಗಳನ್ನು ಆಧರಿಸಿ ವ್ಯಕ್ತಿನಾಮಗಳ ಹಲವು ಸ್ವರೂಪಗಳನ್ನು ಗುರುತಿಸಬಹುದು. ಈ ಎಲ್ಲಾ ಕಾರಣಗಳಿಂದಾಗಿ ವ್ಯಕ್ತಿನಾಮಗಳು ಸಂಶೋಧನಾಧ್ಯಯನ ಯೋಗ್ಯವಾದ ವಿಷಯಗಳಾಗಿವೆ. ಹೀಗಾಗಿ ವ್ಯಕ್ತಿ ನಾಮಗಳನ್ನು ಸಂಸ್ಕೃತಿ ಅಧ್ಯಯನದ ಪ್ರಧಾನ ಆಕರ ಮಾಹಿತಿಗಳೆಂದು ಪರಿಗಣಿಸಿ, ವೈಜ್ಞಾನಿಕ ಮತ್ತು ಶಾಸ್ತ್ರೀಯ ಮಾದರಿಯ ಅಧ್ಯಯನಗಳು ಆಗಬೇಕಿದೆ. ಪ್ರಸ್ತುತ ನಿಬಂಧದಲ್ಲಿ ವ್ಯಕ್ತಿನಾಮಗಳನ್ನು ಸಂಸ್ಕೃತಿ ಅಧ್ಯಯನ ಸಂಗತಿಗಳೆಂಬುದನ್ನು ಸ್ಪಷ್ಟಪಡಿಸಿಕೊಂಡು, ವ್ಯಕ್ತಿನಾಮಗಳ ಮೂಲಕ ಸಮಾಜೋಸಾಂಸ್ಕೃತಿಕ ನೆಲೆಯ ಹಲವು ಆಯಾಮಗಳನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ.

'ಸಂಸ್ಕೃತಿ' ಎಂಬುದು ಸದಾ ಚಲನಶೀಲ ಮನೋಧರ್ಮವುಳ್ಳ ಒಂದು ಪ್ರಕ್ರಿಯೆ. ಕೃಷಿ ಅವಲಂಬಿತ ಗ್ರಾಮ ಸಮಾಜಗಳ ಸಂಸ್ಕೃತಿ ಭೌತಿಕವಾಗಿ ಮತ್ತು ಬೌದ್ಧಿಕವಾಗಿ ಕ್ರಮೇಣ ವಿಸ್ತಾರವಾಗತೊಡಗಿತು. ಜನರ ಆಚಾರ, ವಿಚಾರ, ರೂಢಿ, ಸಂಪ್ರದಾಯಗಳು ಗಣನೀಯ ಪ್ರಮಾಣದಲ್ಲಿ ಬದಲಾಗತೊಡಗಿದವು. ಅದೇ ಹೊತ್ತಿನಲ್ಲಿ ದೈವ, ಧರ್ಮಗಳ ಆರಾಧನಾ ಪದ್ಧತಿಯೂ ರೂಢಿಗೆ ಬಂದಿತು. ಗ್ರಾಮ ಸಮಾಜಗಳು ದೈವ, ಧರ್ಮವನ್ನು ಸಂಸ್ಕೃತಿಯ ಅವಿಭಾಜ್ಯ ಅಂಗವೆಂದು ನಂಬಿವೆ.

ದೇವರ ಮೇಲಿನ ಭಕ್ತಿ ಮತ್ತು ಭಯದ ಪರಿಣಾಮದಿಂದಾಗಿ ದೈವನಾಮಗಳನ್ನು ವ್ಯಕ್ತಿಗೆ ಆರೋಪಿಸುವ ಪ್ರಕ್ರಿಯೆ ಚಾಲ್ತಿಗೆ ಬಂದಿತು. ದೇವರ ನಾಮವನ್ನು ವ್ಯಕ್ತಿಗೆ ನಿರ್ದೇಶನ ಮಾಡುವುದರಿಂದ, ದೇವರ ನಾಮಸ್ಮರಣೆ ಮಾಡಿದಂತಾಗುತ್ತದೆ ಅಲ್ಲದೆ, ವ್ಯಕ್ತಿಯ ಜೀವನದಲ್ಲಿ ಯಾವುದೇ ಅರಿಷ್ಟಗಳು ಸಂಭವಿಸುವುದಿಲ್ಲ ಎಂಬುದು ಜನರ ನಂಬಿಕೆಯಾಗಿದೆ. ಇದರಿಂದಾಗಿ ನಾಮಪ್ರಪಂಚ ವಿಶಾಲವೂ, ವೈವಿಧ್ಯಮಯವೂ ಆಗಿ ಬೆಳೆಯಿತು. ಇದೇ ಹೊತ್ತಿನಲ್ಲಿ ಹೆಸರಿಗೂ ಮಾತ್ತು ವ್ಯಕ್ತಿಯ ವ್ಯಕ್ತಿತ್ವಕ್ಕೂ ಇದ್ದ ನೇರ ಸಂಬಂಧ ಕಳಚಿಕೊಂಡಿತು. ಬದಲಾಗಿ ಹೆಸರು ಸಾಂಸ್ಕೃತಿಕ ಆಯಾಮವನ್ನು ಪಡೆದುಕೊಂಡಿತು. ಇದರಿಂದಾಗಿ ಹೆಸರಿಗೆ ಅತ್ಯಂತ ಪ್ರಾಮುಖ್ಯತೆ ಪ್ರಾಪ್ತವಾಯಿತು. ಪ್ರಾದೇಶಿಕವಾಗಿ ದೈವಸಂಬಂಧಿ ವ್ಯಕ್ತಿನಾಮಗಳು ವೈವಿಧ್ಯಮಯವಾಗಿರುವುದರಿಂದ ಸಂಸ್ಕೃತಿಯ ಹಲವು ಬಗೆಯ ಮಾಹಿತಿಗಳನ್ನು ಗರ್ಭೀಕರಿಸಿಕೊಂಡಿರುತ್ತವೆ. ಹೀಗಾಗಿ ಪ್ರಾದೇಶಿಕ ಸಂಸ್ಕೃತಿಯ ಅಧ್ಯಯನಕ್ಕೆ ವ್ಯಕ್ತಿನಾಮಗಳ ಪಾತ್ರ ಅತ್ಯಂತ ಮಹತ್ವದ್ದಾಗಬಹುದು.

ಪ್ರಾಚೀನ ಕಾಲದ ಮಾನವ ಸಮುದಾಯಗಳು ಕೃಷಿಯ ಮೂಲಕ ಸಾಂಘಿಕವಾಗಿ, ಸ್ಥಿರವಾಸಿಗಳಾಗಿ ಮಾರ್ಪಾಡಾಗಿ ನಂತರದ ಕಾಲಾವಧಿಯಲ್ಲಿ ಜೀವನೋಪಾಯಕ್ಕಾಗಿ ಹಲವು ಬೇರೆ ಬೇರೆ ವೃತ್ತಿಗಳಲ್ಲಿ ನಿರತವಾದವು. ಹೀಗೆ ಭಿನ್ನ ವೃತ್ತಿಗಳನ್ನು ಅನುಸರಿಸುತ್ತಿದ್ದ ಸಮುದಾಯಗಳನ್ನು, ಆಯಾ ವೃತ್ತಿನಾಮಗಳ ಮೂಲಕವೇ ಗುರುತಿಸಲಾಯಿತು. ಹೆಚ್ಚಾಗಿ ವೃತ್ತಿಯಾಧಾರಿತ ಇಂಥ ಸಮುದಾಯಗಳು ತಮ್ಮದೇ ಆದ ನಿರ್ದಿಷ್ಟ ಭೌಗೋಳಿಕ ಪರಿಸರದಲ್ಲಿ ನೆಲೆಯೂರಿದವು. ಅಂದರೆ ಗೊಲ್ಲ, ಕುರುಬ, ಕಂಬಾರ, ಕುಂಬಾರ, ಚಮ್ಮಾರ, ಮಡಿವಾಳ, ಮ್ಯಾದಾರ, ನೇಕಾರ, ಒಕ್ಕಲಿಗ, ಪುರೋಹಿತ ಈ ಮೊದಲಾದವರ ವಾಸ ಸ್ಥಾನಗಳು ಪ್ರತ್ಯೇಕವಾಗಿದ್ದವು. ಇದರಿಂದಾಗಿ ಒಂದೊಂದು ಸಮುದಾಯದ ಜೀವನ ಸಂಸ್ಕೃತಿಯೂ ವೈವಿಧ್ಯಮಯವಾಗಿತ್ತು. ಪರಿಣಾಮವಾಗಿ ವ್ಯಕ್ತಿನಾಮಗಳು ಆಯಾ ಸಮುದಾಯಗಳ ವೃತ್ತಿ, ಆರಾಧನಾದೈವ, ನಂಬಿಕೆ, ರೂಢಿ ಸಂಪ್ರದಾಯಗಳು ನಾಮ ನಿರ್ದೇಶನದಲ್ಲಿ ಮಹತ್ವದ ಪಾತ್ರವನ್ನು ವಹಿಸಿದವು. ಒಟ್ಟಾರೆಯಾಗಿ ಆಯಾ ಸಮುದಾಯಗಳ ಸಂಸ್ಕೃತಿಯ ಹಿನ್ನೆಲೆಗೆ ಅನುಗುಣವಾಗಿ ನಿರ್ದೇಶನ ಮಾಡಲ್ಪಟ್ಟವು. ಇದರಿಂದಾಗಿ ಹೆಸರಿನ ಮೂಲಕವೆ ವ್ಯಕ್ತಿಯ ಕಸುಬನ್ನು, ಸಮುದಾಯವನ್ನು, ಪ್ರದೇಶವನ್ನು ಗುರುತಿಸಲು ಸಾಧ್ಯವಾಗುತ್ತಿತ್ತು.

ವರ್ಣಾಶ್ರಮ ಪದ್ಧತಿಯ ನಂತರ ವೃತ್ತಿ ಹಿನ್ನೆಲೆಯಲ್ಲಿ ಜಾತಿಪದ್ಧತಿ ಹುಟ್ಟಿಕೊಂಡಿತು. ಜೀವನ ನಿರ್ವಹಣೆಗಾಗಿ ಕೈಗೊಂಡಿದ್ದ ವೃತ್ತಿಗಳು ಜಾತಿಗಳಾಗಿ ಮಾರ್ಪಟ್ಟವು. ಅವರದೇ ಆದ ಜೀವನ ಶೈಲಿ, ಆಚಾರ, ವಿಚಾರ, ರೂಢಿ ನಂಬಿಕೆಗಳು, ಆರಾಧನಾದೈವಗಳನ್ನು ರೂಢಿಸಿಕೊಂಡರು. ಇದರಿಂದಾಗಿ ಸಮುದಾಯಗಳು ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಹೆಚ್ಚು ಭಿನ್ನವಾದವು. ಈ ಎಲ್ಲದರ ಪರಿಣಾಮವಾಗಿ ವ್ಯಕ್ತಿನಾಮಗಳು ಮತ್ತಷ್ಟು ವಿಶಿಷ್ಟವೂ, ವೈವಿಧ್ಯಮಯವೂ ಆದವೆಂದು ಹೇಳಬಹುದು. ಇದೇ ಸಂದರ್ಭದಲ್ಲಿ ತಮ್ಮ ವೃತ್ತಿ, ಜಾತಿ ಹೆಸರನ್ನು, ವ್ಯಕ್ತಿನಾಮಗಳಲ್ಲಿ ಹೆಸರಿಸಿಕೊಳ್ಳುವ ಮನೋಭಾವನೆ ಕೆಲವರಲ್ಲಿ ರೂಢಿಗೆ ಬಂದಿತು. ಹೀಗಾಗಿ ವ್ಯಕ್ತಿನಾಮಗಳು ಸಮಾಜನಿಷ್ಠವಾದವು. ಹೀಗೆ ವೃತ್ತಿ ಮತ್ತು ಜಾತಿಯಿಂದ ವ್ಯಕ್ತಿನಾಮಗಳು ನಿರ್ದೇಶಿಸಲ್ಪಟ್ಟವು.

ಚಲನಶೀಲ ಮಾನವ ಸಂಸ್ಕೃತಿ ಕ್ರಮೇಣವಾಗಿ ತನ್ನ ವ್ಯಾಪ್ತಿಯನ್ನು ಹಿಗ್ಗಿಸಿಕೊಂಡಿತು. ಗ್ರಾಮಗಳು ವಿಕಾಸಗೊಂಡು ಪಟ್ಟಣ, ನಗರಗಳಾಗಿ ಬೆಳೆದವು. ಈ ನಗರ ಪಟ್ಟಣಗಳನ್ನು ರಾಜರು ಆಳ್ವಿಕೆ

ಮಾಡತೊಡಗಿದರು. ರಾಜರು ತಮ್ಮ ಹೆಸರುಗಳಲ್ಲಿ ತಮ್ಮ ಪದನಾಮವನ್ನು ಕಡ್ಡಾಯವಾಗಿ ಬಳಸತೊಡಗಿದರು. ವಂಶದ ಹೆಸರನ್ನು ಕುಲನಾಮಗಳಾಗಿ ಬಳಸಿದರು. ಅಂತೆಯೇ ರಾಜ ಪರಿವಾರದವರೂ ಸಹ ಪದನಾಮಗಳನ್ನು ಹೆಸರುಗಳಲ್ಲಿ ಬಳಸತೊಡಗಿದರು. ಆಡಳಿತ ವಿಕೇಂದ್ರೀಕರಣಗೊಂಡು ಗ್ರಾಮಗಳಿಗೂ ಒಬ್ಬ ಅಧಿಕಾರಿಯನ್ನು (ಗೌಡ, ಪಟೇಲ) ನೇಮಿಸಲಾಯಿತು. ಈ ಎಲ್ಲಾ ವರ್ಗದವರು ಅಭಿಮಾನದಿಂದ ಪದನಾಮಗಳನ್ನು ವ್ಯಕ್ತಿನಾಮಗಳಲ್ಲಿ ಬಳಸಿದರು. ಈ ಎಲ್ಲಾ ಸಂಗತಿಗಳು ಸಾಮಾಜಿಕವಾಗಿ ವ್ಯಕ್ತಿನಾಮಗಳನ್ನು ಪ್ರತ್ಯೇಕಿಸಿದವು. ಚಿತ್ರದುರ್ಗ ಜಿಲ್ಲೆ ತನ್ನದೇ ಆದ ಸಂಸ್ಕೃತಿಯನ್ನು ಹೊಂದಿದೆ. ಪ್ರಾಚೀನ ರಾಜಕೀಯ ಚರಿತ್ರೆಯುಳ್ಳ ಈ ಜಿಲ್ಲೆಗೆ ಐತಿಹಾಸಿಕ ಮಹತ್ವವಿದೆ. ರಾಜಾಡಳಿತ ವ್ಯವಸ್ಥೆಯ ಕುರುಹುಗಳು ಈಗಲೂ ಇಲ್ಲಿನ ವ್ಯಕ್ತಿನಾಮಗಳಲ್ಲಿ ಪ್ರತಿಬಿಂಬವಾಗುತ್ತಿವೆ. ಆ ಮೂಲಕ ಹಿಂದಿನ ಚರಿತ್ರೆಯ ಹಲವು ಸಂಗತಿಗಳನ್ನು ತಿಳಿಯಲು ಸಾಧ್ಯವಾಗಿದೆ.

ಈವರೆಗೆ ಕೇವಲ ಸಮಾಜ ನಿಷ್ಠವಾಗಿದ್ದ ವ್ಯಕ್ತಿನಾಮಗಳು, ಪ್ರಕೃತಿ ನಿಷ್ಠವಾದವು. ಪ್ರಿಯವೆನಿಸಿದ ಪ್ರಾಣಿ, ಪಕ್ಷಿ, ಮರ, ಹೂವು, ನದಿ, ಲೋಹ, ಸೂರ್ಯಚಂದ್ರ, ಗ್ರಹತಾರೆ ಮೊದಲಾದವು ವ್ಯಕ್ತಿನಾಮಗಳಿಗೆ ಪ್ರೇರಣೆಯಾದವು. ಈ ಬೆಳವಣಿಗೆ ಕೆಳಸಮುದಾಯಗಳಿಗಿಂತ, ಮೇಲ್ ಸಮುದಾಯಗಳಲ್ಲಿ ಗಮನಾರ್ಹವಾಗಿತ್ತು. ಕೆಳಸಮುದಾಯಗಳಲ್ಲಿ ಸಮಾಜನಿಷ್ಠ ಹೆಸರುಗಳೇ ಅಧಿಕವಾಗಿದ್ದವು. ಸಮುದಾಯಗಳ ನಡುವೆ ಸಾಂಸ್ಕೃತಿಕ ಕೊಡು ಪಡೆಗಳು ಏರ್ಪಟ್ಟಿದ್ದರಿಂದಾಗಿ ವ್ಯಕ್ತಿನಾಮಗಳು ಹೆಚ್ಚು ಸಂಕೀರ್ಣವಾದವು. ಹೀಗೆ ವ್ಯಕ್ತಿನಾಮಗಳು ಸಂಕೀರ್ಣತೆಯನ್ನು ಪಡೆದುಕೊಂಡವು.

ವ್ಯಕ್ತಿನಾಮಗಳು ಈ ಎಲ್ಲಾ ಸಂಕ್ರಮಣ ಸ್ಥಿತಿಗಳನ್ನು ದಾಟಿ ಬಂದಿವೆ. ಆಧುನೀಕರಣದ ಪ್ರಭಾವದಿಂದ ಸಮಾಜನಿಷ್ಠ ವ್ಯಕ್ತಿನಾಮಗಳು ಹಿಂದೆ ಸರಿದು, ಪ್ರಕೃತಿನಿಷ್ಠ, ಭಾವನಿಷ್ಠವಾಗುತ್ತಿದ್ದು, ಸಾಂಸ್ಕೃತಿಕವಾಗಿ ಬದಲಾಗುತ್ತಿವೆ. ಪರಿಣಾಮವಾಗಿ ಸಮುದಾಯಗಳ ಮೂಲ ಪರಂಪರೆಯ ಹೆಸರುಗಳು ಮರೆಯಾಗುತ್ತಿವೆ.

## ೭.೧. ಅಧ್ಯಯನದ ಮುಖ್ಯ ಫಲಿತಗಳು

೧. ವ್ಯಕ್ತಿನಾಮಗಳ ಕುರಿತು ಈವರೆಗೆ ಕನ್ನಡದಲ್ಲಿ ನಡೆದಿರುವ ಅಧ್ಯಯನಗಳನ್ನು ಗಮನಿಸಿ, ಅವುಗಳ ನೆರವಿನೊಂದಿಗೆ ಪ್ರಸ್ತುತ ನಿಬಂಧಕ್ಕೆ ಹೊಸ ಮಾದರಿಯೊಂದನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ಚಿತ್ರದುರ್ಗ ಪರಿಸರವು ಬಹುಭಾಷಾ ಸಮುದಾಯಗಳಿರುವ, ವೈವಿಧ್ಯಮಯ ಸಂಸ್ಕೃತಿಯುಳ್ಳ ಪ್ರದೇಶವಾಗಿದೆ. ಇಲ್ಲಿನ ದತ್ತ ಮಾಹಿತಿಯನ್ನು ಅನುಲಕ್ಷಿಸಿ, ಹೆಸರಿನ ರಚನೆಯವಿಧಾನ ಮತ್ತು ವೈವಿಧ್ಯತೆಗಳನ್ನು ಕಂಡುಕೊಳ್ಳಲಾಗಿದೆ. ಪೂರಕವಾಗಿ ಕರ್ನಾಟಕದ ಇತರ ಭಾಷಾ ಮತ್ತು ಸಾಮಾಜಿಕ ಪರಿಸರಗಳ ನಾಮರಚನೆಯ ಕೆಲವು ಬಗೆಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಿದೆ. ಸಾಮಾಜಿಕ ವರ್ಗ-ಶ್ರೇಣೀಕರಣಕ್ಕೆ ಅನುಗುಣವಾಗಿ ನಾಮರಚನಾ ಸ್ವರೂಪದಲ್ಲಿ ಕಾಣಬರುವ ಕೆಲವು ವಿಶಿಷ್ಟಗಳನ್ನು ಗುರುತಿಸಲಾಗಿದೆ. ತೆಲುಗು ಮತ್ತು ಉರ್ದು ಭಾಷಾ ಪ್ರಭಾವ ಕನ್ನಡದ ಮೇಲೆ ಆಗಿದೆ. ಇದರಿಂದ ಉರ್ದು ಮತ್ತು ತೆಲುಗು ಭಾಷಾ ಪ್ರೇರಣೆಯಿಂದ ಕನ್ನಡ ವ್ಯಕ್ತಿನಾಮಗಳ ಮೇಲಾದ ಪ್ರಭಾವವನ್ನು ಸ್ಪಷ್ಟಪಡಿಸಿಕೊಳ್ಳಲಾಗಿದೆ. ಮತಾಂತರ ಹೊಂದಿದಾಗ ಹೆಸರನ್ನೂ ಬದಲಾಯಿಸಿಕೊಳ್ಳುವುದು ಕ್ರಿಶ್ಚಿಯನ್ ಧರ್ಮಕ್ಕೆ ಸೀಮಿತವಾಗಿದೆ. ಇದರಿಂದ

ದ್ವಿಸಂಸ್ಕೃತಿಗಳಿಂದಾದ ನಾಮರಚನೆಯ ವೈಶಿಷ್ಟ್ಯಗಳನ್ನು ಕಂಡುಕೊಳ್ಳಲಾಗಿದೆ. ಮದುವೆ ಮತ್ತಿತರ ಸಂದರ್ಭದ ನಾಮ ರಚನೆಯ ಸ್ವರೂಪವನ್ನು ಗಮನಿಸಲಾಗಿದೆ.

೨. ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳ ಅಧ್ಯಯನದಿಂದ ಅಲ್ಲಿನ ಜನರ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ಹಿನ್ನೆಲೆಯನ್ನು ಅರಿಯಲಾಗಿದೆ. ವಾಸ್ತವವಾಗಿ ಹೆಸರುಗಳು ಭಾಷಿಕ ರಚನೆಗಳಾಗಿದ್ದರೂ, ಅವುಗಳಿಗೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಯಾಮಗಳಿವೆ. ಸಮಾಜದ ಚಲನಶೀಲತೆಯನ್ನು ವ್ಯಕ್ತಿನಾಮಗಳ ಮೂಲಕ ತಿಳಿಯಲು ಪ್ರಯತ್ನಿಸಲಾಗಿದೆ. ಸಮುದಾಯಗಳ ಜೀವನಕ್ರಮ ಬದಲಾದಂತೆ, ವ್ಯಕ್ತಿನಾಮಗಳೂ ಬದಲಾಗುತ್ತಿವೆ. ಈ ಬದಲಾವಣೆ ಆಯಾಮಗಳನ್ನು ತಲೆಮಾರುಗಳ ಅಂತರಗಳಿಂದ ಕಂಡುಕೊಳ್ಳಲಾಗಿದೆ.

ಸಮುದಾಯಗಳು ಪಾರಂಪರಿಕವಾಗಿ ನಿರ್ದೇಶನ ಮಾಡಿಕೊಂಡು ಬರುತ್ತಿದ್ದ ವೃತ್ತಿ, ಜಾತಿ, ದೈವ ಮತ್ತು ಚರಿತ್ರೆ ಸಂಬಂಧಿ ಹೆಸರುಗಳ ಬಳಕೆ ಕಡಿಮೆಯಾಗುತ್ತಿದ್ದು, ಪರ್ಯಾಯವಾಗಿ ಆಧುನಿಕ ಸಂದರ್ಭಕ್ಕೆ ಒಪ್ಪುವಂತೆ ವಿನೂತನ ಹೆಸರು, ಭಾವನಾಮಗಳು ಹೆಚ್ಚಾಗಿ ಚಾಲ್ತಿಗೆ ಬರುವುದು ತಿಳಿದುಬಂದಿದೆ.

ಸಮಾಜದ ಎಲ್ಲಾ ಸಮುದಾಯಗಳಲ್ಲಿ ದೈವಸಂಬಂಧಿ ವ್ಯಕ್ತಿನಾಮಗಳೇ ಅಧಿಕವಾಗಿರುವುದು ಕಂಡುಬಂದಿದೆ. ದೈವಸಂಬಂಧಿ ಹೆಸರುಗಳು ಸ್ತ್ರೀಯರಿಗಿಂತ ಪುರುಷರಲ್ಲಿ ಅಧಿಕವಾಗಿದ್ದು, ಕ್ರಮೇಣವಾಗಿ ಪುರುಷರಿಗಿಂತ ಸ್ತ್ರೀಯರಲ್ಲಿ ಇದರ ಪ್ರಮಾಣ ಕಡಿಮೆಯಾಗುತ್ತಿರುವುದು ಸಂಗ್ರಹಿತ ಮಾಹಿತಿಯಲ್ಲಿ ವ್ಯಕ್ತವಾಗಿದೆ. ಮತ್ತು ನಗರ ಪ್ರದೇಶದವರಿಗಿಂತ ಗ್ರಾಮೀಣ ಪ್ರದೇಶದವರಲ್ಲಿ ಅಧಿಕವಾಗಿರುವುದನ್ನು ಕಂಡುಕೊಳ್ಳಲಾಗಿದೆ. ಚಿತ್ರದುರ್ಗದ ಪಾಳೆಯಗಾರರ ಹೆಸರಿನ ಪ್ರಭಾವ, ಅಲ್ಲಿನ 'ನಾಯಕ' ಸಮುದಾಯದವರ ಮೇಲೆ ಮಾತ್ರ ಆಗಿರುವುದು ತಿಳಿದುಬಂದಿದೆ.

ಬ್ರಾಹ್ಮಣ, ಲಂಬಾಣಿ, ರೆಡ್ಡಿ, ಮರಾಠಿ ಸಮುದಾಯದವರ ಹೆಸರುಗಳಲ್ಲಿ ಬಳಕೆಯಾಗುತ್ತಿದ್ದ ವೃತ್ತಿ/ ಜಾತಿವಾಚಿ ವಾರ್ಗಿಕಗಳು ಈಚಿನವರಲ್ಲಿ ಬಿಟ್ಟುಹೋಗುತ್ತಿರುವುದು ಕಂಡುಬಂದಿದೆ. ಗೌಡ, ರಾವ್ ಮತ್ತು 'ಬಾಯಿ' ವಾರ್ಗಿಕಗಳು ಭಿನ್ನ ಸಮಾಜದ ವ್ಯಕ್ತಿನಾಮಗಳಲ್ಲಿ ಬಳಕೆಯಾಗುವುದು ತಿಳಿದುಬರುತ್ತದೆ. ಈ ವಾರ್ಗಿಕಗಳ ಹಿಂದಿನ ನಿರ್ದಿಷ್ಟನಾಮಗಳ ಮೂಲಕ ಭಿನ್ನ ಸಾಮಾಜಿಕ ವರ್ಗಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

'ರೆಡ್ಡಿ' ವಾರ್ಗಿಕವು ಆಂಧ್ರದ ಬಲಿಷ್ಠ ಸಮುದಾಯದ ಹೆಸರುಗಳಲ್ಲಿ ಬಳಕೆಯಾಗುತ್ತಿದ್ದು, ಚಿತ್ರದುರ್ಗ ಪರಿಸರದ ಗಡಿಭಾಗದಲ್ಲಿ ಇದರ ಪ್ರಭಾವ ಅತ್ಯಂತ ಕೆಳಸಮುದಾಯಗಳ ಮೇಲೆ ಆಗಿದೆ. ಅಲ್ಲದೆ, 'ಗೌಡ' ಮತ್ತು 'ರೆಡ್ಡಿ' ವಾರ್ಗಿಕಗಳು ಸಂಬಂಧಿಸಿದ ಜಾತಿಯವರ ಹೆಸರುಗಳಲ್ಲಿ 'ಜಾತಿವಾಚಿ'ಯಾಗಿ ಬಳಕೆಯಾಗಿರುವುದನ್ನು ಗಮನಿಸಲಾಗಿದೆ.

ಜಾತಿಯ ಮೇಲಿನ ಅಭೀಪ್ಸೆಗಳು ಹೆಚ್ಚಾಗಿರುವುದರಿಂದ 'ಗೌಡ' ಮತ್ತು 'ನಾಯಕ' ವಾರ್ಗಿಕಗಳು ಹಿಂದಿಗಿಂತ ಇಂದು ಹೆಚ್ಚು ವ್ಯಾಪಕವಾಗಿ ಬಳಕೆಯಾಗಿರುವುದು ತಿಳಿದುಬಂದಿದೆ. ವೃತ್ತಿ, ಜಾತಿವಾಚಿ ವಾರ್ಗಿಕಗಳು ಪುರುಷ ಹೆಸರುಗಳಲ್ಲಿ ಬಳಕೆಯಾಗುವಂತೆ, ಸ್ತ್ರೀ ನಾಮಗಳಲ್ಲಿಯೂ ಬಳಕೆಯಾಗುವುದನ್ನು

ಕಂಡುಕೊಳ್ಳಲಾಗಿದೆ. 'ನಾಗತಿ' ಎಂಬ ವಾರ್ಗಿಕವು ಪಾಳೆಯಗಾರ ಮನೆತನದ ಹಳೆಯ ತಲೆಮಾರಿನ ಸ್ತ್ರೀಯರಲ್ಲಿ ಮಾತ್ರ ಇರುವುದು ತಿಳಿದುಬಂದಿದೆ. ಸಂಬಂಧವಾಚಿ ವಾರ್ಗಿಕಗಳು ಮೇಲ್ ಸಮುದಾಯದವರಿಗಿಂತ ಕೆಳಸಮುದಾಯದವರ ಹೆಸರುಗಳಲ್ಲಿ ಹೆಚ್ಚಾಗಿದ್ದು, ಇತ್ತೀಚಿಗೆ ಇವರಲ್ಲಿಯೂ ಕಡಿಮೆಯಾಗುತ್ತಿರುವದು ಕಂಡುಬಂದಿದೆ.

ಕೆಳಸಮುದಾಯಗಳು, ಮೇಲ್ ಸಮುದಾಯಗಳ ಹೆಸರುಗಳನ್ನು ಅನುಸರಿಸುವುದರಿಂದ, ವ್ಯಕ್ತಿನಾಮಗಳು ಕೆಳಮುಖವಾಗಿ ಚಲಿಸುತ್ತಿರುವುದನ್ನು ಕಂಡುಕೊಳ್ಳಲಾಗಿದೆ. ಜೊತೆಗೆ ಹೆಸರುಗಳು ಹೆಚ್ಚು ಸಂಸ್ಕೃತಾನುಕರಣಕ್ಕೆ ಒಳಗಾಗುತ್ತಿರುವ ಅಂಶವನ್ನು ಸ್ಪಷ್ಟಪಡಿಸಿಕೊಳ್ಳಲಾಗಿದೆ.

೩. ವ್ಯಕ್ತಿನಾಮಗಳ ರಾಚನಿಕ ಸ್ವರೂಪವನ್ನು ಗಮನಿಸಿ, ಸಾಮಾಜಿಕತೆ ಮತ್ತು ಭೌಗೋಳಿಕತೆಯನ್ನು ಗುರುತಿಸಬಹುದಾದಂತೆ, ವ್ಯಕ್ತಿನಾಮಗಳ ಬಳಕೆಯನ್ನು ಗಮನಿಸಿ ವ್ಯಕ್ತಿಯ ಜಾತಿ, ಸಾಮಾಜಿಕ ಸ್ಥಾನಮಾನಗಳನ್ನು ಗುರುತಿಸಲಾಗಿದೆ. ಚಿತ್ರದುರ್ಗ ಪರಿಸರದಲ್ಲಿ ವ್ಯಕ್ತಿನಾಮ ಸಂಬೋಧನೆಯು ಸಾಮಾಜಿಕವಾಗಿ ಭಿನ್ನವಾಗಿರುವುದು ಸ್ಪಷ್ಟವಾಗುತ್ತದೆ. ಹೆಸರಿನ ಬಳಕೆಗೆ ಮತ್ತು ನಿಷೇಧಕ್ಕೆ ಜಾತಿ, ವರ್ಗ, ಶಿಕ್ಷಣ, ಲಿಂಗ, ವಯಸ್ಸು, ಸಾಮಾಜಿಕ ಸ್ಥಾನಮಾನ, ವ್ಯಕ್ತಿಯ ವ್ಯಕ್ತಿತ್ವ, ಸಂಬಂಧ, ಸಂದರ್ಭಗಳು ಕಾರಣವಾಗಿವೆ ಎಂಬುದನ್ನು ಸ್ಪಷ್ಟಪಡಿಸಿಕೊಂಡಿದೆ. ಕುಟುಂಬ - ಕುಟುಂಬೇತರ, ಔಪಚಾರಿಕ ಅನೌಪಚಾರಿಕ ಹಾಜರಿ ಮತ್ತು ಗೈರುಹಾಜರಿ ನೆಲೆಯ ಸಂಬೋಧನೆಯ ಹಲವು ಆಯಾಮಗಳನ್ನು ಗುರುತಿಸಲಾಗಿದೆ. ಕೆಳಜಾತಿಯವರು ಮೇಲ್ಜಾತಿಯವರನ್ನು ಹೆಸರಿನಿಂದ ಸಂಬೋಧಿಸುವುದು ಸಾಮಾಜಿಕ ನಿಷಿದ್ಧವಾಗಿರುವಂತೆ, ಆರ್ಥಿಕವಾಗಿ ಸಬಲರಾಗಿರುವ ಕೆಳಜಾತಿಯವರನ್ನು, ಆರ್ಥಿಕವಾಗಿ ದುರ್ಬಲರಾಗಿರುವ ಮೇಲ್ಜಾತಿಯವರೂ ಹೆಸರಿನಿಂದ ಕರೆಯದೆ, ಗೌರವ ವಿಶೇಷಣಗಳಿಂದ ಸಂಬೋಧಿಸುವುದು ತಿಳಿದುಬಂದಿದೆ. ಅಲ್ಲದೆ ಭಾರತೀಯ ಸಮಾಜದಲ್ಲಿ ಏಕಕಾಲಕ್ಕೆ ಜಾತಿ ಮತ್ತು ವರ್ಗ ವ್ಯವಸ್ಥೆಗಳು ಇರುವುದನ್ನು ಕಂಡುಕೊಳ್ಳಲಾಗಿದೆ. ಗಂಡ ಹೆಂಡತಿಯನ್ನು ಹೆಸರಿನಿಂದ ಸಂಬೋಧಿಸುವಂತೆ, ಹೆಂಡತಿ ಗಂಡನನ್ನು ಹೆಸರಿನಿಂದ ಸಂಬೋಧಿಸುವುದನ್ನು ಗಮನಿಸಲಾಗಿದೆ. ಮದುವೆ ಮತ್ತಿತರ ಸಂದರ್ಭಗಳಲ್ಲಿನ ನಾಮ ಸಂಬೋಧನೆಯ ವಿಧಾನವನ್ನು ಗುರುತಿಸಲಾಗಿದೆ. ನಾಮ ಸಂಬೋಧನೆಯ ಸಂದರ್ಭದಲ್ಲಿ ನಡೆಯುವ ಭಾಷಿಕ ಪ್ರಕ್ರಿಯೆಗಳನ್ನು ಕಂಡುಕೊಳ್ಳಲಾಗಿದೆ.

೪. ವ್ಯಕ್ತಿನಾಮಗಳು ಸಂಸ್ಕೃತಿಯ ಅಧ್ಯಯನದ ಆಕರಸಾಮಗ್ರಿಗಳೆಂಬುದನ್ನು ಗುರುತಿಸಲಾಗಿದೆ. ಚಿತ್ರದುರ್ಗ ಪರಿಸರದ ಜನರಲ್ಲಿ ಹೆಸರಿನ ಬಗೆಗೆ ಭಿನ್ನಾಭಿಪ್ರಾಯಗಳಿವೆ. ನಾಮಕರಣ ವಿಧಾನವು ಸಾಮಾಜಿಕವಾಗಿ ಬೇರೆಬೇರೆಯಾಗಿದ್ದು, ನಾಮಕರಣದ ಬಗೆಗಿನ ನಂಬಿಕೆಗಳು ಮತ್ತು ಈ ನಂಬಿಕೆಗಳಿಂದ ನಿರ್ದೇಶಿಸಲ್ಪಡುವ ಹೆಸರುಗಳನ್ನು ಸಾಮಾಜಿಕ ಹಿನ್ನೆಲೆಯಲ್ಲಿ ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ಹೆಸರು ಶರೀರದ ಒಂದು ಅಂಗ, ಅದನ್ನು ಮಾಟ ಮಂತ್ರಕ್ಕೆ ಬಳಸಿಕೊಳ್ಳುತ್ತಾರೆಂಬ ನಂಬಿಕೆಯಿಂದ, ಅಪರಿಚಿತರಿಗೆ ಹೆಸರು ಹೇಳುತ್ತಿರಲಿಲ್ಲ. ಈ ಭಯದಿಂದ ವ್ಯಕ್ತಿಗೆ ಒಂದಕ್ಕಿಂತ ಹೆಚ್ಚು ನಾಮಗಳನ್ನು ನಿರ್ದೇಶನ ಮಾಡುವ ಪದ್ಧತಿ ರೂಢಿಗೆ ಬಂದುದು ತಿಳಿದುಬರುತ್ತದೆ. ಇಂದು ವ್ಯಕ್ತಿಗೆ ಒಂದು ಹೆಸರನ್ನು ಮಾತ್ರ ನಿರ್ದೇಶನ ಮಾಡಿದರೂ, ಜನರಲ್ಲಿ ಈ ನಂಬಿಕೆ ಈಗಲೂ ಇರುವುದು ತಿಳಿದುಬಂದಿದೆ.

ಹಿರಿಯರ ಹೆಸರನ್ನು ಕಿರಿಯರಿಗೆ ನಿರ್ದೇಶನ ಮಾಡಿದಾಗ ನೇರವಾಗಿ ಹೆಸರಿನಿಂದ ಕರೆಯಬಾರದೆಂಬ ನಂಬಿಕೆಯಿರುವುದು ಸ್ಪಷ್ಟವಾಗುತ್ತದೆ. ಹಾಗಾಗಿ 'ಅಜ್ಜಪ್ಪ', 'ತಾತಣ್ಣ', 'ಮುತ್ತಪ್ಪ' ಎಂಬ ಹೆಸರುಗಳು ನಿರ್ದೇಶನ ನಾಮಗಳಾಗಿರದೆ, ರೂಢಿಗತವಾಗಿ ವ್ಯಕ್ತಿಗೆ ಸೇರುತ್ತವೆ ಎಂಬುದನ್ನು ಗುರುತಿಸಲಾಗಿದೆ. ರೋಗ-ರುಜಿನ, ಮದುವೆ-ಮುಂಜಿಗಳಲ್ಲಿ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ಹೊಂದಿದಾಗ ಮತ್ತು ವ್ಯಕ್ತಿಯ ಸ್ಥಾನಮಾನಗಳು ಬದಲಾದಾಗ ಹೆಸರನ್ನು ಬದಲಾಯಿಸಿಕೊಳ್ಳುವುದು ತಿಳಿದುಬರುತ್ತದೆ. ಇದು ಹೆಸರಿನ ಬಗೆಗೆ ಜನರಿಗಿರುವ ನಂಬಿಕೆ ಎಂಬುದನ್ನು ಗುರುತಿಸಲಾಗಿದೆ.

ಚಿತ್ರದುರ್ಗ ಪರಿಸರದಲ್ಲಿ ಅಡ್ಡಹೆಸರುಗಳು ವ್ಯಕ್ತಿಯ ಶಾರೀರಿಕ ಗುಣ ಸ್ವಭಾವಗಳನ್ನು ಅನುಸರಿಸಿ ಬರುವುದರಿಂದ, ಅಡ್ಡಹೆಸರುಗಳನ್ನು ಅನ್ವರ್ಥಕ ನಾಮಗಳೆಂದು ಪರಿಗಣಿಸಲಾಗಿದೆ. ಈ ಭಾಗದಲ್ಲಿ ಶರೀರವಾಚಿ, ಪ್ರಾಣಿವಾಚಿ, ವಸ್ತುವಾಚಿ, ಗುಣವಾಚಿ, ವ್ಯಕ್ತಿವಾಚಿ ಮುಂತಾದ ಅಡ್ಡಹೆಸರುಗಳಿರುವುದನ್ನು ಗುರುತಿಸಲಾಗಿದೆ. ಕುಲನಾಮಗಳು ವ್ಯಕ್ತಿಯ ಕೌಟುಂಬಿಕ ಪರಿಸರದ ಹಿನ್ನೆಲೆಯಿಂದ ಬಂದಿದ್ದರೂ ಅವು ಸಂಸ್ಕೃತಿಯ ಪ್ರತಿನಿಧಿಗಳಾಗಿವೆ ಎಂಬುದು ಸ್ಪಷ್ಟವಾಗುತ್ತದೆ. ಒಟ್ಟಾರೆ ಇಲ್ಲಿನ ಕುಲನಾಮಗಳನ್ನು ವೃತ್ತಿವಾಚಿ, ವ್ಯಕ್ತಿವಾಚಿ, ಜಾತಿವಾಚಿ, ಸ್ಥಳವಾಚಿ ಈ ಮೊದಲಾದ ಕುಲನಾಮಗಳಿರುವುದನ್ನು ಕಂಡುಕೊಳ್ಳಲಾಗಿದೆ.

೫. ಆಧುನೀಕರಣವು ವ್ಯಕ್ತಿನಾಮಗಳ ಮೇಲೆ ಉಂಟುಮಾಡಿರುವ ಪರಿಣಾಮವನ್ನು ಗಮನಿಸಲಾಗಿದೆ. 'ಮಾದಿಗ', 'ಯಾದವ' ಮುಂತಾದ ಸಾಮಾಜಿಕ ಕೆಳಸಮುದಾಯಗಳು ಹಿಂದೆ ಜಾತಿಯ ಹೆಸರನ್ನು ಬಹಿರಂಗವಾಗಿ ಹೇಳಿಕೊಳ್ಳುವುದು ಅವಮಾನಕರವಾಗಿತ್ತು. ಇಂದು ಅವುಗಳ ಮೇಲಿನ ಅಭಿಮಾನ, ಗೌರವದಿಂದ ಜಾತಿಯ ಹೆಸರನ್ನು ವ್ಯಕ್ತಿನಾಮಗಳಲ್ಲಿ ಸೂಚಿಸಿಕೊಳ್ಳುವುದನ್ನು ಗುರುತಿಸಲಾಗಿದೆ. ಜಾತಿ ಸಂಘಟನೆಗಳು ಇಂದು ವ್ಯಾಪಕವಾಗಿ ನಡೆಯುತ್ತಿದ್ದು, ತಮ್ಮ ಅನನ್ಯತೆಯನ್ನು ಜಾತಿಯ ಮೂಲಕ ಗುರುತಿಸಿಕೊಳ್ಳುವ ಪ್ರವೃತ್ತಿ ಬೆಳೆಯುತ್ತಿದೆ. ರಾಜಕೀಯ ಅಧಿಕಾರದ ವ್ಯವಸ್ಥೆಯೂ ಜಾತಿಯ ಹೆಸರಿನ ವ್ಯಾಪಕ ಬಳಕೆಗೆ ಕಾರಣವಾಗಿರುವುದನ್ನು ಸ್ಪಷ್ಟಪಡಿಸಿಕೊಳ್ಳಲಾಗಿದೆ. ಗ್ರಾಮ ಸಮಾಜಗಳು ಆಧುನಿಕತೆಗೆ ತೆರೆದುಕೊಂಡಿವೆ. ಸಮೂಹ ಮಾಧ್ಯಮಗಳ ಪ್ರಭಾವದಿಂದ ಹಳ್ಳಿಗರು ಸಿನಿಮಾ, ಕ್ರೀಡಾ ತಾರೆಯರ ಹೆಸರುಗಳ ಕಡೆಗೆ ಒಲವು ತೋರಿಸಿರುವುದನ್ನು ಕಂಡುಕೊಳ್ಳಲಾಗಿದೆ. ಆರ್ಥಿಕವಾಗಿ, ಶೈಕ್ಷಣಿಕವಾಗಿ ಮುಂದುವರೆದ ವರ್ಗವು, ತಮ್ಮ ಸಮುದಾಯದ ಮೂಲದೈವ ಮೂಲಪುರುಷರ ಹೆಸರನ್ನು ಮತ್ತು ಕಲೆ, ಸಂಗೀತ, ಸಾಹಿತ್ಯದ ಅಭಿಮಾನವುಳ್ಳವರು ಆಯಾಕ್ಷೇತ್ರದ ಹೆಸರಾಂತ ವ್ಯಕ್ತಿಗಳ ಹೆಸರನ್ನು ತಮ್ಮ ಮಕ್ಕಳಿಗೆ ನಿರ್ದೇಶಿಸುವ ಕ್ರಮವೂ ಕಾಣುತ್ತಿದೆ. ಒಟ್ಟಾರೆಯಾಗಿ ಸಮುದಾಯಗಳು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ಮತ್ತು ಶೈಕ್ಷಣಿಕವಾಗಿ ಮುಂದುವರೆದಂತೆಲ್ಲಾ ಪಾರಂಪರಿಕ ದೈವಸಂಬಂಧಿ ವ್ಯಕ್ತಿನಾಮಗಳ ಬಳಕೆ ಕಡಿಮೆಯಾಗುತ್ತಿದ್ದು ಆಧುನಿಕ ಕಾಲದ ಹೊಸ ಹೆಸರುಗಳು ಹೆಚ್ಚು ಬಳಕೆಗೆ ಬಂದಿವೆ. ವಾರ್ಗಿಕಗಳು ಕಡಿಮೆಯಾಗಿದ್ದು ಹೆಚ್ಚಾಗಿ ನಿರ್ದಿಷ್ಟ ನಾಮಗಳನ್ನು ನಿರ್ದೇಶಿಕೊಳ್ಳುವುದು ಕಂಡುಬಂದಿದೆ.

## ೭.೨. ಅಧ್ಯಯನದ ಮಹತ್ವ ಮತ್ತು ಮಿತಿಗಳು

೧. 'ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು' ಎಂಬ ಈ ಶೀರ್ಷಿಕೆಯಡಿಯಲ್ಲಿ ಚಿತ್ರದುರ್ಗ, ಚಳ್ಳಕೆರೆ

ಮತ್ತು ಮೊಳಕಾಲ್ಮೂರು ತಾಲೂಕುಗಳಿಗೆ ಅಧ್ಯಯನದ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಂಡು, ಅಲ್ಲಿನ ಕೆಲವು ಸಮುದಾಯಗಳನ್ನು ಕುರಿತು ಸಾಧ್ಯವಾದಷ್ಟು ಅಧ್ಯಯನದ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿ ಅಧ್ಯಯನ ಮಾಡಲಾಗಿದೆ. ಇದು ಇಡೀ ಪರಿಸರದ ಸಮಗ್ರ ಅಧ್ಯಯನವಾಗಿರುವುದಿಲ್ಲ. ಜಿಲ್ಲೆಯ ಆರೂ ತಾಲೂಕುಗಳ ಎಲ್ಲಾ ಸಮುದಾಯಗಳನ್ನು ಅಧ್ಯಯನದ ವ್ಯಾಪ್ತಿಯನ್ನಾಗಿ ಮಾಡಿಕೊಂಡಿರುವುದಿಲ್ಲ. ವಿಸ್ತೃತವಾದ ಅಧ್ಯಯನದ ಮೂಲಕ ವ್ಯಕ್ತಿನಾಮಗಳ ಹೊಸ ಸಾಧ್ಯತೆಗಳನ್ನು ಗುರುತಿಸಲು ಸಾಧ್ಯವಿದೆ.

೨. ಕರ್ನಾಟಕದ ವ್ಯಕ್ತಿನಾಮಗಳ ಸಮಗ್ರ ಅಧ್ಯಯನ ಕೈಗೊಂಡಲ್ಲಿ ಭಾಷಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಭೌಗೋಳಿಕ ಆಯಾಮಗಳ ಕುರಿತಂತೆ ಸೂಕ್ಷ್ಮವಾದ ಅಧ್ಯಯನ ಮಾಡಬಹುದು.

೩. ಸಾಮಾಜಿಕ ಅಧ್ಯಯನದಲ್ಲಿ ವ್ಯಕ್ತಿನಾಮಗಳ ಆಯಾಮಗಳನ್ನು ಸರಳವಾಗಿ ಮತ್ತು ವಿಸ್ತೃತವಾಗಿ ಚರ್ಚಿಸಬಹುದೆಂಬ ಗ್ರಹಿಕೆಗಳಿಂದ, ಆಕರಗಳ ಮುಖೇನ ಸಾಮಾಜಿಕ ಆಯಾಮಗಳನ್ನು ನೋಡದೆ, ಸಮಾಜದ ಮೂಲಕ ಆಕರಗಳ ಸಾಮಾಜಿಕ ಸಂಸ್ಕೃತಿಯನ್ನು ಚರ್ಚೆ ಮಾಡಲಾಗಿದೆ. ಈ ವರೆಗಿನ ಅಧ್ಯಯನಗಳಿಗಿಂತ ಇದು ಭಿನ್ನವಾಗಿದೆ ಎಂದೇ ಭಾವಿಸಲಾಗಿದೆ.

೪. ನಿರ್ದಿಷ್ಟ ಮತ್ತು ವಾರ್ಗಿಕಗಳ ಮುಖೇನ ವ್ಯಕ್ತಿನಾಮಗಳ ಸಾಮಾಜಿಕ ಸಂಸ್ಕೃತಿಯನ್ನು ಅಧ್ಯಯನ ಮಾಡುವಾಗ, ಕೆಲವೇ ನಿದರ್ಶನಗಳನ್ನು ಆಯ್ದುಕೊಂಡು ಸಂಕ್ಷಿಪ್ತ ಚರ್ಚೆ ಮಾಡಲಾಗಿದೆ. ಅಧ್ಯಯನ ಕ್ಷೇತ್ರದ ಅತಿವ್ಯಾಪ್ತಿಯಿಂದಾಗಿ ಈ ಮಿತಿ ಒದಗಿದೆ. ಸಮುದಾಯಗಳ ವ್ಯಕ್ತಿನಾಮಗಳನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡಿದರೆ ವಿಸ್ತೃತ ಚರ್ಚೆ ಮಾಡಲು ಅನುಕೂಲವಾಗುತ್ತದೆ.

೫. ಇಸ್ಲಾಂ ಸಮುದಾಯದ ವ್ಯಕ್ತಿನಾಮಗಳ ಕುರಿತು ಅಧ್ಯಯನ ಮಾಡುವಾಗ ಸೂಫಿಗಳ ಬಗೆಗಿನ ಅಧ್ಯಯನವನ್ನು ಕೈಬಿಡಲಾಗಿದೆ. ಕಾರಣ ಅಧ್ಯಯನದ ಕ್ಷೇತ್ರ ಮಿತಿಯಿಂದಾಗಿ ಈ ಮಿತಿ ಉಂಟಾಗಿದೆ. ಕರ್ನಾಟಕದಲ್ಲಿ ಭಿನ್ನ ಸಮಾಜಗಳ ಮೇಲೆ ಸೂಫಿಗಳ ಪ್ರಭಾವವನ್ನು ಗಮನಿಸಿ ವ್ಯಾಪಕ ಅಧ್ಯಯನ ಕೈಗೊಂಡಲ್ಲಿ, ವ್ಯಕ್ತಿನಾಮಗಳ ಸಾಮಾಜಿಕ ಸಂಸ್ಕೃತಿಯ ಅನೇಕ ಹೊಸ ವಿಚಾರಗಳನ್ನು ಅನಾವರಣಗೊಳಿಸಲು ಸಾಧ್ಯವಾಗಬಹುದು.

೬. ವ್ಯಕ್ತಿನಾಮಗಳ ಸಂಬೋಧನೆಯ ಮುಖೇನ ಏಣಿ-ಶ್ರೇಣೀಕರಣ ಸಮಾಜದ ವ್ಯವಸ್ಥೆಯನ್ನು ಚರ್ಚಿಸುವಾಗ, ಹೊಸದಾಗಿ ಅಧ್ಯಯನದ ಕ್ರಮವನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸಲಾಗಿದೆ. ಅದೇ ರೀತಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಧ್ಯಯನಗಳಲ್ಲೂ ಮೊದಲ ಬಾರಿಗೆ ಅಧ್ಯಯನ ಮಾದರಿಗಳನ್ನು ರೂಪಿಸಿಕೊಳ್ಳಲು ಪ್ರಯತ್ನಿಸಲಾಗಿದೆ.

೭. ಬಖೈರು, ಶಾಸನೋಕ್ತ ಮತ್ತು ಕೈಫಿಯತ್ತುಗಳಲ್ಲಿ ಉಲ್ಲೇಖಗೊಂಡಿರುವ ವ್ಯಕ್ತಿನಾಮಗಳು ಮತ್ತು ವ್ಯಕ್ತಿನಾಮಗಳ ನಿಷ್ಪತ್ತಿಯನ್ನು ಈ ಅಧ್ಯಯನದಲ್ಲಿ ಗಮನಿಸಿರುವುದಿಲ್ಲ. ವ್ಯಕ್ತಿನಾಮಾಧ್ಯಯನದಲ್ಲಿ ಇವು ಮುಖ್ಯ ಸಂಗತಿಗಳಾದರೂ ಅಧ್ಯಯನದ ಸೀಮಿತ ವ್ಯಾಪ್ತಿಯಿಂದಾಗಿ ಇವುಗಳನ್ನು ಅಧ್ಯಯನದಿಂದ ಕೈಬಿಡಲಾಗಿದೆ. ಈ ಅಧ್ಯಯನದಲ್ಲಿ ಮಾಡಿರುವ ಚರ್ಚೆಗಳು ಮತ್ತು ರೂಪಿಸಿರುವ ಅಧ್ಯಯನ ಮಾದರಿಗಳು ಸಮಗ್ರವಲ್ಲ.

## ೭.೩. ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಮುಂದಿನ ಅಧ್ಯಯನದ ಸಾಧ್ಯತೆಗಳು

೧. ಚಿತ್ರದುರ್ಗ ಪರಿಸರದ ಸಮಗ್ರ ಪ್ರದೇಶವನ್ನು ಅನುಲಕ್ಷಿಸಿ ಅಧ್ಯಯನ ಮಾಡಬಹುದು. ಅದೇ ರೀತಿ ಬೇರೆ ಬೇರೆ ಭೌಗೋಳಿಕ ಪರಿಸರದ ವ್ಯಕ್ತಿನಾಮಗಳನ್ನು ಅಧ್ಯಯನ ಮಾಡುವ ಅಗತ್ಯವಿದೆ.

೨. 'ವ್ಯಕ್ತಿನಾಮಗಳ ಸಾಮಾಜಿಕ ಅಧ್ಯಯನ' ಎಂಬ ಶೀರ್ಷಿಕೆಯಡಿಯಲ್ಲಿ ಪ್ರತ್ಯೇಕ ಅಧ್ಯಯನ ಮಾಡಬೇಕಾದ ಅಗತ್ಯವಿದೆ ಎನಿಸುತ್ತದೆ. ಕರ್ನಾಟಕವನ್ನು ಗಮನದಲ್ಲಿಟ್ಟುಕೊಂಡು, ದೈವನಿಷ್ಠ, ಜಾತಿನಿಷ್ಠ, ವ್ಯಕ್ತಿನಾಮಗಳ ನಿರ್ದಿಷ್ಟ ಮತ್ತು ವಾರ್ಗಿಕ, ಅಡ್ಡಹೆಸರು, ಕುಲನಾಮ, ಮತಾಂತರ ಮತ್ತು ವ್ಯಕ್ತಿನಾಮಗಳು, ವ್ಯಕ್ತಿನಾಮಗಳು ಮತ್ತು ಬದಲಾವಣೆ ಪ್ರಕ್ರಿಯೆ ಹೀಗೆ ಒಂದೊಂದು ಅಂಶವನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡಲು ಸಾಧ್ಯವಿದೆ.

೩. 'ವ್ಯಕ್ತಿನಾಮಗಳ ಸಂಬೋಧನ ರೂಪಗಳು' ಸಾಮಾಜಿಕವಾಗಿ ಭಿನ್ನವಾಗಿರುವುದರಿಂದ ಸ್ವತಂತ್ರವಾಗಿ ಚರ್ಚಿಸಬಹುದು. ಮೇಲ್ಜಾತಿ-ಮೇಲ್ವರ್ಗ ಮತ್ತು ಕೆಳಜಾತಿ-ಕೆಳವರ್ಗಗಳ ವ್ಯಕ್ತಿನಾಮ ಸಂಬೋಧನೆ, ಕುಟುಂಬ-ಕುಟುಂಬೇತರ ಆವರಣಗಳ ವ್ಯಕ್ತಿನಾಮ ಸಂಬೋಧನೆ, ಈ ಒಂದೊಂದು ಪ್ರಕಾರವನ್ನಿಟ್ಟುಕೊಂಡು ಅಧ್ಯಯನ ಮಾಡಬಹುದಾದಷ್ಟು ಮಾಹಿತಿಯನ್ನು ತುಂಬಿಕೊಂಡಿವೆ.

೪. 'ವ್ಯಕ್ತಿನಾಮಗಳು ಮತ್ತು ಪ್ರಾಚೀನತೆ' ಎಂಬ ಹೆಸರಿನಲ್ಲಿ ಪ್ರತ್ಯೇಕ ಅಧ್ಯಯನ ಮಾಡಬಹುದು. ಶಾಸನೋಕ್ತ ವ್ಯಕ್ತಿನಾಮಗಳು, ಕಾವ್ಯೋಕ್ತ ವ್ಯಕ್ತಿನಾಮಗಳು, ದಾಸರ ಹೆಸರುಗಳು, ವಚನಕಾರರ ಹೆಸರುಗಳು ಈ ಎಲ್ಲಾ ವಿಷಯಗಳನ್ನು ಬೇರೆ ಬೇರೆ ಅಧ್ಯಯನಗಳಾಗಿ ಚರ್ಚಿಸಬಹುದು.

೫. 'ವ್ಯಕ್ತಿನಾಮಗಳು ಮತ್ತು ಸಾಂಸ್ಕೃತಿಕ ದೃಷ್ಟಿಕೋನ' ಎಂಬ ವಿಷಯದ ಮೇಲೆ ಬಿಡಿಬಿಡಿಯಾದ ಅಧ್ಯಯನಗಳನ್ನು ಕೈಗೊಳ್ಳಲು ಅವಕಾಶಗಳಿವೆ.

ವ್ಯಕ್ತಿನಾಮಗಳು ಭಾಷಿಕವಾಗಿ, ಸಾಮಾಜಿಕವಾಗಿ, ಭೌಗೋಳಿಕವಾಗಿ ವಿಶಿಷ್ಟವಾಗಿರುವುದರಿಂದ, ಅಲ್ಲಿನ ಹಲವು ವಿಷಯಗಳು ಅಧ್ಯಯನಯೋಗ್ಯವಾಗಿವೆ. ಅಲ್ಲಿನ ಒಂದೊಂದು ಸಂಗತಿಯ ಕುರಿತು ವೈಜ್ಞಾನಿಕವಾಗಿ ವಿಶ್ಲೇಷಿಸಬೇಕಾದ ಅಗತ್ಯತೆಯಿದೆ. ಈ ದಿಸೆಯಲ್ಲಿ ಕನ್ಯಾನೆಲವಾಗಿರುವ ನಾಮಪ್ರಪಂಚ, ಅಧ್ಯಯನಕಾರರಿಗೆ ಒಂದು ವಿಶಾಲ ಕ್ಷೇತ್ರವಾಗಿದೆ.

## ಪ್ರಶ್ನಾವಳಿ

೦೧. ಹೆಸರು ವಯಸ್ಸು ಜಾತಿ ಕೆಲಸ

೦೨. ತಂದೆ ಹೆಸರು

೦೩. ತಾಯಿ ಹೆಸರು

೦೪. ಅಜ್ಜನ ಹೆಸರು

೦೫. ಅಜ್ಜಿ ಹೆಸರು

೦೬. ಮನೆ ದೇವರು ಯಾವುದು? ನಡೆದುಕೊಳ್ಳುವ ದೇವರು ಯಾವುದು?

೦೭. ವಿದ್ಯಾವಂತರೆ? ಸ್ಥಳೀಯರೆ? ವಲಸೆ ಬಂದವರೆ?

೦೮. ನಿಮಗೆ ಈ ಹೆಸರು ಇಡಲು ಕಾರಣವೇನು?

೦೯. ಹೆಸರು ಇಡುವುದಕ್ಕೆ ಸಂಬಂಧಿಸಿ ಆಚರಣೆ, ನಂಬಿಕೆ, ನಿಷೇಧಗಳಿದ್ದರೆ ತಿಳಿಸಿ?

೧೦. ನಿಮ್ಮ ಕುಲನಾಮ ಏನು? ನಿಮಗೆ ಬೇರೆ ಹೆಸರೇನಾದರೂ ಇದೆಯೆ? ಯಾರು ಇಟ್ಟರು?
ಬಳಸುತ್ತಾರೆಯೇ? ಬಳಸಿದರೆ ನಿಮಗೆ ಬೇಜಾರಾಗುತ್ತದೆಯೇ?

೧೧. ಹೆಸರಿನ ಬಳಕೆಯ ವಲಯಗಳು?
ದಾಖಲೆ : ಪರಸ್ಪರ ಸಂಬೋಧನೆಯಲ್ಲಿ : ಗೈರು ಹಾಜರಿಯಲ್ಲಿ :

೧೨. ನಿಮ್ಮ ಕುಟುಂಬಗಳಲ್ಲಿ ಗಂಡು ಮಕ್ಕಳ ೫ ಹೆಸರು/ಹೆಣ್ಣು ಮಕ್ಕಳ ೫ ಹೆಸರು ತಿಳಿಸಿ
ಗಂಡು ಮಕ್ಕಳ ಹೆಸರು : ಹೆಣ್ಣು ಮಕ್ಕಳ ಹೆಸರು :

೧೩. ಮಾತೃಭಾಷೆ ಯಾವುದು? ವ್ಯವಹಾರಿಕ ಭಾಷೆ ಯಾವುದು?

೧೪. ನಿಮ್ಮ ಊರಲ್ಲಿ ಯಾವ ಯಾವ ಜನಾಂಗದ ಜನ ಇದ್ದಾರೆ? ಬಹುಸಂಖ್ಯಾತ ಜನಾಂಗ ಯಾವುದು? ಅವರ ಸಂಬಂಧ ನಿಮ್ಮ ಸಂಬಂಧ ಯಾವ ರೀತಿ ಇದೆ?

೧೫. ನಿಮ್ಮ ಊರಲ್ಲಿ ಯಾವ ಯಾವ ದೇವಸ್ಥಾನಗಳಿವೆ? ಯಾವುದು ಹೆಚ್ಚು ಪ್ರಸಿದ್ಧಿ? ನೀವು ಪೂಜೆ ಮಾಡುವ ದೇವರು ಯಾವುದು?

೧೬. ನಿಮ್ಮ ಊರಲ್ಲಿ ಜಾತ್ರೆಗಳು ನಡೆಯುತ್ತವೆಯೆ? ಸಂತೆ ಆಗುತ್ತದೆಯೆ?

೧೭. ನಿಮ್ಮ ಊರು ಯಾವುದಾದರು ರಾಜರ ಆಳ್ವಿಕೆಗೆ ಒಳಪಟ್ಟಿತ್ತೆ? ಯಾವುದಾದರು ಐತಿಹಾಸಿಕ ಘಟನೆಗಳು ನಡೆದಿದ್ದಾವೆಯೆ?

೧೮. ನೀವು ವಿವಾಹಿತರೆ? ಸ್ವಜಾತಿಯಲ್ಲೋ? ವಿಜಾತಿಯಲ್ಲೋ?

೧೯. ಮದುವೆಯ ಸಂದರ್ಭದಲ್ಲಿ ಮಧುಮಕ್ಕಳ ಹೆಸರನ್ನು ಬದಲಾಯಿಸುವ ಪದ್ಧತಿ ನಿಮ್ಮಲ್ಲಿದೆಯೆ? ಬದಲಾಯಿಸಿದರೆ ಯಾವ ಕಾರಣಕ್ಕಾಗಿ?

೨೦. ನಿಮ್ಮ ಊರಲ್ಲಿ ದೇವದಾಸಿ ಪದ್ಧತಿ ಇದೆಯೆ? ಇದ್ದರೆ ಯಾವ ಯಾವ ಜಾತಿಯವರು?

೨೧. ನೀವು ಬೇರೆಯವರ ಕೆಲಸಕ್ಕೆ ಹೋಗುತ್ತೀರಾ? ನೀವು ಕೆಲಸಕ್ಕೆ ಹೋಗುವ ಜನ ಯಾವ ಜಾತಿಯವರು?

೨೨. ನಿಮ್ಮ ಹೆಸರನ್ನು ಕರೆಯುವ ರೀತಿ :
ಮನೆಯಲ್ಲಿ ಊಟ ತಿಂಡಿಗಾಗಿ ನಿಮ್ಮ ಮನೆಯವರು ನಿಮ್ಮನ್ನು ಕರೆಯುತ್ತಾರೆ ಎಂದಿಟ್ಟುಕೊಳ್ಳಿ. ಆಗ ಅವರು ನಿಮ್ಮನ್ನು ಹೇಗೆ ಕರೆಯುತ್ತಾರೆ?

ತಾಯಿ ತಂದೆ
ಅಣ್ಣ ಅಕ್ಕ
ತಮ್ಮ ತಂಗಿ

೨೩. ನಿಮ್ಮ ಮನೆಗೆ ಯಾರೋ ಅಪರಿಚಿತರು ಬಂದಿದ್ದಾರೆ ಎಂದಿಟ್ಟುಕೊಳ್ಳಿ. ಆಗ ಅವರೆದುರಿಗೆ ನಿಮ್ಮ ಮನೆಯವರು ಏನೆಂದು ಕರೆಯುತ್ತಾರೆ ?

ತಾಯಿ ತಂದೆ
ಅಣ್ಣ ಅಕ್ಕ
ತಮ್ಮ ತಂಗಿ

೨೪. ಕೆಳಗಿನ ಸಂದರ್ಭಗಳಲ್ಲಿ ನಿಮ್ಮ ಸ್ನೇಹಿತರು ಅಧ್ಯಾಪಕರು ನಿಮ್ಮ ಹೆಸರನ್ನು ಹೇಗೆ ಬಳಸುತ್ತಾರೆ ?

ಅಧ್ಯಾಪಕರು : ಮಾತೃಭಾಷೆ : ನಿಮ್ಮ ಹೆಸರನ್ನು ಕರೆಯುವ ರೀತಿ :

ಸ್ನೇಹಿತರು :

೨೫. ಇತರೇ ಸಮಾಜದ ಜನ ನಿಮ್ಮನ್ನು ಕರೆಯುವ ರೀತಿ :

| | | | |
|---|---|---|---|
| ಸಂತೆ, ಆಟದ ಮೈದಾನ ಮುಂತಾದ ಕಡೆ ಭೇಟಿಯಾದಾಗ, ಹರಟೆ ಹೊಡೆಯುವಾಗ | ನಿಮ್ಮನ್ನು ಕರೆಯುವ ವ್ಯಕ್ತಿಯ ಜಾತಿ | ಅವರ ಮಾತೃ ಭಾಷೆ | ನಿಮ್ಮ ಹೆಸರನ್ನು ಕರೆಯುವ ರೀತಿ |
| ಸಭೆ, ಸಮಾರಂಭಗಳಲ್ಲಿ ನಿಮ್ಮನ್ನು ಭೇಟಿ ಮಾಡಿದಾಗ | ನಿಮ್ಮನ್ನು ಕರೆಯುವ ವ್ಯಕ್ತಿಯ ಜಾತಿ | ಅವರ ಮಾತೃ ಭಾಷೆ | ನಿಮ್ಮ ಹೆಸರನ್ನು ಕರೆಯುವ ರೀತಿ |

೨೬. ನೀವು ನಿಮ್ಮ ಪರಿಚಿತರಲ್ಲಿ ಯಾರನ್ನಾದರೂ ಅಡ್ಡ ಹೆಸರಿನಿಂದ ಕರೆಯುತ್ತೀರಾ?(ಅವರಿದ್ದರೂ, ಇಲ್ಲದಿದ್ದರೂ)

ಅಡ್ಡ ಹೆಸರು ಅವರ ಮಾತೃಭಾಷೆ ನಿಮಗಿಂತ ಹಿರಿಯರು
ಕಿರಿಯರು ಸಮವಯಸ್ಕರು

೨೭. ನಿಮ್ಮನ್ನು ಯಾರಾದರೂ (ಪರಿಚಿತರು ಸಂಬಂಧಿಕರು) ಅಡ್ಡ ಹೆಸರಿನಿಂದ ಕರೆಯುತ್ತಾರಾ?

ಅಡ್ಡ ಹೆಸರು ಅವರ ಮಾತೃಭಾಷೆ ನಿಮಗಿಂತ ಹಿರಿಯರು
ಕಿರಿಯರು ಸಮ ವಯಸ್ಕರು

# ಸ್ತ್ರೀ ಪುರುಷ ವ್ಯಕ್ತಿನಾಮ ನಿರ್ದಿಷ್ಟಗಳು

ಒಂದೇ ಬಗೆಯ ನಿರ್ದಿಷ್ಟಗಳಿಗೆ ಸ್ತ್ರೀ ಮತ್ತು ಪುರುಷ ಬಂಧುವಾಚಿ ಪ್ರತ್ಯಯಗಳು ಸೇರಿ ಸ್ತ್ರೀ ಹೆಸರಾಗಿಯೂ ಮತ್ತು ಪುರುಷ ಹೆಸರಾಗಿಯೂ ರೂಪುಗೊಳ್ಳುತ್ತವೆ. ಹೀಗೆ ಸ್ತ್ರೀ-ಪುರಷರಿಬ್ಬರ ಹೆಸರುಗಳಿಗೂ ನಿರ್ದಿಷ್ಟಗಳಾಗುವ ಹೆಸರುಗಳು ಸಾಮಾನ್ಯವಾಗಿ ದೈವಸಂಬಂಧಿ ನಾಮಗಳೇ ಆಗಿರುತ್ತವೆ. ಸ್ತ್ರೀ ದೈವದ ಹೆಸರಿಗೆ, 'ಅಯ್ಯ', 'ಅಪ್ಪ' ಮತ್ತು 'ಅಣ್ಣ' ಎಂಬ ಪುರುಷ ಬಂಧುವಾಚಿ ಪ್ರತ್ಯಯ ಸೇರಿ ಪುರುಷ ಹೆಸರಾಗುವಂತೆ, ಪುರುಷ ದೈವದ ಹೆಸರಿಗೆ ಅಮ್ಮ, ಅವ್ವ ಮತ್ತು ಅಕ್ಕ ಎಂಬ ಸ್ತ್ರೀ ಬಂಧುವಾಚಿ ಪ್ರತ್ಯಯ ಸೇರಿ ಸ್ತ್ರೀ ಹೆಸರಾಗುತ್ತದೆ. ಒಂದು ದೈವದ ಹೆಸರನ್ನು ಸ್ತ್ರೀ-ಪುರುಷರಿಬ್ಬರೂ ನಿರ್ದೇಶನ ಮಾಡಿಕೊಳ್ಳುವುದೇ ಈ ಪ್ರಕ್ರಿಯೆಗೆ ಮುಖ್ಯ ಕಾರಣವಾಗಿದೆ. ಈ ಬಗೆಯ ಕೆಲವು ನಿರ್ದಿಷ್ಟಗಳಿಗೆ ವೃತ್ತಿ, ಜಾತಿ ವಾರ್ಗಿಕಗಳು ಸೇರುತ್ತವೆಯಾದರೂ ಅದು ಪುರುಷ ಹೆಸರುಗಳಲ್ಲಿ ಮಾತ್ರ ಕಾಣಬರುತ್ತದೆ. ಸಂಬೋಧನೆಯಲ್ಲಿ ಹೆಸರಿನ ಅಂತ್ಯದಲ್ಲಿರುವ ಬಂಧುವಾಚಿ ಪ್ರತ್ಯಯವನ್ನು ಕೈಬಿಡುವುದರಿಂದ, ಪುಲ್ಲಿಂಗ ಸೂಚಕವೂ, ಏಕವಚನ ಪ್ರಯೋಗವು ಎನಿಸುತ್ತದೆ. ಪುರುಷರನ್ನು ಕರೆಯುವಾಗ ಈ ರೀತಿ ಸಂಬೋಧಿಸಬಹುದಾದರೂ, ಸ್ತ್ರೀ ಸಂಬೋಧನೆಯಲ್ಲಿ ಇದು ಸಾಧ್ಯವಿಲ್ಲ. ಪೂರ್ಣ ಹೆಸರಿನಿಂದ ಇಲ್ಲವೆ ನಿರ್ದಿಷ್ಟವನ್ನು '-ಇ' ಕಾರಾಂತ್ಯಗೊಳಿಸಿ ಸಂಬೋಧಿಸುವುದುಂಟು. '-ಇ' ಕಾರಾಂತ್ಯಗೊಳಿಸಿ ಸಂಬೋಧಿಸುವಾಗಲೂ ಕೂಡ 'ಏಕವಚನ' ಪ್ರಯೋಗವೇ ಆಗಿರುತ್ತದೆ. ಈ ಮೂಲಕ ಸ್ಪಷ್ಟವಾಗುವ ಅಂಶವೆಂದರೆ, ವ್ಯಕ್ತಿನಾಮಗಳಲ್ಲಿ ಬಳಕೆಯಾಗುವ ಬಂಧುಸೂಚಕ ಪ್ರತ್ಯಯಗಳು, ವಾಸ್ತವವಾಗಿ ವಾರ್ಗಿಕಗಳಾಗಿರದೆ ಗೌರವವಾಚಿಗಳಾಗಿ ಬಳಸಲ್ಪಡುತ್ತವೆ ಎಂಬುದು. ಈ ಕಾರಣದಿಂದಾಗಿ ಬಂಧುವಾಚಿ ಪ್ರತ್ಯಯಗಳನ್ನು ವಾರ್ಗಿಕಗಳೆಂದು ಪರಿಗಣಿಸಲಾಗುವುದಿಲ್ಲ.

ಚಿತ್ರದುರ್ಗ ಪರಿಸರದಲ್ಲಿ ಸ್ತ್ರೀ-ಪುರುಷರಿಬ್ಬರೂ ನಿರ್ದೇಶನ ಮಾಡಿಕೊಳ್ಳುತ್ತಿರುವ ಕೆಲವು ಹೆಸರುಗಳನ್ನು ಇಲ್ಲಿ ಪಟ್ಟಿಮಾಡಲಾಗಿದೆ.

| ಪುರುಷ | ಸ್ತ್ರೀ |
| --- | --- |
| **‘ಅ’** | |
| ಅಂಜಿನಪ್ಪ | ಅಂಜಿನಮ್ಮ |
| ಅಂಬಣ್ಣ | ಅಂಬಕ್ಕ/ಮ್ಮ |
| **‘ಆ’** | |
| ಆನಂದಪ್ಪ | ಆನಂದಮ್ಮ |
| **‘ಈ’** | |
| ಈರಣ್ಣ | ಈರಮ್ಮ |
| ಈಶ್ವರಪ್ಪ | ಈಶ್ವರಮ್ಮ |
| **‘ಏ’** | |
| ಏಕಾಂತಪ್ಪ | ಏಕಾಂತಮ್ಮ |
| **‘ಐ’** | |
| ಐಯ್ಯಾಳಪ್ಪ | ಐಯ್ಯಾಳಮ್ಮ |
| **‘ಓ’** | |
| ಓಂಕಾರಪ್ಪ | ಓಂಕಾರಮ್ಮ |
| ಓಬಯ್ಯ | ಓಬಮ್ಮ |
| ಓಬಳಪ್ಪ | ಓಬಳಮ್ಮ |
| **‘ಕ’** | |
| ಕಂದಾರಪ್ಪ | ಕಂದಾರಮ್ಮ |
| ಕಂಪಳಯ್ಯ | ಕಂಪಳಮ್ಮ |
| ಕರಿಬಸಪ್ಪ | ಕರಿಬಸಮ್ಮ |
| ಕರಿಯಪ್ಪ | ಕರಿಯಮ್ಮ |
| ಕಲ್ಲಪ್ಪ | ಕಲ್ಲಮ್ಮ |
| ಕಾಟಯ್ಯ | ಕಾಟಮ್ಮ |
| ಕಾಡಪ್ಪ | ಕಾಡಮ್ಮ |
| ಕಾಮಯ್ಯ | ಕಾಮವ್ವ |
| ಕಾವಲಯ್ಯ | ಕಾವಲಮ್ಮ |
| ಕಾಶಪ್ಪ | ಕಾಶಮ್ಮ |
| ಕೆಂಗಯ್ಯ | ಕೆಂಗಮ್ಮ |
| ಕೆಂಚಪ್ಪ | ಕೆಂಚಮ್ಮ |

ಕೊಟ್ರಪ್ಪ
ಕೊತ್ತಲಪ್ಪ
ಕೊಲ್ಲಪ್ಪ
ಕೊಲ್ಲಾರಪ್ಪ
ಕ್ಯಾಸಯ್ಯ

ಕೊಟ್ರಮ್ಮ
ಕೊತ್ತಲಮ್ಮ
ಕೊಲ್ಲಮ್ಮ
ಕೊಲ್ಲಾರಮ್ಮ
ಕ್ಯಾಸಮ್ಮ

'ಗ'

ಗಂಗಣ್ಣ
ಗವಿಸಿದ್ದಪ್ಪ
ಗಾದೆಪ್ಪ
ಗಾಳೆಪ್ಪ
ಗಿರಿಯಪ್ಪ
ಗೋವಿಂದಪ್ಪ

ಗಂಗಮ್ಮ
ಗವಿಸಿದ್ದಮ್ಮ
ಗಾದೆಮ್ಮ
ಗಾಳೆಮ್ಮ
ಗಿರಿಯಮ್ಮ
ಗೋವಿಂದಮ್ಮ

'ಚ'

ಚಂದ್ರಣ್ಣ
ಚನ್ನಪ್ಪ
ಚಿತ್ರಪ್ಪ
ಚಳ್ಕೇರಪ್ಪ

ಚಂದ್ರಮ್ಮ
ಚನ್ನಮ್ಮ
ಚಿತ್ರಮ್ಮ
ಚಳ್ಕೇರಮ್ಮ

'ಜ'

ಜಂಬಯ್ಯ
ಜಗಲೂರಯ್ಯ
ಜಡೆಪ್ಪ
ಜಯ್ಯಪ್ಪ
ಜೋಗಯ್ಯ

ಜಂಬವ್ವ
ಜಗಲೂರಮ್ಮ
ಜಡೆಮ್ಮ
ಜಯ್ಯಮ್ಮ
ಜೋಗಮ್ಮ

'ತ'

ತಾಯಪ್ಪ
ತಿಪ್ಪಯ್ಯ
ತಿಮ್ಮಯ್ಯ
ತ್ರಿಲೋತ್ತಮ

ತಾಯಮ್ಮ
ತಿಪ್ಪಮ್ಮ
ತಿಮ್ಮವ್ವ
ತ್ರಿಲೋತ್ತಮೆ

'ದ'

ದಡ್ಡಯ್ಯ
ದಾದಯ್ಯ
ದಾನಪ್ಪ

ದಡ್ಡವ್ವ
ದಾದಮ್ಮ
ದಾನಮ್ಮ

| | |
|---|---|
| ದುಗ್ಗಯ್ಯ | ದುಗ್ಗಮ್ಮ |
| ದುರುಗಪ್ಪ | ದುರುಗಮ್ಮ |
| ದೇವಣ್ಣ | ದೇವಮ್ಮ |
| ದೇವೀರಪ್ಪ | ದೇವೀರಮ್ಮ |
| ದ್ಯಾಮಪ್ಪ | ದ್ಯಾಮವ್ವ |

'ನ'

| | |
|---|---|
| ನರಸಪ್ಪ | ನರಸಮ್ಮ |
| ನಾಗಪ್ಪ | ನಾಗಮ್ಮ |
| ನಾಗಲಿಂಗಪ್ಪ | ನಾಗಲಿಂಗಮ್ಮ |
| ನಾರಾಯಣಪ್ಪ | ನಾರಾಯಣಮ್ಮ |
| ನಿಂಗಪ್ಪ | ನಿಂಗಮ್ಮ |
| ನೀಲಯ್ಯ | ನೀಲಮ್ಮ |

'ಪ'

| | |
|---|---|
| ಪಾಪಯ್ಯ | ಪಾಪಮ್ಮ |
| ಪಾಲಯ್ಯ | ಪಾಲಮ್ಮ |
| ಪೀರಪ್ಪ | ಪೀರಮ್ಮ |
| ಪುಟ್ಟಯ್ಯ | ಪುಟ್ಟಮ್ಮ |
| ಪೆದ್ದಯ್ಯ | ಪೆದ್ದಕ್ಕ |
| ಪೆನ್ನಪ್ಪ | ಪೆನ್ನಮ್ಮ |

'ಫ'

| | |
|---|---|
| ಫಕೀರಪ್ಪ | ಫಕೀರಮ್ಮ |

'ಬ'

| | |
|---|---|
| ಬಂಡ್ರೆಪ್ಪ | ಬಂಡ್ರೆಮ್ಮ |
| ಬಸಪ್ಪ | ಬಸಮ್ಮ |
| ಬಸ್ಲಿಂಗಪ್ಪ | ಬಸ್ಲಿಂಗಮ್ಮ |
| ಬೊಮ್ಮಣ್ಣ | ಬೊಮ್ಮಕ್ಕ |
| ಬೋರಯ್ಯ | ಬೋರಮ್ಮ |
| ಬೋಸಯ್ಯ | ಬೋಸಮ್ಮ |

'ಭ'

| | |
|---|---|
| ಭದ್ರೆಪ್ಪ | ಭದ್ರೆಮ್ಮ |
| ಭರಮಣ್ಣ | ಭರಮಕ್ಕ |

| | |
|---|---|
| ಭೀಮಣ್ಣ | ಭೀಮಕ್ಕ |
| ಭೀಮಲಿಂಗಪ್ಪ | ಭೀಮಲಿಂಗಮ್ಮ |

'ಮ'

| | |
|---|---|
| ಮದ್ದಾನಪ್ಪ | ಮದ್ದಾನಮ್ಮ |
| ಮಲೆಪ್ಪ | ಮಲೆಮ್ಮ |
| ಮಹಂತಪ್ಪ | ಮಹಂತಮ್ಮ |
| ಮಹದೇವಯ್ಯ | ಮಹದೇವಮ್ಮ |
| ಮಾದಪ್ಪ | ಮಾದಮ್ಮ |
| ಮಾರಯ್ಯ | ಮಾರಮ್ಮ |
| ಮುನಿಯಪ್ಪ | ಮುನಿಯಮ್ಮ |
| ಮೂಗಯ್ಯ | ಮೂಗಮ್ಮ |
| ಮೋಟಪ್ಪ | ಮೋಟಮ್ಮ |

'ಯ'

| | |
|---|---|
| ಯಮನೂರಪ್ಪ | ಯಮನೂರಮ್ಮ |
| ಯಮುನಪ್ಪ | ಯಮುನಮ್ಮ |
| ಯರ‍್ರಪ್ಪ | ಯರ‍್ರಮ್ಮ |
| ಯಶೋಧರ | ಯಶೋಧರಮ್ಮ |

'ರ'

| | |
|---|---|
| ರಂಗಪ್ಪ | ರಂಗಮ್ಮ |
| ರಾಜಪ್ಪ | ರಾಜಮ್ಮ |
| ರಾಮಣ್ಣ | ರಾಮಕ್ಕ |
| ರಾಮಕೃಷ್ಣಪ್ಪ | ರಾಮಕೃಷ್ಣಮ್ಮ |
| ರುದ್ರಪ್ಪ | ರುದ್ರಮ್ಮ |

'ಲ'

| | |
|---|---|
| ಲಿಂಗಪ್ಪ | ಲಿಂಗಮ್ಮ |
| ಲೋಕಪ್ಪ | ಲೋಕಮ್ಮ |

'ವ'

| | |
|---|---|
| ವಸಂತಪ್ಪ | ವಸಂತಮ್ಮ |
| ವೆಂಕಪ್ಪ | ವೆಂಕಮ್ಮ |
| ವೆಂಕಟಪ್ಪ | ವೆಂಕಟಮ್ಮ |

'ಶ'

ಶಂಕ್ರಪ್ಪ   ಶಂಕ್ರಮ್ಮ

ಶರಣಪ್ಪ   ಶರಣಮ್ಮ

ಶಿವಣ್ಣ   ಶಿವಮ್ಮ

ಶೇಷಪ್ಪ   ಶೇಷಮ್ಮ

'ಷ'

ಷಣ್ಮುಖಪ್ಪ   ಷಣ್ಮುಖಮ್ಮ

'ಸ'

ಸಕ್ರಪ್ಪ   ಸಕ್ರಮ್ಮ

ಸಿದ್ದಪ್ಪ   ಸಿದ್ದಮ್ಮ

ಸೀನಪ್ಪ   ಸೀನಮ್ಮ

ಸುಂಕಪ್ಪ   ಸುಂಕಮ್ಮ

ಸುಗ್ಗಪ್ಪ   ಸುಗ್ಗಮ್ಮ

ಸುಬ್ಬಯ್ಯ   ಸುಬ್ಬಮ್ಮ

ಸೂರಯ್ಯ   ಸೂರಮ್ಮ

ಸೊಂಡ್ರಪ್ಪ   ಸೊಂಡ್ರಮ್ಮ

'ಹ'

ಹಂಪಣ್ಣ   ಹಂಪಕ್ಕ

ಹನುಮಣ್ಣ   ಹನುಮಕ್ಕ

ಹಳದಪ್ಪ   ಹಳದಮ್ಮ

ಹುಲಿಗೆಪ್ಪ   ಹುಲಿಗೆಮ್ಮ

ಹೊನ್ನಪ್ಪ   ಹೊನ್ನಮ್ಮ

ಹೊನ್ನೂರಪ್ಪ   ಹೊನ್ನೂರಮ್ಮ

ಹೊಸೂರಪ್ಪ   ಹೊಸೂರಮ್ಮ

# ವಕ್ತೃಗಳ ಅಕಾರಾದಿ ಸೂಚಿ

| ಕ್ರ. ಸಂ. | ಹೆಸರು | ವಯಸ್ಸು | ಜಾತಿ | ಊರು | ಸಂದರ್ಶನ ದಿನಾಂಕ |
|---|---|---|---|---|---|
| ೦೧. | ಅಕ್ಕಮ್ಮ | ೨೪ | ವಿಶ್ವಕರ್ಮ | ಚಳ್ಳಕೆರ | ೧೧.೧೭.೨೦೦೧ |
| ೦೨. | ಅಶ್ವಿನಿ ಆರ್. | ೪೨ | ನೇಕಾರ | ರಾಂಪುರ, ಮೊಳಕಾಲ್ಮೂರು ತಾ. | ೨೪.೧೧.೨೦೦೧ |
| ೦೩. | ಕಮಲ | ೨೯ | ನಾಯಕ | ತಳುಕು, ಚಳ್ಳಕೆರೆ ತಾ. | ೨೦.೧೧.೨೦೦೧ |
| ೦೪. | ಕರಿಯಪ್ಪ | ೨೯ | ಕುರುಬ | ಹೊಳಲ್ಕೆರೆ | ೨೭.೧೦.೨೦೦೧ |
| ೦೫. | ಗಂಗಮ್ಮ | ೫೨ | ಲಿಂಗಾಯತ | ಹೊಸದುರ್ಗ | ೧೮.೦೭.೨೦೦೧ |
| ೦೬. | ಗಾಯಿತ್ರಿ | ೨೪ | ಕುರುಬ | ಗುಡ್ಡದ ರಂಗವ್ವನಹಳ್ಳಿ, ಚಿತ್ರದುರ್ಗ | ೨೫.೧೦.೨೦೦೧ |
| ೦೭. | ಗೋವಿಂದಪ್ಪ | ೪೬ | ಗೊಲ್ಲ | ದೇವಸಮುದ್ರ, ಮೊಳಕಾಲ್ಮೂರು ತಾ. | ೨೧.೦೩.೨೦೦೧ |
| ೦೮. | ಗೋವಿಂದರಾಜು | ೩೦ | ನಾಯಕ | ಬೊಮ್ಮದೇವರಹಳ್ಳಿ, ಮೊಳಕಾಲ್ಮೂರು ತಾ. | ೧೦.೧೧.೨೦೦೧ |
| ೦೯. | ಗೌರಮ್ಮ | ೨೧ | ಕುಂಚಟಿಗ | ಚಿತ್ರದುರ್ಗ | ೨೪.೧೦.೨೦೦೧ |
| ೧೦. | ಗೌರಮ್ಮ | ೪೧ | ಜಂಗಮ | ಗುಡ್ಡದರಂಗವ್ವನಹಳ್ಳಿ, ಚಿತ್ರದುರ್ಗ | ೨೨.೦೯.೨೦೦೦ |
| ೧೧. | ಚಂದ್ರಪ್ಪ | ೧೬ | ಲಿಂಗಾಯತ | ನಾಯ್ಕನಹಟ್ಟಿ, ಚಳ್ಳಕೆರೆ ತಾ. | ೨೭.೦೭.೨೦೦೧ |
| ೧೨. | ಜಗದೀಶ | ೨೧ | ಕುರುಬ | ಪಂಡ್ರಹಳ್ಳಿ, ಚಿತ್ರದುರ್ಗ | ೨೪.೦೭.೨೦೦೦ |
| ೧೩. | ಜಯತುನ್ ಬಿ. | ೨೪ | ಮುಸ್ಲಿಂ | ಉಡೇವು, ಮೊಳಕಾಲ್ಮೂರು ತಾ. | ೧೮.೧೨.೨೦೦೨ |
| ೧೪. | ತಿಪ್ಪಮ್ಮ | ೨೬ | ಗೊಲ್ಲ | ಗೋಪನಹಳ್ಳಿ, ಚಳ್ಳಕೆರೆ ತಾ. | ೨೫.೧೦.೨೦೦೧ |
| ೧೫. | ತಿಪ್ಪೇಸ್ವಾಮಿ | ೩೮ | ನಾಯಕ | ನಲಗೇತನಹಟ್ಟಿ, ಚಳ್ಳಕೆರೆ ತಾ. | ೨೨.೦೭.೨೦೦೧ |
| ೧೬. | ತಿಪ್ಪೇಸ್ವಾಮಿ | ೩೨ | ನಾಯಕ | ಚಿತ್ರದುರ್ಗ | ೨೨.೦೯.೨೦೦೦ |
| ೧೭. | ದೇವ್ಲಾನಾಯ್ಕ | ೩೨ | ಲಂಬಾಣಿ | ಮೊಳಕಾಲ್ಮೂರು | ೨೨.೧೦.೨೦೦೧ |
| ೧೮. | ದೊಡ್ಡಮಲ್ಲಯ್ಯ | ೩೪ | ನಾಯಕ | ಕಾರ್ತಿಕೇನಹಟ್ಟಿ, ಚಳ್ಳಕೆರೆ ತಾ. | ೨೪.೦೪.೨೦೦೩ |
| ೧೯. | ದೊಡ್ಡಸ್ವಾಮಿನಾಯಕ | ೩೬ | ಪಾಳೆಯಗಾರರು | ಯರಜೇನಹಳ್ಳಿ, ಮೊಳಕಾಲ್ಮೂರು ತಾ. | ೧೪.೦೭.೨೦೦೧ |
| ೨೦. | ನಾಗಮ್ಮ | ೧೮ | ಉಪ್ಪಾರ | ಚಿತ್ರದುರ್ಗ | ೨೪.೧೧.೨೦೦೧ |
| ೨೧. | ನಿರ್ಮಲ | ೨೪ | ಗೊಲ್ಲ | ಚಳ್ಳಕೆರ | ೨೨.೦೭.೨೦೦೧ |
| ೨೨. | ಪದ್ಮಮ್ಮ | ೨೯ | ಈಡಿಗ | ಕಾರ್ತಿಕೇನಹಟ್ಟಿ, ಚಳ್ಳಕೆರೆ | ೨೪.೦೪.೨೦೦೩ |
| ೨೩. | ಪಾಪಮ್ಮ | ೩೪ | ನಾಯಕ | ರಾಯಾಪುರದ ಮ್ಯಾಸರಹಟ್ಟಿ, ಮೊಳಕಾಲ್ಮೂರು ತಾ. | ೨೨.೦೯.೨೦೦೧ |
| ೨೪. | ಪ್ರಭಾಕರ | ೪೧ | ಲಿಂಗಾಯತ | ಹಿರಿಯೂರು | ೨೯.೧೦.೨೦೦೧ |
| ೨೫. | ಬಸಪ್ಪ | ೩೩ | ಲಿಂಗಾಯತ | ಚಿತ್ರದುರ್ಗ | ೨೧.೦೭.೨೦೦೦ |
| ೨೬. | ಬಸವರಾಜ | ೪೩ | ಲಿಂಗಾಯತ | ಚಿತ್ರದುರ್ಗ | ೨೬.೦೬.೨೦೦೦ |
| ೨೭. | ಬಾಬುರೆಡ್ಡಿ | ೪೦ | ರೆಡ್ಡಿ | ಕವಾಡಿಗರ ಹಟ್ಟಿ, ಚಿತ್ರದುರ್ಗ | ೧೮.೦೭.೨೦೦೦ |
| ೨೮. | ಮಲ್ಲಮ್ಮ | ೩೫ | ನಾಯಕ | ನೇತ್ರನಹಳ್ಳಿ, ಮೊಳಕಾಲ್ಮೂರು ತಾ. | ೨೨.೦೪.೨೦೦೨ |
| ೨೯. | ಮಲ್ಲಯ್ಯ | ೩೬ | ನಾಯಕ | ಕೋನಸಾಗರ, ಮೊಳಕಾಲ್ಮೂರು ತಾ. | ೨೫.೧೨.೨೦೦೨ |
| ೩೦. | ಮಲಿಯಮ್ಮ | ೩೦ | ಹರಿಜನ | ಹಿರಿಯೂರು | ೧೫.೦೭.೨೦೦೧ |
| ೩೧. | ಮಾರಕ್ಕ | ೪೨ | ನಾಯಕ | ಚಿತ್ರದುರ್ಗ | ೨೦.೦೭.೨೦೦೧ |
| ೩೨. | ಮಾರನಾಯಕ | ೩೯ | ನಾಯಕ | ಚಳ್ಳಕೆರೆ | ೨೧.೧೦.೨೦೦೧ |
| ೩೩. | ಮಾರಪ್ಪ | ೫೫ | ಆದಿಕರ್ನಾಟಕ | ತುಮಕೂರ್ಲಹಳ್ಳಿ, ಮೊಳಕಾಲ್ಮೂರು ತಾ. | ೧೨.೦೭.೨೦೦೧ |
| ೩೪. | ಮಾರಯ್ಯ | ೪೨ | ನಾಯಕ | ಮುತ್ತಿಗಾರಹಳ್ಳಿ, ಮೊಳಕಾಲ್ಮೂರು ತಾ. | ೩೦.೧೧.೨೦೦೧ |
| ೩೫. | ರಾಜ್‌ಕುಮಾರ್ ಕೆ.ಆರ್.ಜೆ. | ೨೩ | ಮಾದಿಗ | ಹೊಸದುರ್ಗ | ೨೫.೧೨.೨೦೦೦ |
| ೩೬. | ಲಕ್ಷ್ಮಿದೇವಿ | ೩೪ | ಕೊರಚ | ಹೊಸದುರ್ಗ | ೨೭.೦೭.೨೦೦೦ |
| ೩೭. | ಲೋಕಮ್ಮ | ೨೯ | ಕುರುಬ | ಚೋಳಗಟ್ಟ, ಚಿತ್ರದುರ್ಗ | ೨೨.೦೬.೨೦೦೦ |
| ೩೮. | ಶಿವಣ್ಣ | ೪೧ | ಲಿಂಗಾಯತ | ಕೊಂಡ್ಲಹಳ್ಳಿ, ಮೊಳಕಾಲ್ಮೂರು ತಾ. | ೧೭.೦೭.೨೦೦೦ |
| ೩೯. | ಶಿವಮ್ಮ | ೨೩ | ಹರಿಜನ | ಹೊಳಲ್ಕೆರೆ | ೨೨.೧೦.೨೦೦೧ |
| ೪೦. | ಸಿದ್ದಣ್ಣ | ೪೬ | ನಾಯಕ | ಚಳ್ಳಕೆರೆ | ೨೬.೦೬.೨೦೦೦ |
| ೪೧. | ಹೊನ್ನೂರಪ್ಪ | ೪೬ | ಆದಿಕರ್ನಾಟಕ | ನಾಯ್ಕನಹಟ್ಟಿ, ಚಳ್ಳಕೆರೆ ತಾಲ್ಲೂಕು | ೧೯.೦೭.೨೦೦೧ |

# ಗ್ರಂಥಸೂಚಿ


೦೧. ಅಂಗಡಿ ಎಸ್.ಎಸ್. ಮಿಶನರಿಗಳ ದ್ವಿಭಾಷಿಕ ನಿಘಂಟುಗಳ ತೌಲನಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, (ಅ.ಪ್ರ. ಪಿಎಚ್.ಡಿ.)

೦೨. ಅಂಗಡಿ ಎಸ್.ಎಸ್. ಸಂಬಂಧವಾಚಕಗಳು ಮತ್ತು ಸಂಬೋಧನೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೦೩. ಆರ್ಕೆ ಮಣಿಪಾಲ, ಹೆಸರಲ್ಲೇನಿದೆ?

೦೪. ಕರಿಶೆಟ್ಟಿ ರುದ್ರಪ್ಪ, ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ೧೯೯೫

೦೫. ಕಲಬುರ್ಗಿ ಎಂ.ಎಂ. ಐತಿಹಾಸಿಕತೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೦೬. ಕಲಬುರ್ಗಿ ಎಂ.ಎಂ. ಮಹಾರಾಷ್ಟ್ರದ ಕನ್ನಡ ಶಾಸನಗಳು, ಮುಂಬಯಿ ವಿಶ್ವವಿದ್ಯಾಲಯ, ೧೯೭೭

೦೭. ಕಲಬುರ್ಗಿ ಎಂ.ಎಂ. ಕನ್ನಡ ನಾಮವಿಜ್ಞಾನ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ೧೯೮೯

೦೮. ಕಲಬುರ್ಗಿ ಎಂ.ಎಂ. ಮಾರ್ಗ ಸಂಪುಟ, ೧-೨-೩, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು, ೧೯೯೮

೦೯. ಕಲಬುರ್ಗಿ ಎಂ.ಎಂ. ಕರ್ನಾಟಕದ ಕೈಫಿಯತ್ತುಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪

೧೦. ಕೀರ್ತಿನಾಥ ಕುರ್ತಕೋಟಿ, ಉರಿಯನಾಲಗೆ, ಮನೋಹರ ಗ್ರಂಥಮಾಲಾ, ಧಾರವಾಡ, ೧೯೯೩

೧೧. ಕೃಷ್ಣಭಟ್ಟ ಸೇಡಿಯಾಪು, ಕೆಲವು ದೇಶನಾಮಗಳು, ಸಾಹಿತ್ಯ ಸಂಘ, ಮಣಿಪಾಲ, ೧೯೭೫

೧೨. ಕೃಷ್ಣಮೂರ್ತಿ ಹನೂರು ಡಾ. ಮ್ಯಾಸಬೇಡರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೧೩. ಖಂಡೋಬ ಪಿ.ಕೆ. ಕರ್ನಾಟಕದ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ, (ಪಿಎಚ್.ಡಿ.) ತೇಜಸಿಂಗ್ ರಾಠೋಡ ಮೆಮೋರಿಯಲ್ ಟ್ರಸ್ಟ್, ಗುಲಬರ್ಗಾ, ೧೯೯೧

೧೪. ಗುರುರಾಜ ಕುಲಕರ್ಣಿ, ನಾನ್‌ಸೆನ್ಸ್, ಧರಿತ್ರಿ ಪ್ರಕಾಶನ, ಕಲಬುರಗಿ, ೧೯೯೪

೧೫. ಚಿದಾನಂದಮೂರ್ತಿ ಎಂ. ವಾಗರ್ಥ, ಬಾಪ್ಕೋ ಪ್ರಕಾಶನ, ಬೆಂಗಳೂರು, ೧೯೮೧

೧೬. ಚಿದಾನಂದಮೂರ್ತಿ ಎಂ. ಭಾಷಾವಿಜ್ಞಾನದ ಮೂಲ ತತ್ವಗಳು, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೧೯೮೬

೧೭. ಚಿದಾನಂದಮೂರ್ತಿ ಎಂ. ಸಂಶೋಧನಾ ತರಂಗ-೨, ಬೆಂಗಳೂರು ವಿಶ್ವವಿದ್ಯಾಲಯ, ೧೯೭೦

೧೮. ಚಿದಾನಂದಮೂರ್ತಿ ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೯೬

೧೯. ಚಿದಾನಂದಮೂರ್ತಿ ಎಂ. ಹೊಸತು ಹೊಸತು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೩

೨೦. ಚೆನ್ನಕ್ಕ ಎಲಿಗಾರು, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೦

೨೧. ಚೆನ್ನಕ್ಕ ಪಾವಟೆ (ಎಲಿಗಾರ). ಸಂಸ್ಕೃತಿ ಸಂಶೋಧನೆ, ಚೆನ್ನಗಂಗಾ ಪ್ರಕಾಶನ, ಧಾರವಾಡ, ೧೯೯೫

೨೨. ಜೋಗನ್ ಶಂಕರ್ ಡಾ. ದೇವದಾಸಿ ಸಂಪ್ರದಾಯ, ವಿವೇಚನಾ ಪ್ರಕಾಶನ, ವಿಮೋಚನಾ ದೇವದಾಸಿ ಪುನರ್ವಸತಿ ಸಂಘ, ಅಥಣಿ, ೧೯೯೩

೨೩. ಜೋಗನ್ ಶಂಕರ್ ಡಾ. ಗ್ರಾಮಸಮಾಜ, ಜೀವ ಪ್ರಕಾಶನ, ಮೈಸೂರು, ೧೯೯೫

೨೪. ಜ್ಯೋತಿ ಹೊಸೂರು, ಹೆಸರ ಹೇಳತೀನಿ ಒಡವಕಟ್ಟಿ, ೧೯೭೩

೨೫. ದಾದಾಪೀರ್ ಬಿ.ಸಿ. ಪಿಂಜಾರರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೩

೨೬. ದುರ್ಗಾದಾಸ ಕೆ.ಆರ್. ಬಳ್ಳಾರಿ ಜಿಲ್ಲೆಯ ಬಯಲಾಟಗಳು, ಸಮತಾ ಪ್ರಕಾಶನ, ಬೆಳಗಾವಿ, ೧೯೬೬
೨೭. ದೇಜಗೌ, ಸ್ಥಳನಾಮ ವ್ಯಾಸಂಗ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೯೦
೨೮. ದೇಜಗೌ, ಜಾನಪದ ಸೌಂದರ್ಯ, ೧೯೭೭
೨೯. ದೇವೇಂದ್ರಪ್ಪ ಜೆ, ಆಂಧ್ರ-ಕರ್ನಾಟಕ ಗಡಿಪ್ರದೇಶದ ಸ್ಥಳನಾಮಗಳು, (ಪಿಎಚ್.ಡಿ.) ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨ (ಅ.ಪ್ರ)
೩೦. ನಾಗರಾಜಯ್ಯ ಹಂಪ, ಚಂದ್ರಕೊಡೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭
೩೧. ನಾಗರಾಜಯ್ಯ ಹಂಪ, ದ್ರಾವಿಡ ಭಾಷಾವಿಜ್ಞಾನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೧
೩೨. ನಾಗೇಶ್ ಎಚ್.ವಿ. ಗ್ರಾಮ ವ್ಯಾಸಂಗ, ಚಂದ್ರನಾಥ ಪ್ರಕಾಶನ, ಧಾರವಾಡ, ೧೯೮೧
೩೩. ನಾಗೇಶ್ ಎಚ್.ವಿ. ಬರಹ ಬಾಗಿನ, ಹಂಪನಾ ಅಭಿನಂದನ ಗ್ರಂಥ, ೧೯೯೬
೩೪. ನಾಯಕ್ ಡಿ.ಬಿ. ಡಾ. ಲಂಬಾಣಿ ಜನಪದ ಸಾಹಿತ್ಯ, ಬಂಜಾರ ಪ್ರಕಾಶನ, ಗುಲಬರ್ಗಾ, ೨೦೦೦
೩೫. ನಾರಾಯಣ ಕೆ.ವಿ. ಮತ್ತೆ ಭಾಷೆಯ ಸುತ್ತಮುತ್ತ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೯೪
೩೬. ನಾರಾಯಣ ಕೆ.ವಿ. (ಸಂ). ಸ್ಥಳನಾಮಗಳು ಪರಿವರ್ತನೆ ಮತ್ತು ಪ್ರಭಾವ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯
೩೭. ನಾರಾಯಣ ಕೆ.ವಿ. (ಸಂ), ವ್ಯಕ್ತಿನಾಮಗಳು: ಸ್ವರೂಪ ಮತ್ತು ವಿಶ್ಲೇಷಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦
೩೮. ನಾರಾಯಣ ಕೆ.ವಿ. (ಸಂ), ಭಾಷೆ ವಿಶ್ವಕೋಶ-೧, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦
೩೯. ನಾರಾಯಣ ಕೆ.ವಿ. ದ್ವಿಭಾಷಿಕತೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯
೪೦. ನಿರ್ಮಲ ಆರ್. ಚಲ್ ಮೇರಿ ಲೂನಾ, ಅಭಿನವ ಸಂಖ್ಯೆ ೨೭೯೧, ಬೆಂಗಳೂರು, ೧೯೯೭
೪೧. ನೇಗಿನಹಾಳ್ ಎಂ.ಬಿ. ನೇಗಿನಹಾಳ ಪ್ರಬಂಧಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯
೪೨. ಪರಮಶಿವಯ್ಯ ಜೀ.ಶಂ. ಮೇದರ ಕಲ್ಲು ಮತ್ತು ಇತರ ಪ್ರಬಂಧಗಳು, ಸಾಹಿತ್ಯ ಸದನ, ಮಾನಸ ಗಂಗೋತ್ರಿ, ಮೈಸೂರು, ೧೯೭೦
೪೩. ಪಾಂಡುರಂಗ ಡಿ.ಆರ್. ದಕ್ಷಿಣಕನ್ನಡ ಜಿಲ್ಲೆಯ ಭೈರರು ಸಾಹಿತ್ಯಿಕ-ಸಾಂಸ್ಕೃತಿಕ ಅಧ್ಯಯನ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ೧೯೯೦
೪೪. ಪಾಂಡುರಂಗಬಾಬು ಡಿ. ಆದಿಜಾಂಬವರ ಕನ್ನಡ, ಪಿಎಚ್.ಡಿ. ಮೈಸೂರು ವಿಶ್ವವಿದ್ಯಾಲಯ, ೧೯೯೫. (ಅ.ಪ್ರ.)
೪೫. ಪಾಟೀಲಪುಟ್ಟಪ್ಪ ಡಾ. ಸಮಗ್ರ ಪಾಪು ಪ್ರಪಂಚ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೦
೪೬. ಪುರುಷೋತ್ತಮ ಬಿಳಿಮಲೆ (ಸಂ), ಪ್ರಬಂಧಗಳು, ೧೯೮೮
೪೭. ಪ್ರಭಾಕರ ಎ.ಎಸ್. ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧
೪೮. ಬೆನಗಲ್ ರಾಮರಾವ್, ಪಾನ್ಯಂ ಸುಂದರಶಾಸ್ತ್ರಿ, ಪುರಾಣನಾಮ ಚೂಡಾಮಣಿ, ಪ್ರಕಾಶಕರು : ಪ್ರೊ. ಲಕ್ಷ್ಮೀ ನಾರಾಯಣ ಅರೋರಾ, ಮೈಸೂರು, ೨೦೦೧
೪೯. ಭಾಗ್ಯಲಕ್ಷ್ಮಿ ಎಂ. ಬಳ್ಳಾರಿ ಪರಿಸರದ ಕನ್ನಡ-ತೆಲುಗು ದ್ವಿಭಾಷಿಕತೆ : ಸಮಾಜೋಭಾಷಿಕ ಅಧ್ಯಯನ, (ಪಿಎಚ್.ಡಿ.) ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, (ಅ.ಪ್ರ.)
೫೦. ಮಧುಸೂಧನ ಕೆ.ಎಸ್. (ಸಂ). ಹೂಬುಟ್ಟಿ, ಕರ್ನಾಟಕ ಸಂಘ, ಜ್ಞಾನಭಾರತಿ, ಬೆಂಗಳೂರು, ೧೯೮೭
೫೧. ಮರಿಯಪ್ಪ ಭಟ್ಟ, ಬೆಳ್ಳೊಲ (ಆರ್.ಸಿ.ಹಿರೇಮಠ ಅಭಿನಂದನ ಗ್ರಂಥ), ೧೯೮೧
೫೨. ಮಲ್ಲಿಕಾರ್ಜುನಗೌಡ, ಕರ್ನಾಟಕಾಂಧ್ರ ಗಡಿಭಾಗದಲ್ಲಿನ ಹಿಂದೂ ಮುಸ್ಲಿಂ ಬಾಂಧವ್ಯ, ಪಿಎಚ್.ಡಿ. ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, (ಅ.ಪ್ರ.)
೫೩. ಮಲ್ಲೇಪುರಂ ಜಿ.ವೆಂಕಟೇಶ (ಸಂ). ಶಂಬಾಕೃತಿ ಸಮೀಕ್ಷೆ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೯೨
೫೪. ಮಲ್ಲೇಪುರಂ ಜಿ.ವೆಂಕಟೇಶ, ಶಂಬಾಜೋಷಿ, ಭಾರತೀಯ ಸಾಹಿತ್ಯ ಅಕಾಡೆಮಿ, ೨೦೦೧
೫೫. ಮಾಸ್ತಿ ವೆಂಕಟೇಶ ಅಯ್ಯಂಗಾರ್, ನಮ್ಮ ನುಡಿ, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್ (೦) ಬೆಂಗಳೂರು, ೧೯೬೦

೫೬. ಮೂರ್ತಿರಾವ್ ಎ.ಎನ್. ಸಮಗ್ರ ಲಲಿತ ಪ್ರಬಂಧಗಳು, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು, ೧೯೯೯

೫೭. ಮೂರ್ತಿರಾವ್ ಎ.ಎನ್. ಅಲೆಯುವ ಮನ, ಕಾವ್ಯಾಲಯ ಪ್ರಕಾಶಕರು, ಮೈಸೂರು, ೧೯೫೭

೫೮. ಮೊಗಳ್ಳಿ ಗಣೇಶ್, ಸೊಲ್ಲು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮

೫೯. ಮೊಳೆಯರ ವಿ.ಬಿ. ಸಮುಚಿತ, ಪ್ರಪಂಚ ಪ್ರಕಾಶನ ದರ್ಬೆ, ಪುತ್ತೂರು, ದಕ್ಷಿಣಕನ್ನಡ, ೧೯೯೫

೬೦. ರಘುಪತಿ ಭಟ್ಟ ಕೆಮ್ಮೂರು, ಹೆಸರಲ್ಲೇನಿದೆ, ಚೇತನಾ ಪ್ರಿಂಟರ್ಸ್, ಬೆಂಗಳೂರು, ೧೯೮೯

೬೧. ರತಿ ಎಂ.ಟಿ. ಕೊಡಗು ಬಹುಭಾಷಿಕ ಜಿಲ್ಲೆ: ಒಂದು ಅಧ್ಯಯನ, ಪಿಎಚ್.ಡಿ. ಬೆಂಗಳೂರು ವಿಶ್ವವಿದ್ಯಾಲಯ, ೧೯೯೩

೬೨. ರಹಮತ್ ತರೀಕೆರೆ, ಬಹುಭಾಷಿಕತೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೬೩. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೬೪. ರಾಕು, ಗಾಳಿಪಟ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೫

೬೫. ರಾಮಕೃಷ್ಣ ಆರ್. ಜಾನಪದ ಗಂಗೋತ್ರಿ, ೧೯೯೬

೬೬. ರಾಮಕೃಷ್ಣ ಕೆ. ನಾಮದ ಬಲ ಮತ್ತು ಇತರ ಪ್ರಬಂಧಗಳು, ಗೀತಾ ಬುಕ್ ಹೌಸ್, ಮೈಸೂರು, ೧೯೬೮

೬೭. ರಾಮಚಂದ್ರರಾವ್ ಎಸ್.ಕೆ, ವಿಚಾರ ಲಹರಿ

೬೮. ರಾಮಭಟ್ಟ ಉಪ್ಪಂಗಳ. ಡಾ, ಮಾಸ, ಅಕಲಂಕ ಪ್ರಕಾಶನ, ಕುಂಜಿ ಬೆಟ್ಟು, ಉಡುಪಿ, ೧೯೯೦

೬೯. ರಾಮಭಟ್ಟ ಉಪ್ಪಂಗಳ. ಡಾ, ವಿಕಿರಣ

೭೦. ಲಕ್ಕಪ್ಪಗೌಡ ಎಚ್.ಜೆ. (ಪ್ರ.ಸಂ.), ಜಾನಪದ ಕೈಪಿಡಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೭

೭೧. ಲಕ್ಕಪ್ಪಗೌಡ ಎಚ್.ಜೆ. ಮಲೆನಾಡು ಜಾನಪದ, ಮೈಸೂರು ವಿಶ್ವವಿದ್ಯಾಲಯ, ೧೯೮೩

೭೨. ಲಲಿತ ಎ.ಸಿ. ಕಾಡುಕುರುಬರ ಮತ್ತು ಜೇನು ಕರುಬರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೭೩. ಲಕ್ಷ್ಮಣ್ ತೆಲಗಾವಿ (ಸಂ), ಸಂಶೋಧನ, ಚಿ.ಮೂ. ಗೌರವ ಸಂಪುಟ, ಬೆಂಗಳೂರು, ೧೯೯೧

೭೪. ಲಕ್ಷ್ಮಣ್ ತೆಲಗಾವಿ (ಸಂ), ಹರಿತಿಯ ಸಿರಿ, ಹೆಚ್.ವಿ. ವೀರನಾಯಕರ ನೆನಪಿನ ಸಂಪುಟ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೧೯೮೭

೭೫. ಲಕ್ಷ್ಮಣ್ ತೆಲಗಾವಿ, ಪ್ರೊ. ಕೆ.ವೆಂಕಣ್ಣಚಾರ್ (ಸಂ), ಐತಿಹಾಸಿಕ ಚಿತ್ರದುರ್ಗ, ೧೯೭೯

೭೬. ಲಿಂಗಣ್ಣ ಸತ್ಯಂಪೇಟೆ, ಬಂಡೆಪ್ಪ (ಸಂ), ಕಾಯಕ ಪರಿಣಾಮಿ, ೧೯೯೧

೭೭. ವಸಂತಕುಮಾರ್ ಪೆರ್ಲ, ವರ್ತಮಾನ, ಸಾಹಿತ್ಯ ಸಂಘ ಬದಿಯಕ್ಕ, ಕಾಸರಗೋಡು, ಕೇರಳ, ೧೯೯೫

೭೮. ವೀಣಾ ಎಂ.ಪಿ. ಮನೆ, ಸಮಾಜ ಮತ್ತು ಸಂಸ್ಕೃತಿ, ನೆಲೆಮನೆ ಪ್ರಕಾಶನ, ಬೆಂಗಳೂರು, ೨೦೦೦

೭೯. ವೆಂಕಟರಮಣಯ್ಯ ಟಿ.ವಿ, ಕಾವ್ಯಗಳು ಮತ್ತು ಇತರ ಲೇಖನಗಳು

೮೦. ಶಂಕರ ನಾರಾಯಣ ತೀ.ನಂ. (ಸಂ), ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೮೨

೮೧. ಶಂಬಾ ಜೋಷಿ, ಎಡೆಗಳು ಹೇಳುವ ಕಂನಾಡ ಕಥೆ, ಮಾಧವ ಬಲ್ಲಾಳ ಬಂಧುಗಳು, ಧಾರವಾಡ, ೧೯೪೭

೮೨. ಶಿವಕುಮಾರ ಜಿ. (ಸಂ), ಎಂ.ಎಸ್.ಕರಿಸಿದ್ದೇಶ್ವರಸ್ವಾಮಿ, ಎಸ್.ಎಂ. ವೀರಭದ್ರಯ್ಯ, ಚಿನ್ಮೂಲಾದ್ರಿ ಚೇತನ, ೧೯೮೯

೮೩. ಶೇಠ ಬಿ.ಎಸ್. ಕರ್ನಾಟಕದಲ್ಲಿ ಸತಿಪದ್ಧತಿ, ವೀರಶೈವ ಅಧ್ಯಯನ ಅಕಾಡೆಮಿ, ನಾಗನೂರು ರುದ್ರಾಕ್ಷಿ ಮಠ, ಬೆಳಗಾವಿ, ೧೯೯೧

೮೪. ಶೇಷಶಾಸ್ತ್ರೀ ಆರ್. ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೨

೮೫. ಶ್ರೀನಿವಾಸ ಜೋಯಿಸ, ಪ್ರೊ. ಲಕ್ಷ್ಮಣ ತೆಲಗಾವಿ, ಚಂದ್ರವಳ್ಳಿ

೮೬. ಶ್ರೀಧರ್ ಎಸ್.ಎನ್. ಇಂದಿನ ಕನ್ನಡ: ರಚನೆ ಮತ್ತು ಬಳಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫

೮೭. ಸಂಗಮೇಶ ಸವದತ್ತಿ ಮಠ, ದ್ರಾವಿಡ ಭಾಷಾ ವಿಜ್ಞಾನ, ರೂಪರಶ್ಮಿ ಪ್ರಕಾಶನ, ಗುಲಬರ್ಗಾ, ೧೯೯೦

೮೮. ಸಂಗಮೇಶ ಸವದತ್ತಿ ಮಠ, ಭಾಷಾಲೇಖ, ರೂಪರಶ್ಮಿ ಪ್ರಕಾಶನ, ಗುಲಬರ್ಗಾ, ೧೯೯೯

೮೯. ಸ.ಬಿ.ಕು, ಬಹಿರಂತರ, ಪ್ರಕಾಶಕ, ಲೇಖಕರು (ಎಸ್.ಬಿ.ಕುಂದರ್), ಮುಂಬಯಿ, ೧೯೯೬

೬೦. ಸುಬ್ಬಣ್ಣರೈ ಎ. ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು, ಮುಂಬಯಿ, ೧೯೯೪

೬೧. ಸೋಮಶೇಖರ ಇಮ್ರಾಪುರ, ಜನಪದ ಒಗಟುಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೯

೬೨. ಸೋಮಶೇಖರ ಗೌಡ, ಭಾಷಾರಚನೆ ಮತ್ತು ಬಳಕೆ, ತಳುಕಿನ ವೆಂಕಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೨೦೦೦

೬೩. ಹರಿಲಾಲ್ ಕೆ.ಪವಾರ್, ಹೆಳವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೬೪. ಹಾಮಾನಾಯಕ, ಅರವತ್ತರ ಅರಲು, 'ಸ್ವಗತ' ಅಂಕಣ ಬರಹಗಳು, ಸಂಪುಟ-೧, ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೯೫

೬೫. ಹಾಮಾನಾಯಕ, ಸಲ್ಲಾಪ, 'ಸುರುಚಿ' ಸರಸ್ವತಿಪುರಂ, ಮೈಸೂರು, ೧೯೭೨

೬೬. ಹಾಮಾನಾಯಕ, ಸೃಜನ, ಗೀತಾಬುಕ್ ಹೌಸ್, ಮೈಸೂರು, ೧೯೭೨

೬೭. ಹುಲ್ಲೂರು ಶ್ರೀನಿವಾಸ ಜೋಯಿಸ (ಸಂ), ಚಿತ್ರದುರ್ಗದ ಬಖೈರು, ತಳುಕಿನ ವೆಂಕಣಯ್ಯ ಸ್ಮಾರಕ ಗ್ರಂಥಮಾಲೆ, ಚಿತ್ರದುರ್ಗ, ೧೯೬೮

೬೮. ಹಂಪ ನಾಗರಾಜಯ್ಯ, ಹೆಸರಿನ ಸೊಗಸು, ಪ್ರಭಾ ಪಬ್ಲಿಷರ್ಸ್, ಧಾರವಾಡ, ೧೯೭೮

**ನಿಘಂಟುಗಳು**

೦೧. ಕನ್ನಡ ಕನ್ನಡ ಇಂಗ್ಲಿಷ್ ನಿಘಂಟು

೦೨. ಕನ್ನಡ ರತ್ನಕೋಶ

೦೩. ಕನ್ನಡ ಕನ್ನಡ ರತ್ನಕೋಶ

೦೪. ಕನ್ನಡ ನಿಘಂಟುಗಳು-ಎಂಟು ಸಂಪುಟಗಳು

೦೫. ಸಂಕ್ಷಿಪ್ತ ಕನ್ನಡ ನಿಘಂಟು

೦೬. ಸಿರಿಗನ್ನಡ ಅರ್ಥಕೋಶ

**ನಿಯತಕಾಲಿಕೆಗಳು**

೦೧. ನಮ್ಮ ಕನ್ನಡ ಪತ್ರಿಕೆ

೦೨. ಕನ್ನಡ ಅಧ್ಯಯನ

೦೩. ಮಹಿಳಾ ಅಧ್ಯಯನ

೦೪. ದ್ರಾವಿಡ ಅಧ್ಯಯನ

೦೫. ಬಸವ ಪಥ

೦೬. ರುಜುವಾತು, ಮಾಸಿಕ, ಬೆಂಗಳೂರು

೦೭. ಶೂದ್ರ, ಮಾಸಿಕ, ಬೆಂಗಳೂರು

೦೮. ಸಾಧನೆ, ಕನ್ನಡ ತ್ರೈಮಾಸಿಕ, ಬೆಂಗಳೂರು

೦೯. ಸಾಕ್ಷಿ, ಮಾಸಿಕ, ಬೆಂಗಳೂರು

೧೦. ಕರ್ನಾಟಕ ಭಾರತಿ, ಕನ್ನಡ ತ್ರೈಮಾಸಿಕ, ಧಾರವಾಡ ಕಲಾಗಂಗ (ಗುಲಬರ್ಗಾ)

೧೧. ಇತಿಹಾಸದರ್ಶನ - ವಾರ್ಷಿಕ

೧೨. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

